# ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ

## ಒಂದು ಅಧ್ಯಯನ




ಡಾ॥ ಜಿ. ಕೃಷ್ಣಪ್ಪ

# ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ

## ಒಂದು ಅಧ್ಯಯನ

**ಡಾ|| ಜಿ.ಕೃಷ್ಣಪ್ಪ**



ಕಾಮಧೇನು
ಪುಸ್ತಕ ಭವನ
ನಂ. ೫/೧, ನಾಗಪ್ಪ ಸ್ಟ್ರೀಟ್, ಶೇಷಾದ್ರಿಪುರ, ಬೆಂಗಳೂರು-೫೬೦ ೦೨೦

BENDREYAVARA SAHITYADALLI STREE : ONDU ADHYAYANA
women in Bendre Literature : A study.

by Dr. G. Krishnappa, # 22, Sri Gurudatta Nilaya,
1st Cross, Netajinagar, Mattikere, Bengaluru - 560 054.
Mobile: 9972109209.

Pbulished by: Prof. D.K. Shyama Sundara Rao
for Kamadhenu Pustaka Bhavana, # 5/1, Nagappa Street,
Seshadripura, Bengaluru - 560 020.

First Edition : 2001 (Sreeranga Prakashana, Mysore)
Second Edition : 2012, Kamadhenu Pustaka Bhavana, Bengaluru.
Copyright : Author Dr. G. Krishnappa.
Paper Used : 80 GSM Maplitho N.S.
Copies : 1000
Pages : 308
Price : ₹ 350/-

ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ : ಒಂದು ಅಧ್ಯಯನ.
ಲೇಖಕರು : ಡಾ॥ ಜಿ. ಕೃಷ್ಣಪ್ಪ, 22, ಶ್ರೀ ಗುರುದತ್ತ ನಿಲಯ, ಮೊದಲನೆಯ ಅಡ್ಡರಸ್ತೆ,
ನೇತಾಜಿನಗರ, ಮತ್ತಿಕೆರೆ, ಬೆಂಗಳೂರು – 560 054.
ಜಂಗಮವಾಣಿ: 9972109209.

ಪ್ರಕಾಶಕರು : ಪ್ರೊ. ಡಿ.ಕೆ. ಶ್ಯಾಮಸುಂದರರಾವ್, ಕಾಮಧೇನು ಪುಸ್ತಕ ಭವನ, 5/1, ನಾಗಪ್ಪ
ಬೀದಿ, ಶೇಷಾದ್ರಿಪುರ, ಬೆಂಗಳೂರು – 560 020.

ಮೊದಲ ಮುದ್ರಣ : 2001 (ಶ್ರೀರಂಗ ಪ್ರಕಾಶನ, ಮೈಸೂರು)
ಎರಡನೆಯ ಮುದ್ರಣ : 2012 ಕಾಮಧೇನು ಪುಸ್ತಕಭವನ, ಬೆಂಗಳೂರು – 20.
ಕೃತಿಸ್ವಾಮ್ಯ : ಡಾ॥ ಜಿ. ಕೃಷ್ಣಪ್ಪ
ಒಟ್ಟು ಪುಟಗಳು : 308
ಬಳಸಿರುವ ಕಾಗದ : 80 GSM Maplitho N.S.
ಬೆಲೆ : ₹ 350/-

ಮುದ್ರಣ : ಆರ್. ಶ್ರೀನಾಥ್, ಮಾಲೀಕರು, ಪರಿಶ್ರೀ ಪ್ರಿಂಟರ್ಸ್, # 9, 4ನೇ ಅಡ್ಡರಸ್ತೆ,
ನಾಗಪ್ಪ ಬ್ಲಾಕ್, ಶ್ರೀರಾಮಪುರ, ಬೆಂಗಳೂರು – 560 021, ✆ 080–2312 8286,
email: info@parishree.com; www.parishree.com

ನನ್ನ ಪುಣ್ಯಮಾತೆ ಸಾವಿತ್ರಮ್ಮ

ನನ್ನ ಪೂಜ್ಯತಂದೆ *ಎಚ್. ಗಂಗಯ್ಯ*

ಮತ್ತು

ಈ ಮಹಾಪ್ರಬಂಧದ ನಿರ್ಮಾಣದಲ್ಲಿ ನನಗೆ

ಅನವರತ ಸಹಕಾರ ನೀಡಿದ

ಧರ್ಮಪತ್ನಿ *ಜಿ. ಸರೋಜಮ್ಮ*

ಮಕ್ಕಳು ಚಿ||ಗಳಾದ *ಬಿ.ಕೆ. ತೃಪ್ತಿ*

*ಬಿ.ಕೆ. ಶಾಂತಲಾ, ಬಿ.ಕೆ. ಶ್ರೀಗಂಗ*

ಅವರುಗಳಿಗೆ

ಪ್ರೀತಿಪೂರ್ವಕ ಸಮರ್ಪಣೆ.

# ಮುನ್ನುಡಿ

ಪ್ರಿಯ ಮಿತ್ರ ಡಾ. ಜಿ. ಕೃಷ್ಣಪ್ಪನವರು 'ಬೇಂದ್ರೆ ಸಾಹಿತ್ಯದಲ್ಲಿ ಸ್ತ್ರೀ - ಒಂದು ಅಧ್ಯಯನ' ಎಂಬ ತಮ್ಮ ಗ್ರಂಥಕ್ಕೆ ನನ್ನಿಂದ ಮುನ್ನುಡಿ ಬಯಸಿದ್ದಾರೆ. ನಾನು ಕವಿಯೂ ಅಲ್ಲ, ವಿಮರ್ಶಕನೂ ಅಲ್ಲ. ಅವರಂತೆಯೇ ಬೇಂದ್ರೆ ಕಾವ್ಯಾರಾಧಕ. ಬೇಂದ್ರೆಯವರ 'ಅರ್ಥವಿಲ್ಲದ ಸ್ವಾರ್ಥವಿಲ್ಲದ ಬರಿಯ ಭಾವಗೀತೆ'ಗಳನ್ನು ಓದುವುದು ನನಗೆ ಪ್ರಿಯವಾದದ್ದು. ಆದರೂ ಅವರ ಕಾವ್ಯದ ಆ ಧ್ವನಿಪ್ರಪಂಚವನ್ನು ನನ್ನ ಮಾತುಗಳಲ್ಲಿ ಸಂಗ್ರಹಿಸುವುದಂತೂ ನನ್ನಿಂದಾಗದ ಕೆಲಸ. ಹಾಗಾಗಿ ಇಲ್ಲಿ ಮಿತ್ರಸಂಹಿತೆಯನ್ನು ಮೀರಲಾರದೆ ಒಂದೆರಡು ಮಾತುಗಳನ್ನು ಬರೆದಿದ್ದೇನೆ. ಇಂಥ ಕೃತಿಗಳಿಗೆ ಯಾವ ಮುನ್ನುಡಿಯ ಅಗತ್ಯವೂ ಇರದು. ಏಕೆಂದರೆ ನನ್ನ ಶಿಫಾರಸಿನಿಂದ ಡಾ. ಜಿ. ಕೃಷ್ಣಪ್ಪನವರು ಬಹು ದೂರದಲ್ಲಿದ್ದಾರೆ.

ಡಾ. ಕೃಷ್ಣಪ್ಪ ಅವರ ಪ್ರಸಕ್ತ ಕೃತಿ ಸಂಶೋಧನೆ ಮತ್ತು ವಿಮರ್ಶೆಗಳನ್ನು ತನ್ನಲ್ಲಿ ಮೈಗೂಡಿಸಿಕೊಂಡು ಬೇಂದ್ರೆಯವರ ಕಾವ್ಯಗಳಲ್ಲಿ ಕಾಣಿಸಿಕೊಳ್ಳುವ ಸ್ತ್ರೀ ಮುಖಗಳನ್ನು ಪರಿಚಯಿಸುತ್ತದೆ. ಇಂಥ ಕಾರ್ಯ ನನಗೆ ತಿಳಿದಂತೆ ಬೇರೆಲ್ಲೂ ನಡೆದಿಲ್ಲ. ಇಲ್ಲಿನ ಅಧ್ಯಯನದ ರೂಪವೇ ಬೇರೆ. ಬೇಂದ್ರೆಯವರು ಸ್ತ್ರೀ ಶಕ್ತಿಯ ಬಗ್ಗೆ ತೋರಿಸುವ ಗೌರವ ಮತ್ತು ಕಳಕಳಿ ವಿಶಿಷ್ಟಪೂರ್ಣವಾದದ್ದು. ತನ್ನ ಪೀಳಿಗೆಯ ಅಭಿವೃದ್ಧಿಗೆ ತನ್ನೆಲ್ಲ ಕಷ್ಟನಷ್ಟಗಳನ್ನು ಸ್ತ್ರೀ ಶಕ್ತಿಯು ಮುಡುಪಾಗಿಟ್ಟು ಕ್ರಮಿಸುತ್ತದೆ ಎಂಬ ಸತ್ಯವನ್ನು ಬೇಂದ್ರೆಯವರು ಕಂಡುಕೊಂಡಿದ್ದರು. ತಮ್ಮ ಕಾವ್ಯಗಳಲ್ಲಿ ಬರುವ ಅನೇಕ ಸಂಗತಿಗಳಿಂದ ಈ ಸತ್ಯವನ್ನು ಅವರು ತೆರೆದು ತೋರಿಸಿದ್ದಾರೆ.

ಬೇಂದ್ರೆಯವರು 'ಸಾಹಿತ್ಯದ ವಿರಾಟ್ ಸ್ವರೂಪ' ಎಂಬ ಕೃತಿಯಲ್ಲಿ 'ನನ್ನ ಭಾವನೆಯಲ್ಲಿ ಸ್ಫೂರ್ತಿಯ ಸೆಲೆ ತಾಯಿ' ಎಂದು ಹೇಳಿಕೊಂಡಿದ್ದಾರೆ. ಆದರೆ ಕವಿಗೆ ಹೆತ್ತ ತಾಯಿಯೊಬ್ಬಳೆ ಅಲ್ಲ, ವಿಶ್ವಮಾತೆ, ಭೂಮಾತೆ, ಭಾರತಮಾತೆ, ಕನ್ನಡಮಾತೆಯರೂ ಇದ್ದಾರೆ. ಈ ಎಲ್ಲ ತಾಯಿಯರನ್ನೂ ಗೌರವದಿಂದ, ಆದರದಿಂದ ಕಂಡ ಕವಿಗೆ ತಮ್ಮ ಕವನಗಳಲ್ಲಿ ಬರುವ ಲೌಕಿಕವಾದ ವಸ್ತುವನ್ನು ಅಲೌಕಿಕವಾದ ರೀತಿಯಲ್ಲಿ ಚಿತ್ರಿಸಲು ಸಾಧ್ಯವಾಗಿದೆ. ಹಾಗಾಗಿ ಈ ಗ್ರಂಥದಲ್ಲಿ ಉದಾಹರಿಸಿರುವ ಕವನಗಳು ಒಂದು ರೀತಿಯ ಅನನ್ಯತೆಯನ್ನು ಪಡೆದಿವೆ.

ಅಧ್ಯಯನಕ್ಕೆ ಅನುಕೂಲವಾಗುವಂತೆ ಈ ಮಹಾಪ್ರಬಂಧವನ್ನು ಆರು ಅಧ್ಯಾಯಗಳಲ್ಲಿ ಲೇಖಕರು ರಚಿಸಿದ್ದಾರೆ. ಈ ವಿಂಗಡಣೆಯಲ್ಲಿ ಶ್ರದ್ಧೆಯಿದೆ, ಅಚ್ಚುಕಟ್ಟುತನವಿದೆ ಮತ್ತು ಅಪಾರವಾದ ಕಾರ್ಯೋತ್ಸಾಹವಿದೆ. ಬೇಂದ್ರೆಯವರ ಕಾವ್ಯವನ್ನು ಒಳಹೊಕ್ಕು ಅಲ್ಲಿನ ಸೂಕ್ಷ್ಮಾತಿಸೂಕ್ಷ್ಮ ಭಾವಗಳನ್ನು ಹೊರತೆಗೆಯುವ ಕೌಶಲ ಇವರ ಲೇಖನಿಗಿದೆ. ವಿಮರ್ಶಕರು ಬೇಂದ್ರೆಯವರ ಕವನಗಳನ್ನು ಅರ್ಥೈಸುವಾಗ

ಶಬ್ದಸಾಮ್ಯವನ್ನು ಅರ್ಥಸಾಮ್ಯಕ್ಕೆ ಅಚಾನಕ್ಕಾಗಿ ಹೋಲಿಸಿರುವುದುಂಟು. ಆದರೆ ಡಾ. ಜಿ. ಕೃಷ್ಣಪ್ಪನವರು ಗ್ರಾಮೀಣ ಪ್ರದೇಶದ ಹಿನ್ನೆಲೆಯಲ್ಲಿ ಬಂದವರಾದ್ದರಿಂದ ಹಿಂದೆ ಎಲ್ಲೋ ತಮ್ಮ ಶಬ್ದಕೋಶದ ಬತ್ತಳಿಕೆಯಲ್ಲಿ ಅಡಗಿದ್ದ ಶಬ್ದಗಳನ್ನು ಹೊರತೆಗೆದು ಅದನ್ನು ಬೇಂದ್ರೆಯವರ ಕವನದಲ್ಲಿ ಬಳಕೆಯಾದ ಶಬ್ದಗಳೊಂದಿಗೆ ಹೋಲಿಸಿ ಬೇಂದ್ರೆಯವರ ಮೂಲಾರ್ಥವನ್ನು ಹೊರಗೆಡಹಿ ಅವರ ಕಾವ್ಯಪ್ರೇಮಿಗಳಿಗೆ ಮಹದುಪಕಾರ ಮಾಡಿದ್ದಾರೆ. ಇದಕ್ಕೆ ಬೇಕಾದ ತಾಳ್ಮೆ, ಸಂಶೋಧನಾಶಕ್ತಿ ಮತ್ತು ಜಾನಪದ ಹಿನ್ನೆಲೆ ಇವರಿಗಿದೆ. ಹಾಗಾಗಿ ಇವರ ಪ್ರಸ್ತುತ ಪ್ರಬಂಧ ಬೇಂದ್ರೆ ಕಾವ್ಯಾಸಕ್ತರಿಗೆ ಮಾರ್ಗದರ್ಶಿಯಾಗಿದೆ. 'ಮದಗ' ಎಂಬ ಪದಕ್ಕೆ ಇವರು ಅರ್ಥೈಸಿರುವುದನ್ನು ಇಲ್ಲಿ ವಿಶಿಷ್ಟ ಉದಾಹರಣೆಯಾಗಿ ಕೊಡಬಹುದು.

ಬೇಂದ್ರೆ ಕವಿತ್ವದ ನೆಲೆಗಳನ್ನು ಕುರಿತು ವಿಮರ್ಶಿಸುವಾಗ ಬೇಂದ್ರೆಯವರು ಸಂಖ್ಯಾಶಾಸ್ತ್ರದ ಪ್ರಕಾರ ಅಕ್ಷರಗಳಿಗೆ ಸಂಖ್ಯೆಯನ್ನು ನೀಡುವ ವಿಧಾನವನ್ನು ಈ ಮಹಾ ಪ್ರಬಂಧದಲ್ಲಿ ಡಾ. ಜಿ. ಕೃಷ್ಣಪ್ಪನವರು ಬಹು ಸಮರ್ಪಕವಾಗಿ ವಿವರಿಸಿದ್ದಾರೆ. ಸಾಮಾನ್ಯ ಓದುಗರಿಗೆ ಸಂಖ್ಯೆಯ ಭಾಷೆಯಲ್ಲಿ ಮಾತನಾಡುವ ಬೇಂದ್ರೆಯವರ ಎಲ್ಲ ಶಬ್ದಗಳು ಅರ್ಥವಾಗುವುದಿಲ್ಲ. ಹಾಗಾಗಿ ಬಹುಸಂಖ್ಯೆಯ ವಿಮರ್ಶಕರೂ ಸಾಮಾನ್ಯ ಓದುಗರಂತೆಯೇ ಇವರ ಕಾವ್ಯವನ್ನು ಅರ್ಥ ಮಾಡಿಕೊಳ್ಳದೆ ತಮ್ಮ ನಿರ್ಣಯವನ್ನು ಕೆಲವೊಂದು ಪೂರ್ವಕಲ್ಪಿತ ನುಡಿಗಟ್ಟುಗಳಿಂದ ಅಲಂಕರಿಸಿ 'ಬೇಂದ್ರೆಯವರ ಕಾವ್ಯ ಅರ್ಥವಾಗುವುದಿಲ್ಲ' ಎಂಬ ಹುಸಿ ನಿರ್ಣಯಕ್ಕೆ ಬರುತ್ತಾರೆ. ಆದರೆ ಈ ಮಹಾಪ್ರಬಂಧದಲ್ಲಿ ಇಂಥ ನಿರ್ಣಯಗಳಿಗೆ ತಕ್ಕ ಉತ್ತರ ಸಿಕ್ಕುತ್ತದೆ. ಒಂದು ವೇಳೆ ಬೇಂದ್ರೆಯವರ ಕವನಗಳು ಶಬ್ದಾಡಂಬರದಿಂದ ಕೂಡಿವೆ ಎಂದು ವಿಮರ್ಶಕರು ಮೇಲಿಂದ ಮೇಲೆ ಸಾರಿದರೂ, ಆ ಶಬ್ದಗಳು ಹೇಗೆ ಧ್ವನಿ ಪರಂಪರೆಯಲ್ಲಿ ತೇಲಿ ಬಂದು ರಸಧ್ವನಿಗಳಾಗಿ ಮಾರ್ಪಟ್ಟಿವೆ ಎಂಬುದನ್ನು ಪ್ರಸ್ತುತ ಲೇಖಕರು ಸಾಕಷ್ಟು ನಿದರ್ಶನಗಳಿಂದ ಸಮರ್ಥಿಸಿದ್ದಾರೆ. ವಿಮರ್ಶಕರ ಅನಗತ್ಯ ಭೀತಿಯನ್ನು ನಿವಾರಿಸಲು ಇವರು ಸಾಕಷ್ಟು ಪ್ರಯತ್ನಿಸಿದ್ದಾರೆ. ಬೇಂದ್ರೆಯವರ ಕಾವ್ಯಾಭ್ಯಾಸಕ್ಕೆ ಇದೊಂದು ಅರ್ಥಪೂರ್ಣ ಕೈದೀವಿಗೆಯಾಗಿದೆ.

ಬೇಂದ್ರೆಯವರಿಗೆ ಸ್ತ್ರೀಯರ ಬಗ್ಗೆ ಎಂಥ ಗೌರವವಿತ್ತು, ಪ್ರೀತಿಯಿತ್ತು ಎಂಬುದು ಈ ಮಹಾ ಪ್ರಬಂಧದುದ್ದಕ್ಕೂ ಮೂಡಿಬಂದಿದೆ. ಲೇಖಕರು ಹೇಳಿರುವಂತೆ ಬೇಂದ್ರೆಯವರ ಕಾವ್ಯದ ವೈಚಾರಿಕ ನಿಲುವಿರುವುದು ಅವರ ಪ್ರೇಮತತ್ವದಲ್ಲಿ. ಜನರಿಗೆ ಮತ್ತು ಜಗತ್ತಿಗೆ ಪ್ರೇಮವೊಂದೇ ಶಾಂತಿಯನ್ನು ತರುತ್ತದೆ ಎಂಬುದು ಬೇಂದ್ರೆಯವರ ನಿಲುವು. ಸ್ತ್ರೀಯರು ಎಲ್ಲ ರಂಗಗಳಲ್ಲೂ ಯಶಸ್ವಿಯಾಗಬೇಕೆಂಬುದು ಬೇಂದ್ರೆಯವರ ಹಂಬಲ. ಈ ಅಂಶಗಳು ಮಹಾಪ್ರಬಂಧದುದ್ದಕ್ಕೂ ಗೋಚರವಾಗುತ್ತವೆ.

ಈ ಮಹಾಪ್ರಬಂಧವನ್ನು ಬರೆಯುತ್ತಿದ್ದಾಗ ಡಾ. ಜಿ. ಕೃಷ್ಣಪ್ಪನವರು ಅಗತ್ಯವೆನಿಸಿದಾಗಲೆಲ್ಲ ಹಸ್ತಪ್ರತಿಯನ್ನು ಮತ್ತೆ ಮತ್ತೆ ತಿದ್ದಿ ಬರೆದು ಶ್ರಮಸಾಧ್ಯವಾದ ಪರಿಷ್ಕರಣಕ್ಕೆ ಒಳಗುಪಡಿಸಿದ್ದಾರೆ. ಪರಾಮರ್ಶನ ಗ್ರಂಥಗಳನ್ನು ಆಮೂಲಾಗ್ರವಾಗಿ ಓದಿ ಟಿಪ್ಪಣಿಗಳನ್ನು ಮಾಡಿಕೊಂಡು ಆ ಟಿಪ್ಪಣಿಗಳನ್ನು ಬಹು ಎಚ್ಚರಿಕೆಯಿಂದ ಪರಿಶೀಲಿಸಿ ಸಮಯೋಚಿತವಾಗಿ ಇಲ್ಲಿ ಬಳಸಿಕೊಂಡಿದ್ದಾರೆ. ಸಂಶೋಧಕನಿಗಿರಬೇಕಾದ ತೀಕ್ಷ್ಣದೃಷ್ಟಿ, ಅಪಾರ ದುಡಿಮೆ, ವಿಷಯದ ಬಗೆಗಿನ ಖಚಿತತೆ - ಇವೆಲ್ಲವೂ ಈ ಮಹಾ ಪ್ರಬಂಧದಲ್ಲಿ ಹದವರಿತು ಬಂದಿವೆ. ಈ ಮಹಾಪ್ರಬಂಧದುದ್ದಕ್ಕೂ ಎಲ್ಲಿಯೂ ಲೇಖಕರು ವಿನಾಕಾರಣ ಯಾರನ್ನೂ ಹೊಗಳದೆ, ತೆಗಳದೆ ತಮ್ಮ ಬರೆಹವನ್ನು ವಸ್ತುನಿಷ್ಠತೆಗೆ ಒಳಪಡಿಸಿದ್ದಾರೆ. ಈ ದಿಸೆಯಲ್ಲಿ ಅವರ ಸಂಯಮ ಮೆಚ್ಚಬೇಕಾದದ್ದು. ಬೇಂದ್ರೆಯವರ ಬಗೆಗೆ ಇವರಿಗೆ ಅಪಾರ ಪ್ರೀತಿ ಇದ್ದರೂ

ಅದನ್ನೇ ವೈಭವೀಕರಿಸದೆ ಅವರ ಸಾಹಿತ್ಯವನ್ನು ಇಲ್ಲಿ ಸಕಾರಣವಾಗಿ ವಿಮರ್ಶೆಗೆ ಒಳಪಡಿಸಿದ್ದಾರೆ.

ಡಾ. ಜಿ. ಕೃಷ್ಣಪ್ಪನವರ 'ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ - ಒಂದು ಅಧ್ಯಯನ' ಈ ಬಗೆಯ ಕೃತಿಗಳಲ್ಲಿ ವಿಶಿಷ್ಟ ಕೃತಿಯಾಗಿದೆ. ಅವರ ಅಧ್ಯಯನದ ವಿಸ್ತಾರ ಮತ್ತು ಖಚಿತ ವಿಶ್ಲೇಷಣೆ ಕಾವ್ಯಾಸಕ್ತರಲ್ಲಿ ಕುತೂಹಲವನ್ನು ಹೆಚ್ಚಿಸುತ್ತದೆ. ಬೇಂದ್ರೆಯವರ ಕಾವ್ಯದ ಸಿದ್ಧಿ ಸಾಧನೆಗಳನ್ನು ಅವರ ಕವನಗಳ ಮೂಲಕ ಎಳೆಎಳೆಯಾಗಿ ಈ ಮಹಾಪ್ರಬಂಧದಲ್ಲಿ ಬಿಡಿಸಿ ತೋರಿಸಿರುವುದು ಮೆಚ್ಚತಕ್ಕ ವಿಷಯ. ಬೇಂದ್ರೆಯವರ ಸಮಗ್ರ ಕಾವ್ಯದ ವಿಶ್ಲೇಷಣೆ ಇವರ ಲೇಖನಿಯಿಂದ ಆದಷ್ಟು ಬೇಗ ಬರಲಿ ಎಂಬ ಕುತೂಹಲದ ನಿರೀಕ್ಷೆ ಬಹುಮಂದಿ ಕಾವ್ಯ ರಸಿಕರದ್ದು ಆ ಕಾಲ ಬೇಗ ಬರಲಿ ಎಂದು ಹಾರೈಸುತ್ತ ಇಂಥ ಸಂಶೋಧನ ಕೃತಿಯನ್ನು ರಚಿಸಿದ ಡಾ. ಜಿ. ಕೃಷ್ಣಪ್ಪ ಅವರನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಶಾರದಾ ಮಂದಿರ *ಎಚ್.ಎಸ್. ಹರಿಶಂಕರ್*
ಮೈಸೂರು
೦೫-೦೨-೨೦೦೧.

# ಅರಿಕೆ

ಕನ್ನಡ ಸಾಹಿತ್ಯ ಚರಿತ್ರೆಯ ನವೋದಯ ಕಾಲದ ಗೋವಿಂದ ಪೈ, ಬೇಂದ್ರೆ, ಕುವೆಂಪು, ಪು.ತಿ.ನ. ಅವರ ಕವಿತೆಗಳನ್ನು ನಾನು ವಿಶೇಷವಾಗಿ ಮೆಚ್ಚಿಕೊಂಡಿದ್ದೇನೆ. ಅವರ ಚಿಂತನೆಗಳು ನನ್ನ ಮನಸ್ಸನ್ನು ರೂಪಿಸಿವೆ. ಆ ಕವಿಗಳ ಕಾವ್ಯಾಧ್ಯಯನದಿಂದ ಕನ್ನಡ ಸಾಹಿತ್ಯದಲ್ಲಿ ಆಸಕ್ತಿಯನ್ನು ಹೊಂದಿದ ನಾನು ಅದನ್ನು ಒಂದು ಹವ್ಯಾಸವಾಗಿ ಬೆಳೆಸಿಕೊಂಡು ಸಂತೋಷಪಡುತ್ತಿದ್ದೇನೆ. ನನ್ನ ತಂದೆ ದಿವಂಗತ ಎಚ್.ಗಂಗಯ್ಯ ಅವರು ಬೆಂಗಳೂರಿನಲ್ಲಿ ಲಕ್ಷ್ಮೀಶನ ಜೈಮಿನಿ ಭಾರತವನ್ನು ವಾಚನ ಮಾಡುತ್ತ, ವ್ಯಾಖ್ಯಾನವನ್ನು ನೀಡುತ್ತ ಸಂಜೆ ವೇಳೆಯನ್ನು ಸುಂದರವಾಗಿ ಕಳೆಯುತ್ತಿದ್ದರು. ನನ್ನ ತಾಯಿ ಎಚ್.ಸಾವಿತ್ರಮ್ಮ ರಾಜ-ರಾಣಿಯರ, ರಾಕ್ಷಸರ ಕುತೂಹಲದ ಕಥೆಗಳನ್ನು ಹೇಳುತ್ತ, ಹಳ್ಳಿಯ ಹಾಡುಗಳನ್ನು ಗುನುಗುನಿಸುತ್ತ ನಮ್ಮನ್ನು ಸಂತೋಷ ಪಡಿಸುತ್ತಿದ್ದರು. ಆ ನನ್ನ ಬಾಲ್ಯದ ವಾತಾವರಣ ಕೂಡ ನನ್ನನ್ನು ಸಾಹಿತ್ಯಾಸಕ್ತನನ್ನಾಗುವಂತೆ ಮಾಡಿತು.

ನಾನು ಬೆಂಗಳೂರಿನ ಕೋದಂಡರಾಮಪುರದ ಕಾರ್ಪೊರೇಶನ್ ಪ್ರೌಢಶಾಲೆಯಲ್ಲಿ ಓದುತ್ತಿದ್ದಾಗ ನನ್ನ ಶಿಕ್ಷಕರಾಗಿದ್ದ ಶ್ರೀ ಜೀ.ಶಂ.ಪರಮಶಿವಯ್ಯ ಮತ್ತು ಶ್ರೀ ಕೋಣಂದೂರು ಲಿಂಗಪ್ಪ ಅವರು ಕುವೆಂಪು ಮತ್ತು ದ.ರಾ.ಬೇಂದ್ರೆಯವರ ಕವನಗಳನ್ನು ವಿಶೇಷ ಆಸಕ್ತಿಯಿಂದ ಕಲಿಸಿದರು. ನಾನು ಬೇಂದ್ರೆ ಕಾವ್ಯವನ್ನು ಅಭ್ಯಾಸ ಮಾಡುತ್ತಿದ್ದಂತೆ, ಅವರ ಕಾವ್ಯ-ಜನಸಾಮಾನ್ಯರಾದ ನಮ್ಮ ನೋವು ನಲಿವನ್ನೇ ಹಾಡುತ್ತಿರುವಂತೆ, ನಮ್ಮ ಒಳಮನದ ಹಾಡನ್ನು ಅವರು ಕಾವ್ಯವಾಗಿಸಿರುವಂತೆ ಕಂಡು ಬಂದಿತು. ಅವರ ಕಾವ್ಯಗಳ ಮೇಲಿನ ಪ್ರೇಮ ಹೆಚ್ಚಾಯಿತು. ನಾನು ಪ್ರೌಢಶಾಲೆಯಲ್ಲಿ ಮತ್ತು ಎಸ್.ಜೆ.ಪಾಲಿಟೆಕ್ನಿಕ್‌ನಲ್ಲಿ ಅಭ್ಯಾಸ ಮಾಡುವಾಗ ಬಿಡುವು ಸಿಕ್ಕಾಗಲೆಲ್ಲಾ ಮಲ್ಲೇಶ್ವರದ ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮರ 'ಗಾಂಧೀ ಸಾಹಿತ್ಯ ಸಂಘ'ಕ್ಕೆ ಹೋಗುತ್ತಿದ್ದೆ. ಅಲ್ಲಿ ಅವರ ಮತ್ತು ಶ್ರೀ ಜಿ.ಪಿ.ರಾಜರತ್ನಂ ಅವರ ಶುದ್ಧ, ಶಾಂತ, ನಿರ್ಮಲ ಜೀವನ ಮತ್ತು ಸಾಹಿತ್ಯ ಸೇವೆ ನನ್ನನ್ನು ಆಕರ್ಷಿಸಿತು. ನಾನು ಆ ಸಂಘದಲ್ಲಿ ಬೇಂದ್ರೆಯವರ ಭಾಷಣವನ್ನು ಕೇಳಿ ಅವರಿಂದ ಮತ್ತು ಅವರ ಕಾವ್ಯದಿಂದ ಮೋಹಿತನಾದೆ. ಅವರು ಬೆಂಗಳೂರಿಗೆ ಬಂದಾಗಲೆಲ್ಲಾ ಅವರ ಭಾಷಣವನ್ನು ಕೇಳಿ ಅವರನ್ನು ಕಂಡು ಮಾತಾಡಿ ಹೆಮ್ಮೆಪಟ್ಟು ಅವರ ಸಾಹಿತ್ಯದ ಆರಾಧಕನಾಗಿಬಿಟ್ಟೆ.

ಆಟೊಮೊಬೈಲ್ ಇಂಜಿನೀಯರಿಂಗ್‌ನಲ್ಲಿ ಡಿಪ್ಲೊಮಾ ಪಡೆದು ಹಲವಾರು ಕಡೆ ಕೆಲಸ ಮಾಡಿ, ತರುವಾಯ ಮೋಟಾರು ವಾಹನಗಳ ನಿರೀಕ್ಷಕನಾದೆ. ಶ್ರೀ ಜಿ.ಪಿ.ರಾಜರತ್ನಂ ಅವರ ಸಾಹಿತ್ಯ ಪರಿಚಾರಿಕೆಯನ್ನು ಕಂಡಿದ್ದ ನನಗೆ ಕನ್ನಡದ ಕೆಲಸವನ್ನು ನನ್ನ ಮಿತಿಯಲ್ಲಿ ಒಂದಿಷ್ಟು ಮಾಡಬೇಕೆನ್ನಿಸಿತು. ನಾನು ವರ್ಗವಾಗಿ ಹೋದ ನಗರಗಳಲ್ಲೆಲ್ಲ ಬೇಂದ್ರೆ ಕಾವ್ಯಾಸಕ್ತರನ್ನು ಹುಡುಕಿ -

ಪ್ರೌಢಶಾಲೆ ಮತ್ತು ಕಾಲೇಜುಗಳಲ್ಲಿ ಬೇಂದ್ರೆ ಕವನ ಗಾಯನಸ್ಪರ್ಧೆಯನ್ನು ಏರ್ಪಡಿಸಿ, ಬೇಂದ್ರೆಯವರ ಕೃತಿಗಳನ್ನು ಬಹುಮಾನವಾಗಿ ನೀಡುವ ಕಾರ್ಯಕ್ರಮವನ್ನು ರೂಪಿಸಿದೆ. ಈ ಹಿನ್ನೆಲೆಯಲ್ಲಿ ಡಾ. ವಾಮನಬೇಂದ್ರೆಯವರನ್ನು ಕಂಡು ಚರ್ಚಿಸಿ ಧಾರವಾಡದ 'ಅಂಬಿಕಾತನಯದತ್ತ ವೇದಿಕೆ'ಯ ಸದಸ್ಯನಾದೆ. ಡಾ.ವಾಮನಬೇಂದ್ರೆಯವರ ತುಂಬು ಸಹಕಾರ ನನಗೆ ಲಭ್ಯವಾಯಿತು. ಶಾಲೆ, ಕಾಲೇಜುಗಳಲ್ಲಿ ವಿದ್ಯಾರ್ಥಿಗಳನ್ನುದ್ದೇಶಿಸಿ ಬೇಂದ್ರೆ ಕಾವ್ಯದ ವೈಭವವನ್ನು ವಿವರವಾಗಿ ಬಣ್ಣಿಸುತ್ತ ಆನಂದಪರವಶನಾದೆ. ಈ ಪ್ರಯತ್ನದಲ್ಲಿ ಮೈಸೂರು ತಾ. ಜಯಪುರದ ಶ್ರೀ ರಾಘವೇಂದ್ರ ವಿದ್ಯಾಪೀಠ ಪ್ರೌಢಶಾಲೆಯ ಮುಖ್ಯೋಪಾಧ್ಯಾಯ ಶ್ರೀ ಎಸ್.ಸುಧೀಂದ್ರ ಅವರು ಜೊತೆಗೂಡಲಾಗಿ ಆ ಶಾಲೆಯಲ್ಲಿ 'ದ.ರಾ.ಬೇಂದ್ರೆ ವೇದಿಕೆ' ಸ್ಥಾಪನೆಗೊಂಡಿತು. ಅದು ಕಳೆದ ಆರು ವರ್ಷಗಳಿಂದ ಮೈಸೂರು ನಗರ ಮತ್ತು ಗ್ರಾಮಾಂತರ ವಿದ್ಯಾರ್ಥಿಗಳಿಗೆ ಬೇಂದ್ರೆ ಕವನ ಗಾಯನ ಸ್ಪರ್ಧೆ ಏರ್ಪಡಿಸಿ ನಗರ ಮತ್ತು ಗ್ರಾಮಾಂತರ ವಿದ್ಯಾರ್ಥಿಗಳಿಗೆ ಎರಡು ಪ್ರತ್ಯೇಕ ಪರ್ಯಾಯ ಫಲಕಗಳನ್ನು ನೀಡುತ್ತಿದೆ. ಪ್ರತಿ ವರ್ಷ ನೂರಕ್ಕೂ ಹೆಚ್ಚು ಬಾಲಕ ಬಾಲಕಿಯರು ಸ್ಪರ್ಧೆಯಲ್ಲಿ ಭಾಗವಹಿಸುತ್ತಿದ್ದಾರೆ. ದ.ರಾ.ಬೇಂದ್ರೆ ಗೀತಗಾಯನ ಸ್ಪರ್ಧೆಯನ್ನು ನಡೆಸಿ ಬೇಂದ್ರೆಕಾವ್ಯ ವಿದ್ಯಾರ್ಥಿಗಳಿಗೆ ಮನನವಾಗುವಲ್ಲಿ ನಮ್ಮ ನಾಡಿನ ಶಾಲಾ ಶಿಕ್ಷಕರು, ಕಾಲೇಜು ಉಪನ್ಯಾಸಕರು, ಪ್ರಾಧ್ಯಾಪಕರು ತುಂಬು ಪ್ರೋತ್ಸಾಹ ನೀಡಿದ್ದಾರೆ. ಸಹಸ್ರಾರು ಮಕ್ಕಳ ಗಾಯನದಿಂದ ಮತ್ತು ಗುರುಗಳಿಂದ ನಾನು ಬೇಂದ್ರೆ ಕಾವ್ಯವನ್ನು ಚೆನ್ನಾಗಿ ತಿಳಿಯಲು ಸಾಧ್ಯವಾಗಿದೆ. ಆ ಶಾಲಾ, ಕಾಲೇಜು ಮತ್ತು ಮಹನೀಯರ ವಿವರವನ್ನು ಈ ಗ್ರಂಥದ ಅನುಬಂಧದಲ್ಲಿ ನೀಡಿದ್ದೇನೆ.

ಬೇಂದ್ರೆ ಕಾವ್ಯವನ್ನು ಚೆನ್ನಾಗಿ ತಿಳಿಯಲು ಪ್ರಯತ್ನಿಸುತ್ತಲೇ ನಾನು ಬೆಂಗಳೂರು ವಿಶ್ವವಿದ್ಯಾಲಯದಿಂದ ಸ್ವಾಧ್ಯಾಯ ವಿದ್ಯಾರ್ಥಿಯಾಗಿ ಬಿ.ಎ., ಪದವೀಧರನಾದೆ. ಆಮೇಲೆ ಮೈಸೂರು ವಿಶ್ವವಿದ್ಯಾನಿಲಯದ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆ ಮೂಲಕ ಕನ್ನಡದಲ್ಲಿ ಎಂ.ಎ., ಸ್ನಾತಕೋತ್ತರ ಪದವಿಯನ್ನು ಗಳಿಸಿದೆ. ಎಂ.ಎ., ಅಭ್ಯಾಸ ಮಾಡುವಾಗ ನಮಗೆ ಆ ಸಂಸ್ಥೆಯ ಆವರಣದಲ್ಲಿ ನಡೆಸುವ ತರಗತಿಗಳು ತುಂಬಾ ಪ್ರಿಯವಾಗುತ್ತಿದ್ದುವು. ಅಲ್ಲಿ ನನಗೆ ಪ್ರೊ.ಎಚ್.ಎಸ್.ಹರಿಶಂಕರ ಅವರೂ ಪಾಠ ಮಾಡುತ್ತಿದ್ದರು. ಅವರ ಆಲೋಚನೆಯ ಧಾಟಿ, ಪಾಠ ಮಾಡುವ ರೀತಿ ನನಗೆ ಹಿಡಿಸಿತು. ಅವರು ನನ್ನ ಬೇಂದ್ರೆ ಕಾವ್ಯಾಸಕ್ತಿಯನ್ನು ಕಂಡು ಸಂತೋಷಪಟ್ಟು ನಾನು ಬೇಂದ್ರೆ ಕಾವ್ಯವನ್ನು ಕುರಿತು ಇನ್ನೂ ಚೆನ್ನಾಗಿ ತಿಳಿಯಲು ಪಿಎಚ್.ಡಿ., ಅಧ್ಯಯನವನ್ನು ಮಾಡಬೇಕೆಂದು ಪ್ರೋತ್ಸಾಹಿಸಿದರು.

ನಾನು ಬೇಂದ್ರೆಯವರ 'ಜಾತ್ರೆ' ನಾಟಕವನ್ನು ನಿರ್ದೇಶಿಸಿದೆ. ಮೈಸೂರಿನ ಧ್ವನ್ಯಾಲೋಕದಲ್ಲಿ ಅದು ಪ್ರದರ್ಶಿತವಾಯಿತು. ಅವರ 'ಬಂತಣ್ಣ ಸಣ್ಣ ಸೋಮವಾರ', 'ಚಿಗರಿಗಂಗಳ ಚೆಲುವಿ', 'ಯಾವೂರಾಕಿ ನೀ ಮಾಯಕಾರತಿ' ಕವನಗಳನ್ನು ಕಂಸಾಳೆ ಶೈಲಿಯಲ್ಲಿ ಪ್ರಯೋಗಿಸಬೇಕೆಂದು ಕುಮಾರಸ್ವಾಮಿಯವರನ್ನು ಸಂಪರ್ಕಿಸಿದೆ. ಅದೂ ಯಶಸ್ವಿಯಾಯಿತು. ಧ್ವನ್ಯಾಲೋಕದಲ್ಲಿ ಮತ್ತು ಬೆಂಗಳೂರಿನ ಗೋಖಲೆ ಸಾರ್ವಜನಿಕ ಸಂಸ್ಥೆಯಲ್ಲಿ ಆ ಪ್ರದರ್ಶನ ನಡೆಯಿತು. ಅದು ಹಿರಿಯರಾದ ನಿಟ್ಟೂರು ಶ್ರೀನಿವಾಸರಾಯರು ಮತ್ತು ಇನ್ನಿತರ ಸಹೃದಯರ ಮೆಚ್ಚುಗೆ ಗಳಿಸಿತು. ಬೇಂದ್ರೆ ಕಾವ್ಯಾಧ್ಯಯನದ ಫಲವಾಗಿ ನಾನು 'ಹಾಡುಹಕ್ಕಿ ಅಂಬಿಕಾತನಯದತ್ತ' ಎಂಬ ಕೃತಿಯನ್ನು ೧೯೮೫ರಲ್ಲಿ ಹೊರತಂದೆ. ಮೈಸೂರು ವಿಶ್ವವಿದ್ಯಾಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯು ಇಂಗ್ಲೀಷ್‌ನಲ್ಲಿ ನಾನು ಬರೆದ 'D.R. Bendre' ಎಂಬ ಕೃತಿಯನ್ನು ೧೯೯೭ರಲ್ಲಿ ಪ್ರಕಟಿಸಿತು. ನಾನು 'ನಾಕುತಂತಿ' ಕಾವ್ಯ ಕುರಿತು ಬರೆದ ವಿಮರ್ಶೆಯನ್ನು ಪ್ರೊ.ಟಿ.ಶ್ರೀನಿವಾಸರಾಜು ಅವರು ಬೆಂಗಳೂರಿನ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದಿಂದ ೨೦೦೦ದಲ್ಲಿ

ಪ್ರಕಟಿಸಿದರು. ತರುವಾಯದಲ್ಲಿ ಬೇಂದ್ರೆಯವರ ಭಾವಗೀತೆಗಳ ವಿಮರ್ಶೆಯಾಗಿ 'ಹೂತsದ ಹುಣಸಿ' (೨೦೦೦)ಯನ್ನು ಪ್ರಕಟಿಸಿದೆ.

ಬೇಂದ್ರೆಯವರ ಬಗ್ಗೆ ಈಗಾಗಲೇ ಹಲವಾರು ಸಂಶೋಧನ ಕೃತಿಗಳು ಬಂದಿವೆ. ಆ ಗುಂಪಿನಲ್ಲಿ 'ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ-ಒಂದು ಅಧ್ಯಯನ' ಎಂಬುದನ್ನೇ ಕುರಿತು ಸ್ವತಂತ್ರವಾಗಿ ವಿಚಾರ ಮಾಡಿದ್ದು ಇರಲಿಲ್ಲವಾದ್ದರಿಂದ ನಾನು ಈ ವಿಷಯವನ್ನು ಆಯ್ಕೆ ಮಾಡಿಕೊಂಡಿದ್ದೇನೆ. ಈ ಅಧ್ಯಯನದಲ್ಲಿ ನನ್ನ ಮಾರ್ಗದರ್ಶಕರಾದ ಪ್ರೊ. ಎಚ್.ಎಸ್. ಹರಿಶಂಕರ ಅವರು ಪ್ರಾರಂಭದಿಂದಲೂ ನಾನು ಅಧ್ಯಯನ ಮಾಡಬೇಕಾದ ವಿಷಯದ ಶಿಸ್ತನ್ನು ತಿಳಿಸಿಕೊಟ್ಟು, ನನ್ನ ಬರವಣಿಗೆಯನ್ನು ತಿದ್ದುತ್ತ; ಸೂಕ್ತ ಸಲಹೆ ಸೂಚನೆಗಳನ್ನು ನೀಡುತ್ತ ಈ ಅಧ್ಯಯನವು ಪೂರ್ಣವಾಗಲು ಮಾರ್ಗದರ್ಶನ ಮಾಡಿದ್ದಾರೆ. ಕವಿಪುತ್ರರುಗಳಾದ ಡಾ.ವಾಮನಬೇಂದ್ರೆ ಮತ್ತು ಶ್ರೀ ಪಾಂಡುರಂಗ ಬೇಂದ್ರೆ ಅವರು ಅಂಬಿಕಾತನಯದತ್ತರ ಪುಸ್ತಕಾಲಯವನ್ನು ಉಪಯೋಗಿಸಿಕೊಳ್ಳಲು ಅವಕಾಶ ನೀಡಿ, ಅಮೂಲ್ಯ ಮಾಹಿತಿಗಳನ್ನು ಕೊಟ್ಟು ನನಗೆ ಸೂಕ್ತ ಮಾರ್ಗದರ್ಶನವನ್ನು ನೀಡಿದ್ದಾರೆ. ಡಾ. ಕೆ. ಅನಂತರಾಮು, ಡಾ. ಸಿ.ಪಿ.ಕೆ., ಡಾ. ವಿಜಯದಬ್ಬೆ, ಡಾ. ಶಂಕರ ಮೊಕಾಶಿ ಪುಣೇಕರ, ಪ್ರೊ.ಸುಧಾಕರ, ಪ್ರೊ.ಎಂ.ಎನ್. ತಳವಾರ್, ಪ್ರೊ. ಸಿ. ನಾಗಣ್ಣ, ಪ್ರೊ. ಶಿವರಾಮು ಕಾಡನಕುಪ್ಪೆ, ಶ್ರೀ ಕ್ಯಾತನಹಳ್ಳಿ ರಾಮಣ್ಣ, ಶ್ರೀ ಎಸ್.ಜಿ.ನಾಡಿಗೇರ ಮಾಸ್ತರರು, ಡಾ.ಕೆ.ರಾಘವೇಂದ್ರರಾವ್, ಪ್ರೊ.ಕೆ.ಎಸ್.ಶರ್ಮಾ ಅವರು ನನಗೆ ಈ ಅಧ್ಯಯನದಲ್ಲಿ ಸಹಾಯ ಮಾಡಿದ್ದಾರೆ. ಇವರೆಲ್ಲರಿಗೂ ನಾನು ಋಣಿಯಾಗಿದ್ದೇನೆ.

ನಾನು ಈ ಅಧ್ಯಯನದಲ್ಲಿ ಬೇಂದ್ರೆಯವರ ಕಾವ್ಯ, ನಾಟಕ, ಕಥೆಗಳಲ್ಲಿ ಕಂಡುಬಂದ ಸ್ತ್ರೀಯನ್ನು ಕುರಿತ ಚಿಂತನೆಯನ್ನು ವಿಶ್ಲೇಷಿಸಿದ್ದೇನೆ. ಅವರು ಕಂಡ ವಿವಿಧ ಸ್ತ್ರೀಮುಖಗಳನ್ನು, ಅವುಗಳ ಹಿಂದಿರುವ ವಿಶ್ವಚಿಂತನೆಯನ್ನು ನನ್ನ ಈ ಸಂಶೋಧನೆಯಲ್ಲಿ ನೀಡಿದ್ದೇನೆ. ಈ ಪ್ರೌಢ ಪ್ರಬಂಧದ ಪರೀಕ್ಷಕರಾಗಿದ್ದ ಪ್ರೊ. ತೀ.ನಂ. ಶಂಕರನಾರಾಯಣ ಮತ್ತು ಪ್ರೊ.ಹು.ಕಾ.ಜಯದೇವ್ ಅವರು ಈ ಕೃತಿಯ ಬಗ್ಗೆ ಒಳ್ಳೆಯ ಮಾತುಗಳನ್ನಾಡಿದ್ದಾರೆ. ಅಲ್ಲದೆ ಮಹಾಪ್ರಬಂಧ ಪ್ರಕಟವಾಗುವುದು ಅಗತ್ಯ ಎಂದು ಹೇಳಿದ್ದಾರೆ. ಅವರಿಗೆ ನನ್ನ ಗೌರವಪೂರ್ವಕ ವಂದನೆಗಳು.

ನನ್ನ ಸಾರಿಗೆ ಇಲಾಖೆಯ ಎಲ್ಲ ಹಿರಿಯ ಅಧಿಕಾರಿಗಳು ನನ್ನ ಬೇಂದ್ರೆ ಕಾವ್ಯಾಧ್ಯಯನಕ್ಕೆ ತುಂಬು ಪ್ರೋತ್ಸಾಹ ನೀಡಿ ಆಶೀರ್ವದಿಸಿದ್ದಾರೆ. ಅವರಿಗೆಲ್ಲ ಮನಃಪೂರ್ವಕವಾಗಿ ವಂದಿಸುತ್ತೇನೆ. ನನ್ನ ಸಹೋದ್ಯೋಗಿ ಮಿತ್ರರಾದ ಶ್ರೀಯುತರುಗಳಾದ ವಿ.ಎಸ್.ಮುರುಗಯ್ಯ, ರವಿ, ಎನ್.ನಂಜುಂಡಯ್ಯ, ಜೆ.ಗುರುರಾಜಾಚಾರ್, ಎಚ್.ಎನ್.ಶ್ರೀನಾಥ್, ಎಚ್.ಎನ್.ರಮೇಶ್, ಎನ್.ಶ್ರೀನಿವಾಸ್, ವಿ.ಜೆ.ವರಗಬಸವರಾಜ್, ಜಿ.ಶಿವಣ್ಣ, ವೈ.ಬಿ.ಕಂಬಾರ, ಬಿ.ಭೈರಪ್ಪ, ಎಲ್.ಲಿಂಗರಾಜು, ಉಮಾಪತಿರಾವ್, ಬಿ.ವಿ.ನರಸಿಂಹರಾಜು, ಎಚ್.ಎ.ಯಕ್ಬಾಲ್, ಎಂ.ಮದನಗೋಪಾಲ್, ಸಿದ್ದೂರ, ಕೆ.ಸಿ.ಮುನಿಸ್ವಾಮಿ, ಆನಂದಗೌಡ, ಕೃಷ್ಣಮೂರ್ತಿಗುಪ್ತ, ಅಪ್ಪಯ್ಯ ನಲ್ವತ್ವಾಡಮಠ ಮೊದಲಾದ ಎಲ್ಲಾ ಸ್ನೇಹಿತರು ನನ್ನ ಬೇಂದ್ರೆ ಕಾವ್ಯಾಧ್ಯಯನದ ದಿಕ್ಕಿನಲ್ಲಿ ನನ್ನನ್ನು ಹುರಿದುಂಬಿಸಿದ್ದಾರೆ. ಮೋಟಾರು ವಾಹನಗಳ ಹಿರಿಯ ನಿರೀಕ್ಷರ ಸಂಘದವರು ಹಾಗೂ ನನ್ನ ಇಲಾಖೆಯ ಅಧಿಕಾರಿಗಳ ಮತ್ತು ಸ್ನೇಹಿತರ ಕನ್ನಡಾಭಿಮಾನದ ಶ್ರೀರಕ್ಷೆ ನನಗೆ ಲಭ್ಯವಾಗಿದೆ. ಅವರಿಗೆಲ್ಲ ನನ್ನ ಮನಃಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇನೆ.

ನನ್ನ ದಿನನಿತ್ಯದ ಉದ್ಯೋಗದ ಅವಧಿ ಮುಗಿದ ನಂತರ ಬೇಂದ್ರೆ ಕಾವ್ಯಾಧ್ಯಯನದಲ್ಲಿ ತೊಡಗುತ್ತ ಕೂರುವುದು ನನ್ನ ಹೆಂಡತಿ ಮಕ್ಕಳಿಗೆ ನಾನು ಸ್ವಲ್ಪ ಅವರಿಂದ ದೂರವಾದಂತೆ ತೋರಿತು.

ಆದರೂ ಅವರು ಎಂದೂ ಬೇಸರ ಪಡದೆ ನನ್ನ ಬೇಂದ್ರೆ ಕಾವ್ಯಗಾಯನ ಸ್ಪರ್ಧೆಗೆ ತಾವೂ ಬಂದು ಸಂತೋಷಪಡುತ್ತ, ನನ್ನ ಅಧ್ಯಯನಕ್ಕೆ ಸಹಾಯಕರಾದರು. ಅವರ ಸಹಾನುಭೂತಿಯಿಂದ ನಾನು ಈ ಮಹಾಪ್ರಬಂಧವನ್ನು ಬರೆಯಲು ಸಾಧ್ಯವಾಯಿತು. ಹೀಗೆ ನನ್ನ ಸಾಹಿತ್ಯ ಪ್ರಕೃತಿಗೆ ನೀರೆರೆಯುತ್ತ ಅದು ಚಿಗುರುವಂತೆ ಮಾಡುತ್ತಿರುವ ನನ್ನ ಧರ್ಮಪತ್ನಿ ಶ್ರೀಮತಿ ಸರೋಜ, ಮಕ್ಕಳಾದ ಕು|| ಬಿ.ಕೆ.ತೃಪ್ತಿ, ಕು|| ಬಿ.ಕೆ.ಶಾಂತಲ ಮತ್ತು ಚಿ|| ಬಿ.ಕೆ.ಶ್ರೀಗಂಗ ಇವರಿಗೆ ಹೃತ್ಪೂರ್ವಕ ಶುಭಾಶಯಗಳು.

ನನ್ನ ಬೇಂದ್ರೆ ಕಾವ್ಯಪ್ರೀತಿಗೆ ತುಂಬು ಸಹಕಾರ ನೀಡುತ್ತಿರುವ ಮೈಸೂರಿನ ಸಿ.ಎಫ್.ಟಿ.ಆರ್.ಐ., ಕನ್ನಡ ಸಹೃದಯ ಬಳಗದ ಸಹೋದರ ಶ್ರೀರಂಗಧಾಮಯ್ಯ ಅವರು ತುಂಬಾ ಶಾಂತಚಿತ್ತರು. ಅವರು ಮತ್ತು ಅವರ ಪತ್ನಿ ಶ್ರೀಮತಿ ಸರೋಜಮ್ಮನವರು ತಮ್ಮ ಶ್ರೀರಂಗ ಪ್ರಕಾಶನದಿಂದ ಈಗಾಗಲೇ ನನ್ನ 'ಹಾಡುಹಕ್ಕಿ ಅಂಬಿಕಾತನಯದತ್ತ' ಮತ್ತು 'ಹೂತsದ ಹುಣಸಿ' ಪ್ರಕಟಿಸಿ ಪ್ರೋತ್ಸಾಹಿಸಿದ್ದಾರೆ. ಈಗ ಈ ಪ್ರೌಢಪ್ರಬಂಧದ ಪ್ರಕಟಣೆಯನ್ನು ಅವರೇ ಮಾಡಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು.

ಈ ಕೃತಿಗೆ ತಮ್ಮ ಅಮೂಲ್ಯವಾದ ಮುನ್ನುಡಿಯನ್ನು ಬರೆದುಕೊಟ್ಟಿರುವ ನನ್ನ ಸಂಶೋಧನೆಯ ಮಾರ್ಗದರ್ಶಕರೂ ಆದ ಪ್ರೊ.ಎಚ್.ಎಸ್.ಹರಿಶಂಕರ ಅವರಿಗೆ ನಾನು ಕೃತಜ್ಞನಾಗಿದ್ದೇನೆ. ಈ ಕೃತಿ ಈ ರೂಪಕ್ಕೆ ಬರಲು ಮತ್ತು ನಾನು ಈ ಕೃತಿ ರಚಿಸುವಂತೆ ನನ್ನನ್ನು ತಿದ್ದಿ ತೀಡಿದವರು ನನ್ನ ಗುರುಗಳಾದ ಡಾ.ಕೆ.ಅನಂತರಾಮು ಮತ್ತು ಡಾ.ವಾಮನಬೇಂದ್ರೆಯವರು. ಅವರು ಈ ಕೃತಿ ಮುದ್ರಣವನ್ನು ತಮ್ಮದೇ ಕೃತಿಯೆಂಬಂತೆ ಮುದ್ರಣದ ಎಲ್ಲ ಹಂತಗಳಲ್ಲೂ ಮಾರ್ಗದರ್ಶನ ನೀಡಿದ್ದಾರೆ. ಅವರಿಗೆ ನಾನು ಸದಾ ಋಣಿಯಾಗಿದ್ದೇನೆ. ಈ ಕೃತಿಯನ್ನು ಅಂದವಾಗಿ ಮುದ್ರಿಸಿದ ಗುಡ್‌ಟಚ್ ಪ್ರೆಸ್ಸಿನ ಮಾಲೀಕರಿಗೆ ಆಭಾರಿಯಾಗಿದ್ದೇನೆ. ಈ ಮಹಾಪ್ರಬಂಧವನ್ನು ಗ್ರಂಥ ರೂಪದಲ್ಲಿ ಪ್ರಕಟಿಸಲು ಅನುಮತಿಯಿತ್ತ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೆ ಕೃತಜ್ಞನಾಗಿದ್ದೇನೆ. ಕನ್ನಡ ಕಾವ್ಯ ರಸಿಕರು ಮತ್ತು ವಿದ್ವನ್ಮಣಿಗಳು ಈ ಕೃತಿಯನ್ನು ಪ್ರೀತಿಯಿಂದ ಸ್ವೀಕರಿಸಿ ಆಶೀರ್ವದಿಸಬೇಕೆಂದು ಪ್ರಾರ್ಥಿಸುತ್ತೇನೆ.

ಧಾರವಾಡ ಜಿ. ಕೃಷ್ಣಪ್ಪ

ತಾ|| ೦೭-೦೪-೨೦೦೧

# ನಿವೇದನೆ

ಡಾ॥ ಜಿ. ಕೃಷ್ಣಪ್ಪನವರು ಕನ್ನಡ ಸಾಹಿತ್ಯಕೃಷಿಯಲ್ಲಿ ಗಣನೀಯವಾದ ಸಾಧನೆ ಮಾಡಿದ್ದಾರೆ. ಹಾಡುಹಕ್ಕಿ ಅಂಬಿಕಾತನಯದತ್ತ, D.R. Bendre, ನಾಕುತಂತಿ – ಒಂದು ಟಿಪ್ಪಣಿ, ರಸ್ತೆ ನಿಯಮಗಳು, ಹೂತSದ ಹುಣಸಿ, ಬರಹದಲ್ಲಿ ಬೇಂದ್ರೆಯವರ ಬದುಕು, ಅಂತರಂಗದತ್ತ ನಯನ, ಹಾಗೂ ವಚನ ಜೈಮಿನಿಭಾರತ – ಮುಂತಾದ ವಿದ್ವತ್ಪೂರ್ಣ ಕೃತಿಗಳ ಮೂಲಕ ಸಾಹಿತ್ಯ ಕ್ಷೇತ್ರದಲ್ಲಿ ಪ್ರತಿಷ್ಠಿತವಾದ ಸ್ಥಾನಗಳಿಸಿದ್ದಾರೆ. ವರಕವಿ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರದು ವಿಶ್ವ ಸಾಹಿತ್ಯದಲ್ಲಿ ಪರಿಗಣಿತವಾಗಬೇಕಾದ ಉನ್ನತವಾದ ಸ್ಥಾನ. ಬೇಂದ್ರೆಯವರು ಕನ್ನಡದ ಹೆಮ್ಮೆಯ ಕವಿ. ಕವಿ ಬೇಂದ್ರೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿಯೂ ಬರವಣಿಗೆಯ ಕೃಷಿ ಮಾಡಿದ್ದಾರೆ. ಇಂತಹ ಮಹಾಕವಿಯ ಕಾವ್ಯವನ್ನು ಅರ್ಥಮಾಡಿಕೊಳ್ಳಬೇಕಾದರೆ ಸಾಹಿತ್ಯಾಸಕ್ತರು ಡಾ॥ ಜಿ. ಕೃಷ್ಣಪ್ಪನವರು ಬೇಂದ್ರೆಯವರ ಕುರಿತು ಬರೆದಿರುವ ಗ್ರಂಥಗಳಿಗೆ ಮೊರೆಹೋಗಬೇಕು. ಬೇಂದ್ರೆಯವರ ಸಾಹಿತ್ಯದ ತಲಸ್ಪರ್ಶಿ ಅಧ್ಯಯನ ಮಾಡಿರುವ ಡಾ॥ ಜಿ. ಕೃಷ್ಣಪ್ಪನವರ ಪ್ರಸ್ತುತ ಕೃತಿಯು ಸಾಹಿತ್ಯಾಸಕ್ತರಿಗೆ ಉಪಯುಕ್ತವಾಗಬಲ್ಲ ಉತ್ತಮ ಆಕರಗ್ರಂಥವಾಗಿದೆ. ಈ ಮಹಾಪ್ರಬಂಧವನ್ನು ಪ್ರಕಟಿಸಲು ಅನುಮತಿ ನೀಡಿದ ಲೇಖಕರಿಗೆ ಪ್ರಕಾಶನ ಆಭಾರಿಯಾಗಿದೆ.

ಬೇಂದ್ರೆ ಕಾವ್ಯದ ಪಾರಿಭಾಷಿಕೆಗಳ ಅರ್ಥವಿವರಣ ಕೋಶವೊಂದನ್ನು ಡಾ॥ ಜಿ. ಕೃಷ್ಣಪ್ಪನವರು ಸಿದ್ಧಪಡಿಸುತ್ತಿದ್ದು ಸನಿಯಭವಿಷ್ಯದಲ್ಲಿ ಅದು ಪೂರ್ಣಗೊಳ್ಳುವ ಸಂಭವವಿದೆ. ಇಂಥ ಒಂದು ಮಹತ್ವದ ಕಾರ್ಯದ ಮುನ್ಸೂಚನೆಯನ್ನು ಈ ಸಂದರ್ಭದಲ್ಲಿ ದಾಖಲಿಸುವುದು ಅಪ್ರಸ್ತುತವಾಗಲಾರದೆಂದು ಭಾವಿಸುತ್ತೇನೆ.

ಡಾ॥ ಜಿ. ಕೃಷ್ಣಪ್ಪನವರಿಗೆ, ಅಚ್ಚುಕಟ್ಟಾಗಿ ಪುಸ್ತಕವನ್ನು ಸಿದ್ಧಪಡಿಸಿಕೊಟ್ಟ ಪರಿಶ್ರೀ ಮುದ್ರಣಾಲಯದ ಶ್ರೀ ಆರ್. ಶ್ರೀನಾಥ್ ಹಾಗೂ ಸಿಬ್ಬಂದಿ ವರ್ಗದವರಿಗೆ, ನಮ್ಮ ಪ್ರಕಟಣೆಗಳಿಗೆ ಕಾಲಕಾಲಕ್ಕೆ ಪ್ರೋತ್ಸಾಹ ನೀಡುತ್ತಿರುವ ಓದುಗರಿಗೆ ಹಾಗೂ ಪುಸ್ತಕ ವ್ಯಾಪಾರಿಗಳಿಗೆ ಗೌರವಪೂರ್ವ ವಂದನೆಗಳು

ದಿನಾಂಕ: 25-12-2012 *ಡಿ.ಕೆ. ಶ್ಯಾಮಸುಂದರ ರಾವ್*

ಹನುಮಜ್ಜಯಂತಿ.

# ಕೃತಜ್ಞತೆಗಳು

'ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ – ಒಂದು ಅಧ್ಯಯನ' ಕೃತಿಯನ್ನು ಮೊದಲ ಆವೃತ್ತಿಯಾಗಿ ಪ್ರಕಟಿಸಿದ ಶ್ರೀರಂಗ ಪ್ರಕಾಶನದ ಶ್ರೀಮತಿ ಮತ್ತು ಶ್ರೀ ರಂಗಧಾಮಯ್ಯನವರಿಗೆ ನಮಸ್ಕಾರಗಳು. ಈ ಕೃತಿಗೆ ಮುನ್ನುಡಿ ಬರೆದು ಆಶೀರ್ವದಿಸಿದ ನನ್ನ ಪಿಎಚ್.ಡಿ., ಮಾರ್ಗದರ್ಶಕರಾದ ಪ್ರೊ॥ ಎಚ್. ಎಸ್. ಹರಿಶಂಕರ ಅವರನ್ನು ನಾನು ಸದಾ ನೆನೆಯುತ್ತೇನೆ. ಅವರಿಗೆ ನಮನಗಳು. ನನ್ನನ್ನು ಸಾಹಿತ್ಯ ಅಧ್ಯಯನದ ಶಿಸ್ತಿಗೆ ಒಳಪಡಿಸಿ ಸದಾ ಹಾರೈಸುತ್ತಿರುವ ನನ್ನ ಪೂಜ್ಯಗುರು ಡಾ॥ ಕೆ. ಅನಂತರಾಮು ಮತ್ತು ಗುರುಮಾತೆ ಶ್ರೀಮತಿ ಪಿ.ವಿ. ಜಯಶ್ರೀ ಅವರಿಗೆ ನನ್ನ ಮನಃಪೂರ್ವಕ ವಂದನೆಗಳು. ಕವಿ ಪುತ್ರರಾದ ಶ್ರೀ ಪಾಂಡುರಂಗ ಬೇಂದ್ರೆ (ದಿವಂಗತ) ಮತ್ತು ಡಾ॥ ವಾಮನ ಬೇಂದ್ರೆಯವರು 'ಅರ್ಥವಿಲ್ಲ, ಸ್ವಾರ್ಥವಿಲ್ಲ ಬರಿಯ ಭಾವಗೀತ' ದಂತಹ ಜೀವನ ಸಾಧಕರು. ಅವರ ಪ್ರೀತಿಗೆ ಒಳಗಾದುದು ನನ್ನ ಹಾಗೂ ನನ್ನ ಕುಟುಂಬದ ಭಾಗ್ಯ. ಅವರಿಗೆ ನನ್ನ ವಂದನೆಗಳು.

ನಾಡಿನ ಕಾವ್ಯ ಪ್ರೇಮಿಸಹೃದಯರು ನನ್ನನ್ನು ತಮ್ಮ ಸಹೋದರನಂತೆ, ಬಂಧುವಂತೆ ಕಂಡು ನನ್ನ ಬೇಂದ್ರೆ ಹುಚ್ಚಿಗೆ ಜೊತೆಯಾಗಿ ನಲಿದಿದ್ದಾರೆ. ಇದು ನನ್ನ ಪುಣ್ಯ. ದಕ್ಷಿಣದ ದೊಡ್ಡ ಪೊನ್ನಾಂಡಹಳ್ಳಿ (ಕೋಲಾರ)ಯಿಂದ ಉತ್ತರದ ತುಟ್ಟ ತುದಿಯ ಕಮಲನಗರದ (ಬೀದರ)ತನಕ ಜನ ಬೇಂದ್ರೆ ಕಾವ್ಯವನ್ನು ಓದಿ, ಹಾಡಿ, ಕುಣಿದು ಆ ಕಾವ್ಯದ ಗಾರುಡಿಯ ಪ್ರಕಾಶ, ರಸಭಾವ, ಕಾಂತಿ, ಶಾಂತಿ, ಜೀವನ ಪ್ರೀತಿಗೆ ಮರುಳಾಗಿದ್ದಾರೆ. ಅದರಲ್ಲಿಯ ಜೀವನ ಮೌಲ್ಯವನ್ನು ಅತಿ ಸಹಜವೆಂಬಂತೆ ಆಪ್ತವಾಗಿಸಿಕೊಂಡಿದ್ದಾರೆ. ಕನ್ನಡ ಪತ್ರಿಕೆಗಳ ಸಂಪಾದಕರು ನನ್ನನ್ನು ತಬ್ಬಿ ಮೆಚ್ಚುಗೆಯ ನುಡಿಯಿಂದ ಬೆಚ್ಚಗಿರಿಸಿದ್ದಾರೆ.

ನನ್ನ ಜನರೊಡನೆ ನನ್ನನ್ನು ಒಂದಾಗಿಸಿದ ಬೇಂದ್ರೆ ಕಾವ್ಯ ಒಂದು ತವನಿಧಿ. ಬೇಂದ್ರೆ, ಕುವೆಂಪು, ಶಿವರಾಮಕಾರಂತರ ಸಾಹಿತ್ಯಾಭ್ಯಾಸದಿಂದಲೇ ಕನ್ನಡದ ಅರಿವು, ಕನ್ನಡ ಜನಾಂಗದ ಬೆಳವಣಿಗೆ ಸಾಧ್ಯ ಎಂಬುದು ನನ್ನ ನಂಬಿಕೆ. ಇಂದು ಸಮಾಜದಲ್ಲಿ ನಡೆಯುತ್ತಿರುವ ಅತ್ಯಾಚಾರ ಅನಾಚಾರಗಳಿಗೆ ಕಾರಣ–ನಾಡಿನ ಶ್ರೇಷ್ಠ ಕವಿ ಸಾಹಿತಿಗಳ ಜೀವ ಸಂಜೀವಿನಿ ಕಾವ್ಯವನ್ನು ಮಕ್ಕಳಿಗೆ ಬಾಲ್ಯದಲ್ಲಿ ಮನನ ಮಾಡದಿರುವುದೇ ಆಗಿದೆ. ನೈತಿಕ ಮೌಲ್ಯ ಆದರ್ಶಗಳನ್ನು ಮಕ್ಕಳಿಗೆ ಹಾಡಿನಲ್ಲಿ, ಕಥೆಯಲ್ಲಿ, ಕುಣಿತದಲ್ಲಿ ಒಂದಾಗಿಸಬೇಕು. ಅದು ಹೊರಗಿನ ಒತ್ತಡದಂತೆ ಇಲ್ಲದೆ ಆಂತರಿಕ ವಿಕಾಸವಾಗಿ

ಪಲ್ಲವಿಸಬೇಕು. ಅದನ್ನು ದತ್ತಾತ್ರೇಯ ಬೇಂದ್ರೆ ಅವರಿಗೆ ತಾಯಿ ಅಂಬವ್ವ ಬಾಲ್ಯದಲ್ಲಿ ತನ್ನ ಮೃದು ನುಡಿಗಳಿಂದ ಉಣಿಸಿದಳು. ಅದನ್ನು ಬೇಂದ್ರೆ 'ಬಾಲ್ಯಕಾಂಡ'ದಲ್ಲಿ ಹೀಗೆ ಹೇಳಿಕೊಂಡಿದ್ದಾರೆ:

'ಹೆಣ್ಣು ಎನ್ನುವ ಮಾತು ತಾಯಿ ಎನ್ನುವ ಮಾತು
ಎರಡಲ್ಲ ಒಂದೆಂದು ತಿಳಿಸಿದಳು.'

ಬೆಳೆಯುತ್ತ ದತ್ತಾತ್ರೇಯ 'ಅಂಬಿಕಾತನಯದತ್ತ' ರಾದರು. ತಾಯಿಯ ಹೆಸರಿನ ಕಾವ್ಯ ನಾಮದಲ್ಲಿ ಜಗದ್ವಿಖ್ಯಾತರಾದ ಮೊದಲಿಗರಾದರು. ಅವರು ಕಂಡ ಸ್ತ್ರೀಯ ಅಗಾಧ ಶಕ್ತಿ, ಶಾಂತಿ, ಪಾವಿತ್ರ್ಯವನ್ನು ಅಧ್ಯಯನ ಮಾಡಿದ ಈ ಕೃತಿಯ ಎರಡನೆಯ ಆವೃತ್ತಿ ಅವಶ್ಯಕ ಎಂದು ತಿಳಿದು ಪ್ರಕಾಶಿಸುತ್ತಿರುವ ಕಾಮಧೇನು ಪುಸ್ತಕ ಭವನದ ಪ್ರೊ॥ ಡಿ.ಕೆ. ಶ್ಯಾಮಸುಂದರ ರಾವ್ ಮತ್ತು ಶ್ರೀ ಮತಿ ಟಿ.ಎನ್. ಮುದ್ದಮ್ಮ ಅವರಿಗೆ ವಂದಿಸುವೆ. ಅಂದವಾಗಿ ಮುದ್ರಿಸಿದ ಪರಿಶ್ರೀ ಪ್ರಿಂಟರ್ಸ್‌ನ ಶ್ರೀ ಆರ್. ಶ್ರೀನಾಥ್ ಮತ್ತು ಸಿಬ್ಬಂದಿಗೆ ನಮಸ್ಕರಿಸುವೆ. ನನ್ನ ಬೇಂದ್ರೆ ಅಧ್ಯಯನ ಕೃತಿಗಳನ್ನು ಓದಿ ಸಂತೋಷಪಟ್ಟು ಪ್ರೋತ್ಸಾಹಿಸುತ್ತಿರುವ ಕನ್ನಡ ಬಂಧುಗಳ ಕಾವ್ಯ ಪ್ರೀತಿ ತುಂಬಾಹಿರಿದಾದುದು. ಅವರಿಗೆ ನಾನು ಸದಾ ಋಣಿಯಾಗಿರುವೆ.

ಬೆಂಗಳೂರು **ಡಾ॥ ಜಿ. ಕೃಷ್ಣಪ್ಪ**
25–12–2012

# ಪರಿವಿಡಿ

ಅಧ್ಯಾಯ ಒಂದು

# ಉದ್ದೇಶ ಮತ್ತು ವ್ಯಾಪ್ತಿ

ಹೊಸಗನ್ನಡ ಸಾಹಿತ್ಯದ ಇತಿಹಾಸದಲ್ಲಿ 'ಅಂಬಿಕಾತನಯದತ್ತ' ಎಂಬ ಕಾವ್ಯ ನಾಮದಿಂದ ಶೋಭಾಯಮಾನರಾಗಿರುವ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರ ಹೆಸರು ಅಜರಾಮರವಾದುದು. ಅವರ ಜೀವನ, ಸಾಹಿತ್ಯಸಾಧನೆ ಮುಂತಾದುವೆಲ್ಲ ಅನನ್ಯವಾಗಿರುವಂತಹದು. ಅವರ ಜೀವನವೇ ಒಂದು ಕಾವ್ಯ. ಧಾರವಾಡದಲ್ಲಿ ಜನಿಸಿ ಆ ಪರಿಸರವನ್ನೇ ತಮ್ಮ ಸಾಹಿತ್ಯಕೃಷಿಯ ರಂಗವನ್ನಾಗಿಸಿಕೊಂಡು ಇಡೀ ವಿಶ್ವವನ್ನೇ ತಮ್ಮ ಭಾವನಾಕಕ್ಷೆಯೊಳಕ್ಕೆ ತೆಗೆದುಕೊಂಡ ಧೀಮಂತ ಪುರುಷರವರು. ಎಂಬತ್ತಾರು ವರ್ಷಗಳ ತಮ್ಮ ಪರಿಪೂರ್ಣ ಜೀವನದಲ್ಲಿ ಅವರು ಸುಮಾರು ೬೦ ವರ್ಷಗಳನ್ನು, ಅಂದರೆ ಒಂದು ಸಂವತ್ಸರ ಚಕ್ರವನ್ನೇ ಕಾವ್ಯತಪಸ್ಸಿಗಾಗಿ ಸಮರ್ಪಿಸಿದರು. ಪ್ರಧಾನವಾಗಿ ಅವರದು ಕವಿಹೃದಯ. ಭಾವಗೀತೆಗಳೇ ಅವರ ಸಾಹಿತ್ಯದ ಜೀವನಾಡಿ. ಕವಿತೆಗಳಲ್ಲದೆ, ನಾಟಕ, ಸಣ್ಣಕಥೆ, ವಿಮರ್ಶೆ, ಸಂಶೋಧನೆ, ಅನುವಾದ ಈ ಮೊದಲಾದ ಕ್ಷೇತ್ರಗಳಲ್ಲೂ ಅವರು ಸಾಕಷ್ಟು ಸಾಧನೆ ಮಾಡಿದ್ದಾರೆ. ಸ್ತ್ರೀಶಕ್ತಿಯ ವಿಚಾರವಾಗಿ ಬೇಂದ್ರೆಯವರಿಗಿರುವ ಕಳಕಳಿ, ಗೌರವ ಅತ್ಯಂತ ವಿಶಿಷ್ಟವಾದುದು, ಅನುಪಮವಾದುದು. ಮಾತೃ ಶಕ್ತಿಯೊಂದನ್ನು ತಮ್ಮ ಹೃದಯ ಕಮಲದಲ್ಲಿ ಇಂಬಿಟ್ಟುಕೊಂಡು ಕಾರ್ಯೋನ್ಮುಖರಾದರು. 'ಅಂಬಿಕಾತನಯದತ್ತ' ಎಂಬ ಅವರ ಕಾವ್ಯನಾಮವೇ ಅವರ ಹೃದಯಾಂತರಾಳದಲ್ಲಿರುವ ಮಾತೃಶಕ್ತಿಗೆ ದ್ಯೋತಕವಾಗಿದೆ. ಮಾತೆಯಾಗಿ ಸ್ತ್ರೀಯ ಸ್ಥಾನಮಾನಗಳೇನು ಎಂಬುದು ಮಾತ್ರವಲ್ಲದೆ ಸ್ತ್ರೀಶಕ್ತಿಯ ವಿವಿಧ ಮುಖಗಳು ಬೇಂದ್ರೆಯವರ ಸಾಹಿತ್ಯದಲ್ಲಿ ಉಜ್ವಲವಾಗಿ ಚಿತ್ರಣಗೊಂಡಿವೆ. ಬೇಂದ್ರೆಯವರು ತಮ್ಮ ಸಾಹಿತ್ಯದಲ್ಲಿ ಅನಾವರಣಗೊಳಿಸಿರುವ ಸ್ತ್ರೀಶಕ್ತಿಯ ವಿವಿಧ ಮುಖಗಳನ್ನು ಚಿಂತನೆ ಮಾಡುವುದೇ ಪ್ರಸ್ತುತ ಪ್ರಬಂಧದ ಮುಖ್ಯ ಉದ್ದೇಶ.

ಬೇಂದ್ರೆಯವರು ಮಾತೃಶಕ್ತಿಯ ಆರಾಧಕರಾಗುವುದಕ್ಕೆ ಅವರ ಜೀವನ ಬೆಳೆದುಬಂದ ಹಿನ್ನೆಲೆಯೇ ಕಾರಣವಾಗಿದೆ. ಆ ಹಿನ್ನೆಲೆಯಲ್ಲಿ ಕವಿವರ್ಯರೇ ತಮ್ಮ ಆತ್ಮಕಥನದಲ್ಲಿ ಬಿತ್ತರಿಸಿದ್ದಾರೆ : " ಹೆಚ್ಚಾಗಿ ನನ್ನ ಜೀವನಕ್ಕೆ ಸಂಬಂಧ ಬಂದದ್ದು ನನ್ನ ತಾಯಿಯ ತಾಯಿಯ ಮನೆತನ."[1] ಬೇಂದ್ರೆಯವರ ಬಾಲ್ಯಜೀವನವೆಂದರೆ ಅದು ಬಡತನದಲ್ಲಿ ಅದ್ದಿ ತೆಗೆದ ಕರುಣಕಥೆ. ಪರಿಸ್ಥಿತಿಯ ಒತ್ತಡದಿಂದಾಗಿ ಅವರಿಗೆ ಬಾಲ್ಯದಲ್ಲಿ ತಾಯಿಯ ಪೋಷಣೆ ಮಾತ್ರವಲ್ಲದೆ ಅಜ್ಜಿಯ ಪೋಷಣೆಯೂ ಲಭ್ಯವಾಯಿತು. ಅಜ್ಜಿಯಾದರೋ ತಾನೇ ಸ್ವತಃ ಅನ್ಯರ ಮನೆಯಲ್ಲಿ ಅಡಿಗೆ ಕೆಲಸ ಮಾಡಿ ದುಡಿಯುತ್ತ ತನ್ನ ಮೊಮ್ಮಕ್ಕಳ ಮೇಲೆ ಪ್ರೇಮದ ಅಮೃತವರ್ಷವನ್ನೇ ಹರಿಸಿದ ಪುಣ್ಯಮಾತೆ. ಆಕೆ ಮಾಡುತ್ತಿದ್ದುದೊಂದು ಅನನ್ಯ

ಕಾಯಕದ ತಪಸ್ಸು. ಹೀಗೆ ಅಜ್ಜಿಯ ಆಧಾರದಿಂದ ಬೆಳೆದ ಕವಿ ಸ್ತ್ರೀಶಕ್ತಿಯ ವಿಷಯದಲ್ಲಿ ಪೂಜ್ಯ ಭಾವವನ್ನು ತಳೆಯುವುದು ಸಹಜವೇ ಆಗಿದೆ. ಮಾತೆಯ ಪ್ರಭಾವ, ಮಾತಾಮಹಿಯ ಪ್ರಭಾವ ಬೇಂದ್ರೆಯವರ ವ್ಯಕ್ತಿತ್ವವನ್ನು ಒಟ್ಟುಗೂಡಿ ರೂಪಿಸಿದೆ. ಸ್ತ್ರೀಶಕ್ತಿಯು ತನ್ನ ಕಷ್ಟಗಳನ್ನು ಲೆಕ್ಕಿಸದೆ ಹೇಗೆ ತನ್ನ ಪೀಳಿಗೆಯ ಅಭ್ಯುದಯಕ್ಕಾಗಿ ಶ್ರಮಿಸುತ್ತದೆ ಎಂಬುದನ್ನು ಬೇಂದ್ರೆಯವರು ನಿಚ್ಚಳವಾಗಿ ಕಂಡುಕೊಂಡಿದ್ದಾರೆ. ಆ ಮಾತೃಭಕ್ತಿಯ ಭಾವನೆಗಳೆಲ್ಲ ಮುಂದೆ ಭಾವಗೀತೆಗಳಾಗಿ ಹರಿಯುವುದರ ಜೊತೆಗೆ ಅವಳ ನೋವು, ನಿಸ್ಸಹಾಯಕತೆ ಹಾಗೂ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಅವಳ ಶೋಷಣೆಯು ಅವರ ಕಾವ್ಯದಲ್ಲಿ ಪ್ರತಿಬಿಂಬಿತವಾಗಿದೆ. ನಮ್ಮ ಭಾರತೀಯ ಪರಂಪರೆಯಲ್ಲಿ ಸ್ತ್ರೀಯನ್ನು ಆಧ್ಯಾತ್ಮಿಕ ಚಿಂತನೆಯಲ್ಲಿ ಪ್ರಮುಖವಾಗಿಸಿ, ಸಾಮಾಜಿಕ ಸ್ತರದಲ್ಲಿ ಶೋಷಿಸಿರುವುದು ಕಂಡುಬರುತ್ತದೆ. ಬೇಂದ್ರೆಯವರು ಈ ಸೂಕ್ಷ್ಮವನ್ನು ಗಮನಿಸಿ ಆಧ್ಯಾತ್ಮಿಕ ಸ್ತರದ ಜೊತೆಗೆ ಅವಳ ಸಾಮಾಜಿಕ ಶೋಷಣಾಮುಖವನ್ನು ಕಂಡು ಅದಕ್ಕೆ ಕ್ರಾಂತಿಕಾರಕವಾಗಿ ಪ್ರತಿಸ್ಪಂದಿಸಿದ್ದಾರೆ.

ಬೇಂದ್ರೆಯವರಿಗೆ ತಾಯಿಯೇ ಸರ್ವಸ್ವ. ಅವರು ತಮ್ಮ 'ಅಂಬಿಕಾತನಯದತ್ತ' ಎಂಬ ಕವಿತೆಯಲ್ಲಿ ತಮ್ಮ ತಾಯಿಯನ್ನು ಕುರಿತು "ನಿನ್ನ ತನುವಿನಿಂದ ಬಂದ ಮುದ್ದು ತನಯನೀತನು| ನೀನು ಈಯಲಿತ್ತನು|"[2] ಎಂದು ಹಾಡಿದ್ದಾರೆ. ಅವರ ಕಾವ್ಯದ ಸ್ಥಾಯಿಭಾವವು ಮಾತೃಪ್ರಜ್ಞೆಯೇ ಆಗಿದೆ. ಅಷ್ಟಕ್ಕೆ ಬಿಡದೆ "ನಿನ್ನ ಹೆಸರಿನಲ್ಲಿ ನಾನು ಬರೆವುದೇನು ಸೋಜಿಗ | ತಿಳಿಯಲಾರದೀಜಗ |"[3] ಎಂದು ತಮ್ಮನ್ನು ಮಾತೃಶಕ್ತಿಗೇ ಸಂಪೂರ್ಣವಾಗಿ ಸಮರ್ಪಿಸಿಕೊಂಡಿದ್ದಾರೆ. ಅಂಬಿಕೆಯ ಉದರದ ಹೂವಾಗಿ, ಆಕೆಯಿಂದ ಉದುರಿಹೋಗದ ಹೆಸರಾಗಿ ಸರಸ್ವತಿಗೆ ಸಲ್ಲಿಸಲ್ಪಟ್ಟವರಾಗಿದ್ದಾರೆ. ತಾಯಿಯ ವರದಿಂದ ವರಕವಿಯಾಗಿ ಸಾಹಿತ್ಯಲೋಕದ ಧ್ರುವತಾರೆಯಾಗಿ ನೆಲೆಸಿದ ಪರಿಯನ್ನು ಬಣ್ಣಿಸಿ ಸಂತೋಷಪಟ್ಟಿದ್ದಾರೆ. ತನ್ನ ತಾಯಿಯನ್ನು ಸ್ತುತಿಸಲು ಅವರಿಗೆ ಮಾತುಗಳು ಸಾಲವು. 'ಹೆಣ್ಣು ಎನ್ನುವ ಮಾತು, ತಾಯಿ ಎನ್ನುವ ಮಾತು ಎರಡಲ್ಲ, ಒಂದು'[4] ಎಂದು ತನ್ನ ತಾಯಿ ಅಂಬವ್ವನೇ ತಿಳಿಸಿದರು ಎಂದು ಬಣ್ಣಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಸ್ತ್ರೀಯನ್ನು ತಾಯಿಯಾಗಿ ಕಂಡ ವೈಭವವೇನೆಂಬುದನ್ನು ಸವಿವರವಾಗಿ ಇಲ್ಲಿ ವಿಮರ್ಶೆ ಮಾಡಲಾಗಿದೆ.

ಬೇಂದ್ರೆಯವರು ಚಿಕ್ಕಂದಿನಲ್ಲಿ ತಂದೆಯನ್ನು ಕಳೆದುಕೊಂಡು, ಈ ಪ್ರಪಂಚ ಏನು ಎನ್ನುವ ಅರಿವು ಬರುವಾಗ್ಗೆ ಹೆಜ್ಜೆಹೆಜ್ಜೆಗೆ ಅವರನ್ನು ತಿದ್ದಿ, ಮಿದ್ದಿ ಮನುಷ್ಯನನ್ನಾಗಿ ಮಾಡಿದವಳೇ ತಾಯಿ ಅಂಬವ್ವ. ಆಕೆಯು ಎದೆಗುಂದದೆ ಬಂದ ಕಷ್ಟವನ್ನು ಎದುರಿಸುತ್ತ ಧೈರ್ಯದಿಂದ ಜೀವನ ನಡೆಸುತ್ತಿದ್ದಳು. ಅವರ ಕಾವ್ಯ ಅನುಭವದ ಸ್ತರ ಪಡೆಯಲು ಸಾಧ್ಯವಾದದ್ದು ಅವರ ತಾಯಿಯಿಂದ. ಅವರು 'ತಾಯಿ' ಎಂಬ ಎರಡಕ್ಷರದಲ್ಲಿ ಇಡೀ ವಿಶ್ವವನ್ನು ಅರಿಯಲು ಸಾಧ್ಯ ಮಾಡಿಕೊಂಡರು. ಅವರು ತಾಯಿಯನ್ನು ಕುರಿತು "೧. ದೇಹ ಕೊಟ್ಟ ತಾಯಿ; ೨. ಮಾತು ಕಲಿಸಿದ ತಾಯಿ; ೩. ಸಂಸ್ಕಾರಸಂಪನ್ನ ಮಾಡಿದ ತಾಯಿ; ೪. ಭೂಮಂಡಲದ ಮಾನವತೆಯಲ್ಲಿ ನೆಲೆಸಿದ ತಾಯಿ; ೫. ವಿಶ್ವವನ್ನು ಉದರದಲ್ಲಿ ಧರಿಸಿದ ತಾಯಿ - ಈ ಐದು ಐದೆಯರು ದತ್ತನ ತಾಯಂದಿರು. ಇದು ಪಂಚಕೋಶ ಗರ್ಭ. 'ಅಂಬಿಕೆ'ಯ ತೊಡೆ, ಹೊಟ್ಟೆ, ಎದೆ, ಕೊರಳು, ತುಟಿ, ಕಣ್ಣು - ಒಂದೊಂದರಲ್ಲಿಯೂ ಈ ಮಹಾಸ್ಪರ್ಶವಿತ್ತು. ಆದರೆ ಆಕೆಯ ದೀಕ್ಷೆಯಲ್ಲಿ ಅನಂತ ಸಹನೆ ಇತ್ತು; ಯುಗಯುಗದ ನೋಂಪಿಯ ಕಂಪಿತ್ತು. ತಂದೆಯವರ ಬಳಗದ ನಿಕಟ ಸಾನ್ನಿಧ್ಯದಿಂದ ದೈವವಂಚಿತನಾದ ನಾನು, ನನ್ನ ತಾಯಿ, ತಾಯಿಯ ತಾಯಿ, ಆಕೆಯ ತಾಯಿ ಇವರ ಪ್ರತ್ಯಕ್ಷ ಚಾರಿತ್ರ್ಯದಲ್ಲಿ ಪೌರುಷವನ್ನು ಕಂಡೆ"[5] ಎಂದು ಸಾಹಿತ್ಯದ ವಿರಾಟ್‌ಸ್ವರೂಪದಲ್ಲಿ ನುಡಿದಿದ್ದಾರೆ. ಈ ಹಿನ್ನೆಲೆಯನ್ನೇ ಪ್ರಸ್ತುತ ವಿವೇಚನೆಗೆ ಆಧಾರವಾಗಿ ಸ್ವೀಕರಿಸಲಾಗಿದೆ.

ಬೇಂದ್ರೆಯವರು ಗೃಹಸ್ಥ ಜೀವನವನ್ನು ನಡೆಸುತ್ತ ಒಂಬತ್ತು ಮಕ್ಕಳನ್ನು ಪಡೆದರು. ಅದರಲ್ಲಿ ವಿಧಿ ತನ್ನ ಪಾಲೇ ಹೆಚ್ಚೆಂದು ಆರು ಮಕ್ಕಳನ್ನು ತನ್ನ ಮಡಿಲಿಗೆ ಸೇರಿಸಿಕೊಂಡುಬಿಟ್ಟಿತು. ಬೇಂದ್ರೆಯವರಿಗೆ ಉಳಿದದ್ದು ಮೂರೇ ಮಕ್ಕಳು. ಬಡತನದ ನೋವು ಒಂದುಕಡೆಯಾದರೆ ಮೇಲಿಂದ ಮೇಲೆ ಮಕ್ಕಳನ್ನು ಕಳೆದುಕೊಳ್ಳುತ್ತಿದ್ದುದು ಇನ್ನೊಂದು ಕಡೆ. ಬೇಂದ್ರೆಯವರ ಮಡದಿ ಲಕ್ಷ್ಮೀಬಾಯಿ ನಿಜವಾದ ಅರ್ಥದಲ್ಲಿ ಅವರ ಅರ್ಧಾಂಗಿಯಾದರು. ಬೇಂದ್ರೆಯವರು ಅರ್ಧನಾರೀಶ್ವರನಾಗಿ ಬದುಕಿದರು. ತಮ್ಮ ಕುಟುಂಬಕ್ಕೆ ಒದಗಿದ ಸಂಕಷ್ಟಗಳನ್ನೆಲ್ಲ ಲಕ್ಷ್ಮೀಬಾಯಿ ತಮ್ಮ ಪತಿಯೊಡಗೂಡಿ ಸಮಾನವಾಗಿ ಹಂಚಿಕೊಂಡರು. ಈ ಹಿನ್ನೆಲೆಯಲ್ಲಿ ಕವಿವರ್ಯರು ರಚಿಸಿರುವ ಹಲವು ಕವನಗಳು ಅತ್ಯಂತ ಹೃದಯಸ್ಪರ್ಶಿಯೂ ಆತ್ಮೀಯವೂ ಸೂಕ್ಷ್ಮಗ್ರಾಹಿಯೂ ಆಗಿವೆ. ಅವುಗಳಲ್ಲಿ 'ಸ್ತ್ರೀ' ಎಂಬ ಶಕ್ತಿ ಮಡದಿಯಾಗಿ ನಿಂತಾಗಿನ ವಿವಿಧ ಮಜಲುಗಳು ಪ್ರಸ್ಫುಟಗೊಂಡಿವೆ. ಕೌಟುಂಬಿಕ ಜೀವನದಲ್ಲಿ ಬರುವ ಕೋಪ, ಸಿಡುಕು - ಮಿಡುಕು, ವಿರಹ, ಹೊಂದಾಣಿಕೆ ಮುಂತಾದ ಹಲವು ಭಾವಗಳನ್ನು ಅವರ ಕವಿತೆಗಳು ದರ್ಶಿಸುತ್ತವೆ. ಅಷ್ಟಕ್ಕೆ ನಿಲ್ಲದೆ ಪತಿ-ಪತ್ನಿಯರ ನಡುವಣ ಪ್ರೇಮದ ಅಖಂಡತೆ, ಒಲುಮೆ, ಪ್ರೀತಿ-ಪ್ರಣಯ ಮುಂತಾದ ಭಾವಗಳಿಂದಲೂ ಅವರ ಕವಿತೆಗಳು ಆರ್ದ್ರವಾಗಿವೆ. ಸ್ತ್ರೀಯನ್ನು ಪತ್ನಿಯಾಗಿ ಬೇಂದ್ರೆಯವರು ಹೇಗೆ ಕಂಡಿದ್ದಾರೆಂಬುದರ ಅವಲೋಕನವೊಂದನ್ನು ಈ ಪ್ರಬಂಧದಲ್ಲಿ ಮಂಡಿಸಲಾಗಿದೆ.

ಭಾರತೀಯ ಸಂಸ್ಕೃತಿಯಲ್ಲಿ ಬಹಳ ಪ್ರಾಚೀನ ಕಾಲದಿಂದಲೂ ಶಕ್ತಿದೇವತೆಯ ಆರಾಧನೆ ನಡೆದುಬಂದಿದೆ. ಈ ಸೃಷ್ಟಿಯ ಮೂಲದಲ್ಲಿ ಪ್ರಕೃತಿ ಮತ್ತು ಪುರುಷ ಎಂಬ ಎರಡು ಶಕ್ತಿಗಳಿವೆ. ಆ ಶಕ್ತಿಗಳಲ್ಲಿ ಪುರುಷನಿಗಿಂತ ಪ್ರಕೃತಿಯ ಪಾತ್ರವೇ ದೊಡ್ಡದೆಂದು ಭಾರತೀಯ ಚಿಂತನಧಾರೆ ಸ್ಪಷ್ಟಪಡಿಸುತ್ತದೆ. ಆ ಪ್ರಕೃತಿಯೇ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣಳೆಂದು ಅವಳೇ ಆದಿಶಕ್ತಿಯೆಂದು ಹೇಳಲಾಗಿದೆ. ಆ ಆದಿಶಕ್ತಿಯೇ ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರಿಗೆ ತಾಯಿ ಎಂದು ಶಾಕ್ತ ಸಂಪ್ರದಾಯವು ಹೇಳುತ್ತದೆ. ಇಂದು ಬೇರೆಬೇರೆ ದೇವರುಗಳ ಪೂಜೆ ನಡೆಯುತ್ತಿದ್ದರೂ ಅವುಗಳಲ್ಲಿ ಶಕ್ತಿದೇವತೆಯ ಉಪಾಸನೆಯೇ ಅತ್ಯಂತ ಪ್ರಮುಖವಾದುದಾಗಿದೆ. ಗ್ರಾಮದೇವತೆಗಳೆಂದು ಹೇಳುವ ಎಲ್ಲ ಆರಾಧ್ಯಮೂರ್ತಿಗಳು ಸ್ತ್ರೀಶಕ್ತಿಯ ವಿವಿಧ ರೂಪಗಳೆಂಬುದನ್ನು ನಾವು ಮನಗಾಣಬಹುದಾಗಿದೆ. ಲೋಕವ್ಯವಹಾರದಲ್ಲಿಯೂ ಮನುಷ್ಯನಿಗೆ ತಂದೆಗಿಂತ ತಾಯಿ ಹೆಚ್ಚು ಹತ್ತಿರದವಳಾಗುತ್ತಾಳೆ. ಅವನ ಬೇಕು ಬೇಡಗಳನ್ನು ಬೇಸರವಿಲ್ಲದೆ ಕೇಳಿಸಿಕೊಳ್ಳುತ್ತಾಳೆ. ಅವನ ಯೋಗಕ್ಷೇಮಕ್ಕೆ ತನ್ನ ಕೈಲಾದುದನ್ನೆಲ್ಲ ಮಾಡುತ್ತಾಳೆ. ಶಕ್ತಿಯನ್ನು ಆರಾಧಿಸುವ ಉದ್ದೇಶವೂ ಇದೇ ಆಗಿದೆ. ಬೇಂದ್ರೆಯವರು ತಮ್ಮ ಕಾವ್ಯವಾಹಿನಿಯಲ್ಲಿ ಶಕ್ತಿದೇವತೆಯ ಉಪಾಸನೆಗೆ ವಿಶೇಷ ಮಹತ್ವ ಕೊಟ್ಟಿದ್ದಾರೆ. ಧಾರವಾಡದ ತಾಯಿ, ಕನ್ನಡತಾಯಿ, ಭೂಮಿತಾಯಿ, ಪ್ರಕೃತಿಮಾತೆ, ಭಾರತಮಾತೆ, ವಿಶ್ವಮಾತೆ, ಗಂಗೆ, ದುರ್ಗೆ, ಗಾಯತ್ರಿ ಮೊದಲಾದ ಶಕ್ತಿದೇವತೆಗಳ ಉಪಾಸನೆ ಹೇಗೆ ಕಸುವು ಪಡೆದಿದೆ ಎಂಬುದನ್ನು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಪಂಚಮಹಾಭೂತಗಳಿಂದ ಈ ಸೃಷ್ಟಿಯ ರಚನೆಯಾಗಿದೆ ಎಂಬುದು ಸರ್ವವಿದಿತವಾದ ವಿಚಾರ. ಆಕಾಶ, ವಾಯು, ಅಗ್ನಿ, ಜಲ ಮತ್ತು ಭೂಮಿ ಎಂಬೀ ಪಂಚಮಹಾಭೂತಗಳು ಒಂದರಿಂದ ಒಂದಕ್ಕೆ ದಾಟುತ್ತ, ಸ್ಥೂಲವಾಗುತ್ತ ಹೋಗುತ್ತವೆ. ಭೂಮಿಯಾದರೋ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ ಎಂಬೀ ಪಂಚಗುಣಗಳಿಂದ ಪರಿಶೋಭಿತವಾಗಿ ಸಕಲ ಜೀವರಾಶಿಗಳಿಗೆ ಆಧಾರಭೂತವಾಗಿದೆ. ನಮ್ಮೆಲ್ಲರ ಬದುಕು ಸಂಪನ್ನವಾಗಿರುವುದು ಈ ಭೂಮಿಯ ಆಶ್ರಯದಿಂದಲೆ. ಆದ್ದರಿಂದಲೇ ಭೂಮಿಯನ್ನು

ಶಕ್ತಿದೇವತೆಯ ರೂಪದಲ್ಲಿ ಭೂಮಾತೆ ಎಂದು ಕಲ್ಪಿಸಲಾಗಿದೆ. ವಿನೋಬಾ ಭಾವೆಯವರು ಭಾರತೀಯರಿಗೆ ಭೂಮಾತೆ, ಗೋಮಾತೆ, ಗಂಗಾಮಾತೆ, ಗಾಯತ್ರಿಮಾತೆ ಮತ್ತು ಗೀತಾಮಾತೆಯರೆಂಬ ಐವರು ಮಾತೆಯರು ಪೂಜಾರ್ಹರೆಂದು ಭಗವದ್ಗೀತೆಯ ಮಹಿಮೆಯನ್ನು ಎತ್ತಿ ಹಿಡಿಯುವ ಸಂದರ್ಭದಲ್ಲಿ ಉಲ್ಲೇಖಿಸಿದ್ದಾರೆ. ನಮ್ಮ ಜನಪದ ಪರಂಪರೆಯಲ್ಲಿಯೂ ಭೂಮಾತೆಗೆ ವಿಶೇಷ ಪ್ರಾಶಸ್ತ್ಯವಿದೆ.

ಏಳುತಾಲೇ ಎದ್ದು ಯಾರ್‍ಯಾರ ನೆನೆಯಾಲೆ
ಎಳ್ಳು ಜೀರಿಗೆ ಬೆಳೆಯೋಳ ೞ ಭೂಮಿತಾಯ
ಎದ್ದೊಂದು ಗಳಿಗೆ ನೆನೆದೇನು
ಎಲ್ಲಕ್ಕೂ ನಿನ್ನ ಮೊದಲಲ್ಲೆ ನಾ ಬಲಗೊಂಬೆ
ಎಳ್ಳುರಾಜನ್ನ ಬೆಳೆವಾಕಿ ೞ ಭೂತಾಯಿ
ಬಲ್ಲಿದಳ ಮೊದಲ ಬಲಗೊಂಬೆ [೬]

ಎಂಬ ಜನಪದ ತ್ರಿಪದಿಗಳು ಆ ಪವಿತ್ರ ಭಾವನೆಯ ದ್ಯೋತಕವಾಗಿವೆ. ಬೇಂದ್ರೆಯವರಾದರೊ ಈ ಹಿನ್ನೆಲೆಯಲ್ಲಿಯೇ ತಮ್ಮ ಹಲವು ಕವನಗಳಲ್ಲಿ ಭೂಮಾತೆಯ ಹಿರಿಮೆ-ಗರಿಮೆಗಳನ್ನು ಅತಿಶಯವಾಗಿ ಕೊಂಡಾಡಿದ್ದಾರೆ. ಅವುಗಳ ವಿವೇಚನೆಯೊಂದನ್ನು ಇಲ್ಲಿ ಪ್ರಸ್ತುತಪಡಿಸಲಾಗಿದೆ.

ಗಾಯತ್ರಿಮಾತೆಯನ್ನು ಕುರಿತಂತೆ ಅವರು ರಚಿಸಿರುವ 'ಗಾಯತ್ರಿಸೂಕ್ತ'ವು ಉಲ್ಲೇಖನೀಯವಾದುದಾಗಿದೆ. ಸೃಷ್ಟಿಯ ಮೂಲದಲ್ಲಿರುವ ಪ್ರಕೃತಿತತ್ತ್ವವು ಸೃಷ್ಟಿಯ ತರುವಾಯ ಅರಣ್ಯವಾಗಿ, ನದಿಯಾಗಿ, ಬೆಟ್ಟವಾಗಿ, ಸರೋವರವಾಗಿ, ತೊರೆಯಾಗಿ , ಕೆರೆಯಾಗಿ ನಮ್ಮ ಕಣ್ಣಮುಂದೆ ಹಬ್ಬಿಕೊಂಡಿದೆ. ಶಕ್ತಿದೇವತೆಯೆ ಆ ಎಲ್ಲ ರೂಪಗಳಲ್ಲೂ ತೋರಿಕೊಂಡಿದ್ದಾಳೆ ಎಂಬುದೇ ಇಲ್ಲಿ ನಿಜವಾದ ಮಾತು. ಹಾಗೆ ಹಬ್ಬಿ ನಿಂತಿರುವ ಪ್ರಕೃತಿಮಾತೆ ಮಾನವನ ಆಸೆಗಳನ್ನು ಪೂರೈಸಲು ಶಕ್ತಳಾಗಿದ್ದಾಳೆಯೆ ಹೊರತು ಅವನ ದುರಾಶೆಗಳನ್ನು ತಣಿಸಲು ಶಕ್ತಳಾಗಿಲ್ಲ. ದುರಾಶಾಪೀಡಿತರ ದೌರ್ಜನ್ಯಕ್ಕೆ ತುತ್ತಾಗಿ ಅವಳು ದಿನದಿಂದ ದಿನಕ್ಕೆ ಕೃಶಳಾಗಿ ಕಂಗೆಡುತ್ತಿದ್ದಾಳೆ. ಹಾಗೆ ಪ್ರಾಕೃತಿಕ ಸ್ತರದಲ್ಲಿ ಸ್ತ್ರೀಶಕ್ತಿಯ ಮೇಲಾಗುತ್ತಿರುವ ದೌರ್ಜನ್ಯವನ್ನು ಬೇಂದ್ರೆಯವರು ತಮ್ಮ ಹಲವು ಕವಿತೆಗಳಲ್ಲಿ ಶಕ್ತಿಪೂರ್ಣವಾಗಿ ಹಿಡಿದಿಟ್ಟಿದ್ದಾರೆ. ಅವುಗಳ ವಿವೇಚನೆಯನ್ನು ಪ್ರಸ್ತುತ ಪ್ರಬಂಧದ ವ್ಯಾಪ್ತಿಗೆ ಒಳಪಡಿಸಲಾಗಿದೆ.

"ಒಂದು ಸಮಾಜದಲ್ಲಿ ಸ್ತ್ರೀಯರಿಗೆ ನೀಡಲಾಗಿರುವ ಸ್ಥಾನಮಾನಗಳು ಆ ಸಮಾಜದ ಸಂಸ್ಕೃತಿಯ ಹಿರಿಮೆಯನ್ನು, ನಾಗರಿಕತೆಯ ಗರಿಮೆಯನ್ನು ಮತ್ತು ಅದರ ಸಾಮಾಜಿಕ, ಆರ್ಥಿಕ, ನೈತಿಕ ಮತ್ತು ಆಧ್ಯಾತ್ಮಿಕ ಮಹಿಮೆಯನ್ನು ಎತ್ತಿತೋರುವ ನಂಬಲರ್ಹವಾದ ಸೂಚಿಯಾಗಿರುತ್ತದೆ; ಒಂದು ದೇಶದ ಸಂಸ್ಕೃತಿಯ ಸತ್ತ್ವ, ನಾಗರಿಕತೆಯ ನವಿರು ಮತ್ತು ಅದರ ಪ್ರಜೆಗಳ ಸರ್ವತೋಮುಖ ಪ್ರಗತಿಯು ಆ ನಾಡಿನಲ್ಲಿ ಮಹಿಳೆಯರಿಗೆ ತೋರಿರುವ ಗೌರವಾದರ, ಅವರನ್ನು ಪುರುಷರಿಗೆ ಸರಿಸಮಾನವಾಗಿ ಕಂಡುಕೊಟ್ಟಿರುವ ಮರ್ಯಾದೆ ಮತ್ತು ಅವರಿಗೆ ಒದಗಿಸಿಕೊಟ್ಟಿರುವ ಅವರ ಸರ್ವತೋಮುಖ ವಿಕಾಸಕ್ಕೆ ಬೇಕಾದ ಸದವಕಾಶಗಳನ್ನು ಅವಲಂಬಿಸಿರುತ್ತವೆ ಮತ್ತು ಸ್ತ್ರೀಯರು ಸಂಸ್ಕೃತಿ-ನಾಗರಿಕತೆಯ ಸಂರಕ್ಷಕರೂ, ಪೋಷಕರೂ, ಪ್ರವಾಚಕರೂ ಹಾಗೂ ಪ್ರಚಾರಕರೂ ಆಗಿದ್ದಾರೆ ಎಂಬ ಹೇಳಿಕೆಗಳು ಕಾಲದ ಆವಾರಗಳಲ್ಲಿ ಪ್ರತಿಧ್ವನಿಸುತ್ತವೆ."[7] ವೇದಗಳ ಕಾಲದಿಂದಲೂ ಭರತಖಂಡದಲ್ಲಿ ಸ್ತ್ರೀಯರಿಗೆ ಗೌರವಪೂರ್ಣವಾದ ಸ್ಥಾನ ಸಂದಾಯವಾಗುತ್ತಲೇ ಬಂದಿದೆ. ಕ್ರಿ. ಪೂ. ೨೫೦೦ರಿಂದ ಹಿಡಿದು ಕ್ರಿ. ಪೂ. ೧೦೦೦ದ ವರೆಗಿನ ಕಾಲವನ್ನು ವೇದಗಳ ಮತ್ತು ಉತ್ತರಕಾಲಿಕ ಸಂಹಿತೆ ಮತ್ತು ಬ್ರಾಹ್ಮಣಗಳ ಕಾಲ ಎಂದು ಕರೆಯಲಾಗಿದೆ. ಆ ಕಾಲದಲ್ಲಿ

ಸ್ತ್ರೀಯರಿಗೆ ಹೆಚ್ಚಿನ ಸ್ವಾತಂತ್ರ್ಯವಿತ್ತು. ಹೆಣ್ಣುಮಕ್ಕಳನ್ನು ಬೇಡದೆ ಇರುವ ಮಕ್ಕಳನ್ನಾಗಿ ತ್ಯಜಿಸುತ್ತಿದ್ದರೆನ್ನುವುದಕ್ಕೆ ಯಾವುದೇ ಆಧಾರಗಳಿಲ್ಲ. ಹೆಣ್ಣುಮಕ್ಕಳಿಗೂ ಉಪನಯನ ವಿಧಿಯಿತ್ತು. ಅವರೂ ವೈದಿಕ ಸಾಹಿತ್ಯವನ್ನು ಅಧ್ಯಯನ ಮಾಡುತ್ತಿದ್ದರು. ಸಾರ್ವಜನಿಕ ಸಭೆಗಳಲ್ಲಿ ಅವರು ಪ್ರಕಾಶಿಸುತ್ತಿದ್ದರು.[8]

ಅಥರ್ವವೇದದ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನಗಳಲ್ಲಿ ಕೊಂಚ ಏರುಪೇರಾದಂತೆ ಕಂಡರೂ ಅದೇನೂ ಅವರ ಸ್ವಾತಂತ್ರ್ಯವನ್ನು ಅಪಹರಿಸಿತೆಂದು ಹೇಳಲಾಗುವುದಿಲ್ಲ. ಸ್ವರ್ಗಾದಿಲೋಕಗಳನ್ನು ಪಡೆಯಲು ಮೃತವ್ಯಕ್ತಿಗೆ ಪುತ್ರನಿದ್ದೇ ಉತ್ತರಕ್ರಿಯಾದಿಗಳನ್ನು ನಡೆಸಬೇಕು ಎಂಬ ಮಾತಿಗೆ ಆಗ ಹೆಚ್ಚಿನ ಪ್ರಾಶಸ್ತ್ಯ ಬಂದಿತು. ಅದರ ಫಲವಾಗಿ ಒಬ್ಬ ಮಡದಿಯಲ್ಲಿ ಪುತ್ರಸಂತಾನವಾಗದಿದ್ದರೆ ಇನ್ನೊಬ್ಬಳನ್ನು ವಿವಾಹವಾಗುವ ಪದ್ಧತಿ ಜಾರಿಗೆ ಬಂದು ಅದು ಬಹುಪತ್ನಿತ್ವಕ್ಕೆ ಎಡೆಮಾಡಿಕೊಟ್ಟಿತು.[9] ಇದರೊಟ್ಟಿಗೆ ಪುತ್ರ ಸಂತಾನಾಪೇಕ್ಷೆ ಹಿನ್ನೆಲೆಯಲ್ಲಿ ನಿಯೋಗ ಪದ್ಧತಿಯು ಜಾರಿಗೆ ಬಂದಿತು. ಬ್ರಾಹ್ಮಣಗಳ ಕಾಲದಲ್ಲಿ ಸ್ತ್ರೀಯ ಸ್ಥಾನಮಾನಗಳು ಸ್ಥಿತ್ಯಂತರ ಸ್ಥಿತಿಯಲ್ಲಿ ಇದ್ದುವೆಂದು ತಿಳಿಯಲಾಗಿದೆ. ಅವಳ ಸ್ಥಾನಮಾನಗಳು ಒಂದಷ್ಟು ಹ್ರಾಸಗೊಂಡವು ಎಂದು ಹೇಳದೆ ವಿಧಿಯಿಲ್ಲ.[10] ಉಪನಿಷತ್ತುಗಳ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನಗಳು ಮತ್ತೆ ಗರಿಗೆದರಿ ವಿಜೃಂಭಿಸಿದಂತೆ ತೋರುತ್ತದೆ. ಮಡದಿಯಿಲ್ಲದ ಪುರುಷನ ವ್ಯಕ್ತಿತ್ವ ಅಪೂರ್ಣವೆಂಬ ಭಾವನೆ ಆಗ ಪ್ರಚಾರದಲ್ಲಿತ್ತು. ಪುರುಷನ ಸುಖಕ್ಕಾಗಿ ಮಾತ್ರವೇ ಹೆಣ್ಣು ಇರುವುದು ಎಂಬ ಭಾವನೆಗೆ ಆಗ ಮಾನ್ಯತೆ ಇರಲಿಲ್ಲ. ಯಜ್ಞ ಯಾಗಾದಿಗಳಲ್ಲಾಗಲಿ, ವೇದಾಧ್ಯಯನದಲ್ಲಾಗಲಿ ಸ್ತ್ರೀಯರಿಗೂ ಪ್ರಮುಖವಾದ ಪಾತ್ರವಿತ್ತು. ಬೌದ್ಧಿಕ ಚಿಂತನೆ ಮತ್ತು ತರ್ಕಗಳಲ್ಲಿ ಸ್ತ್ರೀಯರು ಪುರುಷರಿಗೆ ಸರಿದೊರೆಯೆಂಬಂತೆ ನಿಲ್ಲುತ್ತಿದ್ದರು. ಈ ಸನ್ನಿವೇಶವನ್ನೆಲ್ಲ ವಿವರವಾಗಿ ಸಮೀಕ್ಷಿಸಿರುವ ಶಕುಂತಲಾ ಶಾಸ್ತ್ರೀರಾವ್ ಅವರು ಉಪನಿಷತ್ತುಗಳ ಯುಗದಲ್ಲಿ ಸ್ತ್ರೀಯ ಸ್ಥಾನಮಾನಗಳು ತೃಪ್ತಿಕರವಾಗಿದ್ದುವೆಂಬ ಅಭಿಪ್ರಾಯವನ್ನು ಸೂಚಿಸಿದ್ದಾರೆ. ಬೌದ್ಧ ಧರ್ಮವೂ ಕೂಡ ಸ್ತ್ರೀಯರನ್ನು ಕಡೆಗಣಿಸದೆ ತನ್ನ ಸಂಘದಲ್ಲಿ ಅವರಿಗೆ ಉತ್ತಮವಾದ ಸ್ಥಾನವನ್ನು ನೀಡಿತು. ಅವರು ಗ್ರಂಥಕರ್ತೆಯರೂ ಆದರು. ಮಂತ್ರಬ್ರಾಹ್ಮಣವಾದರೋ ಸ್ತ್ರೀ-ಪುರುಷರು ಒಬ್ಬರಲ್ಲೊಬ್ಬರು ಅಭೇದ ಕಲ್ಪನೆಯಿಂದ ಒಂದಾಗುವ ತತ್ತ್ವವನ್ನು ಪ್ರತಿಪಾದಿಸಿದೆ. 'ನಿನ್ನ ಮನದಲ್ಲಿರುವ ಭಾವವೇ ನನ್ನ ಮನದಲ್ಲಿರಲಿ, ನನ್ನ ಮನದಲ್ಲಿರುವ ಭಾವವೇ ನಿನ್ನಲ್ಲಿರಲಿ'[11] ಎಂಬುದೇ ಅಲ್ಲಿನ ಮಂತ್ರವೊಂದರ ಸಾರವಾಗಿದೆ. ಕ್ರಿಸ್ತಶಕ ಆರಂಭದ ಕಾಲಕ್ಕೆ ಮನುಸ್ಮೃತಿಯ ರಚನೆಯಾಗಿರಬೇಕೆಂದು ತಿಳಿಯಲಾಗಿದೆ. ಆ ಕಾಲಕ್ಕೆ ಸ್ತ್ರೀಯರ ಹಕ್ಕುಬಾಧ್ಯತೆಗಳು ಸ್ವಲ್ಪ ಹೆಚ್ಚಿನ ಪ್ರಮಾಣದಲ್ಲಿಯೇ ಮೊಟಕುಗೊಂಡುವೆಂದು ಹೇಳಲು ಆಧಾರಗಳಿವೆ. ಗೃಹ್ಯಸೂತ್ರಕಾರನಾದ ಅಶ್ವಲಾಯನನ ಕಾಲಕ್ಕೆ ಯಜ್ಞ-ಯಾಗಾದಿ ವಿಧಿಗಳಲ್ಲಿ ಸ್ತ್ರೀಯರ ಪ್ರಾಶಸ್ತ್ಯ ಇನ್ನಷ್ಟು ಕಡಿಮೆಯಾಯಿತೆಂಬ ಉಲ್ಲೇಖವಿದೆ. ಗೃಹ್ಯಸೂತ್ರಗಳಲ್ಲಿ ಬಾಲ್ಯವಿವಾಹಕ್ಕೆ ಸಮ್ಮತಿ ಇದ್ದಂತೆ ತೋರುವುದಿಲ್ಲ. ಅಲ್ಲಿ ಸೂಚಿತವಾಗಿರುವುದೆಲ್ಲ ಪ್ರೌಢವಿವಾಹವೆ.[12] ಕ್ರಿ.ಶ. ೪ನೇ ಶತಮಾನದ ತರುವಾಯದಲ್ಲಿ ರಚಿತವಾದ ವಿಷ್ಣುಸ್ಮೃತಿಯು ಸ್ತ್ರೀಯು ತನ್ನ ಪಾವಿತ್ರ್ಯವನ್ನು ಕಾಪಾಡಿಕೊಳ್ಳುವ ಸಲುವಾಗಿ ಅಗ್ನಿಪ್ರವೇಶ ಮಾಡುವ ಪದ್ಧತಿಯನ್ನು ಉಲ್ಲೇಖ ಮಾಡಿದೆ. 'One of the duties of a woman is to preserve her chastity (Brahmacharyam) after the death of her husband or to ascend the funeral pile after him'[13]. ಆದರೆ ೯ನೇ ಶತಮಾನದ ಮೇಧಾತಿಥಿಯು ಸಹಗಮನ ಪದ್ಧತಿಯನ್ನು ಪುರಸ್ಕರಿಸಿಲ್ಲ. ಅದನ್ನು ಆತ್ಮಹತ್ಯೆಗೆ ಸಮನೆಂದು ಅವನು ಖಂಡಿಸಿದ್ದಾನೆ.[14]

೧೧ ಮತ್ತು ೧೨ನೇ ಶತಮಾನದಲ್ಲಿ ಭರತಖಂಡದ ಮೇಲೆ ಮುಸಲ್ಮಾನರ ಧಾಳಿಯಾಯಿತು. ತನಗಿಂತ ಬೇರೆಯಾದ ಧರ್ಮದ ಜೊತೆ ಸಂಘರ್ಷವಾದಾಗ, ಸಮಾಜದ ಮುಖ್ಯಸ್ಥರು ಅವರ ಹಿತಾಸಕ್ತಿಯನ್ನುಳಿಸಿಕೊಳ್ಳಲು ಅದರಲ್ಲಿಯೂ ವಿಶೇಷವಾಗಿ ಸ್ತ್ರೀಯ ಸ್ಥಿತಿಯನ್ನು ಕುರಿತು ಕಾನೂನು ರಚಿಸಿದರು. ಅವರ ಮೇಲೆ ಕಠೋರ ನಿರ್ಬಂಧಗಳನ್ನು ಹೇರಿದರು. (ಈ ಹಂತದಲ್ಲಿ ಬಾಲ್ಯವಿವಾಹವನ್ನು ಜಾರಿಗೆ ತಂದರು) ಬಾಲ್ಯವಿವಾಹ ಮತ್ತು ಸಹಗಮನ ಪದ್ಧತಿಗಳು ಹೆಚ್ಚುಹೆಚ್ಚು ಜಾರಿಗೆ ಬಂದವು.[15] ವಿಧವೆಯರ ಸ್ಥಿತಿಗತಿಗಳು ಅತ್ಯಂತ ಚಿಂತಾಜನಕವಾದವು. ಬ್ರಿಟಿಷರ ಆಗಮನವಾದ ಮೇಲೆ ಸ್ತ್ರೀಯ ಸ್ಥಿತಿಗತಿಗಳಲ್ಲಿ ಸಾಕಷ್ಟು ಸುಧಾರಣೆಯಾಯಿತೆಂದೇ ಹೇಳಬೇಕು. ಪಾಶ್ಚಾತ್ಯ ವಿದ್ಯಾಭ್ಯಾಸದ ಪ್ರಭಾವದಿಂದಾಗಿ ಭಾರತೀಯ ಧರ್ಮಸುಧಾರಕರಾದ ರಾಜಾ ರಾಮಮೋಹನ ರಾಯ್, ಈಶ್ವರಚಂದ್ರ ವಿದ್ಯಾಸಾಗರ, ಸ್ವಾಮಿ ದಯಾನಂದ ಸರಸ್ವತಿ ಮುಂತಾದ ಮಹನೀಯರ ರಚನಾತ್ಮಕ ಕಾರ್ಯಕ್ರಮಗಳಿಂದಾಗಿ ಸ್ತ್ರೀಯರ ಸ್ಥಿತಿಗತಿಗಳು ಸುಧಾರಿಸಿದವು. ಭಾರತೀಯ ಸ್ವಾತಂತ್ರ್ಯ ಸಂಗ್ರಾಮರಂಗದ ವೇದಿಕೆಯಲ್ಲಿ ಮಹಾತ್ಮಾಗಾಂಧಿಯವರು ಕಾಣಿಸಿಕೊಳುತ್ತಿದ್ದಂತೆಯೇ ಸ್ತ್ರೀಯರ ಸ್ಥಾನಮಾನಗಳಲ್ಲಿಯೂ ವಿಶೇಷವಾದ ಅಭಿವೃದ್ಧಿಯಾಗತೊಡಗಿತು. ವೇದಗಳ ಯುಗದಲ್ಲಿ ಸ್ತ್ರೀಯರಿಗಿದ್ದ ಸ್ಥಾನಮಾನಗಳನ್ನೇ ಮತ್ತೆ ಅವರಿಗೆ ದೊರಕಿಸಿಕೊಡಬೇಕು ಎಂದು ಗಾಂಧೀಜಿಯವರು ಅದಕ್ಕಾಗಿ ಹೋರಾಡಿದರು. ಅವರ ಹೋರಾಟ ಸಾಕಷ್ಟು ಫಲಕಾರಿಯೂ ಆಯಿತು. ಸ್ತ್ರೀಯರ ಮೇಲಿದ್ದ ಹಲವು ನಿರ್ಬಂಧಗಳು ತಮ್ಮಿಂದ ತಾವೇ ಸಡಿಲಗೊಂಡವು.[16]

ಬೇಂದ್ರೆಯವರು ಸ್ತ್ರೀಶಕ್ತಿಯ ವಿವಿಧ ಮುಖಗಳನ್ನು ತಮ್ಮ ಕೃತಿಗಳಲ್ಲಿ ಚಿತ್ರಿಸಿರುವ ಹಿನ್ನೆಲೆಗೆ ಈ ಮೇಲೆ ವಿವರಿಸಿದ ಭಾರತೀಯ ವಿಚಾರಧಾರೆಯೇ ಬೆನ್ನೆಲುಬಾಗಿದೆ. ಸ್ತ್ರೀಸ್ವಾತಂತ್ರ್ಯದ ಎಲ್ಲ ಏಳುಬೀಳುಗಳನ್ನು ನಾವು ಬೇಂದ್ರೆಯವರ ಸಾಹಿತ್ಯದಲ್ಲಿ ಕಾಣುತ್ತೇವೆ. ಅದಕ್ಕೆಂದೇ ಪ್ರಸ್ತುತ ಅಧ್ಯಯನದಲ್ಲಿ ಸ್ತ್ರೀಯರ ಸ್ಥಾನಮಾನಗಳನ್ನು ವೇದಯುಗದಿಂದ ಹಿಡಿದು ಇಂದಿನವರೆಗೆ ಸಾಕಷ್ಟು ವಿಸ್ತಾರವಾಗಿ ವಿವೇಚನೆ ಮಾಡಲಾಗಿದೆ. ಅದರ ಬೆಳಕಿನಲ್ಲಿ ಬೇಂದ್ರೆಯವರ ಚಿಂತನೆಗಳನ್ನು ಪರೀಕ್ಷೆಗೆ ಗುರಿಪಡಿಸಲಾಗಿದೆ.

ಬೇಂದ್ರೆಯವರ ಕಾವ್ಯಕಲ್ಪನೆ ಭೂಮವೂ ವಿಸ್ತಾರವೂ ಆಗಿದೆ. ಅಲ್ಪದಿಂದ ಸುಖವಿಲ್ಲ, ಭೂಮದಿಂದ ಮಾತ್ರವೇ ಸುಖವೆಂಬುದು ಉಪನಿಷತ್ತಿನ ವಾಕ್ಯ. 'ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ'[17]. ಈ ಹಿನ್ನೆಲೆಯಲ್ಲಿ ಬೇಂದ್ರೆಯವರು ವಿಶ್ವಭ್ರಾತೃತ್ವದ, ವಿಶ್ವಕುಟುಂಬದ, ವಿಶ್ವಪ್ರೇಮದ ಕಲ್ಪನೆಯೊಂದನ್ನು ಲೋಕದ ಮುಂದೆ ಇರಿಸಿದ್ದಾರೆ. ಪಾರ್ವತಿದೇವಿಯೆ ನಮ್ಮ ತಾಯಿ, ಮಹೇಶ್ವರನೇ ನಮ್ಮ ತಂದೆ, ಎಲ್ಲ ಶಿವಭಕ್ತರೂ ನನ್ನ ಬಂಧುಗಳು, ಮೂರು ಲೋಕಗಳೂ ನನಗೆ ಸ್ವದೇಶಕ್ಕೆ ಸಮಾನ ಎಂಬ ವ್ಯಾಪಕವಾದ ಕಲ್ಪನೆಯೊಂದನ್ನು ಕೊಡುವ 'ಮಾತಾ ಚ ಪಾರ್ವತೀದೇವಿ, ಪಿತಾದೇವೋ ಮಹೇಶ್ವರಃ| ಬಾಂಧವಾಃ ಶಿವಭಕ್ತಾಶ್ಚ ಸ್ವದೇಶೋ ಭುವನತ್ರಯಂ |' ಎಂಬ ಮಂತ್ರವೊಂದು ಅತ್ಯಂತ ಮನನೀಯವಾಗಿದೆ. ಇಲ್ಲಿ ಶಿವ-ಪಾರ್ವತಿಯರೆಂದರೆ ಪ್ರಕೃತಿ-ಪುರುಷರೆಂಬ ಭೂಮತತ್ತ್ವಗಳಿಗೆ ಸಂಕೇತವಾಗಿರುವ ಹೆಸರುಗಳು. ಇಂತಹ ಭೂಮತತ್ತ್ವವನ್ನು ಬೇಂದ್ರೆಯವರು ತಮ್ಮ 'ವಿಶ್ವಮಾತೆ' ಎಂಬ ಚಿಂತನೆಯ ಹಿನ್ನೆಲೆಯಲ್ಲಿ ಹೇಗೆ ಪಡಿಮೂಡಿಸಿದ್ದಾರೆ ಎಂಬುದನ್ನು ವಿವೇಚನೆ ಮಾಡಲಾಗಿದೆ. ಈ ಚಿಂತನೆ ಒಮ್ಮಿಂದೊಮ್ಮೆಗೆ ರೂಪುಗೊಂಡುದಲ್ಲ. ಅದಕ್ಕೆ ಪೂರ್ವಭಾವಿಯಾಗಿ ಧಾರವಾಡದ ತಾಯಿ, ಕನ್ನಡಮಾತೆ, ಭಾರತಮಾತೆ ಎಂಬ ಪ್ರಾರಂಭಿಕ ಹಂತದ ಚಿಂತನೆಗಳೂ ಅವರಲ್ಲಿವೆ. ಕನ್ನಡಮಾತೆಯ ಹಿಗ್ಗಿದರೂಪವೆ

ವಿಶ್ವಮಾತೆಯ ರೂಪವೆಂದು ಹೇಳಬಹುದು. 'ವಿಶ್ವದೊಳನುಡಿಯಾಗಿ ಕನ್ನಡಿಸುತಿಹನಿಲ್ಲಿ ಅಂಬಿಕಾತನಯನಿವನು'[18] ಎಂಬ ಕವಿವಾಣಿಯಲ್ಲಿಯೇ ಅವರ ಈ ಕಲ್ಪನಾವಿಸ್ತಾರಕ್ಕೆ ಸೂಚನೆ ಲಭ್ಯವಾಗುತ್ತದೆ. ಕನ್ನಡಮಾತೆಯ ಸಮಸ್ಯೆಗಳೇನು, ಭಾರತಮಾತೆ ಸಾಗಬೇಕಾದ ದಿಕ್ಕು ಯಾವುದು, ಆ ಮಾತೆಯರ ಸಂತಾನ ಯಾವ ಸ್ಥಿತಿಯಲ್ಲಿದೆ ಎಂಬುದನ್ನೆಲ್ಲ ಬೇಂದ್ರೆಯವರು ಮನಮೋಹಕವಾಗಿ ಬಣ್ಣಿಸಿದ್ದಾರೆ. ಕನ್ನಡಮಾತೆಯು ವಿಶ್ವಮಾತೆಯಲ್ಲಿ ಒಂದಾಗುವವರೆಗೆ ಪಯಣದ ಚಿತ್ರ ಹೇಗೆ ಉಜ್ವಲವಾದುದೆಂಬುದನ್ನು ಇಲ್ಲಿ ಕೊಂಡಾಡಲಾಗಿದೆ.

ಸ್ತ್ರೀಶಕ್ತಿಯು ಮಾತೆಯಾಗಿ, ಮಡದಿಯಾಗಿ ಕಾಣಿಸಿಕೊಳ್ಳುವುದಲ್ಲದೆ ಪುತ್ರಿಯಾಗಿ, ಸೋದರಿಯಾಗಿ ಈ ಜಗತ್ತನ್ನು ತುಂಬಿಕೊಂಡಿದೆ. ಕರುಳಕುಡಿಯಾಗಿ ಆ ರೂಪವು ಬಂದಾಗ ಅದು ಮನುಷ್ಯನ ಕೌಟುಂಬಿಕ ಜೀವನವನ್ನು ವಿಸ್ತರಿಸುತ್ತದೆ, ಸಮೃದ್ಧಿಗೊಳಿಸುತ್ತದೆ. ತಂದೆ-ತಾಯಿಗಳು ತಮ್ಮ ಹೆಣ್ಣುಮಕ್ಕಳಮೇಲೆ ತೋರುವ ಒಲವು ಭಾರತೀಯ ಹಿನ್ನೆಲೆಯಲ್ಲಿ ತನ್ನದೇ ಆದ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ನಮ್ಮ ಜನಪದ ಸಾಹಿತ್ಯದಲ್ಲಿಯೂ ಹೆಣ್ಣುಮಗಳಾಗಿ ಕಾಣಿಸಿಕೊಳ್ಳುವ ಬಹುವರ್ಣಮಯವಾದ ಚಿತ್ರಗಳಿವೆ. ಅಲ್ಲಿ ಆಕೆಯು ಗಂಡನಮನೆಯಲ್ಲಿ ಅನುಭವಿಸುವ ಸಾಂಸಾರಿಕ ನೋವು, ಶೋಷಣೆಯ ಚಿತ್ರಣವಿದೆ. ಅಂತೆಯೆ ಹೆಣ್ಣು ಅಕ್ಕನೊ, ತಂಗಿಯೊ ಆಗಿ ನಮ್ಮ ಬಂಧುತ್ವವನ್ನು ವಿಕಾಸಗೊಳಿಸುವ ಶಕ್ತಿಯಾಗಿ ಕಾಣಿಸಿಕೊಳ್ಳುತ್ತಾಳೆ. ಅವರ ಕಾವ್ಯದಲ್ಲಿ ಹೆಣ್ಣನ್ನು ಮಗಳಾಗಿ ಕಂಡಿರುವ ಹಲವು ರಸಮಯವಾದ ಚಿತ್ರಗಳಿವೆ. ಬೇಂದ್ರೆಯವರಿಗೆ ಸಹೋದರಿಯರಿರಲಿಲ್ಲ. ತಮ್ಮ ಸಂಪರ್ಕಕ್ಕೆ ಬಂದ ಸ್ತ್ರೀಸಾಹಿತಿಗಳನ್ನು ಸೋದರಿಯರಾಗಿ ಆತ್ಮೀಯವಾಗಿ ಕಂಡ ಸನ್ನಿವೇಶಗಳಿವೆ. ಈ ಎಲ್ಲ ಚಿತ್ರಗಳ ಸಾರ್ಥಕತೆಯನ್ನು ಇಲ್ಲಿ ಸವಿವರವಾಗಿ ವಿಮರ್ಶಿಸಲಾಗಿದೆ.

ಬೇಂದ್ರೆಯವರು ಮಹರ್ಷಿ ಅರವಿಂದರ ವಿಚಾರಧಾರೆಯಿಂದ ಹೆಚ್ಚು ಪ್ರಭಾವಿತರಾಗಿದ್ದಾರೆ. ಒಂದರ್ಥದಲ್ಲಿ ಅವರನ್ನು ಅರವಿಂದರ ಅನನ್ಯ ಭಕ್ತರೆಂದೇ ಹೇಳಬೇಕು. ಪಾಂಡಿಚೇರಿಯಲ್ಲಿರುವ ಅರವಿಂದಾಶ್ರಮಕ್ಕೆ ಬೇಂದ್ರೆಯವರು ಮೇಲಿಂದ ಮೇಲೆ ಹೋಗಿ ಬರುತ್ತಿದ್ದರು. ಅರವಿಂದರು ಬೋಧಿಸಿದ ತತ್ವಗಳನ್ನು ಬೇಂದ್ರೆಯವರು ತಮ್ಮ ಬದುಕಿಗೆ ಅಳವಡಿಸಿಕೊಂಡಿದ್ದರು. ಅರವಿಂದರ ಆಧ್ಯಾತ್ಮಿಕ ವಿಚಾರಧಾರೆಗೆ ಕಾವ್ಯದ ಲೇಪವನ್ನು ನೀಡಿ ಪ್ರತಿಪಾದಿಸಿದವರಲ್ಲಿ ಬೇಂದ್ರೆಯವರು ಅಗ್ರಗಣ್ಯರು. ಕಾವ್ಯಮೀಮಾಂಸೆಯ ಹಲವು ಸೂಕ್ಷ್ಮಗಳನ್ನು ಅವರು ಅರವಿಂದರ ವಿಚಾರಧಾರೆಯಿಂದ ಪುಷ್ಟಗೊಳಿಸಿಕೊಂಡಿದ್ದಾರೆ. ಅರವಿಂದರಲ್ಲಿ ಎಂತೊ ಅಂತೆಯೆ ಶ್ರೀಮಾತೆಯವರ ವಿಷಯದಲ್ಲಿಯೂ ಬೇಂದ್ರೆಯವರಿಗೆ ಗಾಢವಾದ ಭಕ್ತಿಯಿತ್ತು. ಅರವಿಂದರಲ್ಲಿ, ಶ್ರೀಮಾತೆಯಲ್ಲಿ ಅವರು ಶಿವಶಕ್ತಿ ಸ್ವರೂಪವನ್ನೇ ಕಂಡರು. ಶಕ್ತಿದೇವತೆಯ ಆರಾಧನೆಯ ಒಂದು ಅಂಗವೋ ಎಂಬಂತೆ ಬೇಂದ್ರೆಯವರು ಶ್ರೀಮಾತೆಯವರನ್ನು ಕುರಿತು ಹಲವು ಕವಿತೆಗಳನ್ನು ರಚಿಸಿದ್ದಾರೆ. ಬೇಂದ್ರೆಯವರು ತಮ್ಮ ವಾಸದ ಮನೆಗೆ 'ಶ್ರೀಮಾತಾ' ಎಂದು ನಾಮಕರಣ ಮಾಡಿರುವುದು ಈ ಸಂದರ್ಭದಲ್ಲಿ ಉಲ್ಲೇಖನೀಯವಾದ ಅಂಶವಾಗಿದೆ.

ಭಾರತೀಯ ಸಮಾಜವು ಎಲ್ಲ ಕಾಲದಿಂದಲೂ ಸ್ತ್ರೀಯನ್ನು ಗೌರವದಿಂದಲೇ ಕಾಣುತ್ತ ಬಂದಿದೆ. ಇಷ್ಟಾದರೂ ಹಲವು ಸಂದರ್ಭಗಳಲ್ಲಿ ಸ್ತ್ರೀ ಸಂಕಟಕ್ಕೆ ಗುರಿಯಾಗಿದ್ದಾಳೆ, ಶೋಷಣೆಗೆ ಗುರಿಯಾಗಿದ್ದಾಳೆ, ದಾಸ್ಯಕ್ಕೆ ಗುರಿಯಾಗಿದ್ದಾಳೆ. ಶಕ್ತಿಸ್ವರೂಪಿಣಿಯಾದ ಹೆಣ್ಣು ಹೀಗೆಲ್ಲ ನೊಂದು, ನಲುಗಿರುವುದನ್ನು ಕಂಡು ಬೇಂದ್ರೆಯವರು ತುಂಬ ಪರಿತಾಪಪಟ್ಟಿದ್ದಾರೆ. ಸಾಮಾಜಿಕ ಕಟ್ಟುಪಾಡುಗಳ ದೆಸೆಯಿಂದಾಗಿ, ದೇಶಾಚಾರದ ದೆಸೆಯಿಂದಾಗಿ, ಅಂಧಶ್ರದ್ಧೆಗಳ ಕಾರಣವಾಗಿ ಸ್ತ್ರೀ ಹಲವು ದಿಕ್ಕುಗಳಿಂದ ಬಂಧನಕ್ಕೆ ಗುರಿಯಾಗಿದ್ದಾಳೆ.

ಬೇಂದ್ರೆಯವರು ಪರಕಾಯ ಪ್ರವೇಶ ಮಾಡಿದರೊ ಎಂಬಂತೆ ಸ್ತ್ರೀಹೃದಯದ ಅಂತರಾಳವನ್ನು ಹೊಕ್ಕು ಅಲ್ಲಿನ ತುಮುಲಗಳನ್ನು ಮೇಲೆತ್ತಿ ತಂದಿದ್ದಾರೆ. ಸ್ತ್ರೀಸಮಸ್ಯೆಯ ವಿವಿಧ ಮುಖಗಳಿಗೆ ಕಾವ್ಯರೂಪವನ್ನು ನೀಡಿದ್ದಾರೆ. ಸ್ತ್ರೀಜೀವನದ ಅನೇಕ ವ್ಯಥೆಗಳನ್ನು ಬೇಂದ್ರೆಯವರು ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

ಪ್ರೇಮವೆಂಬುದೊಂದು ಅಮೂರ್ತ ಕಲ್ಪನೆ. ಅಧ್ಯಾತ್ಮದಲ್ಲಿ ಪ್ರೇಮದ ತೀವ್ರತೆಯನ್ನೇ "ಭಕ್ತಿ" ಎಂದು ಕರೆಯಲಾಗಿದೆ. ಪರಮಾತ್ಮನನ್ನು ಪ್ರೇಮಸ್ವರೂಪಿ ಎಂದು ಕೊಂಡಾಡಲಾಗಿದೆ. ನಿರ್ಮಲವಾದ ಪ್ರೇಮವೆ ಕೌಟುಂಬಿಕ ಜೀವನದ ಆಧಾರಶಿಲೆ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಮನುಷ್ಯನು ತಾನು ಒಲಿಯಲಿರುವ ಹೆಣ್ಣಿನ, ಒಲಿದಿರುವ ಹೆಣ್ಣಿನ ವಿಚಾರವಾಗಿ ತಾಳುವ ಭಾವಗಳು ಮೂಡಿಸಿಕೊಳ್ಳುವ ಕಲ್ಪನೆಗಳು ವೈವಿಧ್ಯಮಯವೂ ಅನಂತವೂ ಆಗಿವೆ. ಬೇಂದ್ರೆಯವರಾದರೊ ಒಬ್ಬ ದಿವ್ಯ ಪ್ರೇಯಸಿಯನ್ನು ತಮ್ಮ ಅಂತರಂಗದಲ್ಲಿ ಸೃಷ್ಟಿಸಿಕೊಂಡಿದ್ದಾರೆ. ಆಕೆ ಎಲ್ಲರ ಪ್ರೇಯಸಿಯಾಗಿ ಸಾಧಾರಣೀಕರಣಗೊಳ್ಳುತ್ತಾಳೆ. ನಿರ್ಮಲ ಪ್ರೇಮದಿಂದ ಆರಾಧಿಸುವ ಎಲ್ಲರಿಗೂ ಒಲಿಯುತ್ತಾಳೆ. ಅವಳನ್ನೇ 'ಕಾವ್ಯಕನ್ಯೆ' ಎಂದರೂ ಸರಿಯೆ. ಬೇಂದ್ರೆಯವರ ಈ ಬಗೆಯ ಪ್ರೇಮಾರಾಧನೆ ಅವರ ಹಲವು ಕವಿತೆಗಳಲ್ಲಿ ಹಲವು ಮುಖಗಳಲ್ಲಿ ನಡೆದಿವೆ. ಅವುಗಳ ಸಾರಪೂರ್ಣವಾದ ಪರಾಮರ್ಶೆಯೊಂದನ್ನು ಇಲ್ಲಿ ಜೋಡಿಸಲಾಗಿದೆ.

## ಸಂಖ್ಯಾ ಟಿಪ್ಪಣಿಗಳು

1. ದ. ರಾ. ಬೇಂದ್ರೆ, 'ಆತ್ಮಕಥನ', ಜಿ.ಬಿ.ಜೋಶಿ ಮತ್ತು ಕೆ. ಡಿ. ಕುರ್ತಕೋಟಿ (ಸಂ.), ಪುಟಬಂಗಾರ (ಸಂಪುಟ ಐದು) ಶ್ರಾವಣಪ್ರತಿಭೆ, ಮನೋಹರ ಗ್ರಂಥಮಾಲಾ, ಧಾರವಾಡ, 1987, ಪು. 412.
2. ದ. ರಾ. ಬೇಂದ್ರೆ, ಗಂಗಾವತರಣ, ಶ್ರೀಮಾತಾ ಪ್ರಕಾಶನ, ಧಾರವಾಡ, 1989, ಪು. 12.
3. ಅದೇ, ಪು. 13.
4. ದ. ರಾ. ಬೇಂದ್ರೆ, ಮತ್ತೆ ಶ್ರಾವಣಾ ಬಂತು, ಸಮಾಜ ಪುಸ್ತಕಾಲಯ, ಧಾರವಾಡ, 1973, ಪು. 4.
5. ದ. ರಾ. ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ, 1974, ಪು. 50.
6. ಬಿ.ಎಸ್. ಗದ್ದಗಿಮಠ, ಕನ್ನಡ ಜಾನಪದ ಗೀತಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1963, ಪು. 4.
7. ಎಂ. ಬಿ. ಪದ್ಮ, ಮಧ್ಯಕಾಲೀನ ಕರ್ನಾಟಕ ಸಮಾಜದಲ್ಲಿ ಸ್ತ್ರೀಯರ ಸ್ಥಾನ, ಮೈಸೂರು, 1991, ಪು. 105.
8. ವಿವರಗಳಿಗೆ ನೋಡಿ : ಎ.ಎಸ್. ಅಲ್ಟೇಕರ್, 'ವೇದಕಾಲದ ಸಮಾಜ' ಕೆ.ವಿ. ಪುಟ್ಟಪ್ಪ (ಪ್ರ.ಸಂ.), ಯುಗಯಾತ್ರೀ ಭಾರತೀಯ ಸಂಸ್ಕೃತಿ, ಪ್ರಸಾರಾಂಗ, ಮೈಸೂರು ವಿ. ವಿ. ಮೈಸೂರು, 1970, ಪು. 167, 168.
9. ವಿವರಗಳಿಗೆ ನೋಡಿ : ಶಕುಂತಲಾ ಶಾಸ್ತ್ರೀರಾವ್, Women in the Vedic age, ಭಾರತೀಯ ವಿದ್ಯಾಭವನ, ಬಾಂಬೆ, 1954, ಪು. 52, 53.
10. ವಿವರಗಳಿಗೆ ನೋಡಿ : ಶಕುಂತಲಾ ಶಾಸ್ತ್ರೀರಾವ್, Women in the Sacred Laws, ಭಾರತೀಯ ವಿದ್ಯಾಭವನ, ಬಾಂಬೆ, 1960, ಪು. 26, 27.1

11. ಮಂತ್ರಬ್ರಾಹ್ಮಣ (I, 3, 9), ಶಕುಂತಲಾ ಶಾಸ್ತ್ರೀರಾವ್ ಅವರ ಗ್ರಂಥದಿಂದ ಉದ್ಧೃತ. Women in the Vedic Age, ಪೂರ್ವೋಕ್ತ, ಪು. 103.
12. ವಿವರಗಳಿಗೆ ನೋಡಿ: ಅಕ್ಷಯಕುಮಾರಿದೇವಿ, A History of Sanskrit Literature, ವಿಜಯಕೃಷ್ಣ ಬ್ರದರ್ಸ್, ಬುಕ್ ಸೆಲರ್ಸ್ ಅಂಡ್ ಪಬ್ಲಿಷರ್ಸ್, 31, ವಿವೇಕಾನಂದ ರಸ್ತೆ, ಕಲ್ಕತ್ತ, (ವರ್ಷ ನಮೂದಿಸಿಲ್ಲ). ಪು. 75, 76.
13. ಶಕುಂತಲಾ ಶಾಸ್ತ್ರೀರಾವ್, Women in the Sacred Laws, ಪೂರ್ವೋಕ್ತ, ಪು. 119.
14. ಅದೇ, ಪು. 122.
15. ವಿವರಗಳಿಗೆ ನೋಡಿ : ಎಂ. ಬಿ. ರಾಜಮಣಿ, Gandhian Social Thought, ಪ್ರಸಾರಾಂಗ, ಮೈಸೂರು ವಿ.ವಿ., ಮೈಸೂರು, 1997, ಪು. 112, 113.
16. ವಿವರಗಳಿಗೆ ನೋಡಿ : ಅದೇ, ಪು. 113, 114.
17. ಛಾಂದೋಗ್ಯೋಪನಿಷತ್ತು (7-23-1), ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ, 1986, ಪು. 879.
18. ದ.ರಾ. ಬೇಂದ್ರೆ, ಗಂಗಾವತರಣ, ಪೂರ್ವೋಕ್ತ, ಪು. 10.

ಅಧ್ಯಾಯ ಎರಡು

# ಭಾರತೀಯ ಸಮಾಜ ಮತ್ತು ಸ್ತ್ರೀ

**ವೇದಯುಗದಲ್ಲಿ ಸ್ತ್ರೀಯರ ಸ್ಥಾನಮಾನಗಳು (ಕ್ರಿ. ಪೂ. ೧೦೦೦ಕ್ಕಿಂತ ಹಿಂದಿನ ಕಾಲ)**

**ಋಗ್ವೇದ**

ಭಾರತದ ಸಾಮಾಜಿಕ ಇತಿಹಾಸವೆಂದರೆ ಅದು ವೇದಗಳ ಕಾಲದಿಂದಲೇ ಪ್ರಾರಂಭವಾಗುತ್ತದೆ. ಭಾರತೀಯ ಸಮಾಜದಲ್ಲಿ ಸ್ತ್ರೀಯರಿಗೆ ಇದ್ದ ಸ್ಥಾನಮಾನಗಳು ಏನೆಂಬುದನ್ನು ಋಗ್ವೇದದ ಕಾಲದಿಂದಲೇ ಅಧ್ಯಯನ ಮಾಡಬೇಕಾಗುತ್ತದೆ. ಋಗ್ವೇದದ ಕಾಲದಲ್ಲಿ ಸ್ತ್ರೀ ಮತ್ತು ಪುರುಷರಿಗೆ ಸಮಾನವಾದ ಸ್ಥಾನವಿತ್ತು. ಸ್ತ್ರೀಯು ವಿದ್ಯಾವಂತಳಾಗುತ್ತಿದ್ದಳು. ಪ್ರೌಢ ವಯಸ್ಸಿಗೆ ಬಂದಾಗ ವಿವಾಹವಾಗಿ ಕುಟುಂಬದ ಹೊಣೆಗಾರಿಕೆಗಳನ್ನು ನಿರ್ವಹಿಸುತ್ತ ಸಮಾಜದಲ್ಲಿ ಗೌರವಾನ್ವಿತ ಸ್ಥಾನವನ್ನು ಪಡೆದುಕೊಳ್ಳುತ್ತಿದ್ದಳು. ಯಾವುದೇ ಯಜ್ಞಕಾರ್ಯದಲ್ಲಾಗಲಿ ಗಂಡ-ಹೆಂಡಿರು ಜೋಡಿಯಾಗಿಯೇ ದೇವತೆಗಳಿಗೆ ಆಹುತಿಗಳನ್ನು ಅರ್ಪಿಸುತ್ತಿದ್ದರು. ಅವರು ಒಂದು ರಥಕ್ಕೆ ಹೂಡಿದ ಜೋಡಿ ಕುದುರೆಗಳಿದ್ದಂತೆ ಎಂದು ಋಗ್ವೇದವು ಹೇಳಿದೆ.[1] 'ದಂಪತಿ' ಎಂಬ ಶಬ್ದವು ಒಂದು ಮನೆಗೆ ಗಂಡಹೆಂಡಿರಿಬ್ಬರೂ ಸಂಯುಕ್ತ ನಾಯಕರು ಎಂಬುದನ್ನು ಸೂಚಿಸುವಂತೆ ಬಳಕೆಯಾಗುತ್ತಿತ್ತು.[2]. ಹೆಣ್ಣುಮಕ್ಕಳು ಗೃಹಕೃತ್ಯಗಳಲ್ಲಿ ವಿಶಿಷ್ಟವಾದ ಪಾತ್ರವನ್ನು ವಹಿಸುತ್ತಿದ್ದರು. ಹಸುವಿನ ಹಾಲನ್ನು ಕರೆಯುವ ಕಾರ್ಯ ಅವರ ಪಾಲಿಗೆ ಬರುತ್ತಿದ್ದುದರಿಂದ ಆ ಅರ್ಥದಲ್ಲಿಯೇ ಅವರನ್ನು 'ದುಹಿತಾ' ಎಂದು ಕರೆದಿರುವುದು ಅತ್ಯಂತ ಸ್ವಾರಸ್ಯಕರವಾದ ಸಂಗತಿಯಾಗಿದೆ. ಮದುವೆಯಾಗದ ಹೆಣ್ಣುಮಕ್ಕಳು ತಂಗಿ-ತಾಯಿಯರ ಜೊತೆಯಲ್ಲಿಯೇ ಇರುತ್ತಿದ್ದರು. ಗಂಡುಮಕ್ಕಳಿಗೆ ಹೇಗೋ ಹಾಗೆ ಅವರಿಗೂ ಆಸ್ತಿಯಲ್ಲಿ ಸಮಾನವಾದ ಪಾಲು ಲಭಿಸುತ್ತಿತ್ತು. ಸಂಪತ್ತಿನ ಮೋಹವಿರುವ ಹೆಣ್ಣುಮಕ್ಕಳು ಸಿರಿವಂತನಾದ ಯುವಕನನ್ನು ವಿವಾಹವಾಗಲು ಆಸೆಪಡುತ್ತಿದ್ದರು. ಆದರೆ ಜಾಣೆಯರಾದವರು ತನ್ನ ಮನಸ್ಸಿಗೆ ಒಪ್ಪುವ ಯುವಕನನ್ನು ಅವನು ಸಿರವಂತನಲ್ಲದಿದ್ದರೂ ಆಯ್ಕೆ ಮಾಡಿಕೊಳ್ಳುತ್ತಿದ್ದರು. ಸ್ತ್ರೀಯರ ಪಾವಿತ್ರ್ಯ ಮತ್ತು ಗೌರವಗಳನ್ನು ಒಬ್ಬ ದೊರೆಯು ತನ್ನ ಸಿಂಹಾಸನವನ್ನು ಹೇಗೆ ಕಾಪಾಡಿಕೊಳ್ಳುತ್ತಾನೋ ಆ ಬಗೆಯಲ್ಲಿ ನಿಷ್ಠೆಯಿಂದ ಕಾಯ್ದುಕೊಳ್ಳಲಾಗುತ್ತಿತ್ತು.[3]

**ಏಕಪತ್ನೀವ್ರತ, ವಿಧವಾ ವಿವಾಹ**

ಏಕಪತ್ನೀವ್ರತ ಎಂಬುದು ಉನ್ನತ ನಾಗರಿಕತೆಯ ಪ್ರತೀಕವಾಗಿತ್ತು. ಹಾಗೆಂದು ಹಲವು ಪತ್ನಿಯರನ್ನು ಹೊಂದುವುದು ನಿಷಿದ್ಧವೇನೂ ಆಗಿರಲಿಲ್ಲ. 'ಉಪಪನ್ನರು ಮಾತ್ರ ಬಹುಪತ್ನೀಕರಾಗಿರುತ್ತಿದ್ದರು.'[4] ಬಾಲ್ಯವಿವಾಹ ರೂಢಿಯಲ್ಲಿರಲಿಲ್ಲ. ಪೂರ್ಣವಾಗಿ ಬೆಳೆದ ಹೆಣ್ಣುಮಕ್ಕಳು

ಮಾತ್ರವೇ ವಿವಾಹವಾಗುತ್ತಿದ್ದರು. ತನ್ನ ಪತಿಯ ಮನೆಯನ್ನು ಸೇರಿದ ಹೆಣ್ಣುಮಗಳು ಅಲ್ಲಿ ಗೌರವಾನ್ವಿತ ಸ್ಥಾನವನ್ನು ಪಡೆದು ಅಲ್ಲಿನ ವ್ಯವಹಾರಗಳನ್ನೆಲ್ಲ ತಾನೊಬ್ಬ ಸಾಮ್ರಾಜ್ಞಿಯೋ ಎಂಬಂತೆ ನೋಡಿಕೊಳ್ಳುತ್ತಿದ್ದಳು.[5] ವಿಧವಾ ವಿವಾಹವು ಅಂದು ರೂಢಿಯಲ್ಲಿತ್ತೆಂಬುದು ಋಗ್ವೇದದಿಂದ (10. 18-8) ಮಾತ್ರವಲ್ಲದೆ ಅಥರ್ವವೇದ (18.3.1-2)ದಿಂದಲೂ ತಿಳಿದುಬರುತ್ತದೆ. ಮರಣಹೊಂದಿದ ಪುರುಷನ ಉತ್ತರಕ್ರಿಯಾದಿಗಳು ಸ್ಮಶಾನದಲ್ಲಿ ನೆರವೇರಿದ ಮೇಲೆ ಆತನ ಹೆಂಡತಿಯನ್ನು ಸತ್ತ ಪುರುಷನ ಸಹೋದರನೇ ಸಮಾಧಾನಪಡಿಸಿ ವಿವಾಹವಾಗುತ್ತೇನೆಂದು ಹೇಳಿ ಕರೆತರುತ್ತಿದ್ದನೆಂದು ಅಲ್ಲಿನ ಮಂತ್ರಗಳಲ್ಲಿ ಸೂಚನೆಯಿದೆ.[6] ದೇವದಾಸಿ ಪದ್ಧತಿಯು ಅಂದಿಗೂ ರೂಢಿಯಲ್ಲಿತ್ತು. ಅವರು ವೃತ್ತಿನಿರತ ನೃತ್ಯಗಾರ್ತಿಯರೂ ಆಗಿರುತ್ತಿದ್ದರು. ಅವರನ್ನು ಸಮಾಜವು ಕೀಳಾಗಿ ಕಾಣುವುದಾಗಲಿ, ಓರೆನೋಟದಿಂದ ನೋಡುವುದಾಗಲಿ ಇರಲಿಲ್ಲವೆಂದೇ ಹೇಳಬೇಕು. ನೈತಿಕ ನಡವಳಿಕೆಗೆ ವಿರುದ್ಧವಾಗಿ ನಡೆದ ಸ್ತ್ರೀಯರನ್ನು ಕೂಡ ಒಂದಿಷ್ಟು ಸಹಾನುಭೂತಿಯಿಂದ ನೋಡುವ ಪರಿಪಾಠವೇ ಇತ್ತು. ಕರುಣೆ ಇಲ್ಲದ ಕಾನೂನಿಗೆ ಅನುಕಂಪರಹಿತ ಸಮಾಜಕ್ಕೆ ಅವಳು ತುತ್ತಾಗಿ ಸಂಕಟಪಡುವ ಪ್ರಮೇಯವಿರಲಿಲ್ಲ.[7] ಬೌದ್ಧಿಕ ವಲಯದಲ್ಲಿ ಸ್ತ್ರೀಯರು ಪುರುಷರಿಗೆ ಸಮಾನಸ್ಕಂಧರಾಗಿರುತ್ತಿದ್ದರು. ಅವರಲ್ಲಿ ಕೆಲವರು ಕವಯಿತ್ರಿಯರೂ, ಮಂತ್ರನಿರ್ಮಾಪಕರೂ ಆಗಿರುತ್ತಿದ್ದರು. ಅತ್ರಿ ವಂಶಕ್ಕೆ ಸೇರಿದ ವಿಶ್ವಾವಾರಾ ಮತ್ತು ಅಪಾಲಾ ಎಂಬ ಸ್ತ್ರೀಯರು ಕವಯಿತ್ರಿಯರಾಗಿದ್ದರೆಂದು ತಿಳಿದುಬಂದಿದೆ. ವಿಶ್ವಾವಾರಾಳು ಅಗ್ನಿಯನ್ನೂ, ಅಪಾಲಾಳು ಇಂದ್ರನನ್ನೂ ಸ್ತೋತ್ರ ಮಾಡಿರುವ ಕವಿತೆಗಳಿವೆ.[8] ಸ್ತ್ರೀಯರಿಗೆ ವೇದಾಧ್ಯಯನದ ಅಧಿಕಾರವೂ ಇತ್ತು. ವೈದಿಕಸೂಕ್ತ ಕರ್ತೃಗಳ ನಡುವೆ ಲೋಪಾಮುದ್ರಾ, ಘೋಷಾ, ಸಿಕತಾ ಮತ್ತು ನಿವಾವಾರಿ ಎಂಬ ಮಹಿಳಾನಾಮಗಳು ಕಾಣಿಸಿಕೊಳ್ಳುವುದು ಗಮನಾರ್ಹವಾದ ಸಂಗತಿಯಾಗಿದೆ. ಅಷ್ಟೇ ಅಲ್ಲ, ಸ್ತ್ರೀಯರು ವೈದಿಕ ಕರ್ಮಗಳನ್ನು ತಾವೇ ನಡೆಸಿಕೊಳ್ಳುವ ಅಧಿಕಾರವನ್ನು ಪಡೆದಿದ್ದರು. ಋಗ್ವೇದದ ಸೂಕ್ತವೊಂದರಲ್ಲಿ (7-91.1) ಕನ್ಯೆಯೊಬ್ಬಳು ಸೋಮಲತೆಯ ಕಾಂಡವೊಂದನ್ನು ತೆಗೆದುಕೊಂಡು ತಾನೇ ಯಾಗರ್ಥವಾಗಿ ಅದನ್ನು ಇಂದ್ರನಿಗೆ ಅರ್ಪಿಸಲು ಶಕ್ತಳಾಗಿದ್ದಳೆಂಬ ವರ್ಣನೆಯಿದೆ.[9]

**ಅಥರ್ವವೇದ, ನಿಯೋಗ ಪದ್ಧತಿ**

ಯಜುರ್ವೇದ ಮತ್ತು ಸಾಮವೇದಗಳು ಯಜ್ಞಯಾಗಾದಿ ಕ್ರಿಯಾಕಲಾಪಗಳ ವಿವರಣೆಗೇ ಹೆಚ್ಚು ಗಮನ ಕೊಟ್ಟಿರುವುದರಿಂದ ಸಾಮಾಜಿಕ ಸ್ಥಿತಿಗತಿಗಳ ಅಧ್ಯಯನಕ್ಕೆ ಅವುಗಳಿಂದ ಹೆಚ್ಚಿನ ಮಾಹಿತಿಗಳು ಲಭಿಸುವುದಿಲ್ಲ. ಹೀಗಾಗಿ ಋಗ್ವೇದದ ತರುವಾಯ ನಾವು ಅಥರ್ವವೇದವನ್ನು ಮೊರೆಹೊಗಬೇಕಾಗುತ್ತದೆ. ಅಲ್ಲಿ ಪುರುಷನೊಬ್ಬನ ಜನನದಿಂದ ಹಿಡಿದು ಮರಣದವರೆಗೆ ನೆರವೇರಬೇಕಾದ ಸಮಗ್ರ ಕ್ರಿಯಾಕಲಾಪಗಳ ವರ್ಣನೆಯಿದೆ. ಆ ಕಾಲಕ್ಕೆ ಗಂಡು-ಹೆಣ್ಣುಗಳಲ್ಲಿ ಹೆಣ್ಣಿನ ಪ್ರಾಶಸ್ತ್ಯ ಕುಗ್ಗಿ ಗಂಡಿಗೆ ಹೆಚ್ಚು ಮಹತ್ವ ಬಂದುದನ್ನು ನಾವು ಕಾಣುತ್ತೇವೆ. ಅದಕ್ಕೆ ಆಗ ಸ್ಫುಟಗೊಂಡ ಸ್ವರ್ಗ-ನರಕಗಳ ಕಲ್ಪನೆಯೇ ಕಾರಣವೆನ್ನಬೇಕು. ಮರಣಹೊಂದಿದ ಪುರುಷನನ್ನು ಸ್ವರ್ಗಕ್ಕೆ ಸೇರಿಸುವುದಕ್ಕಾಗಲಿ, ಅವನ ಜನ್ಮಾಂತರಗಳು ಸುಖಕರವಾಗಿರುವುದಕ್ಕಾಗಲಿ ಅವನ ಹೆಸರಿನಲ್ಲಿ ಕೆಲವು ವಿಶೇಷ ಕರ್ಮಗಳನ್ನು ಮಾಡಬೇಕಾಗಿತ್ತು. ಅದನ್ನು ಮಾಡಲು ಆ ಪುರುಷನ ಪುತ್ರನೇ ತಕ್ಕವನು ಎಂಬ ಭಾವನೆ ಬಲವಾಗಿ ಬೇರೂರಿತು. ಹೀಗಾಗಿ ಪುರುಷನಿಗೆ ಗಂಡು ಸಂತಾನ ಅನಿವಾರ್ಯವೆಂದಾಯಿತು. ಅವೆಸ್ಥ ಮತ್ತು ಜೋರಾಷ್ಟ್ರೀಯನ್ ಧರ್ಮಗ್ರಂಥಗಳ ಪ್ರಭಾವದಿಂದಾಗಿ ಉತ್ತರಕ್ರಿಯಾದಿಗಳಲ್ಲಿ ಪುತ್ರನದೇ ಪ್ರಮುಖ

ಪಾತ್ರ ಎಂಬುದು ರೂಪುಗೊಂಡಿತೆಂದು ತಿಳಿಯಲಾಗಿದೆ. ವಿವಿಧ ಧಾರ್ಮಿಕ ಕ್ರಿಯೆಗಳಲ್ಲಿ ಈ ಹಿಂದೆ ಸ್ತ್ರೀಯರಿಗೆ ಸಂದಾಯವಾಗುತ್ತಿದ್ದ ಸಮಪಾಲು ಈಗ ತಪ್ಪಿಹೋಯಿತು. ಪುತ್ರಸಂತಾನವನ್ನು ಪಡೆಯುವುದಕ್ಕಷ್ಟೇ ಸ್ತ್ರೀಯ ಸ್ಥಾನಮಾನ ಸೀಮಿತವಾಯಿತು. ಅದೇ ಕಾರಣವಾಯಿತೋ ಏನೋ ಬಾಲ್ಯವಿವಾಹ ಪದ್ಧತಿ ರೂಢಿಗೆ ಬಂದಿತು.[10]

ಪುತ್ರನಿಗೆ ಅತಿಯಾದ ಮಹತ್ವ ಸಂದಾಯವಾದುದೇ ಕಾರಣವಾಗಿ ನಿಯೋಗವೆಂಬ ನೂತನ ಪದ್ಧತಿಯೊಂದು ಜಾರಿಗೆ ಬಂದಿತು. ಅದರಂತೆ ವಿಧವಾ ವಿವಾಹ ತಪ್ಪಿಹೋದರೂ ಕಾನೂನುಬಾಹಿರ ಪುತ್ರಸಂತಾನವನ್ನು ಪಡೆಯಲು ಸಮಾಜವು ಅನುಮತಿ ಕೊಟ್ಟಿತು. ಪತಿಯು ಸತ್ತ ನಂತರ ಅವನ ಸಂಬಂಧಿಕರು ಅವನ ಪತ್ನಿಯು ಪುತ್ರರನ್ನು ಪಡೆಯುವ ಸಲುವಾಗಿ ಒಬ್ಬ ಗೊತ್ತಾದ ಪುರುಷನ ಜೊತೆ ಸಂಪರ್ಕವೇರ್ಪಡಿಸಿಕೊಳ್ಳಲು ಆಜ್ಞೆ ಮಾಡುತ್ತಿದ್ದರು. ಅದಕ್ಕೆ ನಿಯೋಗ ಎಂದು ಹೆಸರು. ಹಾಗೆ ಹುಟ್ಟಿದ ಪುತ್ರನು ಔರಸಪುತ್ರನಷ್ಟು ಗೌರವಾನ್ವಿತನೆನಿಸಿಕೊಳ್ಳದಿದ್ದರೂ ಉತ್ತರಕ್ರಿಯಾದಿಗಳನ್ನು ಮಾಡುವ ಅಧಿಕಾರಗಳನ್ನೆಲ್ಲ ಪಡೆದುಕೊಂಡು ಸಮಾಜದ ದೃಷ್ಟಿಯಲ್ಲಿ ಉತ್ತಮನೆಂದೇ ಪರಿಗಣಿತನಾಗುತ್ತಿದ್ದನು. ಅವನು ಯಾವ ಪುರುಷನ ಸಂಪರ್ಕದಿಂದ ಹುಟ್ಟಿದನೊ ಅವನನ್ನು ತನ್ನ ತಂದೆಯೆಂದು ಪರಿಗಣಿಸಬೇಕಾಗಿರಲಿಲ್ಲ. ಅಷ್ಟೆ ಅಲ್ಲದೆ ಆ ಗೊತ್ತಾದ ಪುರುಷನಿಗೆ ಹುಟ್ಟಿದ ಮಕ್ಕಳು ಅವನಿಗೆ ಸೇರಿದ್ದಲ್ಲ ಎಂದು ಆರಂಭದಲ್ಲಿಯೇ ಒಪ್ಪಂದ ಮಾಡಿಕೊಳ್ಳಲಾಗುತ್ತಿತ್ತು.[11]

ಅಥರ್ವವೇದದ ಕಾಲದಲ್ಲಿ ಸ್ತ್ರೀಯ ಸ್ಥಾನಮಾನದಲ್ಲಿ ಸಾಕಷ್ಟು ಅವನತಿಯಾಗಿದೆಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ವಿಧವಾವಿವಾಹ ಸಲ್ಲದು ಎಂಬ ಅಥರ್ವವೇದದ ಅಭಿಪ್ರಾಯದೊಂದಿಗೆ ವಿಧವಾವಿವಾಹವೇನೂ ದೋಷವಲ್ಲ ಎಂಬ ಅಭಿಪ್ರಾಯವೂ ಅಲ್ಲಿಯೇ ಮನ್ನಣೆಯನ್ನು ಪಡೆದಿರುವುದನ್ನು ನಾವು ಕಾಣುತ್ತೇವೆ. ವಿಧವಾವಿವಾಹದ ಮೂಲಕ ಹುಟ್ಟಿದ ಮಕ್ಕಳನ್ನೇನೂ ಸಮಾಜವು ಹೀನಾಯವಾಗಿ ಕಾಣುತ್ತಿರಲಿಲ್ಲ. ಮೊದಲ ಹೆಂಡತಿಯಲ್ಲಿ ಪುತ್ರಸಂತಾನವಾಗದಿದ್ದರೆ ಪುತ್ರನನ್ನು ಪಡೆಯಲೇಬೇಕೆಂಬ ಬಲವಾದ ಆಶಯ ಮೂಡಿಬಂದುದರಿಂದ ಬಹುಪತ್ನಿತ್ವವು ಹೆಚ್ಚು ರೂಢಿಗೆ ಬರಲು ಕಾರಣವಾಯಿತೆನ್ನಬಹುದು. ಅಥರ್ವವೇದದ ಕಾಲದಲ್ಲಿ ಸಹಗಮನ ಪದ್ಧತಿ ರೂಢಿಯಲ್ಲಿತ್ತೆಂದು ತಿಳಿಯಲಾಗಿದೆ. ಅದೊಂದು ಅಮಾನವೀಯ ಪದ್ಧತಿಯೇ ಸರಿ. ಶವಗಳ ಅಗ್ನಿಸಂಸ್ಕಾರ ಪದ್ಧತಿಯು ರೂಪುಗೊಳ್ಳುವುದರೊಂದಿಗೆ ಸಹಗಮನ ಪದ್ಧತಿಯು ಜಾರಿಗೆ ಬಂದಿತೆಂದು ಭಾವಿಸಲಾಗಿದೆ. ವ್ಯಕ್ತಿಯೊಬ್ಬನು ಮೃತನಾದರೆ ಅವನ ಆತ್ಮವು ಜೀವಂತವಾಗಿರುತ್ತದೆ ಎಂಬುದು ಆದಿಮಾನವಯುಗದ ನಂಬಿಕೆಯಾಗಿತ್ತು. ಆ ಬಗೆಯ ನಂಬಿಕೆಗಳು ಅಥರ್ವವೇದದ ಕಾಲಕ್ಕೂ ಮಾನ್ಯವಾಗಿದ್ದವು. ವ್ಯಕ್ತಿಯ ಆತ್ಮವು ತಾನು ಜೀವಂತವಾಗಿದ್ದಾಗ ಉಪಭೋಗಿಸುತ್ತಿದ್ದ ವಸ್ತುಗಳೆಲ್ಲವೂ ತರುವಾಯದಲ್ಲಿಯೂ ಅದಕ್ಕೆ ಬೇಕು ಎಂಬ ಮಾನ್ಯತೆ ಬೆಳೆಯಿತು. ಆ ಆತ್ಮಕ್ಕೊಂದು ಹೆಣ್ಣು ಬೇಕು ಎಂಬ ಕಾರಣಕ್ಕಾಗಿಯೇ ಮಡದಿಯು ಪತಿಯೊಡನೆ ಅಗ್ನಿಪ್ರವೇಶ ಮಾಡಬೇಕಾಯಿತು. ಅಥರ್ವವೇದ ಯುಗದ ಸ್ತ್ರೀಯರ ಸ್ಥಾನಮಾನಗಳ ಮೇಲೆ ಇರಾನಿಯನ್ ಸಂಸ್ಕೃತಿಯ ಪ್ರಭಾವವು ಬಿದ್ದಿದೆಯೆಂದು ವಿದ್ವಾಂಸರು ಗುರುತಿಸಿದ್ದಾರೆ. ಅಥರ್ವವೇದ ಕಾಲದ ಸ್ತ್ರೀತ್ವವೆಂದರೆ ಅದು ಇಂಡೊ-ಇರಾನಿಯನ್ ಸಂಸ್ಕೃತಿಯೇ ಆಗಿದೆ ಎಂದು ಹೇಳುವಷ್ಟರಮಟ್ಟಿಗೆ ವಿದ್ವಾಂಸರು ಮುಂದೆಹೋಗಿದ್ದಾರೆ.[12]

**ಬ್ರಾಹ್ಮಣಗಳು ಮತ್ತು ಉಪನಿಷತ್ತುಗಳ ಕಾಲ (ಕ್ರಿ.ಪೂ. ೧೦೦೦ದಿಂದ ಕ್ರಿ. ಪೂ. ೫೦೦)**

**ಬ್ರಾಹ್ಮಣಗಳು**

ಬ್ರಾಹ್ಮಣಗಳ ಯುಗವನ್ನು ಸ್ತ್ರೀಯರ ಸ್ಥಾನಮಾನಗಳ ಸಂಕ್ರಮಣಯುಗವೆಂದು ಹೇಳಬಹುದು. ಅದೊಂದು ಮಿಶ್ರಭಾವಗಳ ಯುಗ. ಸ್ತ್ರೀಯನ್ನು ಗೌರವಪೂರ್ಣವಾದ ಸ್ಥಾನದಲ್ಲಿ ಇಟ್ಟಿರುವ ಮಾತುಗಳ ಜೊತೆಗೆ ಅವಳನ್ನು ಕಡೆಗಣಿಸಿರುವ ಮಾತುಗಳು ಇವೆ. ಈ ಪರಿಸ್ಥಿತಿಯಲ್ಲಿ ಸ್ತ್ರೀಯ ವಿಷಯವಾಗಿ ಏಕಪಕ್ಷೀಯವಾದ ನಿರ್ಣಯಗಳನ್ನು ಕೊಡುವುದು ಸಾಧ್ಯವಿಲ್ಲ. ಹೆಚ್ಚು ಕಡಿಮೆ ಅಥರ್ವವೇದಯುಗದ ಭಾವನೆಗಳೆ ಮುಂದುವರಿದುವು ಮತ್ತು ಆ ಭಾವನೆಗಳು ಇನ್ನಷ್ಟು ಗಟ್ಟಿಗೊಂಡವು ಎಂದು ಹೇಳಬಹುದಾಗಿದೆ. ಕರ್ಮಕಾಂಡಕ್ಕೆ ಹೆಚ್ಚಿನ ಪ್ರಾಶಸ್ತ್ಯ ಬಂದುದರಿಂದ ಪುತ್ರ ಸಂತಾನಕ್ಕೆ ಸಂಬಂಧಿಸಿದ ಭಾವನೆಗಳು ಮತ್ತಷ್ಟು ಗಟ್ಟಿಗೊಂಡುವು. ಪುತ್ರನಿಲ್ಲದೆ ಸ್ವರ್ಗವಿಲ್ಲ. ಪುತ್ರಪ್ರಾಪ್ತಿಗಾಗಿಯೇ ಸ್ತ್ರೀ ಎಂಬುದು ಅಂದಿನ ಘೋಷಣೆಯಾಗಿ ಪರಿಣಮಿಸಿತು. ಆ ಘೋಷಣೆ ಎಷ್ಟರಮಟ್ಟಿಗೆ ಮುಂದುವರಿಯಿತೆಂದರೆ ಯಜ್ಞ-ಯಾಗಾದಿಗಳಲ್ಲಿ ಹೆಣ್ಣುಮಗು ಬೇಡವೆಂದು ಪ್ರಾರ್ಥಿಸುವ ಸ್ತೋತ್ರಗಳು ಪ್ರಚಲಿತವಾದವು.[13] ಹರಿಶ್ಚಂದ್ರನು ಪುತ್ರಪ್ರಾಪ್ತಿಗಾಗಿ ತುಂಬಾ ಹಂಬಲಿಸಿದನೆಂಬುದು ಪ್ರಸಿದ್ಧವಾದ ವಿಚಾರವೇ ಆಗಿದೆ. ತೈತ್ತರೀಯ ಸಂಹಿತೆಯಲ್ಲಿ ನಾರದನು ಹರಿಶ್ಚಂದ್ರನೊಂದಿಗೆ ಸಂವಾದ ನಡೆಸಿದ ಸಂಗತಿಗಳಿವೆ. ಅಲ್ಲಿ ನಾರದನು 'ಸತಿಯು ಒಡನಾಡಿ, ಮಗಳೊಂದು ಕಾಲ್ತೊಡಕು; ಮತ್ತಾಮಗನೊ ದಿವ್ಯ ಸ್ವರ್ಗದ ಬೆಳಕು'[14] ಎಂದು ನುಡಿದಿದ್ದಾನೆ. ಈ ಮಾತು ಅಂದಿನ ಯುಗದ ಸ್ತ್ರೀಯರ ಸ್ಥಾನಮಾನಕ್ಕೆ ಹಿಡಿದ ಕೈಗನ್ನಡಿ ಎಂದು ಹೇಳಬಹುದು. ಮೈತ್ರಾಯಿಣಿ ಸಂಹಿತೆಯು ಸ್ತ್ರೀಯನ್ನು ಜೂಜು ಮತ್ತು ಕುಡಿತಗಳೊಂದಿಗೆ ಸಮೀಕರಿಸಿದೆ. ಅವಳನ್ನು ಸಮಾಜದ ಪ್ರಮುಖ ಅನಿಷ್ಟಗಳಲ್ಲೊಂದು ಎಂದು ಕರೆದಿದೆ. ತೈತ್ತರೀಯ ಮತ್ತು ಶತಪಥ ಬ್ರಾಹ್ಮಣಗಳು ಸ್ತ್ರೀಯನ್ನು ಒಬ್ಬ ಕೀಳು ವ್ಯಕ್ತಿಗಿಂತ ಕೀಳು ಎಂದು ನಿಂದಿಸಿವೆ.

ಇದೆಲ್ಲಾ ಸ್ತ್ರೀಯನ್ನು ಹೀನಾಯವಾಗಿ ಕಂಡ ಮುಖವಾಯಿತು. ಆದರೆ ಆ ವಿವರಣೆ ಅಷ್ಟಕ್ಕೇ ನಿಲ್ಲುವುದಿಲ್ಲ. ಗೌರವದಿಂದ ಕಾಣುತ್ತಿದ್ದರೆಂಬುದಕ್ಕೂ ಅಲ್ಲಿ ಉಲ್ಲೇಖಗಳಿವೆ. ಶತಪಥ ಬ್ರಾಹ್ಮಣವು ಸ್ತ್ರೀಯರು ವೇದಾಧ್ಯಯನ ಮಾಡಬಹುದು, ಯಜ್ಞಯಾಗಾದಿಗಳಲ್ಲಿ ಭಾಗವಹಿಸಬಹುದು ಎಂದು ಹೇಳಿದೆ. ಅಪತ್ನೀಕನಾದ ವ್ಯಕ್ತಿಗೆ ಯಜ್ಞ ಮಾಡುವ ಅಧಿಕಾರ ಇಲ್ಲ ಎಂದು ತೈತ್ತರೀಯ ಬ್ರಾಹ್ಮಣವು ಘೋಷಿಸಿದೆ. ಯಜ್ಞದಲ್ಲಿ ಪಾಲುಗಾರಳಾಗುವುದರಿಂದಲೇ ಸ್ತ್ರೀಯನ್ನು ಪತ್ನೀ ಎಂದು ಕರೆಯಲಾಗಿದೆ ಎಂದು ಪಾಣಿನಿ ಸೂಚಿಸಿದ್ದಾನೆ. ವಿವಾಹದ ಆಚರಣೆಯಲ್ಲಿ ಸಪ್ತಪದಿ ಎಂಬ ಒಂದು ಸಂಗತಿ ಇದೆ. ಅದರ ಅಂತರಾರ್ಥವನ್ನು ಪರಿಶೀಲಿಸುವಾಗ ಸ್ತ್ರೀಗೆ ನೀಡಿದ ಮಹತ್ವ ಅತಿಶಯವಾದುದು ಎಂದು ಹೇಳದೆ ವಿಧಿಯಿಲ್ಲ. "ನನ್ನೊಡನೆ ಏಳು ಹೆಜ್ಜೆಗಳನ್ನು ನಡೆದು ನೀನು ನನ್ನ ಗೆಳತಿಯಾಗಿದ್ದೀಯೆ; ಜೊತೆಯಲ್ಲಿ ಏಳು ಹೆಜ್ಜೆ ನಡೆದವರು ಗೆಳೆಯರಾಗುತ್ತಾರೆ. ನಾನು ನಿನ್ನ ಗೆಳೆತನವನ್ನು ಪಡೆಯುವಂತಾಗಲಿ, ನಿನ್ನ ಗೆಳೆತನದಿಂದ ನಾನು ಎಂದಿಗೂ ದೂರವಾಗದಂತಾಗಲಿ, ನನ್ನ ಗೆಳೆತನದಿಂದ ನೀನು ಎಂದಿಗೂ ದೂರಳಾಗದಿರು. ನಾವು ಒಂದಾಗೋಣ. ಪ್ರೀತಿಯಿಂದ ಒಂದಾಗಿ, ಪರಸ್ಪರ ಸಹವಾಸದಿಂದ ಪ್ರಕಾಶಿಸುತ್ತ, ಒಬ್ಬರನ್ನೊಬ್ಬರು ಚೆನ್ನಾಗಿ ಅರ್ಥ ಮಾಡಿಕೊಂಡು, ಎಲ್ಲ ಸಂತೋಷ ಸುಖಗಳನ್ನೂ ಹಂಚಿಕೊಂಡು ನಾವು ಆಲೋಚನೆಯಲ್ಲಿ, ಕರ್ತವ್ಯಗಳಲ್ಲಿ, ಆದರ್ಶಗಳಲ್ಲಿ ಒಂದಾಗೋಣ" (ಆಪಸ್ತಂಬ ಮಂತ್ರಬ್ರಾಹ್ಮಣ)[15] ಎಂದು ಏಳು ಹೆಜ್ಜೆಗಳನ್ನು ನಡೆದ ಮೇಲೆ ವರನು ವಧುವನ್ನುದ್ದೇಶಿಸಿ ನುಡಿಯುತ್ತಾನೆ.

ತೈತ್ತರೀಯ ಬ್ರಾಹ್ಮಣವು ಹೆಣ್ಣುಮಕ್ಕಳನ್ನು ಮಾರಾಟ ಮಾಡುತ್ತಿದ್ದರೆಂಬ ಸಂಗತಿಯನ್ನು ಸೂಚಿಸಿದರೆ, ಜೈಮಿನೀಯ ಬ್ರಾಹ್ಮಣವು ಹೆಣ್ಣನ್ನು ಕೊಡುಗೆಯಾಗಿ ನೀಡುತ್ತಿದ್ದುದನ್ನು

ಹೇಳಿದೆ. ಶತಪಥ ಬ್ರಾಹ್ಮಣವು ಒಂದೆಡೆ ಸ್ತ್ರೀಯನ್ನು ಪುರುಷನ ಅರ್ಧಾಂಗಿ ಎಂದು ಉದಾತ್ತೀಕರಿಸಿದ್ದರೆ ಅದೇ ಮತ್ತೊಂದು ಕಡೆ ಹೀನಾಯವಾಗಿ ಕಂಡಿದೆ. ಪತ್ನಿಯಾದವಳು ಗಂಡನು ಊಟ ಮಾಡಿದ ನಂತರ ಮಾಡಬೇಕು, ಎದುರುತ್ತರ ಕೊಡಬಾರದು, ಅಂತಹವಳು ಮಾತ್ರ ಹೊಗಳಿಕೆಗೆ ಅರ್ಹಳು ಎಂದೆಲ್ಲ ಹೇಳಿದೆ.[16] ಈ ಎಲ್ಲ ವಿವರಗಳು ಬ್ರಾಹ್ಮಣಗಳ ಯುಗದಲ್ಲಿ ಸ್ತ್ರೀಯ ವಿಷಯದಲ್ಲಿ ಮಿಶ್ರ ಭಾವಗಳಿದ್ದುವು ಎಂಬುದನ್ನು ಸೂಚಿಸುತ್ತದೆ.

**ಉಪನಿಷತ್ತುಗಳು**

ಗುರು-ಶಿಷ್ಯರ ಸಂವಾದದ ಆಧ್ಯಾತ್ಮಿಕ ಚಿಂತನೆಗಳೇ ಉಪನಿಷತ್ತುಗಳು. ಅವು ಒಂದೇ ಕಾಲಘಟ್ಟದಲ್ಲಿ ರಚಿತವಾದವುಗಳಲ್ಲ. ದಶೋಪನಿಷತ್ತು ಎಂದು ಹೇಳುವಂತೆ ಆ ಗುಂಪಿನಲ್ಲಿ ಹತ್ತು ಉಪನಿಷತ್ತುಗಳು ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಅತಿ ಪುರಾತನವಾದ ಉಪನಿಷತ್ತು ಕ್ರಿ. ಪೂ. ೬೦೦ಕ್ಕೂ ಮೊದಲಿನದೆಂದು ತಿಳಿಯಲಾಗಿದೆ. ಛಾಂದೋಗ್ಯ ಮತ್ತು ಬೃಹದಾರಣ್ಯಕ ಎಂಬ ಉಪನಿಷತ್ತುಗಳನ್ನು ಆ ಕಾಲಘಟ್ಟಕ್ಕೆ ಸೇರಿಸಬಹುದು. ಉಪನಿಷತ್ತುಗಳಲ್ಲಾದರೊ ಸ್ತ್ರೀಯರ ಸ್ಥಾನಮಾನಗಳ ವಿಚಾರದಲ್ಲಿ ಶ್ರೇಷ್ಠವಾದ ಅಭಿಪ್ರಾಯಗಳಿವೆ. ವರ್ಣಾಶ್ರಮ ಭೇದವಿಲ್ಲದೆ, ಗಂಡು-ಹೆಣ್ಣೆಂಬ ಭೇದವಿಲ್ಲದೆ ಸಕಲರೂ ಜ್ಞಾನಸಂಪಾದನೆಗೆ ಅರ್ಹರು ಎಂದು ಹೇಳುವ ಉಪನಿಷತ್ತುಗಳು ಸ್ತ್ರೀಯರನ್ನು ಕಡೆಗಣಿಸುವುದು ಸಾಧ್ಯವೇ ಇಲ್ಲ. ಹಾಗೆ ಕಡೆಗಣಿಸಿದರೆ ಅದು ಉಪನಿಷತ್ತುಗಳ ತತ್ತ್ವಕ್ಕೆ ವಿರುದ್ಧವಾಗುತ್ತದೆ. ಛಾಂದೋಗ್ಯ ಉಪನಿಷತ್ತಿನ ಒಂದು ವಿವಾಹಸೂಕ್ತದಲ್ಲಿ 'ನಿನ್ನ ಹೃದಯವೆಂಬುದು ನನ್ನದಾಗಲಿ, ಈ ನನ್ನ ಹೃದಯವು ನಿನ್ನದಾಗಲಿ'[17] ಎಂದು ಗಂಡು-ಹೆಣ್ಣುಗಳ ಹೃದಯಗಳ ಐಕ್ಯವನ್ನು ಸ್ಫುಟವಾಗಿ ತಿಳಿಸಿಕೊಟ್ಟಿದೆ. ಬೃಹದಾರಣ್ಯಕ ಉಪನಿಷತ್ತಾದರೊ ಗಂಡು-ಹೆಣ್ಣು ಕೂಡಿಯೆ ಒಂದು ಘಟಕ, ಅಪತ್ನೀಕನಾದ ಪುರುಷನು ಸಮಾಜದಲ್ಲಿ ಅರ್ಧ ವ್ಯಕ್ತಿತ್ವವನ್ನು ಹೊಂದಿದ ಹಾಗೆ ಎಂದು ತಿಳಿಸಿಕೊಟ್ಟಿದೆ.[18]

ಬೃಹದಾರಣ್ಯಕ ಉಪನಿಷತ್ತಿನಲ್ಲಿ ಯಾಜ್ಞವಲ್ಕ್ಯ ಮತ್ತು ಅವನ ಇಬ್ಬರು ಮಡದಿಯರಾದ ಕಾತ್ಯಾಯಿನಿ ಮತ್ತು ಮೈತ್ರೇಯಿಯರ ವೃತ್ತಾಂತವಿದೆ. ಆ ವೃತ್ತಾಂತವು ಅಂದಿನ ಸ್ತ್ರೀಯರು ಜ್ಞಾನಕಾಂಡದ ಚರ್ಚೆಯಲ್ಲಿ ಪುರುಷರಿಗೆ ಯಾವ ಪರಿಯಲ್ಲಿಯೂ ಕಡಿಮೆಯಾಗಿರಲಿಲ್ಲವೆಂಬುದನ್ನು ಹೇಳುತ್ತದೆ. ಆ ಸಂದರ್ಭದಲ್ಲಿ ಯಾಜ್ಞವಲ್ಕ್ಯ ಮತ್ತು ಮೈತ್ರೇಯಿಯರ ನಡುವೆ ಮೂಡಿಬಂದ ಸಂವಾದ ಅತ್ಯಂತ ಮನೋಜ್ಞವಾಗಿದೆ.

**ಯಾಜ್ಞವಲ್ಕ್ಯ:** ಎಲೆ ಮೈತ್ರೇಯಿ ನಾನು ಈ ಸ್ಥಾನದಿಂದ ಹೊರಟು ಹೋಗುವವನಿದ್ದೇನೆ. ನಿನಗೂ ಕಾತ್ಯಾಯಿನಿಗೂ ಅಂತವನ್ನು ಮಾಡುವೆನು.

**ಮೈತ್ರೇಯಿ:** ಭಗವಂತನೆ ಈ ಪೃಥ್ವಿಯೆಲ್ಲವೂ ವಿತ್ತದಿಂದ ತುಂಬಿರುವುದಾದರೆ, ಅದರಿಂದ ನಾನು ಅಮೃತಳಾದೇನೇನು?

**ಯಾಜ್ಞವಲ್ಕ್ಯ:** ಇಲ್ಲ, ಇಲ್ಲ, ಉಪಕರಣವುಳ್ಳವರಿಗೆ ಜೀವಿತವು ಹೇಗಿರುವುದೊ ಹಾಗೆಯೇ ನಿನ್ನ ಜೀವಿತವು ಇದ್ದೀತು. ಆದರೆ ವಿತ್ತದಿಂದ ಅಮೃತತ್ವದ ಆಸೆಯಿಲ್ಲ.

**ಮೈತ್ರೇಯಿ:** ಯಾವುದರಿಂದ ನಾನು ಅಮೃತಳಾಗಲಾರೆನೋ, ಅದರಿಂದ ನಾನು ಏನು ಮಾಡಿಕೊಳ್ಳಲಿ? ಭಗವಂತನೆ, ನೀನು ಯಾವುದನ್ನು ತಿಳಿದುಕೊಂಡಿರುವೆಯೊ ಅದನ್ನೆ ನನಗೆ ತಿಳಿಸು.

**ಯಾಜ್ಞವಲ್ಕ್ಯ :** ನನಗೆ ನೀನು ಪ್ರಿಯಳೇ ಆದ ಸತಿಯಾಗಿದ್ದು, ಪ್ರಿಯವನ್ನು ಬೆಳೆಯಿಸುತ್ತಿದ್ದೀಯೆ. ಒಳ್ಳೆಯದು, ಹಾಗಾದರೆ ನಿನಗೆ ಅದನ್ನೇ ವಿವರಿಸುವೆನು. ನಾನು ವಿವರಿಸುವುದನ್ನು ನಿದಿಧ್ಯಾಸನ ಮಾಡು.[19]

ಅಮೃತತ್ವವನ್ನೇ ಬಯಸಿದ ಮೈತ್ರೇಯಿಯ ಚಿತ್ರ ಇಲ್ಲಿ ಉಜ್ವಲವಾಗಿ ಮೂಡಿಬಂದಿದೆ. ಉಪನಿಷತ್ತುಗಳ ಕಾಲದಲ್ಲಿಯೂ ಸ್ತ್ರೀಯ ಸ್ಥಾನಮಾನಗಳ ಕೆಲವು ಸಂಗತಿಗಳು ಹಾಗೆಯೇ ಉಳಿದುಕೊಂಡು ಬಂದವು. ವಿಧವೆಯರಿಗೆ ಗಂಡನ ಆಸ್ತಿಯ ಹಕ್ಕು ಇರಲಿಲ್ಲ. ಅಣ್ಣತಮ್ಮಂದಿರನ್ನು ಹೊಂದಿರುವ ಹೆಣ್ಣುಮಕ್ಕಳಿಗೂ ಆಸ್ತಿಯ ಹಕ್ಕು ಇರಲಿಲ್ಲ. ಹದಿನಾಲ್ಕು ಅಥವಾ ಹದಿನೈದನೆಯ ವರ್ಷಕ್ಕೆಲ್ಲ ಹೆಣ್ಣುಮಕ್ಕಳಿಗೆ ವಿವಾಹವು ನೆರವೇರುತ್ತಿತ್ತು.[20]

**ಸ್ಮೃತಿಗಳು ಮತ್ತು ಪುರಾಣಗಳು (ಕ್ರಿ. ಪೂ. ೫೦೦ರಿಂದ ಕ್ರಿ. ಶ. ೬೦೦)**

**ಸ್ಮೃತಿಗಳು**

ಸ್ಮೃತಿಗಳು ಧರ್ಮಸೂತ್ರದ ಆಧಾರದ ಮೇಲೆ ರಚಿತವಾದ ಕಾನೂನು ವಿಧಿಗಳು ಹಾಗೂ ನಡವಳಿಕೆಯ ನಿಯಮಗಳು ಎಂದು ಹೇಳಬಹುದು. ಸ್ಮೃತಿಗ್ರಂಥಗಳ ಸಮುದಾಯದಲ್ಲಿ ಮನುವಿನಿಂದ ರಚಿತವಾದ ಮನುಸ್ಮೃತಿ ಎಂಬ ಗ್ರಂಥವು ಅತ್ಯಂತ ಪುರಾತನವೂ, ಪ್ರಸಿದ್ಧವೂ ಆಗಿದೆ.[21] ಸ್ತ್ರೀಯರ ಬಗ್ಗೆ ಮನುಸ್ಮೃತಿಯ ಅಭಿಪ್ರಾಯಗಳನ್ನು ಕ್ರೋಡೀಕರಿಸಿಕೊಂಡರೆ ಅದು ಆ ಯುಗದ ಸ್ತ್ರೀ ಸಮಾಜದ ಕೈಗನ್ನಡಿಯೇ ಆಗುತ್ತದೆ. ಈ ಹಿಂದಿನ ಯುಗದಲ್ಲಿ ಸ್ತ್ರೀಯರಿಗೆ ಉಪನಯನವೆಂಬ ವಿಧಿ ಇದ್ದಿತು. ಗುರುಗಳನ್ನು ಆಶ್ರಯಿಸಿ ಅವರು ವೇದಗಳನ್ನು ಓದುತ್ತಿದ್ದರು. ಪ್ರತಿನಿತ್ಯ ಗಾಯತ್ರಿ ಜಪ ಮತ್ತು ಅಗ್ನಿಕಾರ್ಯಗಳನ್ನು ಮಾಡುತ್ತಿದ್ದರು. ತರುವಾಯದಲ್ಲಿ ವಿವಾಹವಾಗುವ ಅಥವಾ ಬ್ರಹ್ಮವಾದಿನಿಯರಾಗಿಯೇ ತಮ್ಮ ಬದುಕನ್ನು ಸಾಗಿಸುವ ಅವಕಾಶವನ್ನು ಅವರು ಪಡೆದಿದ್ದರು. ಆದರೆ ಮನುವಿನ ಕಾಲಕ್ಕೆ ಬಾಲ್ಯವಿವಾಹ ಪದ್ಧತಿಯು ಕಾನೂನುಬದ್ಧವಾಗಿ ಜಾರಿಗೆ ಬಂದುದರಿಂದ ಸ್ತ್ರೀಯರ ವಿದ್ಯಾಭ್ಯಾಸಕ್ಕೆ ದೊಡ್ಡ ಕೊಡಲಿಪೆಟ್ಟು ಬಿದ್ದಂತಾಯಿತು. ಬಾಲ್ಯವಿವಾಹವೇ ಹೆಣ್ಣುಮಕ್ಕಳಿಗೆ ಶ್ರೇಯಸ್ಕರವಾದುದೆಂಬ ಭಾವನೆ ಬೆಳೆಯಿತು. ಮನುಸ್ಮೃತಿ ಮಾತ್ರವೇ ಅಲ್ಲ, ಎಲ್ಲ ಸ್ಮೃತಿಗಳು ಮೈನೆರೆಯುವುದಕ್ಕೆ ಮುನ್ನವೇ ಹೆಣ್ಣುಮಕ್ಕಳಿಗೆ ವಿವಾಹ ಮಾಡಬೇಕೆಂದು ವಿಧಿಸಿವೆ. ರಜೋದರ್ಶನವಾದಮೇಲೆ ವಿವಾಹ ಮಾಡಿದರೆ ಆ ಹೆಣ್ಣುಮಗುವಿನ ತಂದೆಯು ಲೋಕಾಂತರದಲ್ಲಿ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ ಎಂದು ಹೇಳಲಾಯಿತು. ಹೀಗೆ ಬಾಲ್ಯವಿವಾಹದ ಪರವಾಗಿ ಜನಾಭಿಪ್ರಾಯವು ದೃಢವಾದುದೇ ಕಾರಣವಾಗಿ ಹೆಣ್ಣುಮಕ್ಕಳು ವಿದ್ಯಾಭ್ಯಾಸದಿಂದ ವಂಚಿತರಾಗಿ ಗೃಹಕೃತ್ಯದತ್ತ ಹೆಚ್ಚಿನ ಗಮನಹರಿಸಬೇಕಾಯಿತು. ಶೂದ್ರರಿಗೆ ವೇದಾಧ್ಯಯನವಿಲ್ಲ, ಅಂತೆಯೆ ಸ್ತ್ರೀಯರಿಗೂ ವೇದಾಧ್ಯಯನವಿಲ್ಲ ಎನ್ನುವ ಪರಿಸ್ಥಿತಿ ನಿರ್ಮಾಣವಾಯಿತು. ಹೀಗಾಗಿ ಸ್ಮೃತಿಕಾರರು ಸ್ತ್ರೀಯರನ್ನು ಶೂದ್ರರೊಂದಿಗೆ ಸಮೀಕರಿಸಿದರು. ಸ್ತ್ರೀಯರು ವಿದ್ಯಾಭ್ಯಾಸದಲ್ಲಿ ಹಿಂದೆ ಬಿದ್ದರೂ ಅವರ ಬುದ್ಧಿಶಕ್ತಿಗೇನೂ ಕೊರತೆಯಿರಲಿಲ್ಲ. ಗೃಹಕೃತ್ಯದಲ್ಲಾಗಲಿ, ಇನ್ನಿತರ ಸಾಮಾಜಿಕ ವ್ಯವಹಾರಗಳಲ್ಲಾಗಲಿ ಅವರು ತಕ್ಕಷ್ಟು ಪ್ರಭಾವ ಬೀರುತ್ತಿದ್ದರು. ಸ್ತ್ರೀಯರಿಗೆ ವಿವಾಹವೊಂದೇ ಮಂತ್ರಸಹಿತವಾದ ಸಂಸ್ಕಾರ ಎಂದು ನಿರ್ಣಯವಾಯಿತು. ಅದು ಮೌಂಜಿ ಬಂಧನದ ಸ್ಥಾನವನ್ನು ವಹಿಸಿಕೊಂಡಿತು[22]. ಹೀಗೆ ಧಾರ್ಮಿಕಗ್ರಂಥಗಳು ಬಾಲ್ಯವಿವಾಹವನ್ನು ಪ್ರತಿಪಾದಿಸುತ್ತಿದ್ದಾಗ ಬಾಲ್ಯವಿವಾಹಕ್ಕೆ ಉಗ್ರ ಪ್ರತಿಭಟನೆಯು ಒಂದು ವೈದ್ಯ ಗ್ರಂಥದಲ್ಲಿ ಕಂಡುಬಂದಿದೆ. ಸುಶ್ರುತನು ತನ್ನ ಸಂಹಿತೆಯಲ್ಲಿ (ಶರೀರಸ್ಥಾನ, X, 47-48) 'ಹುಡುಗಿಯನ್ನು ಹದಿನಾರನೇ ವಯಸ್ಸಿಗಿಂತ ಮೊದಲು ಮದುವೆ ಮಾಡಬಾರದು. ಆಕೆ ಆ ವಯಸ್ಸಿಗೆ ಮುಂಚೆ ಮದುವೆಯಾಗಿ ಗರ್ಭಿಣಿಯಾದರೆ ಮಗುವು ಗರ್ಭದಲ್ಲೇ ಸಾಯುತ್ತದೆ. ಹುಟ್ಟಿದರೂ ಬಹಳ

ಕಾಲ ಬದುಕುವುದಿಲ್ಲ. ಬದುಕಿದರೂ ರೋಗಪೀಡಿತವಾಗಿರುತ್ತದೆ'[23] ಎಂದು ವೈಜ್ಞಾನಿಕ ಚಿಂತನೆಯನ್ನು ನೀಡಿರುವುದು ಕಂಡುಬರುತ್ತದೆ.

ಸ್ತ್ರೀಯರ ಸ್ಥಾನಮಾನವನ್ನು ಕುರಿತು ಹೇಳುವಾಗ ಮನುಸ್ಮೃತಿಯು 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ವಾಕ್ಯವನ್ನು ಮೇಲಿಂದ ಮೇಲೆ ಉದ್ಧರಿಸುವುದುಂಟು. ಆ ವಾಕ್ಯದ ಪೂರ್ಣಪಾಠವನ್ನು ಇದೀಗ ಪರಿಶೀಲಿಸಬೇಕು. ಬಾಲ್ಯದಲ್ಲಿ ತಂದೆ, ತಾರುಣ್ಯದಲ್ಲಿ ಗಂಡ, ಮುಪ್ಪಿನಲ್ಲಿ ಮಗ - ಹೀಗೆ ಅವಳು ಉದ್ದಕ್ಕೂ ಇನ್ನೊಬ್ಬರ ರಕ್ಷಣೆಯಲ್ಲಿರತಕ್ಕವಳು. ಅವಳು ಯಾವ ಸ್ವಾತಂತ್ರ್ಯಕ್ಕೂ ಅರ್ಹಳಲ್ಲ. ಅವಳು ಎಂದೂ ಒಬ್ಬಂಟಿಗಳಾಗಿ ಇರಬಾರದು. ಸಮಾಜದ ಸ್ಥಿರತೆ ಮತ್ತು ಪಾವಿತ್ರ್ಯಗಳು ಸ್ತ್ರೀಯನ್ನೇ ಅವಲಂಬಿಸಿವೆ. ಮನೆಯೆಂದರೆ ಕಟ್ಟಡವಲ್ಲ, ಗೃಹಿಣಿಯೇ ಮನೆ. 'ನ ಗೃಹಂ ಗೃಹಮಿಧಾಹುಃ ಗೃಹಿಣೀ ಗೃಹಮುಚ್ಯತೇ' ಎನ್ನುವಷ್ಟರಮಟ್ಟಿಗೆ ಸ್ತ್ರೀಯ ಹೊಣೆಗಾರಿಕೆಗಳು ಹೆಚ್ಚಿದವು. ರಕ್ಷಣೆಯಿಲ್ಲದ ಸ್ವತಂತ್ರ ಜೀವನದ ಆಘಾತಕ್ಕೆ ಸ್ತ್ರೀಯು ಒಳಗಾಗಬಾರದು ಎಂಬುದು ಅಂದಿನ ಸ್ಮೃತಿಕಾರರ ಮನಸ್ಸಿನಲ್ಲಿದ್ದಿರಬಹುದು. ಸ್ತ್ರೀಯು ಅಂದಿನ ಯುಗದಲ್ಲಿ ತನ್ನ ಸ್ವಂತ ದುಡಿಮೆಯಿಂದ ಏನನ್ನೂ ಗಳಿಸಬೇಕಾಗಿರಲಿಲ್ಲ. ಮಿತವ್ಯಯ ಮತ್ತು ವಿನಿಯೋಗ ಈ ಕಾರ್ಯಗಳನ್ನು ಅವರು ನೇರ್ಪುಗೊಳಿಸಿದ್ದರೆ ಸಾಕಾಗಿತ್ತು. ಗೃಹಿಣಿಯೆಂದರೆ ಅವಳು ಭಾಗ್ಯದೇವತೆಯಾದ ಲಕ್ಷ್ಮಿ ಎಂದೇ ಭಾವಿಸಲ್ಪಡುತ್ತಿದ್ದಳು. ಸ್ತ್ರೀಯರ ವಿಷಯವಾದ ಈ ಸಂಗತಿಗಳನ್ನು ಹೇಗೆ ವ್ಯಾಖ್ಯಾನಿಸಬೇಕೆಂಬುದು ಖಚಿತವಾಗಿ ತಿಳಿಯುವುದಿಲ್ಲ. ಮನುವಿನ ಮಾತುಗಳನ್ನು ಸ್ತ್ರೀಪರವಾದ ನಿಲುವು ಎಂದು ಬೇಕಾದರೂ ಭಾವಿಸಬಹುದು. ಇಲ್ಲವೆ ಸ್ತ್ರೀ ಸ್ವಾತಂತ್ರ್ಯಕ್ಕೆ ವಿರುದ್ಧವಾದುದು ಎಂದು ಬೇಕಾದರೂ ವ್ಯಾಖ್ಯಾನಿಸಬಹುದು. ಸ್ತ್ರೀಯು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ ಎಂದು ನಿರೂಪಿಸಿದ ಮರುಕ್ಷಣದಲ್ಲಿಯೇ ಮನುವು ಅವರಿಗಿರುವ ಉನ್ನತ ಸ್ಥಾನವನ್ನು ಕೊಂಡಾಡುತ್ತ ಎಲ್ಲಿ ಸ್ತ್ರೀಯರು ಗೌರವಿಸಲ್ಪಡುತ್ತಾರೋ ಅಲ್ಲಿ ದೇವತೆಗಳು ಸಂತೋಷದಿಂದ ನಲಿದಾಡುತ್ತಾರೆ, ಸ್ತ್ರೀಯರಿಗೆ ಪೂಜ್ಯತೆ ಇಲ್ಲದ ಸ್ಥಾನದಲ್ಲಿ ಯಾವ ಕಾರ್ಯವೂ ಫಲಕಾರಿಯಾಗದು ಎಂದು ಘೋಷಿಸಿದನು. ಸೊಸೆಯು ತಳಮಳಕ್ಕೆ ತುತ್ತಾದ ಮನೆಯು ವಿನಾಶವನ್ನು ಹೊಂದುತ್ತದೆ. ಸೊಸೆಯಂದಿರು ಶಪಿಸಿದ ಮನೆಯ ಜನರು ದುಃಖಕ್ಕೆ ಈಡಾಗುತ್ತಾರೆ. ಮಡದಿಯಿಲ್ಲದ ಪುರುಷನು ಯಾವ ಧರ್ಮಕಾರ್ಯಕ್ಕೂ ಅಧಿಕಾರಿಯಲ್ಲ. ಸ್ತ್ರೀಯು ಸ್ವಂತ ಆಸ್ತಿಯನ್ನು ಹೊಂದುವುದಕ್ಕೆ ಅರ್ಹಳಲ್ಲದಿದ್ದರೂ ತನ್ನದೇ ಆದ ಸ್ತ್ರೀಧನವನ್ನು ಅವಳು ಸಂರಕ್ಷಿಸಿಕೊಳ್ಳಬಹುದಾಗಿತ್ತು. ಅದಕ್ಕಿಂತ ಬೇರೆಯಾದ ಆಸ್ತಿಯಿದ್ದರೆ ಅದು ಗಂಡನ ಆಸ್ತಿಯೆಂದೇ ಪರಿಗಣಿಸಲ್ಪಡುತ್ತಿತ್ತು. ಹೆಣ್ಣುಮಗಳು ವಿವಾಹ ಮಾಡಿಕೊಳ್ಳಲೇಬೇಕು ಎಂಬ ನಿರ್ಬಂಧವೇನೂ ಇರಲಿಲ್ಲ. ತಂದೆ ಒಬ್ಬ ಅಯೋಗ್ಯ ವರನನ್ನು ಗೊತ್ತುಮಾಡಿದ್ದಲ್ಲಿ ಹೆಣ್ಣುಮಗಳು ತಂದೆಯ ಮಾತಿಗೆ ತಲೆಬಾಗಿ ಆ ಅಯೋಗ್ಯನನ್ನೇ ಮದುವೆ ಮಾಡಿಕೊಳ್ಳಬೇಕಾದ್ದೇನೂ ಇರಲಿಲ್ಲ.[24]

ಸ್ತ್ರೀಯರು ತಮ್ಮ ಪಾವಿತ್ರ್ಯ ರಕ್ಷಣೆಯ ಕಾರ್ಯದಲ್ಲಿ ಮನಃಪೂರ್ವಕವಾಗಿ ತೊಡಗಿಕೊಳ್ಳಬೇಕು. ಅವರು ದಾರಿ ತಪ್ಪುವ ಸನ್ನಿವೇಶಗಳು ಯಾವುವು ಎಂಬುದನ್ನು ಮನು ಗುರುತಿಸಿ, ಅವುಗಳಿಂದ ತಮ್ಮನ್ನು ತಾವು ಸಂರಕ್ಷಿಸಿಕೊಳ್ಳಬೇಕೆಂದು ಅವನು ವಿಧಿಸಿದ್ದಾನೆ. ಮದ್ಯಪಾನ ಮಾಡುವುದು, ಹಗುರವಾದ ನಡವಳಿಕೆಯ ವ್ಯಕ್ತಿಗಳ ಜೊತೆ ಸೇರುವುದು, ಪತಿಯಿಂದ ಪ್ರತ್ಯೇಕವಾಗಿರುವುದು, ವ್ಯರ್ಥವಾಗಿ ಅಲೆದಾಡುವುದು, ತಡವಾಗಿ ಮಲಗುವುದು, ಪರಪುರುಷನೊಡನೆ ವಾಸ ಮಾಡುವುದು ಎಂಬೀ ಸಂದರ್ಭಗಳು ತನಗೆ ಒದಗದಂತೆ ಹೆಣ್ಣು ಎಚ್ಚರ ವಹಿಸಬೇಕು.[25]

ವಿಧವಾ ಸ್ತ್ರೀಯ ರೀತಿನೀತಿಗಳು ಹೇಗಿರಬೇಕು ಎಂಬ ಪ್ರಶ್ನೆಗೂ ಮನುವಿನಲ್ಲಿ ಉತ್ತರವಿದೆ.

ವಿಧವೆಯಾದವಳು ನಿಯಮ ನಿಷ್ಠೆಗಳ ಸಂಯಮಪೂರ್ಣ ಜೀವನವನ್ನು ನಡೆಸಬೇಕು. ಧ್ಯಾನ, ಪೂಜೆ, ಪ್ರಾರ್ಥನೆ ಮೊದಲಾದವುಗಳಲ್ಲಿ ತಲ್ಲೀನಳಾಗಿ ಮೋಕ್ಷ ಸಾಧನೆಯತ್ತ ತನ್ನ ಗಮನವನ್ನು ಹರಿಸಬೇಕು. ಒಂದು ವೇಳೆ ಆ ವಿಧವೆಯು ಪುತ್ರವತಿಯಲ್ಲದಿದ್ದರೂ ತಾನು ನಡೆಸಿದ ಪವಿತ್ರ ಜೀವನದ ಫಲವಾಗಿ ದೇಹಾಂತವಾದಮೇಲೆ ಸ್ವರ್ಗದಲ್ಲಿರುವ ತನ್ನ ಪತಿಯನ್ನು ಸೇರಿಕೊಳ್ಳುತ್ತಾಳೆ. ಒಂದುವೇಳೆ ಪುತ್ರಹೀನಳಾದ ವಿಧವೆಯು ಪುತ್ರಸಂತಾನವು ಬೇಕೆಂದು ಬಯಸಿದರೆ ನಿಯೋಗ ಪದ್ಧತಿಯಂತೆ ತನ್ನ ಬಯಕೆಯನ್ನು ಈಡೇರಿಸಿಕೊಳ್ಳಬಹುದು.[26]

ವಿವಾಹ ವಿಚ್ಛೇದನಕ್ಕೆ ಸಂಬಂಧಿಸಿದಂತೆಯೂ ಮನುವು ನಿಯಮಾವಳಿಗಳನ್ನು ನಿರೂಪಿಸಿದ್ದಾನೆ. ಒಬ್ಬ ಹೆಣ್ಣು ಬಂಜೆಯಾಗಿದ್ದಾಳೆ ಅಥವಾ ಅವಳಲ್ಲಿ ಹುಟ್ಟಿದ ಮಕ್ಕಳೆಲ್ಲ ಸಾಯುತ್ತಿದ್ದಾರೆಂದಿಟ್ಟುಕೊಳ್ಳೋಣ. ಅಂತಹವಳನ್ನು ಪುರುಷನು ತ್ಯಾಗ ಮಾಡಬೇಕಾದರೆ ಕಡೆಯಪಕ್ಷ ಹತ್ತು ವರ್ಷಗಳಾದರೂ ಅವಳೊಡನೆ ಸಂಸಾರ ಮಾಡಬೇಕು. ಒಬ್ಬ ಪುರುಷನೊಡನೆ ತನಗೆ ಸಂಸಾರ ನಡೆಸಲು ಇಷ್ಟವಿಲ್ಲ ಎಂದು ಹೆಂಡತಿಗೆ ಅನ್ನಿಸಿ ಅವಳು ಆ ಪುರುಷನನ್ನು ದ್ವೇಷಿಸಲು ಪ್ರಾರಂಭಿಸುತ್ತಾಳೆ, ಅವನಿಂದ ವಿಚ್ಛೇದನ ಪಡೆಯಲು ಇಚ್ಛಿಸುತ್ತಾಳೆಂದು ಇಟ್ಟುಕೊಳ್ಳೋಣ. ಆದರೆ ಗಂಡನೂ ಒಪ್ಪಿದರೆ ಮಾತ್ರವೇ ಅಂತಹ ವಿಚ್ಛೇದನ ಸಾಧ್ಯ. ಹೆಂಡತಿಯು ಜಗಳಗಂಟಿ ಸ್ವಭಾವದವಳಾಗಿದ್ದಾಳೆ ಎಂದಾಗಿದ್ದರೆ ಗಂಡನು ಅವಳಿಂದ ತಕ್ಷಣವೇ ಬೇರೆಯಾಗಬಹುದು ಎಂಬ ಮನುವಿನ ಮಾತು ಬಹಳ ಸ್ವಾರಸ್ಯಕರವಾಗಿದೆ.[27]

ವಿಷ್ಣು ಸ್ಮೃತಿಯು ತನಗೆ ಅಪರಿಚಿತಳಾದ ವಿವಾಹಿತ ಹೆಣ್ಣುಮಗಳೊಬ್ಬಳನ್ನು ಪುರುಷನು ಕಂಡರೆ ಅವಳನ್ನು ಸೋದರಿ, ಪುತ್ರಿ ಅಥವಾ ತಾಯಿ ಎಂಬಂತೆ ಸಂಬೋಧಿಸಬೇಕು ಎಂದು ನಿರೂಪಿಸಿದೆ.[28]

ಪರಾಶರ ಸ್ಮೃತಿಯು ಸ್ತ್ರೀಯು ಎರಡನೆಯ ವಿವಾಹ ಮಾಡಿಕೊಳ್ಳುವುದಕ್ಕೂ ಅನುಮತಿ ಕೊಟ್ಟಿದೆ. ಮೊದಲ ಪತಿಯು ದೇಶಾಂತರಕ್ಕೆ ಹೋಗಿ ಕಣ್ಮರೆಯಾದಾಗ, ಅವನು ಸನ್ಯಾಸ ಸ್ವೀಕಾರ ಮಾಡಿದಾಗ, ಪುರುಷತ್ವವನ್ನು ಕಳೆದುಕೊಂಡಾಗ, ಜಾತಿಯಿಂದ ಬಹಿಷ್ಕೃತನಾದಾಗ ಅಂತಹವನ ಹೆಂಡತಿಯು ಮರುವಿವಾಹ ಮಾಡಿಕೊಳ್ಳಬಹುದು.[29]

ಕೌಟಿಲ್ಯನ ಅರ್ಥಶಾಸ್ತ್ರವು ಸ್ತ್ರೀಯರ ಬಗ್ಗೆ ಕಠಿಣ ಭಾವವನ್ನು ಹೊಂದಿರಲಿಲ್ಲ. ಆಗಿನ ಕಾಲದಲ್ಲಿ ವಂಶಪಾರಂಪರ್ಯ ಆಸ್ತಿಯ ಹಕ್ಕಿಗೆ ಹೆಣ್ಣುಮಕ್ಕಳು ಹೊರತಾಗಿರಲಿಲ್ಲ ಮತ್ತು ಸ್ತ್ರೀಯರಿಗೆ ಸ್ವಾತಂತ್ರ್ಯವನ್ನು ನಿರಾಕರಿಸಿರಲಿಲ್ಲ ಎಂದು ಹೇಳಬಹುದು. ಅದು ವಿವಾಹ ಸಂದರ್ಭದಲ್ಲಿ ತಂದೆಯು ಮಗಳಿಗೆ ಸಾಕಷ್ಟು ವರದಕ್ಷಿಣೆಯನ್ನು ನೀಡಬೇಕೆಂದು ಹೇಳಿದೆ. ವಿವಾಹವಾದ ಸ್ತ್ರೀಯು ವೈಯಕ್ತಿಕವಾಗಿ ಆಸ್ತಿಯನ್ನು ಹೊಂದಬಹುದು ಎಂದು ಅದನ್ನು ಸ್ತ್ರೀಧನ ಎಂದು ಕರೆದು, ಅದರ ಮೇಲೆ ಅವಳಿಗೆ ಪೂರ್ತಿ ಅಧಿಕಾರವಿದ್ದು ಅವಳು ಅದನ್ನು ಭೋಗಿಸುವ ಮತ್ತು ವಿಲೇವಾರಿ ಮಾಡುವ ಹಕ್ಕನ್ನು ಹೊಂದಿದ್ದಾಳೆ ಎಂದು ಹೇಳಿದ್ದಾನೆ. ಸ್ತ್ರೀ ಹೊಂದಬಹುದಾದ ಮೂರು ಬಗೆಯ ಆಸ್ತಿಯನ್ನು ಸ್ತ್ರೀಧನ, ಅಹಿತಧನ, ಶುಲ್ಕ ಎಂದು ಕರೆದಿದ್ದಾನೆ. ಸ್ತ್ರೀಧನದ ಮೇಲೆ ಅವಳ ಪೂರ್ತಿ ಅಧಿಕಾರವಿದ್ದು ಅದರ ಮೇಲೆ ರಾಜನಿಗೂ ಅಧಿಕಾರವಿಲ್ಲ ಎಂದಿದ್ದಾನೆ. ಓರ್ವ ಸ್ತ್ರೀಯು ತನ್ನ ಗಂಡನು ಬೇರೊಬ್ಬಳನ್ನು ಮದುವೆಯಾಗಲು ಅನುಮತಿ ನೀಡಿದಾಗ, ಅವನು ನೀಡುವ ಪರಿಹಾರಧನವನ್ನು 'ಅಹಿತಧನ' ಎಂದಿದ್ದಾನೆ. ಸ್ತ್ರೀಯು ತಂದೆಯಿಂದ, ಗಂಡನಿಂದ ಪಡೆದ ಹಣ ಶುಲ್ಕವೆನಿಸುತ್ತದೆ. ಆದಕಾರಣ ವಿವಾಹ ವಿಚ್ಛೇದನವಾದಾಗ ಗಂಡನಾದವನು ಪರಿಹಾರ ನೀಡಬೇಕಾಗುತ್ತದೆ ಎಂದು ತಿಳಿಸಿದ್ದಾನೆ. ಅವನು ವಿಧವೆಯರ ಮರುವಿವಾಹವನ್ನು ಮತ್ತು

ನಿಯೋಗವನ್ನು ಮಾನ್ಯ ಮಾಡಿದ್ದಾನೆ. ಪರಾಶರ ಸ್ಮೃತಿಯು ಸೂಚಿಸಿರುವ ಕಾರಣಗಳನ್ನು ನೀಡಿ ಅಂತಹವನ ಹೆಂಡತಿಯು ಮಕ್ಕಳಿಲ್ಲದಿದ್ದರೆ ಏಳು ತಿಂಗಳವರೆಗೆ ಕಾದು, ಅನಂತರ ಗಂಡನ ಸಹೋದರನನ್ನು ಮದುವೆಯಾಗಬಹುದು. ಗಂಡನ ಸಹೋದರರು ಯಾರೂ ಇಲ್ಲದಿದ್ದರೆ ಅದೇ ಗೋತ್ರಕ್ಕೆ ಸೇರಿದ ಪುರುಷನನ್ನು ಮದುವೆಯಾಗಬಹುದು ಎಂದು ತಿಳಿಸಿದ್ದಾನೆ. ಗಂಡುಮಕ್ಕಳಿರುವವಳು ಮರುವಿವಾಹವಾದರೆ, ಅವಳ ಮೊದಲ ಗಂಡನ ಆಸ್ತಿ ಆ ಮಕ್ಕಳಿಗೆ ಸೇರುತ್ತದೆ. ಅವಳಿಗೆ ಅದರ ಹಕ್ಕಿರುವುದಿಲ್ಲ ಎಂದು ಹೇಳಿದ್ದಾನೆ.[30]

ದಕ್ಷಿಣದಿಂದ ಭಾರತದ ಕಾನೂನು ಸಾಹಿತ್ಯಕ್ಕೆ ಅಪೂರ್ವ ಕೊಡುಗೆ ನೀಡಿದವನು ಭೋದಾಯನ. ಅವನು ಶುಲ್ಕಕ್ಕಾಗಿ ಮಗಳನ್ನು ಮಾರುವುದು ಪಾಪಕೃತ್ಯವೆಂದು, ಅಂತಹ ತಂದೆಗೆ ಹೆಚ್ಚಿನ ದಂಡವನ್ನು ವಿಧಿಸಿದ್ದಾನೆ.[31] ಅವನು ಗೌತಮನ ರೀತಿಯಲ್ಲಿ ಅಂತರಜಾತಿಯ ವಿವಾಹಕ್ಕೆ ಅವಕಾಶ ನೀಡಿದ್ದು, ಅಂತಹ ವಿವಾಹದಿಂದ ಹುಟ್ಟಿದ ಮಕ್ಕಳು ಕಾನೂನುಬದ್ಧ ವಂಶಸ್ಥರಾಗಿರುತ್ತಿದ್ದರು ಎಂದು ಹೇಳಿದ್ದಾನೆ. ಅವನು ಸ್ತ್ರೀಯರಿಗೆ ಸ್ವಾತಂತ್ರ್ಯ ನೀಡದಿರುವುದರಿಂದ ಮತ್ತು ಅವಳು ಪುರುಷರ ರಕ್ಷಣೆಯಲ್ಲಿಯೇ ಸದಾ ಇರುವುದರಿಂದ ತೀವ್ರವಾದ ಶಿಕ್ಷೆಯನ್ನು ವಿಧಿಸಿಲ್ಲ. ಆದಕಾರಣದಿಂದ ಅವನು, ಎಲ್ಲ ಜಾತಿಯ ಗಂಡಂದಿರು ಅವರ ಹೆಂಡತಿಯರನ್ನು ಐಶ್ವರ್ಯಕ್ಕಿಂತ ಹೆಚ್ಚಾಗಿ ಕಾಪಾಡಬೇಕೆಂದು ಹೇಳಿದ್ದಾನೆ. ಸ್ತ್ರೀಯರಿಗೆ ಯಾವುದೇ ರೀತಿಯ ಕೆಡುಕನ್ನು ಮಾಡಿದರೆ ಅಂತಹವರಿಗೆ ತೀವ್ರ ಶಿಕ್ಷೆ ನೀಡಬೇಕೆಂದು ತಿಳಿಸಿದ್ದಾನೆ. ಅವನ ಕಾಲದಲ್ಲಿ ಬಹುಪತ್ನಿತ್ವ ಸಾಮಾನ್ಯವಾಗಿದ್ದರೂ, ಬಹುಪತಿತ್ವ ನಿಷೇಧವಾಗಿರಲಿಲ್ಲ ಎಂದು ಹೇಳಬಹುದು.[32]

ಆಪಸ್ತಂಬನು ನಿಯೋಗ ಪದ್ಧತಿಯನ್ನು ಮತ್ತು ಅಂತರಜಾತಿಯ ವಿವಾಹವನ್ನು ನಿಷೇಧಿಸಿದನು. ವಿವಾಹದಲ್ಲಿ ಹೆಚ್ಚು ನಿರ್ಬಂಧಗಳನ್ನು ಹೇರಿದನು. ಅವನು ಏಕಪತ್ನಿ ಮತ್ತು ಏಕಪತಿತ್ವವನ್ನು ಪ್ರತಿಪಾದಿಸುತ್ತ ಯಜ್ಞಯಾಗಾದಿಗಳಲ್ಲಿ ಸ್ತ್ರೀಗೆ ಸ್ಥಾನವನ್ನು ನೀಡಿದನು. ವ್ಯಭಿಚಾರಿಯಾದ ಹೆಂಗಸೂ ಸಹ ನಿಗದಿಗೊಳಿಸಿದ ತಪಶ್ಚರ್ಯೆಗೆ ಒಳಗಾದರೆ, ಅವಳು ತಪ್ಪು ಮಾಡುವ ಮೊದಲಿನಂತೆ ಶುದ್ಧಳು ಎಂದು ಪರಿಗಣಿಸಬಹುದು ಎಂದು ಹೇಳಿದನು.[33] ಅನ್ಯಾಯವಾಗಿ ಹೆಂಡತಿಯನ್ನು ಪರಿತ್ಯಜಿಸುವ ವ್ಯಕ್ತಿಯು ಕತ್ತೆಯ ಚರ್ಮವನ್ನು ಹೊದ್ದು, ತಲೆಯನ್ನು ಹೊರಹಾಕಿ, 'ಹೆಂಡತಿಯನ್ನು ಪರಿತ್ಯಜಿಸಿದವನಿಗೆ ಭಿಕ್ಷೆ ಕೊಡಿ' ಎಂದು ಬೇಡಬೇಕು ಎಂದು ಹೇಳಿ, ಅದೇ ರೀತಿ ಅವನು ಆರು ತಿಂಗಳು ಜೀವನ ನಿರ್ವಹಣೆ ಮಾಡಬೇಕು ಎಂದು ಶಿಕ್ಷೆ ವಿಧಿಸಿದ್ದಾನೆ. (ಆಪಸ್ತಂಬ, 1.10,28)[34] ಅವನು ವಿವಾಹಿತಳಾದ ಸ್ತ್ರೀಗೆ ಅವಳ ಗಂಡನಿಗಿರುವ ಸ್ಥಾನಮಾನವನ್ನು ನೀಡಿದ್ದನು. ಗಂಡ-ಹೆಂಡತಿಯರಿಬ್ಬರೂ ಅವರಿಗೆ ಸೇರಿದ ಆಸ್ತಿಗೆ ಸಮಾನ ಹಕ್ಕುದಾರರಾಗಿದ್ದು, ಅವರ ಅನುಮತಿಯಿಂದ ಅವಳ ಒಳಿತಿಗಾಗಿ ಆ ಆಸ್ತಿಯನ್ನು ಇತರರು ನಿರ್ವಹಿಸಬಹುದು (ಆಪಸ್ತಂಬ, 11.11-29) ಎಂದು ಹೇಳಿದನು.[35]

ಹೀಗೆ ಸ್ತ್ರೀಯನ್ನು ಮಿತಿಗೆ ಒಳಪಡಿಸುತ್ತ ಅವಳ ರಕ್ಷಣೆಯನ್ನು ಸಾಧಿಸಿರುವ ಕಾನೂನು ಆಪಸ್ತಂಬನದಾಗಿದೆ ಎಂದು ಹೇಳಬಹುದು.

ಬೃಹಸ್ಪತಿಯು 'ಪುರುಷನು ಯಾವ ಸ್ತ್ರೀಯನ್ನಾದರೂ ಬಲಾತ್ಕಾರವಾಗಿ ಕೆಡಿಸಿದಲ್ಲಿ ಅವನ ಆಸ್ತಿಪಾಸ್ತಿಗಳನ್ನು ವಶಪಡಿಸಿಕೊಂಡು ಕತ್ತೆಯ ಮೇಲೆ ಕೂರಿಸಿ ಅವನನ್ನು ಮೆರೆಸಬೇಕು, ಎಂದು ಹೇಳಿದ್ದಾನೆ. ವರಾಹಮಿಹಿರನು (ಕ್ರಿ. ಶ. ೫೦೦) ಸ್ತ್ರೀಯರು ಸಾಮಾನ್ಯವಾಗಿ ಪವಿತ್ರರೂ, ಪರಿಶುದ್ಧೆಯರೂ ಆಗಿರುತ್ತಾರೆ. ಅವರು ಮಿಗಿಲಾದ ಗೌರವಕ್ಕೂ ಮರ್ಯಾದೆಗೂ ಪಾತ್ರರು ಎನ್ನುತ್ತಾನೆ. ಸ್ತ್ರೀಯ ಸುಗುಣ,

ಸದಾಚಾರಗಳನ್ನು ಹೇಳದೆ ಅವರ ದುರ್ಗುಣಗಳನ್ನೇ ವಿಸ್ತರಿಸಿ ಹೇಳಿದುದಕ್ಕಾಗಿ ಕೆಲವು ಕೃತಿಕಾರರನ್ನು ಆತನು ನಿಂದಿಸುತ್ತಾನೆ.[36]

ಹೆಣ್ಣಿನ ಸ್ಥಾನಮಾನದ ವಿಚಾರವಾಗಿ ಸ್ಮೃತಿಗಳಲ್ಲಿಯೇ ಪರಸ್ಪರ ವೈರುಧ್ಯಗಳಿರುವುದು ಕಂಡುಬರುತ್ತದೆ. ಮನುವಿನಲ್ಲಿಯೇ ಅಂತಹ ವೈರುಧ್ಯಗಳಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. "ಬಾಲಿಕೆಯಾಗಲಿ, ಪ್ರೌಢೆಯಾಗಲಿ, ಮುದುಕಿಯಾಗಲಿ ತನ್ನ ಮನೆಯಲ್ಲಿ ಕೂಡ ಸ್ವತಂತ್ರವಾಗಿ ಏನನ್ನೂ ಮಾಡಬಾರದು. ಗಂಡನು ದರಿದ್ರನಾಗಿದ್ದರೂ, ಬೇರೆಡೆ ಸಂತೋಷವನ್ನು ಅರಸುವವನಾಗಿದ್ದರೂ, ಒಳ್ಳೆಯ ಗುಣಗಳು ಇಲ್ಲದವನಾಗಿದ್ದರೂ ಹೆಂಡತಿಯು ಅವನನ್ನು ದೇವರಂತೆ ಪೂಜಿಸಬೇಕು. ಅವನು ಜೀವಂತವಿದ್ದಾಗಲೂ ಅವನು ಸತ್ತಮೇಲೂ ಪತಿವ್ರತೆಯಾಗಿದ್ದು, ಗಂಡನಿಗೆ ನಿಷ್ಠಳಾಗಿಯೇ ಉಳಿಯಬೇಕು. ಆದರೆ ಗಂಡನಾದವನು ಹೆಂಡತಿಯ ಶವಸಂಸ್ಕಾರವಾಗುತ್ತಲೇ ಬೇಕಾದರೆ ಮತ್ತೆ ಮದುವೆಯಾಗಬಹುದು. ಇಂತಹ ಮಾತುಗಳು ಹೆಣ್ಣು ಕುಲಕ್ಕೆ ಅಗೌರವವನ್ನು, ಹಿಂಸಾತ್ಮಕ ವೇದನೆಯನ್ನು ಉಂಟುಮಾಡುವಂಥವಾಗಿವೆ."[37]

**ಪುರಾಣಗಳು**

ವೇದಗಳ ಮತ್ತು ಮಹಾಕಾವ್ಯಗಳ ಮಧ್ಯದ ಕಾಲವನ್ನು ಪುರಾಣಗಳ ಯುಗವೆಂದು ಹೇಳಬಹುದು.[38] ಸಾಂಪ್ರದಾಯಿಕ ಅಭಿಪ್ರಾಯದ ಪ್ರಕಾರ ಹದಿನೆಂಟು ಮಹಾಪುರಾಣಗಳು ಮತ್ತು ಹದಿನೆಂಟು ಉಪಪುರಾಣಗಳು ಇವೆ.[39] ಪುರಾಣಗಳ ಕಾಲದಲ್ಲಿ ವ್ರತ ಮತ್ತು ಶಾಂತಿ ಆಚರಣೆಗಳು ಪ್ರಮುಖವಾದವು. ಸ್ತ್ರೀಯರು ಅವುಗಳ ಆಚರಣೆಗೆ ಅರ್ಹರು ಎಂಬ ಅಭಿಪ್ರಾಯ ಮೂಡಿದ್ದು ಆ ಕಾಲದ ಒಂದು ವಿಶೇಷ ಮತ್ತು ಸಂತೋಷದ ವಿಷಯ. ವ್ರತಗಳನ್ನು ಪುರುಷರಿಗಿಂತ ಸ್ತ್ರೀಯರು ಹೆಚ್ಚಾಗಿ ಆಚರಿಸುತ್ತಿದ್ದರು. ಕ್ರಿ.ಶ.೧೦೦೦ದ ವೇಳೆಗೆ ಮೂಲ ಸಂಸ್ಕೃತ ಪುರಾಣಗಳು ಜನರಿಗೆ ಅರ್ಥವಾಗದಂತಾಗಿ ದೇಶೀಯ ಭಾಷೆಗಳಲ್ಲಿ ಅವುಗಳ ಅನುವಾದಗಳು ರಚಿತವಾದವು. ಆ ಪುರಾಣಗಳನ್ನು ಪೌರಾಣಿಕರು ಗ್ರಾಮಗಳ ದೇವಸ್ಥಾನಗಳಲ್ಲಿ ಪಾರಾಯಣ ಮಾಡುವ ರೂಢಿ ಕ್ರಿ.ಶ. ೧೫೦೦ರಿಂದ ಜಾರಿಗೆ ಬಂದಿತು. ಆ ಪುರಾಣ ಶ್ರೋತೃಗಳು ಹೆಚ್ಚಾಗಿ ಸ್ತ್ರೀಯರೇ ಇದ್ದು, ಅವರೇ ಧರ್ಮದ ರಕ್ಷಕರು ಎಂಬ ಭಾವನೆ ಸಮಾಜದಲ್ಲಿ ರೂಪುಗೊಂಡಿತು. ಇದು ಸ್ತ್ರೀಯರಿಗೆ ವೇದಕಾಲದ ಗೌರವವನ್ನು ಮತ್ತೆ ಸಮಾಜದಲ್ಲಿ ದೊರಕಿಸಿಕೊಡಲು ಕಾರಣವಾಯಿತು ಎಂದು ಹೇಳಬಹುದು.[40] ಈ ಅಭಿಪ್ರಾಯದಿಂದ "ಸ್ತ್ರೀಯರಿಗೆ, ಶೂದ್ರರಿಗೆ ಮತ್ತು ದ್ವಿಜಬಂಧುಗಳಿಗೆ ವೇದಗಳನ್ನು ಕೇಳುವ ಅಧಿಕಾರವಿಲ್ಲ, ಇದರ ಹಿತಕ್ಕಾಗಿಯೇ ಪುರಾಣಗಳು ಬರೆಯಲ್ಪಟ್ಟಿವೆ."[41] ಎಂದು ರಚಿತವಾದ ಪುರಾಣಗಳು ಸ್ತ್ರೀಚೇತನವನ್ನು ಆಂತರಿಕವಾಗಿ ಸಶಕ್ತಗೊಳಿಸಿದವು ಎಂದು ಹೇಳಬಹುದು.

"ಶಕ್ತಿ ಉಪಾಸನೆಯನ್ನು ಕುರಿತ ಉಪಪುರಾಣಗಳಲ್ಲಿ ಈ ಕೆಳಗಿನವು ಉಪಲಬ್ಧವಿವೆ:ದೇವೀಪುರಾಣ, ಕಾಲಿಕಾಪುರಾಣ, ಮಹಾಭಾಗವತ, ದೇವೀಭಾಗವತ, ಭಗವತೀಪುರಾಣ, ಚಂಡೀಪುರಾಣ (ಅಥವಾ ಚಂಡಿಕಾಪುರಾಣ) ಮತ್ತು ಸತೀಪುರಾಣ (ಕಾಲೀ ಅಥವಾ ಕಾಲಿಕಾಪುರಾಣವೆಂದು ಇತರ ನಾಮಾಂತರ....) ಈಗ ಸಿಕ್ಕಿರುವ ದೇವೀಪುರಾಣ ಒಂದು ಬೃಹತ್ತರ ಮೂಲಗ್ರಂಥದ ಸಣ್ಣ ಭಾಗ ಮಾತ್ರ. ಶಾಕ್ತಪುರಾಣಗಳಲ್ಲೆಲ್ಲ ಅತ್ಯಂತ ಪ್ರಮುಖ ಗ್ರಂಥಗಳಲ್ಲಿ ಅದು ಒಂದು; ದೇವಿಯ ವಿಜಯಗಳು, ದೇವಿಯ ಉಪಾಸನೆ, ಆದಿಶಕ್ತಿಯು ಅನಂತಶಕ್ತಿಯೂ ಆದ ದೇವಿಯೇ ವಿಂಧ್ಯಾಚಲದಲ್ಲಿ ವಿಂಧ್ಯವಾಸಿನಿಯಾಗಿ ಅವತರಿಸಿದ್ದು ಇವುಗಳು ಅಲ್ಲಿ ಬರುವ ವಿಷಯಗಳು...... ಕಾಲಿಕಾ ಪುರಾಣ ಕಾಳಿಕಾದೇವಿಯ ವಿಜಯಗಳನ್ನೂ

ಪೂಜಾವಿಧಿಯನ್ನೂ ಪ್ರತಿಪಾದಿಸುತ್ತದೆ, ಮೂಲತಃ ಕಾಳಿಯೇ ಯೋಗನಿದ್ರಾ ಹಾಗೂ ವಿಷ್ಣುಮಾಯಾ ಸ್ವರೂಪಿಣಿ; ಆಮೇಲೆ ಆಕೆ ದಕ್ಷಕನ್ಯೆಯಾದ 'ಸತಿ'ಯೆನಿಸಿ ಶಿವನ ಪತ್ನಿಯಾಗುತ್ತಾಳೆ, ಹಿಮವಂತನ ಪುತ್ರಿಯಾಗಿ ಅವತರಿಸಿ ಕಾಳೀ ಅಥವಾ ಕಾಳಿಕಾದೇವಿಯೆನಿಸಿಯೂ ಶಿವನ ಪತ್ನಿಯೇ ಆಗುತ್ತಾಳೆ. ಈ ವಿಷಯಗಳನ್ನು ನಿರೂಪಿಸುವ ಸಂದರ್ಭದಲ್ಲಿ ಅನೇಕ ಆಕರ್ಷಕ ಕಥೆಗಳನ್ನು ಅದು ಕೊಡುತ್ತದೆ."[42]

"ವೇದ ಹಾಗೂ ಉಪನಿಷತ್ತುಗಳ ಆಧ್ಯಾತ್ಮಿಕ ಹಾಗೂ ನೈತಿಕ ತತ್ತ್ವಗಳನ್ನು ಸರಳ ಸಂವಾದಗಳ ರೂಪದಲ್ಲೂ, ಕಥೆ ವಿವರಣೆಗಳ ರೂಪದಲ್ಲೂ ನಮ್ಮ ಮುಂದಿಡುವ ಭಾರತೀಯ ಪುರಾಣಗಳಲ್ಲೂ ಪ್ರಖ್ಯಾತರಾದ ಅನೇಕ ಪುರುಷರೂ ಸ್ತ್ರೀಯರೂ ಇದ್ದಾರೆ. ಋತಧ್ವಜನ ಪತ್ನಿಯಾದ ಮದಾಲಸಾ ಪುರಾಣದ ಸ್ತ್ರೀಯರಲ್ಲಿ ಅತ್ಯಂತ ಪ್ರಸಿದ್ಧಳಾದವಳು. ಈಕೆ ಪರಮ ಪಂಡಿತಳೂ, ತಪಸ್ವಿನಿಯೂ, ಕರ್ತವ್ಯಪರಾಯಣಳಾದ ಗೃಹಿಣಿಯೂ, ವಿಧೇಯಳಾದ ಪತ್ನಿಯೂ, ಮಾತೆಯೂ ಆಗಿದ್ದಳು. ಭಾರತೀಯ ವೇದಾಂತದಲ್ಲಿ ಸಾಂಖ್ಯ ಪದ್ಧತಿಯ ಸ್ಥಾಪಕನೂ ಮಹಾಮುನಿವರ್ಯನೂ ಆದ ಕಪಿಲನ ಮಾತೆಯೂ, ಶ್ರೇಷ್ಠ ಮುನಿ ಹಾಗೂ ಪ್ರಜಾಪತಿ ಕರ್ದಮನ ಪತ್ನಿಯೂ, ತಪಸ್ವಿನಿಯೂ ಆದ ಇನ್ನೊಬ್ಬ ಪೌರಾಣಿಕ ಮಹಿಳೆ ದೇವಹೂತಿ. ಕೌಟುಂಬಿಕ ಜೀವನದಲ್ಲೇ ಗೃಹಿಣಿಯಾಗಿ ಬಾಳಿದರೂ ಆಕೆ ಅಸಾಧಾರಣ ಆಧ್ಯಾತ್ಮಿಕ ಸಿದ್ಧಿ ಪಡೆದಿದ್ದಳು ಎನ್ನುವುದು ಆಕೆ ಪತಿಯೊಡನೆಯೂ, ಮಗನೊಡನೆಯೂ ನಡೆಸಿದ ಪಾಂಡಿತ್ಯಪೂರ್ಣ ಚರ್ಚೆಗಳಿಂದ ವ್ಯಕ್ತವಾಗುತ್ತದೆ. ತಮ್ಮ ಜೀವನವನ್ನೇ ತಮ್ಮ ಪತಿಗಾಗಿ ಮೀಸಲಿರಿಸಿದ ಸ್ತ್ರೀಯರಲ್ಲಿ ಭಾರತೀಯ ಸ್ತ್ರೀತ್ವದ ಅಮರ ಸಂಕೇತಗಳೆನಿಸಿದ ಸತೀ ಹಾಗೂ ಉಮಾ ಇವರು ಅತ್ಯಂತ ಜಾಜ್ವಲ್ಯಮಾನವಾದ ನಿದರ್ಶನಗಳಾಗಿದ್ದಾರೆ."[43]

**ಇತಿಹಾಸಗಳು**

ರಾಮಾಯಣ ಕಾಲದಲ್ಲಿ ಪುಣ್ಯ ಗಳಿಸಲು ಅಥವಾ ಆತ್ಮವಿಕಾಸ ಮಾಡಿಕೊಳ್ಳಲು ಪತಿಯು ಮಾಡುತ್ತಿದ್ದ ಎಲ್ಲ ಕರ್ಮಾನುಷ್ಠಾನಗಳಲ್ಲೂ ಹೆಂಡತಿಗೆ ಸಮಾನವಾದ ಪಾಲುಗಾರಿಕೆ ಇತ್ತು. ಅವಳು ಪುರುಷನೊಡನೆ ದೀಕ್ಷಾಬದ್ಧಳಾಗಿ ಕುಳಿತುಕೊಂಡರೆ ಮಾತ್ರವೇ ಆ ಸತ್ಕಾರ್ಯವು ಸಂಪನ್ನಗೊಳ್ಳುವಂತಿತ್ತು. ಈ ಅರ್ಥದಲ್ಲಿ ಹೆಣ್ಣು ಅಂದು ಗಂಡಿಗೆ ಸಮಾನಸ್ಕಂದಳಾಗಿದ್ದಳು.[44]

ಮಹಾಭಾರತದ ಸಮಾಜದಲ್ಲಿ ಸ್ತ್ರೀಯರಿಗೊಂದು ಗೌರವಪೂರ್ಣವಾದ ಸ್ಥಾನವಿತ್ತು. ಅವರಿಗಿದ್ದ ಸ್ವಾತಂತ್ರ್ಯವೂ ಕಡಿಮೆ ಮಟ್ಟದ್ದೇನೂ ಆಗಿರಲಿಲ್ಲ. ಆ ಯುಗದ ಕೆಲವು ಸ್ತ್ರೀದ್ವೇಷಿಗಳು ಕನ್ಯೆಯರೆಂದರೆ ಅವರೊಂದು ಹಿಂಸೆ, ನಾರಿಯರೆಂದರೆ ಅವರು ಎಲ್ಲ ಕೆಡುಕಿನ ಮೂಲ ಎಂದು ಹೇಳುತ್ತಿದ್ದರೂ ಅದಕ್ಕೆ ಹೆಚ್ಚಿನ ಪುರಸ್ಕಾರ ದೊರೆತಂತೆ ತೋರುವುದಿಲ್ಲ. ಉತ್ತಮ ವಿಚಾರಶೀಲರು ನಾರಿಯರ ಬಗ್ಗೆ ವಿಶೇಷ ಗೌರವವನ್ನು ಪ್ರಕಟಿಸುತ್ತಿದ್ದರು. ಸ್ತ್ರೀಯರು, ರತ್ನಗಳು ಮತ್ತು ನೀರು ಈ ಮೂರು ವಸ್ತುಗಳು ಎಂದೂ ಅಶುದ್ಧವಾಗುವುದಿಲ್ಲ, ಸ್ತ್ರೀಯರನ್ನು ವಧಿಸಲಾಗದು ಎಂಬ ಮಾತುಗಳು ಆಗ ವಿಶೇಷ ಪ್ರಚಾರದಲ್ಲಿದ್ದವು. ಮಹಾಭಾರತದಲ್ಲಿ ಬರುವ ಸಾವಿತ್ರಿ, ಶಕುಂತಲೆ, ತಪದಿ, ದಮಯಂತಿ ಮೊದಲಾದ ಪಾತ್ರಗಳಲ್ಲಿ ಸ್ತ್ರೀಸಂಬಂಧವಾದ ಉದಾತ್ತ ಭಾವನೆಗಳು ಬಿಂಬಿತವಾಗಿವೆ. ಅವರಿಗಿಂತ ಕೋಮಲವೂ, ಸೂಕ್ಷ್ಮವೂ ಆದ ಸ್ತ್ರೀಯರ ಮಾದರಿಗಳನ್ನು ಕಾಣುವುದು ಸಾಧ್ಯವಿಲ್ಲ. ಮಹಾಭಾರತದ ನಾಯಿಕೆಯರು ತಮ್ಮ ತಂದೆಯವರ ಮನೆಗಳಲ್ಲಿ ಸೂಕ್ತವಾದ ವಿದ್ಯಾಭ್ಯಾಸವನ್ನು ಪಡೆಯುತ್ತಿದ್ದರು. ಅವರಲ್ಲಿ ಕೆಲವರು ಉನ್ನತ ಶಿಕ್ಷಣವನ್ನು ಗಳಿಸಿಕೊಂಡು ಚತುರರಾದ ವಾದಿನಿಯರಾಗಿ ಬೆಳೆದರು.[45] ದ್ರೌಪದಿಯಾದರೋ ಸ್ತ್ರೀತ್ವದ ಔನ್ನತ್ಯದ

ಗೌರವದ ಚಿತ್ರಣವನ್ನೇ ಕಟ್ಟಿಕೊಟ್ಟಿದ್ದಾಳೆ. ಅವಳನ್ನು ಪಂಡಿತೆಯೆಂದೇ ಕರೆಯಲಾಗಿದೆ. ಅವಳು ಯಾವುದೇ ಸಂಕೋಚ, ಭಯಗಳಿಲ್ಲದೆ ತನ್ನ ಗಂಡನೊಡನೆ ರಾಜಕೀಯವೂ ಸೇರಿದಂತೆ ಎಲ್ಲ ವಿಷಯಗಳಲ್ಲಿಯೂ ವಾದಿಸಬಲ್ಲವಳಾಗಿದ್ದಳು. ಎಂತಹ ಕಠಿಣ ಸಂದರ್ಭದಲ್ಲಿಯೂ ಎದೆಗುಂದದೆ ಚೈತನ್ಯದಾಯಕವಾಗಿ ಅವಳು ನಡೆದುಕೊಂಡ ರೀತಿ, ಸಂಸಾರವನ್ನು ಹೆಣ್ಣು ಎಷ್ಟು ಉತ್ತಮವಾಗಿ ನಿಭಾಯಿಸಲು ಸಾಧ್ಯ ಎಂಬುದನ್ನು ತೋರಿಸುತ್ತದೆ.[46] ಮನೆವಾರ್ತೆಯಲ್ಲಿ ಮಡದಿಯ ಸ್ಥಾನ ಏನೆಂಬುದನ್ನು ಮಹಾಭಾರತದ ಶಕುಂತಲೋಪಾಖ್ಯಾನದ ಕೆಳಗಿನ ಪಂಕ್ತಿಗಳಲ್ಲಿ ಅತ್ಯಂತ ಉಜ್ವಲವಾಗಿ ವರ್ಣಿಸಲಾಗಿದೆ:

> ನಾರಿ ಪುರುಷನ ಅರ್ಧವಹುದು ಮೌಲ್ಯದವಳು
> ಮೀರುವಳು ಉಳಿದೆಲ್ಲ ಬಂಧು ಮಿತ್ರರುಗಳನು,
> ನೀಡುವಳು ಸರ್ವಲೌಕಿಕ ವರಗಳನು ಅವಳು,
> ಅವಳಿಂದಲೇ ಉಂಟು ಉದ್ಧಾರವೂ ಕೂಡ,
> ಶೂನ್ಯವಹ ಮನೆಗಳಲಿ, ನಾರಿಯರು ಹೊಳೆಹೊಳೆವ
> ಮನಸೆಳೆವ ಸಂಗಾತಿಯಾಗಿ ನಲಿವೀಯುವರು;
> ಹಿರಿಯರಂತೆ ವಿವೇಕಗೂಡಿ, ಕರ್ತವ್ಯದಲಿ
> ಗೆದ್ದು, ಧರ್ಮದೊಳವರು ಮಾರ್ಗದರ್ಶಿಗಳಿಹರು.[47]

**ಬೌದ್ಧ ಮತ್ತು ಜೈನಯುಗದ ಸ್ತ್ರೀಯರು**

ಸ್ತ್ರೀಯರ ವಿಚಾರವಾಗಿ ಬುದ್ಧನ ವಿಚಾರಧಾರೆ ಅತ್ಯಂತ ಮರ್ಮಸ್ಪರ್ಶಿಯಾಗಿದೆ. ವೈದಿಕ ಧರ್ಮದಲ್ಲಿ ಬಂಜೆಯರನ್ನಾಗಲಿ, ವಿಧವೆಯರನ್ನಾಗಲಿ ಅಮಂಗಳಕಾರಿಗಳೆಂದು ಪರಿಗಣಿಸುತ್ತಿದ್ದ ಭಾವವನ್ನು ಬುದ್ಧದೇವನು ಸಂಪೂರ್ಣವಾಗಿ ತಿರಸ್ಕರಿಸಿದನು. ಪರಮ ಸಿದ್ಧಾಂತವೆಂಬುದು ಸ್ತ್ರೀ-ಪುರುಷ ಭೇದವಿಲ್ಲದೆ ಸಮಾನವಾಗಿ ವರ್ತಿಸುತ್ತದೆ. ಅದರಿಂದಾಗಿ ಮೋಕ್ಷಸಾಧನೆಯಲ್ಲಿ ಸ್ತ್ರೀ ಮತ್ತು ಪುರುಷ ಎಂಬ ಭೇದಕ್ಕೆ ಅವಕಾಶವೇ ಇಲ್ಲ. ತನ್ನ ಮೋಕ್ಷ ಸಾಧನೆಗೆ ಸ್ತ್ರೀಯಾದವಳು ತನ್ನ ನಡತೆಯನ್ನೇ ಅವಲಂಬಿಸಬೇಕು ಎಂದು ಬುದ್ಧನು ಒತ್ತಿ ಹೇಳಿದನು. ಉಪನಿಷತ್ತಿನ ಯುಗದಲ್ಲಿ ಬ್ರಹ್ಮವಾದಿನಿಯರು ಇದ್ದಂತೆ ಬೌದ್ಧ ಪಂಥದಲ್ಲಿ ಥೇರಿಗಳು ಇದ್ದರು. ಥೇರಿ ಎಂದರೆ ಜ್ಞಾನವಿಕಾಸದಿಂದ ದೊಡ್ಡವರಾದವರು ಎಂದರ್ಥ. ಥೇರಿಯರು ಹಾಡಿದ ಗೀತೆ ಅವರ ಜೀವನಾನುಭವದ ಸಾರಸರ್ವಸ್ವವಾಗಿ 'ಥೇರಿಗಾಥಾ' ಎಂದೇ ಕರೆಯಲ್ಪಟ್ಟಿದೆ. 'ಥೇರಿಗಾಥಾ'ವು ಅಂದಿನ ಯುಗದ ಸ್ತ್ರೀಯರ ವೈಚಾರಿಕ ಔನ್ನತ್ಯವನ್ನು ಬಿಂಬಿಸುವ ಹಾಡಾಗಿದೆ. ಆ ಥೇರಿ ಪಂಥವು ರಾಜರಿಂದ ಹಿಡಿದು ಜನಸಾಮಾನ್ಯರವರೆಗೆ, ವೇಶ್ಯೆಯರಿಂದ ತೊಡಗಿ ಅಸ್ಪೃಶ್ಯರ ವರೆಗೆ ಎಲ್ಲ ಸ್ತರದ ಎಲ್ಲ ವರ್ಗದ ಜನರನ್ನು ಪ್ರತಿನಿಧಿಸುವ ಸಂಘವಾಗಿತ್ತು. ಮೊದಮೊದಲು ಬುದ್ಧನು ಸ್ತ್ರೀಯರನ್ನು ತನ್ನ ಪಂಥಕ್ಕೆ ಸೇರಿಸಿಕೊಳ್ಳದೆ ದೂರದಲ್ಲಿಯೇ ಇರಿಸಿದ್ದನು. ಆದರೆ ತರುವಾಯದ ಕಾಲದಲ್ಲಿ ಅವರಲ್ಲಿ ಮೂಡಿಬಂದ ಬೌದ್ಧಿಕ ಚಿಂತನೆಯನ್ನು ಗೌರವಿಸಿ ತನ್ನ ಪಂಥಕ್ಕೆ ಸೇರಿಸಿಕೊಂಡನು.[48]

ಜೈನ ಗ್ರಂಥಗಳಲ್ಲಿ ಕೌಶಾಂಬಿಯ ರಾಜಪುತ್ರಿಯಾದ ಜಯಂತಿ ಎಂಬುವಳ ಉಲ್ಲೇಖವಿದೆ. ಜೈನಧರ್ಮ ಮತ್ತು ತತ್ವಗಳಿಗಾಗಿ ತನ್ನನ್ನು ಸಮರ್ಪಿಸಿಕೊಂಡ ಅವಳು ಅವಿವಾಹಿತೆಯಾಗಿಯೇ ಉಳಿದಳು. ವರ್ಧಮಾನ ಮಹಾವೀರನೊಂದಿಗೆ ಅವಳು ತತ್ತ್ವಜ್ಞಾನದ ಅತ್ಯಂತ ಸೂಕ್ಷ್ಮವಾದ ವಿಚಾರಗಳನ್ನು ಚರ್ಚಿಸಿದಳು. ಅಂತ್ಯದಲ್ಲಿ ಕಂತಿ ದೀಕ್ಷೆಯನ್ನು ಸ್ವೀಕರಿಸಿದಳು.[49]

ಜೈನಧರ್ಮದಲ್ಲಿ ವ್ರತ, ಉಪವಾಸ, ನೇಮ, ನಿಷ್ಠೆ, ಪೂಜೆ, ದಾನ ಮುಂತಾದ ಎಲ್ಲ

ಸತ್ಕಾರ್ಯದಲ್ಲೂ ಸ್ತ್ರೀಯರದೇ ಪ್ರಧಾನ ಪಾತ್ರ. ಸತಿಪದ್ಧತಿಯನ್ನಾಗಲಿ ಬಾಲ್ಯವಿವಾಹ ಪದ್ಧತಿಯನ್ನಾಗಲಿ ಜೈನಧರ್ಮವು ಪುರಸ್ಕರಿಸಲಿಲ್ಲ. ಧರ್ಮ ಸಂರಕ್ಷಣೆಯಲ್ಲಿ ಪುರುಷರಿಗಿಂತ ಸ್ತ್ರೀಯರೇ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದರೆಂಬುದು ಎಲ್ಲ ಹಂತಗಳಲ್ಲೂ ನಿಚ್ಚಳವಾಗಿ ಗೋಚರಿಸುತ್ತದೆ. ಸಮವಸರಣವೆಂಬ ತೀರ್ಥಂಕರರ ಜೈನ ಸಭೆಯಲ್ಲಿ ಪ್ರಾಣಿ ಪಕ್ಷಿಗಳೆನ್ನದೆ, ಮನುಷ್ಯ ದೇವತೆಗಳೆನ್ನದೆ ತತ್ವಾಮೃತದ ಪಾನಕ್ಕಾಗಿ ಸಮಸ್ತರೂ ಸಂಗಮಿಸುತ್ತಿದ್ದರು. ಅಂತಹ ಧರ್ಮಸಭೆಯಲ್ಲಿ ಪುರುಷರ ಸಂಖ್ಯೆಗಿಂತ ಸ್ತ್ರೀಯರ ಸಂಖ್ಯೆಯೆ ತಪ್ಪದೆ ದೊಡ್ಡದಾಗಿರುತ್ತಿದ್ದುದು ಅವರಿಗಿದ್ದ ಪ್ರಮುಖ ಸ್ಥಾನವನ್ನು ಪ್ರತಿಬಿಂಬಿಸುತ್ತದೆ. ಆದರೆ ದಿಗಂಬರ ಜೈನಪಂಥವು ಸ್ತ್ರೀಜನ್ಮದಲ್ಲಿ ಮೋಕ್ಷಸಾಧನೆ ಸಾಧ್ಯವಿಲ್ಲ, ಏನಿದ್ದರೂ ಉತ್ತಮ ಸಂಸ್ಕಾರಗಳನ್ನು ಪಡೆದುಕೊಳ್ಳಬಹುದು, ಪುರುಷಜನ್ಮದಲ್ಲಿ ಮಾತ್ರವೇ ಮೋಕ್ಷ ಸಾಧನೆ ಸಾಧ್ಯ ಎಂದು ಹೇಳಿದ್ದು ಸ್ತ್ರೀಯರ ವಿಷಯದಲ್ಲಿ ದೊಡ್ಡದೊಂದು ಹಿನ್ನಡೆಯೇ ಆಯಿತೆನ್ನಬೇಕು.

## ಮಧ್ಯಕಾಲೀನ ಭಾರತದ ಸ್ತ್ರೀಯ ಸ್ಥಿತಿಗತಿಗಳು

### ಸತಿ ಪದ್ಧತಿ

ಮಧ್ಯಯುಗದಲ್ಲಿ ಸತಿ ಪದ್ಧತಿಗೆ ಸಂಬಂಧಿಸಿದಂತೆ ಪರ ಮತ್ತು ವಿರೋಧವಾದ ಎರಡೂ ಅಭಿಪ್ರಾಯಗಳಿದ್ದವು. ಕ್ರಿ.ಶ.೫ನೇ ಶತಮಾನದಿಂದ ೯ನೇ ಶತಮಾನದ ಅವಧಿಯನ್ನು ಸ್ತ್ರೀಯರಿಗೆ ಸಂಬಂಧಿಸಿದಂತೆ ಸ್ಥಿತ್ಯಂತರ ಕಾಲವೆಂದು ಹೇಳಬಹುದು. ಸತಿಪದ್ಧತಿಯು ಮೊದಲು ಅನುಮರಣ ಎಂದು ಕರೆಯಲ್ಪಡುತ್ತಿತ್ತು. ಆ ಅನುಮರಣದಲ್ಲಿ ಸತ್ತವನ ಮಡದಿ ಮಾತ್ರವಲ್ಲದೆ ಅವನ ಮಗ, ಮಗಳು, ಸಹೋದರ, ಸಹೋದರಿ, ಗೆಳೆಯರು ಗೆಳತಿಯರು - ಹೀಗೆ ಯಾರು ಬೇಕಾದರೂ ಬೆಂಕಿಗೆ ಆಹುತಿಯಾಗಬಹುದಾಗಿತ್ತು. ೯ನೇ ಶತಮಾನದಲ್ಲಿ ಮೇಧಾತಿಥಿಯು ಸತಿ ಪದ್ಧತಿಯನ್ನು ಆತ್ಮಹತ್ಯೆ ಎಂದು ಕರೆದಿದ್ದಾನೆ. ಇದಕ್ಕೂ ಮುನ್ನವೆ ೭ನೇ ಶತಮಾನದಲ್ಲಿ ಆಳುತ್ತಿದ್ದ ಹರ್ಷವರ್ಧನನ ಆಸ್ಥಾನಕವಿಯಾದ ಬಾಣಭಟ್ಟನ ಕಾದಂಬರಿ ಎಂಬ ಗದ್ಯ ಗ್ರಂಥದಲ್ಲಿ ಅನುಮರಣವನ್ನು ಕುರಿತು ಮಂಡಿಸಲಾಗಿರುವ ಅಭಿಪ್ರಾಯಗಳು ಅತ್ಯಂತ ಕ್ರಾಂತಿಕಾರಿಗಳಾಗಿವೆ. "ಅನುಮರಣ ಎನ್ನುವ ರೂಢಿ ಪೂರ್ಣವಾಗಿ ಅಪ್ರಯೋಜಕವಾದುದು. ಅವಿದ್ಯಾವಂತರು ಇದನ್ನು ಅನುಸರಿಸುತ್ತಾರೆ. ಇದು ಮರುಳುತನದ ವಿಪರೀತ ವರ್ತನೆ. ಇದು ಅಜ್ಞಾನದ ನಡವಳಿಕೆ, ಇದು ಅವಿವೇಕವಾದದ್ದು, ಇದು ಅವಿಚಾರವಾದುದು. ಪೋಷಕ, ಸಹೋದರ, ಸ್ನೇಹಿತ ಅಥವಾ ಗಂಡ ಸತ್ತಾಗ ಪ್ರಾಣ ತೆಗೆದುಕೊಳ್ಳುವ ಈ ರೀತಿಯು ಮೂರ್ಖತನದಿಂದ ಮುಗ್ಗರಿಸುವ ರೀತಿಯಾಗಿದೆ. ಈ ವಿಷಯವನ್ನು ಸೂಕ್ತವಾಗಿ ಗಮನಿಸಿದಾಗ, ಈ ಬಗೆಯ ಪ್ರಾಣಹತ್ಯೆಯು ದುಃಖದ ನೋವನ್ನು ತಡೆಯಲಾಗದದಾಗ ತನ್ನ ಜೀವನವನ್ನೇ ಕೊನೆಗಾಣಿಸಿಕೊಳ್ಳುವ ಸ್ವಾರ್ಥದ ಉದ್ದೇಶವನ್ನು ಹೊಂದಿದೆ ಎಂದು ಹೇಳಬಹುದು. ಏನೇ ಆದರೂ ಸಹ ಇದು ಸತ್ತವನಿಗಂತೂ ಒಳಿತನ್ನು ಮಾಡುವುದಿಲ್ಲ. ಖಚಿತವಾಗಿಯೂ ಈ ಕ್ರಿಯೆ ಸತ್ತವನನ್ನು ಪುನರುಜ್ಜೀವಗೊಳಿಸುವುದಿಲ್ಲ. ಯಾವುದೇ ಧಾರ್ಮಿಕ ಮೌಲ್ಯವನ್ನು ವರ್ಧಿಸುವುದಿಲ್ಲ ಅಥವಾ ಇದು ಪ್ರಪಂಚದ ಪರಮ ಸುಖವನ್ನು ಹೊಂದುವ ಮಾರ್ಗವೂ ಅಲ್ಲ. ಅಲ್ಲದೆ ನರಕಕ್ಕೆ ಬೀಳುವುದನ್ನು ತಡೆಯುವುದೂ ಇಲ್ಲ. ಸತ್ತವನನ್ನು ಭೇಟಿಯಾಗುವ ಮಾರ್ಗವೂ ಅಲ್ಲ. ಅಲ್ಲದೆ ಇದು ಒಬ್ಬರಿಗೊಬ್ಬರು ಮರುಸಂಧಿಸುವುದಕ್ಕೆ ಮಾರ್ಗದರ್ಶಕವಾದ ಹಾದಿಯೂ ಅಲ್ಲ."[50]

ಮೊಘಲ್ ಸಾಮ್ರಾಜ್ಯದ ಸ್ಥಾಪನೆಯ ಕಾಲದಲ್ಲಿ ಹಿಂದೂ ಸಮುದಾಯದಲ್ಲಿ, ಅದರಲ್ಲೂ ಉನ್ನತವರ್ಗಗಳಲ್ಲಿ ಸತಿಪದ್ಧತಿಯು ಹೆಚ್ಚು ಪ್ರಚಾರದಲ್ಲಿತ್ತು. ರಜಪೂತ ಸಮುದಾಯದಲ್ಲಿ ಇನ್ನೂ

ಹೆಚ್ಚಿನ ವ್ಯಾಪ್ತಿಯನ್ನು ಅದು ಪಡೆದುಕೊಂಡಿತ್ತು. ದಕ್ಷಿಣ ಭಾರತದಲ್ಲಾದರೂ ಸತಿಯ ಆಚರಣೆ ಉತ್ತರ ಭಾರತಕ್ಕಿಂತ ಸಾಕಷ್ಟು ಕಡಿಮೆ ಪ್ರಮಾಣದಲ್ಲಿತ್ತು. ವಿಧವೆಯರೆಲ್ಲರೂ ಅದನ್ನು ಆಚರಿಸಬೇಕೆಂಬ ಕಡ್ಡಾಯವೇನೂ ಇರಲಿಲ್ಲ. ಆದರೆ ವಿಜಯನಗರ ಸಾಮ್ರಾಜ್ಯದ ಉನ್ನತಿಯ ಕಾಲದಲ್ಲಿ ಈ ಪದ್ಧತಿಯು ಜನಾದರಣೆಯನ್ನು ಪಡೆದುಕೊಂಡುದು ಸೋಜಿಗವೇ ಸರಿ. ಈ ಕ್ರೂರ ಪದ್ಧತಿಯನ್ನು ತೊಡೆದುಹಾಕಲು ಆ ಸಾಮ್ರಾಜ್ಯದ ದೊರೆಗಳು ಯಾವುದೇ ನಿಯಮ ನಿಬಂಧನೆಗಳನ್ನು ಮಾಡಿದಂತೆ ತೋರುವುದಿಲ್ಲ. ಈ ಅಮಾನುಷ ಪದ್ಧತಿಯನ್ನು ತೊಡೆದುಹಾಕಲು ಪ್ರಯತ್ನಿಸಿದವರಲ್ಲಿ ಇತಿಹಾಸದಲ್ಲಿ ಐಲುದೊರೆ ಎಂದು ಕೀರ್ತಿತನಾದ ಮಹಮದ್ ಬಿನ್ ತುಘಲಕ್‌ನೇ ಪ್ರಥಮ ವ್ಯಕ್ತಿ ಎಂಬುದು ಅತ್ಯಂತ ಆಶ್ಚರ್ಯವನ್ನುಂಟು ಮಾಡುತ್ತದೆ. ಯಾರಾದರೂ ವಿಧವೆಯರು ಸಹಗಮನ ಮಾಡಬಯಸಿದರೆ ಅದಕ್ಕಾಗಿ ಪೂರ್ವಾನುಮತಿ ಪಡೆದುಕೊಳ್ಳಬೇಕು ಎಂದು ಅವನು ಆಜ್ಞೆ ಮಾಡಿದ್ದನು. ಅಕ್ಬರನು ಸತಿ ಪದ್ಧತಿಯನ್ನು ನಿಷೇಧಿಸಲು ಕಠಿಣ ಕ್ರಮಗಳನ್ನು ಕೈಗೊಳ್ಳದಿದ್ದರೂ ತಮ್ಮ ಇಚ್ಛೆಗೆ ವಿರುದ್ಧವಾಗಿ ವಿಧವೆಯರನ್ನು ಬೆಂಕಿಗೆ ತಳ್ಳದಂತೆ ನೋಡಿಕೊಳ್ಳುತ್ತಿದ್ದನು. ಅದಕ್ಕೆ ಸಂಬಂಧಿಸಿದಂತೆ ಕೊತ್ವಾಲರಿಗೆ ಸೂಕ್ತವಾದ ಸೂಚನೆಗಳನ್ನು ನೀಡಿದ್ದನು. ಅಕ್ಬರನು ನೂತನವಾಗಿ ಪ್ರವರ್ತಿಸಿದ 'ದೀನ್-ಎ-ಇಲಾಹಿ' ಧರ್ಮವೂ ಕೂಡ ಸತಿಪದ್ಧತಿಯನ್ನು ಕಂಠೋಕ್ತವಾಗಿಯೇ ಖಂಡಿಸಿದೆ. ಅಕ್ಬರನಿಗಿಂತ ಹೆಚ್ಚಾಗಿ ಔರಂಗಜೇಬನು ಸತಿ ಪದ್ಧತಿಯನ್ನು ತೊಡೆದು ಹಾಕಲು ಯತ್ನಿಸಿದನೆಂದು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಜನಸ್ತೋಮದ ಮೇಲೆ ಅವನ ಆಜ್ಞೆಯಾವುದೇ ಪರಿಣಾಮವನ್ನು ಬೀರಲಿಲ್ಲವಂತೆ. ಈ ಪದ್ಧತಿಯು ಸಂಪೂರ್ಣವಾಗಿ ನಾಶವಾಗಲು ನಾವು ಬಂಗಾಳದ ಸಮಾಜಸುಧಾರಕನಾದ ರಾಜಾ ರಾಮಮೋಹನ ರಾಯನ ಕಾಲದವರೆಗೂ ಕಾಯಬೇಕಾಯಿತು.[51]

**ಕೇಶಮುಂಡನ**

ಕೇಶಮುಂಡನವೆಂಬ ವಿಲಕ್ಷಣ ಪದ್ಧತಿಯೊಂದು ವಿಧವೆಯರ ವಿಷಯದಲ್ಲಿ ೧೧ನೇ ಶತಮಾನದಿಂದೀಚೆಗೆ ಬಳಕೆಗೆ ಬಂದಿದೆಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಬಾಣನ ಹರ್ಷಚರಿತೆಯಲ್ಲಿ ವಿಧವೆಯರು ತಮ್ಮ ಕೂದಲನ್ನು ಗಂಟುಹಾಕಿಕೊಳ್ಳುತ್ತಿದ್ದರೆಂಬ ವಿಚಾರ ವರ್ಣಿತವಾಗಿದೆ. ಅಂತೆಯೆ ಪಶ್ಚಿಮ ಪಂಜಾಬಿನ ಕರ್ನಲ್ ಜಿಲ್ಲೆಯ ಜಿಹೋವಾ ಎಂಬಲ್ಲಿ ದೊರೆತ ೧೦ನೇ ಶತಮಾನದ ಶಾಸನವೊಂದರಲ್ಲಿ ನೀಳವೂ ಅಲೆಅಲೆಯೂ ಆದ ಕೇಶರಾಶಿಯಿಂದ ಕಂಗೊಳಿಸುವ ವಿಧವೆಯರ ವಿಚಾರವಿದೆ. ಈ ಹಿನ್ನೆಲೆಯಲ್ಲಿ ವಿಧವೆಯರ ಕೇಶಮುಂಡನ ೧೦ ನೇ ಶತಮಾನದ ತರುವಾಯದ ಕ್ರೂರ ಆಚರಣೆಗಳಲ್ಲೊಂದೆಂದು ತಿಳಿಯಬಹುದಾಗಿದೆ.[52]

**ಬಾಲ್ಯವಿವಾಹ ಮತ್ತು ಬಹುಪತ್ನಿತ್ವ**

ಸತಿಪದ್ಧತಿಯನ್ನು ವಿರೋಧಿಸಿದ್ದಂತೆಯೆ ಅಕ್ಬರ್ ಮಹಾಶಯನು ಬಾಲ್ಯವಿವಾಹವನ್ನೂ ವಿರೋಧಿಸಿದನು. ಪ್ರಬುದ್ಧನೂ ಸೂಕ್ಷ್ಮಗ್ರಾಹಿಯೂ ಆದ ಆ ಮಹಾಶಯನು ಹದಿನಾರು ವಯಸ್ಸು ತುಂಬದ ಬಾಲಕರಿಗಾಗಲಿ, ಹದಿನಾಲ್ಕು ವರ್ಷ ತುಂಬದ ಬಾಲಿಕೆಯರಿಗಾಗಲಿ ವಿವಾಹವು ಸಲ್ಲದೆಂದು ಆಜ್ಞೆ ಹೊರಡಿಸಿದನು. ಬಾಲ್ಯವಿವಾಹದಿಂದ ಜನಿಸುವ ಸಂತಾನವು ದುರ್ಬಲವಾಗಿರುತ್ತದೆಂಬುದು ಅವನ ಅಭಿಪ್ರಾಯವಾಗಿತ್ತು. ವಿವಾಹ ಕಾಲದಲ್ಲಿ ವಧೂವರರ ತಂದೆತಾಯಿಗಳ ಅನುಮತಿ ಮಾತ್ರವಲ್ಲದೆ ವಧೂವರರೂ ಅದಕ್ಕೆ ಒಪ್ಪಿರಬೇಕು ಎಂದು ಅವನು ಸೂಚಿಸಿದ್ದನು. ವಿವಾಹಕ್ಕೆ ಮುನ್ನ ಕೊತ್ವಾಲನಿಂದ ಪೂರ್ವಾನುಮತಿಯನ್ನು ಪಡೆದುಕೊಳ್ಳಬೇಕಾಗಿತ್ತು. ಆ ಹೊತ್ತಿನಲ್ಲಿ ಕೊತ್ವಾಲನು ವಧುವರರ ವಯಸ್ಸನ್ನು

ದಾಖಲಿಸಿ ಇಡುತ್ತಿದ್ದನು. ಬಾಲ್ಯವಿವಾಹದಂತೆಯೆ ಬಹುಪತ್ನಿತ್ವವನ್ನು ಅಕ್ಬರನು ವಿರೋಧಿಸಿದನು. ಆ ಪದ್ಧತಿಯು ಮನುಷ್ಯನ ಆರೋಗ್ಯಕ್ಕೆ ಮಾರಕವೆಂದು ಕುಟುಂಬದ ಸುಖ-ಸಂತೋಷಕ್ಕೆ ಪ್ರತಿಕೂಲವೆಂದು ಅವನು ಪರಿಗಣಿಸಿದನು. ಮೊದಲನೆಯ ಹೆಂಡತಿಯು ಬಂಜೆಯೆಂದು ಸ್ಥಿರಪಟ್ಟಾಗ ಮಾತ್ರವೇ ದ್ವಿತೀಯ ವಿವಾಹವನ್ನು ಯೋಚಿಸಬಹುದೆಂದು ಅವನು ಆಜ್ಞೆ ಮಾಡಿದನು. ಅಕ್ಬರನ ಕಾಲಕ್ಕೆ ಮುಸಲ್ಮಾನರಲ್ಲಿ ತರುಣರು ವೃದ್ಧ ಸ್ತ್ರೀಯನ್ನು ಮದುವೆಯಾಗುವ ಕೆಟ್ಟ ಪದ್ಧತಿಯೊಂದು ರೂಢಿಯಲ್ಲಿತ್ತು. ವಯಸ್ಸಾದ ಹೆಂಗಸಿನ ಐಶ್ವರ್ಯದಿಂದ ಆಕೃಷ್ಟನಾಗಿ ವಯೋಭೇದವನ್ನು ಪರಿಗಣನೆಗೆ ತಂದುಕೊಳ್ಳದೆ ತರುಣನು ಅವಳ ಕೈ ಹಿಡಿಯುತ್ತಿದ್ದನು. ಅಕ್ಬರನು ಇಂತಹ ವಿವಾಹವು ಶಾಸನ ವಿರುದ್ಧವೆಂದು ಆಜ್ಞೆ ಹೊರಡಿಸಿದನು. ಗಂಡು-ಹೆಣ್ಣುಗಳ ನಡುವೆ ಇರಬೇಕಾದ ವಯಸ್ಸಿನ ಅಂತರ ಹನ್ನೆರಡು ವರ್ಷಗಳಷ್ಟು ಮಾತ್ರವೇ ಇರಬೇಕು. ಅದಕ್ಕೆ ಮೇಲ್ಪಟ್ಟಿದ್ದರೆ ಆ ವಿವಾಹವು ಶಾಸನಸಮ್ಮತವಾಗುವುದಿಲ್ಲ ಎಂದು ಘೋಷಿಸಿದನು. ಈ ಹಿನ್ನೆಲೆಯಲ್ಲಿ ವೃದ್ಧನಾದವನು ಎಳೆಯ ವಯಸ್ಸಿನ ಹುಡುಗಿಯನ್ನು ಮದುವೆಯಾಗಬಹುದೆ ಎಂಬ ವಿಷಯದಲ್ಲಿ ಎಲ್ಲರೂ ಮೌನವಾಗಿದ್ದಂತೆ ತೋರುತ್ತದೆ. ಈ ಬಗೆಯ ವರಸಾಮ್ಯ ಹೊಂದದ ವಿವಾಹಗಳನ್ನು ಅಕ್ಬರನಾಗಲಿ ಮತ್ತಾರೆ ಆಗಲಿ ನಿಷೇಧಿಸಲು ಪ್ರಯತ್ನಿಸಿದ್ದು ಕಂಡುಬರುವುದಿಲ್ಲ.[53]

**ರಾಜ್ಯಾಡಳಿತದಲ್ಲಿ ಸ್ತ್ರೀಯರು**

ಸ್ತ್ರೀಯರ ಸ್ಥಾನಮಾನಗಳು, ಅವರ ಸ್ವಾತಂತ್ರ್ಯ ವಿವಿಧ ದಿಕ್ಕುಗಳಲ್ಲಿ ನಿರ್ಬಂಧಕ್ಕೆ ಒಳಗಾದರೂ ಅವರು ಸರ್ವತಂತ್ರ ಸ್ವತಂತ್ರರಾಗಿ ತಮ್ಮತನವನ್ನು ಮೆರೆದ ಉದಾಹರಣೆಗಳು ಮಧ್ಯಯುಗದಲ್ಲಿ ವಿಪುಲವಾಗಿವೆ. ಕರ್ನಾಟಕದಲ್ಲಿ ವಿಜ್ಜಿಕ, ಚಂದಲ, ಶಾಂತಲಾ, ಭೈರಾದೇವಿ ಮುಂತಾದವರೂ; ಆಂಧ್ರಪ್ರದೇಶದಲ್ಲಿ ಕಾಕತೀಯ, ರುದ್ರಾಂಬ; ಉತ್ತರ ಭಾರತದಲ್ಲಿ ಅಹಲ್ಯಾಬಾಯಿ ಹೋಳ್ಕರ್, ಝಾನ್ಸಿರಾಣಿ ಲಕ್ಷ್ಮೀಬಾಯಿ, ಚಾಂದ್‌ಬೀಬಿ, ನೂರ್ ಜಹಾನ್ ಮುಂತಾದವರು ನಮ್ಮ ಚರಿತ್ರೆಯಲ್ಲಿ ಕೀರ್ತಿಶಾಲಿನಿಯರಾಗಿದ್ದಾರೆ.

**ವಿದ್ಯಾಭ್ಯಾಸ, ಅಧ್ಯಾತ್ಮ**

ಮಧ್ಯಯುಗದಲ್ಲಿ ಸ್ತ್ರೀ ವಿದ್ಯಾಭ್ಯಾಸವು ಹಲವು ಕಾರಣಗಳಿಂದ ಹಿನ್ನಡೆಗೆ ಬಂದಿತು. ಹೆಣ್ಣು ಮಕ್ಕಳಿಗೆ ಈ ಮೊದಲು ಸಂಗೀತ ನೃತ್ಯ ಮುಂತಾದ ಲಲಿತಕಲೆಗಳನ್ನು ಬಹಳ ಆಸ್ಥೆಯಿಂದ ಕಲಿಸುತ್ತಿದ್ದರು. ಆದರೆ ಕಾಲಾಂತರದಲ್ಲಿ ಅದು ದೇವದಾಸಿಯರ ಕಲೆ ಎಂಬ ಹಿನ್ನೆಲೆಯನ್ನು ಪಡೆದು ಸುಸಂಸ್ಕೃತ ಕುಟುಂಬದ ಮಕ್ಕಳು ಆ ಕಲೆಯತ್ತ ಮನಸ್ಸು ಕೊಡದಂತಾಯಿತು. ನಮ್ಮ ನಾಡಿನಲ್ಲಿ ಪ್ರಚಾರಕ್ಕೆ ಬಂದ ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತ ಸಿದ್ಧಾಂತಗಳ ಸೂಕ್ಷ್ಮ ಚಿಂತನೆಯಲ್ಲಿ ಸ್ತ್ರೀಯರಾರೂ ಭಾಗವಹಿಸಿದಂತೆ ತೋರುವುದಿಲ್ಲ. ಅದಕ್ಕೆ ಅವರ ವಿದ್ಯಾಭ್ಯಾಸದ ಕೊರತೆಯೆ ಕಾರಣವಾಗಿರಬೇಕು. ಮುಸಲ್ಮಾನರ ಧಾಳಿಗಳ ತರುವಾಯದಲ್ಲಂತೂ ಹೆಣ್ಣುಮಕ್ಕಳು ವಿದ್ಯಾವತಿಯರಾಗುವುದು ವಿರಳವಾಗಿಬಿಟ್ಟಿತು. ಆದರೆ ಆಧ್ಯಾತ್ಮಿಕ ಚೈತನ್ಯದಿಂದ ತುಂಬಿ ತುಳುಕಿದ ಕೆಲವು ಸ್ತ್ರೀಚೇತನಗಳು ಭಕ್ತಿಯ ಆಕಾಶದಲ್ಲಿ ಧ್ರುವನಕ್ಷತ್ರದಂತೆ ಮೂಡಿಬಂದುವು. ಭಕ್ತಿ ಚಳುವಳಿಯಲ್ಲಿ ರಾಜಾಸ್ಥಾನದ ಮೀರಾಬಾಯಿ, ಮಹಾರಾಷ್ಟ್ರದ ಜನಾಬಾಯಿ, ಕನ್ನಡನಾಡಿನ ಅಕ್ಕಮಹಾದೇವಿ, ತಮಿಳುನಾಡಿನ ಆಂಡಾಳ್ ಈ ಮೊದಲಾದವರು ಭಕ್ತಿಪಂಥವನ್ನು ಬೆಳಗಿದರು. ಸಮಾಜದ ಎಲ್ಲ ಕಟ್ಟುಪಾಡುಗಳನ್ನು ಅವರು ಮೀರಿನಿಂತರು. ಸ್ತ್ರೀಯರು ವಿದ್ಯಾವತಿಯರಾಗದಿದ್ದರೂ ಪುರಾಣ ಪ್ರವಚನಾದಿಗಳನ್ನು ಕೇಳುತ್ತ ಅಂದಿನ ವಿದ್ಯಾವಂತ ಪುರುಷರಿಗಿಂತ ಅದೆಷ್ಟೋ ಮೇಲಾಗಿದ್ದರು. ಉನ್ನತವರ್ಗದ ವಿಧವೆಯರು ಮರುವಿವಾಹವಾಗದೆ ಭಕ್ತಿ, ತ್ಯಾಗ ಮತ್ತು

ಸ್ವಾರ್ಥರಹಿತ ಸೇವೆಗಳಿಗೆ ತಮ್ಮನ್ನು ಸಮರ್ಪಿಸಿಕೊಂಡಿದ್ದರು. ಸತಿಪದ್ಧತಿ, ಬಹುಪತ್ನಿತ್ವ, ಬಾಲ್ಯವಿವಾಹ ಈ ಮೊದಲಾದುವು ಸ್ತ್ರೀಯರನ್ನು ಅಸುಖಿಯರನ್ನಾಗಿ ಮಾಡಿದ್ದುವು. ಹೆಂಡತಿಯಾದವಳು ಅನೀತಿಯುತ ಗಂಡನಿದ್ದರೂ ಅವನನ್ನು ಬಿಡುವ ಹಾಗಿರಲಿಲ್ಲ. ಆದರೆ ಗಂಡನಾದವನು ಯಾವುದೇ ಪೊಳ್ಳು ಕಾರಣಗಳನ್ನು ಮುಂದುಮಾಡಿಕೊಂಡು ಹೆಂಡತಿಯನ್ನು ತ್ಯಜಿಸಬಹುದಾಗಿತ್ತು.[54] ೧೭ನೇ ಶತಮಾನದ ಮಧ್ಯಭಾಗದವರೆಗೂ ಗುಜರಾತಿನಲ್ಲಿ ಮಕ್ಕಳಿಲ್ಲದ ವಿಧವೆಯರು ಗಂಡನ ಆಸ್ತಿಗೆ ಹಕ್ಕುದಾರಿಕೆಯನ್ನು ಸ್ಥಾಪಿಸುವಂತಿರಲಿಲ್ಲ. ಆ ಆಸ್ತಿಯು ರಾಜನ ಬೊಕ್ಕಸವನ್ನು ಸೇರುತ್ತಿತ್ತು. ಆದರೆ ಚಾಳುಕ್ಯರ ಕುಮಾರಪಾಲನು ಪಟ್ಟಕ್ಕೆ ಬಂದ ತರುವಾಯ ಆ ಪದ್ಧತಿಯನ್ನು ನಿಷೇಧಿಸಿದನು. ಸಂತಾನವಿಹೀನಳಾದರೂ ವಿಧವೆಯೆ ತನ್ನ ಮೃತ ಭರ್ತಾರನ ಆಸ್ತಿಗೆ ಹಕ್ಕುದಾರಳಾಗುತ್ತಾಳೆ ಎಂದು ಘೋಷಿಸಿದನು.[55]

"ಭರತ ಖಂಡದಲ್ಲಿ ಆದರ್ಶ ಮಹಿಳೆ ತಾಯಿ. ಹಿಂದೂ ಮನಸ್ಸಿನಲ್ಲಿ ಮಹಿಳೆ ಎಂಬ ಶಬ್ದ ತಾಯಿತನವನ್ನು ನೆನಪಿಗೆ ತರುವುದು. ದೇವರನ್ನು ತಾಯಿ ಎಂದು ಕರೆಯುವರು. ನಾವು ಹುಡುಗರಾಗಿದ್ದಾಗ ಪ್ರತಿದಿನ ಬೆಳಗ್ಗೆ ಒಂದು ಬಟ್ಟಲು ನೀರನ್ನು ತಾಯಿಯ ಹತ್ತಿರ ತೆಗೆದುಕೊಂಡು ಹೋಗುತ್ತಿದ್ದೆವು. ಅವಳು ಅದನ್ನು ತನ್ನ ಕಾಲಿನ ಹೆಬ್ಬೆಟ್ಟಿನಿಂದ ಮುಟ್ಟಿದ ಮೇಲೆ ನಾವು ಅದನ್ನು ಕುಡಿಯುತ್ತಿದ್ದೆವು.

ಪಾಶ್ಚಾತ್ಯರಲ್ಲಿ ಮಹಿಳೆ ಸತಿ. ಸ್ತ್ರೀತನ ಆದರ್ಶ ಸತಿಯಲ್ಲಿ ಕೇಂದ್ರೀಕೃತವಾಗಿದೆ. ಭರತ ಖಂಡದಲ್ಲಿ ಸಾಧಾರಣವಾಗಿ ಮನುಷ್ಯನಿಗೆ ಸ್ತ್ರೀತನದ ಶಕ್ತಿಯೆಲ್ಲಾ ಮಾತೃತ್ವದಲ್ಲಿ ಕೇಂದ್ರೀಕೃತವಾಗಿದೆ. ಪಾಶ್ಚಾತ್ಯ ಗೃಹದಲ್ಲಿ ಸತಿ ಆಳುವವಳು. ಹಿಂದೂ ಗೃಹದಲ್ಲಿ ತಾಯಿ ಆಳುವವಳು. ಪಾಶ್ಚಾತ್ಯ ಮನೆಗೆ ತಾಯಿ ಬಂದರೆ ಆಕೆ ತನ್ನ ಸೊಸೆಯ ಅಧೀನದಲ್ಲಿರಬೇಕಾಗಿದೆ. ಮನೆ ಸೊಸೆಗೆ ಸೇರಿದ್ದು. ಭರತ ಖಂಡದಲ್ಲಿ ತಾಯಿ ಯಾವಾಗಲೂ ಮನೆಯಲ್ಲಿರುತ್ತಾಳೆ. ಹೆಂಡತಿ ತಾಯಿಯ ಅಧೀನದಲ್ಲಿರಬೇಕು. ನೋಡಿ ಆದರ್ಶಗಳ ಭಿನ್ನತೆಯನ್ನು.

..... ನಮ್ಮ ಶಾಸ್ತ್ರ ಸಾರುವುದು ಇದು : ಜನನಕ್ಕೆ ಮುಂಚಿನ ಪ್ರಭಾವವನ್ನು ನಿಯಂತ್ರಿಸಿ, ತಾಯಿಯನ್ನು ನಾವೇಕೆ ಆರಾಧಿಸಬೇಕು? ಆಕೆ ನನ್ನ ಜನನಕ್ಕಾಗಿ ಪರಿಶುದ್ಧಳಾದಳು. ಪವಿತ್ರತೆಯನ್ನೇ ಹೋಲುವುದಕ್ಕೆ ಅವಳು ಕಠಿಣ ತಪಸ್ಸನ್ನು ಆಚರಿಸಿದಳು. ಇದನ್ನು ಗಮನದಲ್ಲಿಡಿ. ಭರತಖಂಡದಲ್ಲಿ ಯಾವ ಸ್ತ್ರೀಯೂ ತನ್ನ ದೇಹವನ್ನು ಗಂಡನಿಗೆ ಮಾರಿಕೊಳ್ಳುವುದಿಲ್ಲ. ದೇಹ ಆಕೆಯದು. "ದಾಂಪತ್ಯ ಹಕ್ಕಿನ ಸ್ವಾಧೀನ" ಎಂಬ ಕಾನೂನನ್ನು ಆಂಗ್ಲೇಯರು ಜಾರಿಗೆ ತಂದಿರುವರು. ಆದರೆ ಯಾವ ಭಾರತೀಯನೂ ಅದರ ಸಹಾಯವನ್ನು ಕೋರಿಲ್ಲ. ಪುರುಷ ಸ್ತ್ರೀ ದೇಹ ಸಂಬಂಧವನ್ನು ಆಶಿಸುವಾಗ, ಆಕೆ ಪ್ರಾರ್ಥನೆ, ವ್ರತ, ನಿಯಮಾದಿಗಳ ಮೂಲಕ ಆ ಸಮಯವನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡಿರುವಳು. ಯಾವುದು ಸಂತಾನೋತ್ಪತ್ತಿಗೆ ಕಾರಣವಾಯಿತೊ ಅದು ಭಗವಂತನ ಪವಿತ್ರ ಚಿಹ್ನೆ. ಇದೊಂದು ತಮಾಷೆಯೆ? ಇದು ಕೇವಲ ಇಂದ್ರಿಯ ತೃಪ್ತಿ ಮಾತ್ರವೇನು? ಇದು ದೇಹದ ಕೇವಲ ಮೃಗೀಯ ತೃಪ್ತಿ ಮಾತ್ರವೆ? ಇಲ್ಲ. ಸಾವಿರ ವೇಳೆ ಇಲ್ಲವೆಂದು ಹಿಂದೂ ಸಾರುವನು.

ಇದನ್ನು ಅನುಸರಿಸಿಕೊಂಡು ಮತ್ತೊಂದು ಭಾವನೆ ಬರುವುದು. ಆದರ್ಶ ಮಾತೃ ಪ್ರೇಮ, ಸಹಿಷ್ಣುತಾಮೂರ್ತಿ, ಕ್ಷಮಾಮೂರ್ತಿ, ಅವಳು ಮಾತೃ ಪೂಜೆಗೆ ಕಾರಣ ಅಲ್ಲಿರುವುದು. ಆಕೆ ನನ್ನ ಜನನಕ್ಕಾಗಿ ತಪಸ್ವಿನಿಯಾದಳು. ನಾನು ಜನಿಸುತ್ತೇನೆಂದು ಹಲವಾರು ವರುಷಗಳು ದೇಹವನ್ನು ಶುದ್ಧವಾಗಿಟ್ಟಳು, ಮನಸ್ಸನ್ನು ಶುದ್ಧವಾಗಿಟ್ಟಳು. ಆಹಾರ, ವಸನ, ಆಲೋಚನೆಯನ್ನು ಪರಿಶುದ್ಧವಾಗಿಟ್ಟಳು. ಇದನ್ನೆಲ್ಲ ಆಕೆ ಮಾಡಿದಳು. ಆದ ಕಾರಣವೆ ಆಕೆ ಪೂಜಾರ್ಹಳು. ನಂತರ

ಬರುವುದಾವುದು? ತಾಯಿತನದೊಂದಿಗೆ ಸತೀತ್ವ ಬರುವುದು."[56] ಎಂದು ಸ್ವಾಮಿ ವಿವೇಕಾನಂದರು ತಾಯಿತನ ಹಾಗೂ ಸತೀತ್ವವನ್ನು ವಿವರಿಸಿರುವುದು ಭಾರತೀಯ ನೆಲೆಯಲ್ಲಿ ಚಿಂತನ ಯೋಗ್ಯವಾಗಿದೆ.

ವೇದಯುಗದಿಂದ ಸಮಕಾಲದವರೆಗೆ ಸ್ತ್ರೀಯರ ಸ್ಥಾನಮಾನಗಳ ಒಟ್ಟು ಸ್ವರೂಪವೇನೆಂಬುದನ್ನು ನಿರ್ದಿಷ್ಟವಾಗಿ ಕಟ್ಟಿಕೊಡುವುದು ಅಷ್ಟೇನೂ ಸುಲಭದ ಕೆಲಸವಲ್ಲ. ಸ್ತ್ರೀ ವಿಷಯಕವಾಗಿ ವಿಶಿಷ್ಟ ಗೌರವ ಪ್ರಕಟವಾಗುತ್ತಿದ್ದ ಸಮಕಾಲದಲ್ಲೇ ಅವಳನ್ನು ಹೀನೈಸುತ್ತಿದ್ದ ವೃತ್ತಾಂತಗಳೂ ಇವೆ. ಅವಳಿಗೆ ಏನೂ ಸ್ವಾತಂತ್ರ್ಯವಿಲ್ಲ ಎಂದು ಘೋಷಿಸುತ್ತಿರುವಾಗಲೇ ಎಲ್ಲ ಸಂಪತ್ತನ್ನೂ ತಂದು ಅವಳ ಕಾಲಬುಡದಲ್ಲಿ ಸುರಿಯುತ್ತಿದ್ದ ವಿಚಾರಗಳಿವೆ. ಸಮಸ್ತ ಜವಾಬ್ದಾರಿಗಳನ್ನು ಅವಳ ತಲೆಯಮೇಲೆ ಹೊರಿಸಿ ನಿನ್ನನ್ನು ಬಿಟ್ಟರೆ ಇನ್ನಿಲ್ಲ ಎಂದು ಹೇಳಿದ ವಿಚಾರಗಳಿವೆ. ಬಾಲ್ಯದಲ್ಲಿಯೇ ವಿವಾಹ ಮಾಡಿ ಗಂಡನು ತೀರಿಹೋದರೆ ನರಕಕ್ಕೆ ತಳ್ಳಿದ ಸನ್ನಿವೇಶಗಳಿವೆ. ಅದರೊಟ್ಟಿಗೆ ಅವಳು ತನ್ನಷ್ಟಕ್ಕೆ ತಾನು ಶಾಂತಿಮಯವಾದ ತ್ಯಾಗಜೀವನವನ್ನು ನಡೆಸಿದ ವಿವರಗಳೂ ಇವೆ. ಅಸಹಾಯಕಳಾಗಿ ಅನ್ಯರ ಆಶ್ರಯದಲ್ಲಿ ಬಾಳಿದ್ದೂ ಇದೆ. ಒಂದು ರಾಜ್ಯವನ್ನೇ ಕಟ್ಟಿ ಸ್ವತಂತ್ರವಾಗಿ ಆಳಿದ ಉದಾಹರಣೆಗಳಿವೆ. ಎಲ್ಲಿಂದ ಎಲ್ಲಿ ಹೋದರೂ ಸ್ತ್ರೀಯರ ವಿಷಯಕವಾಗಿ ದ್ವಿಮುಖ ವರ್ತನೆ ತಪ್ಪುವುದಿಲ್ಲ. ಅವಳೆಂದೂ ಸುಖಿಯಾಗಿದ್ದುದಿಲ್ಲ ಎಂದು ಒಮ್ಮೆ ಅನಿಸಿದರೆ, ಮತ್ತೊಮ್ಮೆ ಅವಳಷ್ಟು ಸುಖಿ ಇನ್ನಾರಿದ್ದರು ಎಂಬ ಭಾವನೆ ಮೂಡುತ್ತದೆ. ಪ್ರಕೃತಿಯೇ ಪುರುಷ ಮತ್ತು ಸ್ತ್ರೀ ಎಂಬ ಭಿನ್ನ ಭೇದವನ್ನಿಟ್ಟು ಸ್ತ್ರೀಯನ್ನು ಪುರುಷನಿಗಿಂತ ಹೆಚ್ಚು ದುಃಖವನ್ನುಣ್ಣುವಂತೆ ಮಾಡಿದೆ ಎಂದು ಬೇಕಾದರೆ ಹೇಳಬಹುದು. ಇವೆಲ್ಲದರ ನಡುವೆ ಈ ಹಿಂದಿನ ಯುಗಗಳಲ್ಲಿ ಸ್ತ್ರೀಯು ತನಗೆ ಕೊಟ್ಟಿರುವ ಸ್ವಾತಂತ್ರ್ಯ ಸಾಲದು, ತನ್ನನ್ನು ನೋಡಿಕೊಳ್ಳುತ್ತಿರುವ ಪರಿಸರದಲ್ಲಿ ತನ್ನ ಬಗ್ಗೆ ಯಾರೂ ಗೌರವವನ್ನು ತೋರಿಸುತ್ತಿಲ್ಲ, ತನ್ನನ್ನು ಎಲ್ಲರೂ ಕೀಳಾಗಿ ಕಾಣುತ್ತಿದ್ದಾರೆ, ತನ್ನನ್ನು ದುಃಖ ದೌರ್ಜನ್ಯಕ್ಕೆ ಒಳಗು ಮಾಡುತ್ತಿದ್ದಾರೆ ಎಂದು ತನ್ನ ಗೋಳನ್ನು ತೋಡಿಕೊಂಡದ್ದೇನೂ ಕಂಡುಬರುವುದಿಲ್ಲ.

ಈ ಮೇಲಿನ ಅಧ್ಯಯನವನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಪರಕೀಯರು ಈ ನಾಡಿನ ಮೇಲೆ ದಾಳಿ ನಡೆಸಿದಾಗ, ಈ ನಾಡಿನವರು ಸ್ತ್ರೀಯರನ್ನು ರಕ್ಷಿಸಲು ಪ್ರಯತ್ನಿಸುತ್ತ ಅವಳ ಸ್ಥಾನವನ್ನು ಮೊಟಕುಗೊಳಿಸಿದ್ದು ಕಂಡುಬರುತ್ತದೆ. ಅನಂತರ ಅದನ್ನು ಸರಿಪಡಿಸಲು ಪ್ರಯತ್ನಿಸಿ ಯಶಸ್ವಿಯಾಗದಿರುವುದು ಕಾಣುತ್ತದೆ. ಹೀಗಾಗಿ ಒಂದು ಸಮಾಜದ ಸುಧಾರಣೆ ಆಗಬೇಕಾದರೆ ಅದು ಅದರ ಒಳಗಿನಿಂದಲೇ ರೂಪುಗೊಳ್ಳಬೇಕು ಎಂಬುದು ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಬೇಂದ್ರೆಯವರ ಕಾವ್ಯದಲ್ಲಿ ಸ್ತ್ರೀ ಚಿಂತನೆಯನ್ನು ಅಭ್ಯಸಿಸಿದಾಗ ಅವರು ಚರಿತ್ರೆಯನ್ನು ಭೇದಿಸಿ, ವೇದಕ್ಕೆ ಹೋಗುವುದು ಮತ್ತು ಅಲ್ಲಿಯ ಆದರ್ಶಗಳನ್ನು ತರುವುದು ಕಂಡುಬಂದಿದೆ. ಇದು ಮಾನವೀಯತೆಯ ರೂಪವಾಗಿ ಬೇಂದ್ರೆಯವರು ಆಧುನಿಕ ಮತ್ತು ಅತಿ ಪುರಾತನ ಮೌಲ್ಯಗಳ ಹೊಂದಾಣಿಕೆಯನ್ನು ಸ್ಥಾಪಿಸಿರುವುದಾಗಿದೆ. ಅವರ ಸ್ತ್ರೀಪರ ಚಿಂತನೆಗಳು progressive thoughtನಿಂದ ಕೂಡಿದ್ದು, ಅದು ಮುಂದಿನ ಸಮಾಜಕ್ಕೆ catalystic ಆಗಿದೆ ಎಂದು ಹೇಳಬಹುದು.

ಪುರುಷ ಮತ್ತು ಸ್ತ್ರೀ ಭೇದ ನಿಸರ್ಗನಿರ್ಮಿತ. ಹೆಣ್ಣು ಸಂತಾನ ಫಲಕೊಡುವವಳಾಗಿದ್ದರಿಂದ ಅವಳು ಗಂಡಿಗಿಂತ ಯಾವಾಗಲೂ ಶ್ರೇಷ್ಠಳೆ. ಒಳಿತು ಹಾಗೂ ಕೆಡುಕು ಎಂಬ ಸಮಸ್ಯೆ ಯಾವ ಕಾಲದಲ್ಲಿಯೂ ಇದ್ದದ್ದೆ. ವೇದ, ಉಪನಿಷತ್ತು, ಸ್ಮೃತಿ, ಪುರಾಣ, ಇತಿಹಾಸಗಳಲ್ಲಿ ಆಗಿಹೋದ ಶ್ರೇಷ್ಠ ಸ್ತ್ರೀ ಸಮೂಹದ ಬಗ್ಗೆ ಆದರ ಭಾವನೆ ತಾಳಿದ ಬೇಂದ್ರೆಯವರು, ತಾನು ಬಾಳಿದ ಆಯುಷ್ಯದಲ್ಲಿ ಕಂಡ ಅಶಕ್ತ ಹಾಗೂ ಅನಾಥ ಮಹಿಳೆಯರು ದುಃಖಮುಕ್ತರಾಗಿ, ಆತ್ಮವಿಶ್ವಾಸ

ಉಳ್ಳವರಾಗಿ, ನಿರ್ಭಯರಾಗಿ ಬಾಳಲು ತನ್ನ ಕಾವ್ಯದಿಂದ ಮಾರ್ಗದರ್ಶನವನ್ನು ಮಾಡಿದ್ದಾರೆ. ಬೇಂದ್ರೆ ಕಾವ್ಯದಲ್ಲಿಯ ಸ್ತ್ರೀ ಆದರ್ಶ ಸ್ತ್ರೀ. ಈ ಹಿನ್ನೆಲೆಯಲ್ಲಿ ಬೇಂದ್ರೆಯವರು ಹೆಣ್ಣನ್ನು ಹೇಗೆ ಕಂಡರು, ಅವಳ ನೋವು ನಲಿವುಗಳಿಗೆ ಹೇಗೆ ಸ್ಪಂದಿಸಿದರು, ಅವಳ ಹಿರಿಮೆ-ಗರಿಮೆಗಳನ್ನು ಹೇಗೆ ಎತ್ತಿ ಹಿಡಿದರು ಎಂಬುದನ್ನು ಮುಂದಿನ ಅಧ್ಯಾಯದಲ್ಲಿ ಪರಿಶೀಲಿಸಲಾಗಿದೆ.

**ಸಂಖ್ಯಾ ಟಿಪ್ಪಣಿಗಳು**

1. ಎಚ್. ಸಿ. ಚಕ್ಲದಾರ್, (ಅನು.) ಆರ್.ಎಲ್. ಅನಂತರಾಮಯ್ಯ, 'ಪ್ರಾಚೀನ ಭಾರತದ ಜೀವನದ ಕೆಲವು ಮುಖಗಳು', ಕೆ. ವಿ. ಪುಟ್ಟಪ್ಪ (ಪ್ರ.ಸಂ.), ಯುಗಯಾತ್ರೀ ಭಾರತೀಯ ಸಂಸ್ಕೃತಿ (ಸಂಪುಟ2) ಮೈ.ವಿ.ವಿ., ಮೈಸೂರು, 1971, ಪು. 435.
2. ಎ.ಎಸ್. ಅಲ್ಟೇಕರ್, (ಅನು.) ಸಿ. ರಾಮಾಚಾರಿ,'ವೇದಕಾಲದ ಸಮಾಜ', ಯುಗಯಾತ್ರೀ ಭಾರತೀಯ ಸಂಸ್ಕೃತಿ (ಸಂಪುಟ1) , ಮೈ. ವಿ.ವಿ., ಮೈಸೂರು, 1970, ಪು. 168.
3. ಅಕ್ಷಯಕುಮಾರಿದೇವಿ, A History of Sanskrit Literature. ವಿಜಯಕೃಷ್ಣ ಬ್ರದರ್ಸ್, ಬುಕ್ ಸೆಲ್ಲರ್ಸ್ ಅಂಡ್ ಪಬ್ಲಿಷರ್ಸ್, ಕಲ್ಕತ್ತ (ಮುದ್ರಣ ವರ್ಷ ನಮೂದಿಸಿಲ್ಲ), ಪು. 44.
4. ಎಸ್. ಶ್ರೀಕಂಠಶಾಸ್ತ್ರಿ, ಭಾರತೀಯ ಸಂಸ್ಕೃತಿ, ಮೈ.ವಿ.ವಿ., ಮೈಸೂರು, 1954, ಪು. 69.
5. ಅಕ್ಷಯಕುಮಾರಿದೇವಿ, ಪೂರ್ವೋಕ್ತ, ಪು. 44.
6. ರಾಮಚಂದ್ರ ಮಜುಂದಾರ್, 'Ideal position of women in domestic life', ಸ್ವಾಮಿ ಮಾಧವಾನಂದ, ರಮೇಶಚಂದ್ರ (ಸಂ.), Great Women of India, ಅದ್ವೈತ ಆಶ್ರಮ, ಮಾಯಾವತಿ, ಅಲ್ಮೋರ, 1953, ಪು. 11.
7. ವಿವರಗಳಿಗೆ ನೋಡಿ: ಶಕುಂತಲಾ ಶಾಸ್ತ್ರೀರಾವ್, Women in the Vedic Age, ಭಾರತೀಯ ವಿದ್ಯಾಭವನ, ಬಾಂಬೆ, 1954, ಪು. 34, 35.
8. ವಿವರಗಳಿಗೆ ನೋಡಿ: ಅದೇ, ಪು. 26.
9. ಎ.ಎಸ್. ಅಲ್ಟೇಕರ್, (ಅನು.) ಸಿ. ರಾಮಾಚಾರಿ, 'ವೇದಕಾಲದ ಸಮಾಜ', ಯುಗಯಾತ್ರೀ ಭಾರತೀಯ ಸಂಸ್ಕೃತಿ (ಸಂಪುಟ1), ಪೂರ್ವೋಕ್ತ, ಪು. 168.
10. ವಿವರಗಳಿಗೆ ನೋಡಿ: ಶಕುಂತಲಾ ಶಾಸ್ತ್ರೀರಾವ್, Women in the Vedic Age, ಪೂರ್ವೋಕ್ತ, ಪು. 65-69.
11. ಕೆ.ಎಲ್. ದಪ್ತರಿ, The Social Institutions in Ancient India, ನಾಗಪುರ ವಿಶ್ವವಿದ್ಯಾನಿಲಯ, ನಾಗಪುರ, 1947, ಪು. 159, 160.
12. ವಿವರಗಳಿಗೆ ನೋಡಿ: ಶಕುಂತಲಾ ಶಾಸ್ತ್ರೀರಾವ್, Women in the Vedic Age, ಪೂರ್ವೋಕ್ತ, ಪು. 53-58.
13. ವಿವರಗಳಿಗೆ ನೋಡಿ: ಅದೇ, ಪು. 70.
14. ಅಕ್ಷಯಕುಮಾರಿದೇವಿ, ಪೂರ್ವೋಕ್ತ, ಪು. 63, 64.
15. ಎಚ್.ಸಿ ಚಕ್ಲದಾರ್, (ಅನು.) ಆರ್. ಎಲ್. ಅನಂತರಾಮಯ್ಯ, 'ಪ್ರಾಚೀನ ಭಾರತದ ಜೀವನದ ಕೆಲವು ಮುಖಗಳು', ಯುಗಯಾತ್ರೀ ಭಾರತೀಯ ಸಂಸ್ಕೃತಿ (ಸಂಪುಟ 2), ಪೂರ್ವೋಕ್ತ, ಪು. 435.
16. ವಿವರಗಳಿಗೆ ನೋಡಿ: ಶಕುಂತಲಾ ಶಾಸ್ತ್ರೀರಾವ್, Women in the Vedic Age, ಪೂರ್ವೋಕ್ತ, ಪು. 70, 79, 80.
17. ಅದೇ, ಪು. 82.
18. ಶ್ರೀ ಶಾಂಕರಭಾಷ್ಯಸಮೇತ ಬೃಹದಾರಣ್ಯಕೋಪನಿಷತ್ತು - ಭಾಗ 1, ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ, 1984, ಪು. 179.

19. ಈ ಸಂಭಾಷಣೆಯ ವಿವರಗಳಿಗೆ ನೋಡಿ: ಶ್ರೀ ಶಾಂಕರಭಾಷ್ಯಸಮೇತ ಬೃಹದಾರಣ್ಯಕೋಪನಿಷತ್ತು - ಭಾಗ II, ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ, 1985, ಪು. 650-654.
20. ಎ.ಎಸ್. ಅಲ್ಟೇಕರ್, 'Ideal and Position of Indian Women in Social life', Great Women of India, ಪೂರ್ವೋಕ್ತ, ಪು. 31, 32.
21. ಅಕ್ಷಯಕುಮಾರಿದೇವಿ, ಪೂರ್ವೋಕ್ತ, ಪು. 141.
22. ಟಿ.ಆರ್. ವೆಂಕಟರಾಮಶಾಸ್ತ್ರಿ, (ಅನು.) ಎಲ್. ಬಾಲಸುಬ್ರಹ್ಮಣ್ಯ, 'ಸ್ಮೃತಿಗಳು: ಅವುಗಳ ದೃಷ್ಟಿ ಮತ್ತು ಗುರಿಗಳು', ಯುಗಯಾತ್ರೀ ಭಾರತೀಯ ಸಂಸ್ಕೃತಿ (ಸಂಪುಟ 2), ಪೂರ್ವೋಕ್ತ, ಪು. 242.
23. ಎಂ. ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈ. ವಿ.ವಿ., ಮೈಸೂರು, 1966, ಪು. 414, ಟಿಪ್ಪಣಿ ಸಂಖ್ಯೆ 33.
24. ವಿ. ರಾಘವನ್, (ಅನು.) ಸ.ಸ.ಮಾಳವಾಡ, 'ಮನುಸಂಹಿತೆ', ಯುಗಯಾತ್ರೀ ಭಾರತೀಯ ಸಂಸ್ಕೃತಿ (ಸಂಪುಟ 2), ಪೂರ್ವೋಕ್ತ, ಪು. 258.
25. ಕೇವಲ್ ಮೋತ್‌ವಾನಿ, Manu Dharma Shastra, ಗಣೇಶ್ ಅಂಡ್ ಕಂಪೆನಿ (ಮದ್ರಾಸ್) ಪ್ರೈವೇಟ್ ಲಿ. ಮದ್ರಾಸ್, 1958, ಪು. 111.
26. ಅದೇ, ಪು. 117.
27. ಅದೇ ಪು. 118.
28. ಅಕ್ಷಯಕುಮಾರಿದೇವಿ, ಪೂರ್ವೋಕ್ತ, ಪು. 142.
29. ಅದೇ, ಪು. 143.
30. ವಿವರಗಳಿಗೆ ನೋಡಿ:ಶಕುಂತಲಾ ಶಾಸ್ತ್ರೀರಾವ್, Women in the Sacred Laws, ಭಾರತೀಯ ವಿದ್ಯಾಭವನ, ಬಾಂಬೆ, 1960, ಪು. 60-66.
31. ಅಕ್ಷಯಕುಮಾರಿದೇವಿ, ಪೂರ್ವೋಕ್ತ, ಪು. 81, 82.
32. ವಿವರಗಳಿಗೆ ನೋಡಿ: ಅದೇ, ಪು. 22-30.
33. ವಿವರಗಳಿಗೆ ನೋಡಿ: ಅದೇ, ಪು. 33, 34.
34. ಅದೇ, ಪು. 84.
35. ಅದೇ, ಪು. 82.
36. ಡಿ.ಸಿ.ಗಂಗೂಲಿ, (ಅನು.), ಬಿ.ಎಸ್. ರುಕ್ಕಮ್ಮ, 'ಪ್ರಾಚೀನ ಭಾರತದಲ್ಲಿ ಸ್ತ್ರೀಯರ ಸ್ಥಾನಮಾನಗಳನ್ನು ಕುರಿತ ಕೆಲವು ವಿಚಾರಗಳು', ಯುಗಯಾತ್ರೀ ಭಾರತೀಯ ಸಂಸ್ಕೃತಿ (ಸಂಪುಟ 2), ಪೂರ್ವೋಕ್ತ, ಪು. 454.
37. ರಾಧಾಕುಮುದ್ ಮುಖರ್ಜಿ ಮತ್ತು ಆರ್. ಸಿ. ಮಜುಂದಾರ್, (ಅನು.) ಶಾಲಿನೀ ರಘುನಾಥ್, 'ಸಾಮಾಜಿಕ ಪರಿಸ್ಥಿತಿ', ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿ, ಸಂಪುಟ 4; ಸಾಮ್ರಾಜ್ಯ ಏಕತಾ ಯುಗ ಭಾಗ II ಭಾರತೀಯ ವಿದ್ಯಾಭವನ, ಬೆಂಗಳೂರು, 1988, ಪು. 253.
38. ಎ. ಡಿ. ಪುಸಲ್ಕರ್, Studies in Epics and Puranas of India, ಭಾರತೀಯ ವಿದ್ಯಾಭವನ, ಬಾಂಬೆ, 1955, ಪು. xviii.
39. ಅದೇ, ಪು. xivii

40. ಎ.ಎಸ್. ಅಲ್ಟೇಕರ್, 'Ideal and positions of Indian Women in social life', Great Women of India, ಪೂರ್ವೋಕ್ತ, ಪು. 40, 41.
41. ರಾಜೇಂದ್ರಚಂದ್ರ ಹಜಾರಾ, (ಅನು.) ಕೌಲಗಿ ಶೇಷಾಚಾರ್ಯ, 'ಪುರಾಣಗಳು', ಯುಗಯಾತ್ರೀ ಭಾರತೀಯ ಸಂಸ್ಕೃತಿ (ಸಂಪುಟ 2), ಪೂರ್ವೋಕ್ತ, ಪು. 183.
42. ಅದೇ, ಪು. 203, 204.
43. ರೋಮಾ ಚೌಧುರಿ, (ಅನು.), ಚಿ.ನ. ಮಂಗಳಾ, 'ಭಾರತೀಯ ಸ್ತ್ರೀತ್ವದ ಆದರ್ಶಗಳನ್ನು ಕುರಿತ ಕೆಲವು ವಿಚಾರಗಳು', ಯುಗಯಾತ್ರೀ ಭಾರತೀಯ ಸಂಸ್ಕೃತಿ (ಸಂಪುಟ 2), ಪೂರ್ವೋಕ್ತ, ಪು. 461.
44. ಸ್ವಾಮಿ ಶ್ರೇಯಸಾನಂದ, (ಅನು.) ಬಿ.ಎಚ್. ಶ್ರೀಧರ, 'ರಾಮಾಯಣದ ಸಂಸ್ಕೃತಿ', ಯುಗಯಾತ್ರೀ ಭಾರತೀಯ ಸಂಸ್ಕೃತಿ (ಸಂಪುಟ 2), ಪೂರ್ವೋಕ್ತ, ಪು. 32.
45. ಹೇಮಚಂದ್ರ ಚೌಧುರಿ, (ಅನು.) ಸಿ.ಪಿ.ಕೆ., 'ಮಹಾಭಾರತ: ಅದರ ಸಂಸ್ಕೃತಿಯ ಕೆಲವು ಮುಖಗಳು', ಯುಗಯಾತ್ರೀ ಭಾರತೀಯ ಸಂಸ್ಕೃತಿ, (ಸಂಪುಟ 2), ಪೂರ್ವೋಕ್ತ, ಪು. 55.
46. ರಾಧಾಕುಮುದ್ ಮುಖರ್ಜಿ ಮತ್ತು ಆರ್.ಸಿ. ಮಜುಂದಾರ್, (ಅನು.), ಶಾಲಿನೀ ರಘುನಾಥ್, 'ಸಾಮಾಜಿಕ ಪರಿಸ್ಥಿತಿ', ಭಾರತೀಯ ಇತಿಹಾಸ ಮತ್ತು ಸಂಸ್ಕೃತಿ (ಸಂಪುಟ 4), ಪೂರ್ವೋಕ್ತ, ಪು. 254.
47. ಹೇಮಚಂದ್ರ ಚೌಧುರಿ (ಅನು.), ಸಿ.ಪಿ.ಕೆ., 'ಮಹಾಭಾರತ', ಯುಗಯಾತ್ರೀ ಭಾರತೀಯ ಸಂಸ್ಕೃತಿ, (ಸಂಪುಟ 2), ಪೂರ್ವೋಕ್ತ, ಪು. 55.
48. ವಿವರಗಳಿಗೆ ನೋಡಿ: ನಳಿನಾಕ್ಷದತ್ತ, 'Great Women in Buddhism', Great Women of India, ಪೂರ್ವೋಕ್ತ, ಪು. 253, 254.
49. ರಾಧಾಕುಮುದ್ ಮುಖರ್ಜಿ ಮತ್ತು ಆರ್.ಸಿ. ಮಜುಂದಾರ್, (ಅನು.), ಶಾಲಿನೀ ರಘುನಾಥ್, 'ಸಾಮಾಜಿಕ ಪರಿಸ್ಥಿತಿ', ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿ (ಸಂಪುಟ 4), ಪೂರ್ವೋಕ್ತ, ಪು. 254.
50. ವಿವರಗಳಿಗೆ ನೋಡಿ: ಶಕುಂತಲಾ ಶಾಸ್ತ್ರೀರಾವ್, Women in Sacred Laws, ಪೂರ್ವೋಕ್ತ, ಪು. 119-127.
51. ಪಿ.ಎನ್. ಚೋಪ್ರಾ, (ಅನು.), ಕೆ.ಎಸ್. ನರಸಿಂಹಸ್ವಾಮಿ, 'ಮಧ್ಯಯುಗದ ಭಾರತದಲ್ಲಿನ ಸಾಮಾಜಿಕ ಸುಧಾರಣೆಯ ಕೆಲವು ಪ್ರಯೋಗಗಳು', ಯುಗಯಾತ್ರೀ ಭಾರತೀಯ ಸಂಸ್ಕೃತಿ, (ಸಂಪುಟ 2), ಪೂರ್ವೋಕ್ತ, ಪು. 481.
52. ಡಿ. ಸಿ. ಗಂಗೂಲಿ, (ಅನು.), ಬಿ.ಎಸ್. ರುಕ್ಕಮ್ಮ, 'ಪ್ರಾಚೀನ ಭಾರತದಲ್ಲಿ ಸ್ತ್ರೀಯರ ಸ್ಥಾನಮಾನಗಳನ್ನು ಕುರಿತ ಕೆಲವು ವಿಚಾರಗಳು', ಯುಗಯಾತ್ರೀ ಭಾರತೀಯ ಸಂಸ್ಕೃತಿ (ಸಂಪುಟ 2), ಪೂರ್ವೋಕ್ತ, ಪು. 455.
53. ಪಿ.ಎನ್. ಚೋಪ್ರಾ, (ಅನು.), ಕೆ.ಎಸ್. ನರಸಿಂಹಸ್ವಾಮಿ, 'ಮಧ್ಯಯುಗದ ಭಾರತದಲ್ಲಿನ ಸಾಮಾಜಿಕ ಸುಧಾರಣೆಯ ಕೆಲವು ಪ್ರಯೋಗಗಳು', ಯುಗಯಾತ್ರೀ ಭಾರತೀಯ ಸಂಸ್ಕೃತಿ, (ಸಂಪುಟ 2), ಪೂರ್ವೋಕ್ತ, ಪು. 478, 479, 480.
54. ವಿವರಗಳಿಗೆ ನೋಡಿ: ಎ.ಎಸ್. ಅಲ್ಟೇಕರ್, 'Ideal and Position of Indian Women in social life', Great Women of India, ಪೂರ್ವೋಕ್ತ, ಪು. 40-43.
55. ಡಿ.ಸಿ. ಗಂಗೂಲಿ, (ಅನು.), ಬಿ.ಎಸ್. ರುಕ್ಕಮ್ಮ, 'ಪ್ರಾಚೀನ ಭಾರತದಲ್ಲಿ ಸ್ತ್ರೀಯರ ಸ್ಥಾನಮಾನಗಳನ್ನು ಕುರಿತ ಕೆಲವು ವಿಚಾರಗಳು', ಯುಗಯಾತ್ರೀ ಭಾರತೀಯ ಸಂಸ್ಕೃತಿ (ಸಂಪುಟ 2), ಪೂರ್ವೋಕ್ತ, ಪು. 455.
56 ಸ್ವಾಮಿ ವಿವೇಕಾನಂದ, ಭಾರತ ಮಹಿಳೆ, ಶ್ರೀರಾಮಕೃಷ್ಣಾಶ್ರಮ, ಮೈಸೂರು, 1950, ಪು. 4, 5, 9, 10.

ಅಧ್ಯಾಯ ಮೂರು

# ಬೇಂದ್ರೆಯವರು ಬೆಳೆದುಬಂದ ಕೌಟುಂಬಿಕ ಪರಿಸರ ಮತ್ತು ಪರಂಪರೆಯ ಪ್ರೇರಣೆ

ಬೇಂದ್ರೆಯವರ ವ್ಯಕ್ತಿತ್ವ ಬಾಲ್ಯದಿಂದಲೂ ಇನ್ನೊಬ್ಬರ ಪ್ರಭಾವಕ್ಕೆ ಒಳಗಾಗುವಂತಹದಾಗಿರಲಿಲ್ಲ. ಪ್ರಭಾವ ಬಿಸಿಲಿನ ಬೇಗೆಯಂತಿರುತ್ತದೆ. ಅದು ಬೀಜಶಕ್ತಿಯನ್ನು ಸುಟ್ಟುಹಾಕುತ್ತದೆ. ಪ್ರೇರಣೆ ಮಳೆಯಂತೆ ಇದ್ದು ಅದು ಬೀಜಕ್ಕೆ ಚಿಗುರೊಡೆಯುವಂತೆ ಮಾಡುವ ಅಮೃತಧಾರೆ. ಆದುದರಿಂದ ನನ್ನ ಬರವಣಿಗೆಯಲ್ಲಿ ಪ್ರಭಾವ ಶಬ್ದವನ್ನು ಬಳಸದೇ, ಪ್ರೇರಣೆ ಎಂಬ ಶಬ್ದ ಬಳಸುವ ನಿರ್ಣಯ ತೆಗೆದುಕೊಂಡಿದ್ದೇನೆ.

ಬೇಂದ್ರೆಯವರು - ಅಜ್ಜಿ, ತಾಯಿ, ಖಾನಾವಳಿಗೆ ಊಟಕ್ಕೆ ಬರುವ ಮಹನೀಯರು, ಶಾಲೆಯ ಶಿಕ್ಷಕರು, ಕಾಲೇಜು ಪ್ರಾಧ್ಯಾಪಕರು, ಸಾಹಿತಿಗಳು, ಗುರುಗಳು ಮೊದಲಾದ ಯಾರ ಪ್ರಭಾವಕ್ಕೂ ಬಗ್ಗಲಿಲ್ಲ. ಒಂದು ದೃಷ್ಟಿಯ ಜ್ಞಾನಿಯ ತುಂಟತನ ಅವರ ಸ್ವಭಾವವಾಗಿತ್ತು. ಮೇಲೆ ಉಲ್ಲೇಖಿಸಿದ ಎಲ್ಲರೂ ಬೇಂದ್ರೆಯವರಲ್ಲಿಯ ಸ್ವಂತಿಕೆಗೆ ಮರುಳಾದ ಸಂದರ್ಭ ಅನೇಕ. ತಮಗೆ ಬೇಕಾದ ಅಂಶವನ್ನು ಮನ ಮೆಚ್ಚುವಷ್ಟು ಪಡೆದು ತನ್ನ ಪ್ರೇರಣೆಯಿಂದ ಅದಕ್ಕೆ ರೂಪ ಕೊಡುವುದು ಬೇಂದ್ರೆ ಚೈತನ್ಯ. ಬೇಂದ್ರೆಯವರು ತಮ್ಮ ಪ್ರಭಾವ ಯಾರ ಮೇಲೆಯಾದರೂ ಆಗಬೇಕು ಎಂದು ಬಯಸುತ್ತಿರಲಿಲ್ಲ. ಭೇಟಿಯಾದ ಪ್ರತಿಯೊಬ್ಬರಿಗೂ ಅವರವರ ವಿಷಯದಲ್ಲಿ ಮುಂದೆ ಹೋಗುವ ಪ್ರೇರಣೆ ಕೊಡುತ್ತಿದ್ದರು.

ದ.ರಾ. ಬೇಂದ್ರೆಯವರು ಹುಟ್ಟಿ ಬೆಳೆದ ಧಾರವಾಡ ಅವರನ್ನು ದೈವಭಕ್ತನನ್ನಾಗಿ, ಕವಿಯಾಗಿ, ಸಮರಸತತ್ತ್ವ ಸಾಧಕನನ್ನಾಗಿ ರೂಪಿಸಿದೆ. 'ನನ್ನ ವ್ಯಾವಹಾರಿಕ ನಾಮ ದತ್ತಾತ್ರೇಯ. ಮಾಘ ವದ್ಯ ಪ್ರತಿಪದೆ ಅಂದರೆ ಗುರು ಪ್ರತಿಪದೆ ಸಾಯಂಕಾಲ ನನ್ನ ಜನ್ಮವಾಯಿತು. ಅಂತೆಯೇ ದತ್ತ ಎಂದು ಹೆಸರಿಟ್ಟರು. ಧಾರವಾಡದ ಮಂಗಳವಾರಪೇಟೆಯ ಪೋತ್ನೀಸರ ಓಣಿಯಲ್ಲಿ ಗುಣಾರಿ ಅವರ ಮನೆಯಲ್ಲಿ ನಾನು ಈ ಜಗತ್ತಿನ ಬೆಳಕು ಕಂಡೆ. ನನ್ನ ಜನ್ಮತಾರೀಖು ೧೮೯೬ ಇಸ್ವಿ, ಜನವರೀ ೩೧ - ಮನ್ಮಥನಾಮ ಸಂವತ್ಸರ ೧೮೧೭ ಶಕೆ'[1] ಎಂದು ಅವರು ಸಾಹಿತ್ಯದ ವಿರಾಟ್ ಸ್ವರೂಪದಲ್ಲಿ ನುಡಿದಿದ್ದಾರೆ.

> "ಈ ಶತಕ ಬಂದಿಲ್ಲ, ಆ ಶತಕ ಮುಗಿದಿಲ್ಲ,
> ಕೊನೆದಶಕ ಕೊನೆಕೊನೆಗೆ ಅದೆ ಬಂದಿದೆ.
> ವಿಜ್ಞಾನಿಗಳ ದೃಷ್ಟಿ ಸೃಷ್ಟಿಗರ್ಭದೊಳಾಗ
> ರೇಡಿಯಮ್ಮಿನ ಕಿರಣವನು ಕಂಡಿದೆ.

ಗಂಟುಬೇನೆಯು ವ್ಯಾಧಿ ತುಂಟತನದೊಳಗಾಗ
ಬಾಲಲೀಲೆಯೊಳಿತ್ತು ಎಲ್ಲೆಲ್ಲಿಯೂ
ರಾಷ್ಟ್ರೀಯ ಚಳವಳ ಕುಂಟುತ್ತ ನಡೆದಿತ್ತು
ಕಂಡವರು ಎಂಬವರ ಹಿಂಬಾಲಕೂ"[2]

ಎಂಬುದು ಬೇಂದ್ರೆ ಹುಟ್ಟಿದ ಕಾಲ ಲಕ್ಷಣ. ದೇಶದಲ್ಲಿ ಸ್ವಾಸ್ಥ್ಯ ಇರಲಿಲ್ಲ. ಜೀವನಕ್ಕೆ ಭಯ ಆವರಿಸಿತ್ತು.

"ತಂದೆಯವರ ಮಾತು ಒಂದೆ ಮಾತಿನೊಳಾಡಿ
ವಂದನೆಯನು ಮಾಡಿ ಮುಂಬರಿವೆ.
ಓ ಪಾಪ, ನಿಷ್ಪಾಪ, ಅವರ ಜೀವನ ತಾಪ,
ಅವರೆ ಬಲ್ಲರು, ಯಾರು ಬಲ್ಲವರು.
ಗಂಡಮಾಲೆಯ ಧರಿಸಿ ರುಂಡಮಾಲೆಯ ಹಾಗೆ
ಮಸಣದಿ ಉಸುರಾಡಿ ನಿಂತವರು.
ವಿಷವನು ಕಕ್ಕಿಸಿ, ನೀರನು ದಕ್ಕಿಸಿ
ಸಾವಿನ ಸರಸವನಾಡಿದರು"[3]

ತಂದೆಯವರಿಂದ ಪ್ರೇರಣೆ ಪಡೆಯುವಷ್ಟು ಸಹವಾಸ ಬೇಂದ್ರೆಯವರಿಗೆ ಲಭಿಸಲಿಲ್ಲ. ತಾಯಿ ಹಾಗೂ ಅಜ್ಜಿ ಮಾಡಿದ ವರ್ಣನೆಯನ್ನಾಧರಿಸಿ ಬೇಂದ್ರೆ 'ಸಾವಿನ ಕೂಡ ಸರಸ' ಎಂಬ ಹರಟೆ ಬರೆದರು. ಇದು ಸಂಪೂರ್ಣವಾಗಿ ತಂದೆಯವರ ಮಾನಸಿಕ ಅನಾರೋಗ್ಯವನ್ನು ಚಿತ್ರಿಸಿದೆ. ಗೋಂದಾವಲೇಕರ ಮಹಾರಾಜ ಅವರಿಂದ ಪಡೆದ ರಾಮನಾಮ ಉಪಾಸನೆಯೊಂದೇ ಅವರ ಜೀವನದ ಬೆಳಕಾಗಿತ್ತು.

ಅಜ್ಜ ಮತ್ತು ಮುತ್ತಜ್ಜ ಶಿರಹಟ್ಟಿಯಲ್ಲಿ ಇದ್ದರು. ಅವರ ವಿದ್ವತ್ತಿನ ಬಗ್ಗೆ, ಅವರ ಆಧ್ಯಾತ್ಮಿಕ ತೇಜಸ್ಸಿನ ಬಗ್ಗೆ ಅಜ್ಜಿ, ತಾಯಿ ಆಡಿದ ಮಾತು ಬೇಂದ್ರೆಯವರಿಗೆ, ಬೇಂದ್ರೆ ಮನೆತನದ ಬಗ್ಗೆ ಗೌರವ ಹಾಗೂ ಸ್ವಂತ ಜವಾಬ್ದಾರಿ ಮತ್ತು ಆದರ್ಶಮಯ ಜೀವನದ ಬಗ್ಗೆ ಪ್ರೇರೇಪಿಸಿರಲು ಸಾಕು.

ಬೇಂದ್ರೆಯವರ ಬಾಲ್ಯ ಸ್ತ್ರೀ ಪೋಷಿತವಾದುದು. ಸ್ತ್ರೀ ಶೋಷಿತರಲ್ಲಿ ಶೋಷಿತಳು. ಅವರ ಬವಣೆಯು ಕವಿಯ ಮಾರ್ದವತೆಗೆ ಪ್ರತೀಕವಾಯಿತು. ಅವರಿಗೆ ತಾಯಿ ಪ್ರತ್ಯಕ್ಷ ದೇವತಾ ಸ್ವರೂಪವಾಗಿದ್ದು, ಸೃಜನಶೀಲ ವ್ಯಕ್ತಿತ್ವವೆಂಬುದೇ ತಾಯಿತತ್ತ್ವ ಎಂದು ತಿಳಿದರು.

"ಆ ತಾಯಿ ಮಾತಾಯಿ ಈ ಬಾಯಿ ತುತ್ತಲ್ಲ
ಅವಳನ್ನು ಸ್ತುತಿಸಲು ಎದೆ ಸಾಲದು"[4]

ಎಂಬ ಎರಡು ಸಾಲುಗಳಲ್ಲಿ ತಾಯಿಯ ದಿವ್ಯತೆಯನ್ನು ಅವರು ವರ್ಣಿಸಿದ್ದಾರೆ. ಬೇಂದ್ರೆ ಹುಟ್ಟಿ ಬೆಳೆದ ಕಾಲದಲ್ಲಿ ಧಾರವಾಡದಲ್ಲಿ ಧಾರ್ಮಿಕ, ಸಾಂಸ್ಕೃತಿಕ, ರಾಷ್ಟ್ರೀಯ ಭಾವನೆಗಳು, ಜನಪದ ಹಾಡು, ಕುಣಿತಗಳು ಬದುಕಿನ ಒಂದು ಭಾಗದಂತಿದ್ದುವು. ಅವರ ಕುಟುಂಬವೆಂದರೆ ಅವರೇ ಹೇಳಿರುವಂತೆ "ನಮ್ಮ ತಾಯಿಗೆ ಅಜ್ಜಿ, ನಮ್ಮ ಅಜ್ಜಿಗೆ ನಮ್ಮ ತಾಯಿ - ಎರಡು ಹೆಣ್ಣು ಜೀವ ಒಂದನ್ನೊಂದು ಅಂಟಿಕೊಂಡು ನಿಂತ"[5] ಪುಟ್ಟ ಕುಟುಂಬ. ಅವರು ಬೆಳೆದುಬಂದ ಕೌಟುಂಬಿಕ ಪರಿಸರ ಮತ್ತು ಪರಂಪರೆಯ ಪ್ರೇರಣೆಗೆ ಅವರ ಹುಟ್ಟಿನಿಂದ ಅವರು ಮ್ಯಾಟ್ರಿಕ್ಯುಲೇಷನ್ ಪಾಸಾದ (೧೯೧೩) ಅವಧಿಯ ಅವರ ಬಾಲ್ಯದ ೧೭ ವರ್ಷಗಳನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡಿದ್ದೇನೆ. ಅವರ ಬಾಲ್ಯದ ಸೂಕ್ಷ್ಮ ಅವಲೋಕನಾ

ಗುಣ ಅವರು ಕವಿಯಾಗಿ ರೂಪುಗೊಳ್ಳಲು ಕಾರಣವಾಗಿದೆ. ಅವರ ಅಜ್ಜಿ ಗೋದೂಬಾಯಿ (ತಾಯಿಯ ತಾಯಿ) ಧೈರ್ಯವಂತ ಗಟ್ಟಿ ಹೆಂಗಸು. ಆಕೆ ಧಾರವಾಡ ನಗರದಲ್ಲಿ ಬಾಡಿಗೆ ಮನೆಯಲ್ಲಿ ಊಟದ ಮನೆ ನಡೆಸುತ್ತ ತನ್ನ ಮಗಳ ಮಕ್ಕಳನ್ನು ಸಾಕಿ ಬೆಳೆಸಿದ ರೀತಿಯನ್ನು ನೆನೆದು ಬೇಂದ್ರೆಯವರು, "ಆಕೆಯ ಜೀವನದ ಕಷ್ಟದ ಕಥೆ ನೆನೆಸಿದಂತೆಲ್ಲ, ಆಕೆ ಮಹಾತಪಸ್ವಿನಿ ಎಂದೇ ಭಾಸವಾಗುವದು"[6] ಎಂದು ನುಡಿದಿದ್ದಾರೆ.

ಆಕೆಯನ್ನು ಬೇಂದ್ರೆಯವರು 'ಬಾಲ್ಯಕಾಂಡ'ದಲ್ಲಿ ಹೀಗೆ ಸ್ಮರಿಸಿಕೊಂಡಿದ್ದಾರೆ:

"ಆಕೆಯ ತಾಯಿಯು ಸ್ತ್ರೀ ಮಾತ್ರ ಛಾಯೆಯು
ಪುರುಷಾರ್ಥಕೆತ್ತಿದ ಮೂರ್ತಿಯದು.
ಗೊನೆಮೂಗ ಧೀರವೊ ನೋಟದ ನೇರವೊ
ಮಾತಿನ ವೀರವು ಅನುಪಮವು.
ಹದಿನೇಳು ಹಡೆದರು ಹೆಣ್ಣೊಂದೆ ಉಳಿದರು
ಜಗ್ಗದ ಕುಗ್ಗದ ಎದೆಯವಳು.
ಹುಲಿಹಾಲ ಕುಡಿಸಿದಳು ತಂತಿಯಲಿ ನಡೆಸಿದಳು
ಸೂಜಿಯ ಮೊನೆಯಲ್ಲಿ ನಿಲಿಸಿದಳು.
ವೃದ್ಧೆಯಾದರು ಅವಳು, ಶ್ರದ್ಧೆ ಎಂತಹದಿತ್ತು
ಕರ್ತವ್ಯಬದ್ಧಳು ಕೊನೆವರೆಗೂ.
ಜೀವನವನೆ ಮಹಾಯಜ್ಞ ಮಾಡಿದ ಹಾಗೆ
ಸ್ವಾಹಾ ಸ್ವಾಹಾ ಎಂದು ನಡೆಸಿದಳು.
ಸದ್ಗುರುನಾಥನ ಶ್ರದ್ಧಾರ್ಥಜಾತನ
ಆರ್ತಾರ್ತಿಪ್ರೀತನ ನೆನೆಸಿದಳು.
ಗಾಳಿಯಲಿ ನಡೆದಾಡಿ ಮೇಲು ಚಿಕ್ಕೆಯ ನೋಡಿ
ಕೊನೆಗಳಿಗೆ ಗೆದ್ದಳು ಎನಿಸಿದಳು.
ಬಂಡಾಯಕಾಲದ ಖಂಡಿತ ಜೀವನ
ಉಂಡವಳು ಅವಳಿಗೆ ಏನು ಕಹಿ?
ಸರ್ವಾರ್ಪಿತವೆಂದ ತಾಯಿ ತಂದೆಯ ಮಗಳು
ತ್ರಾಹಿ ತ್ರಾಹಿ ಎನುವ ಹಾದಿಯಲಿ.
ಕಣ್ಣಿನ ಕೊನೆ ಮುತ್ತು ಹೃದಯದ ಒಳತುತ್ತು
ಸಿಂಪಿ ಬಾಳಿದ ಹಾಗೆ ಬಾಳಿದಳು.
ಆಳಾಗಿ ದುಡಿದರು ಅರಸಾಗಿ ಉಂಡಳು
ಬಂದ ಭೋಗಕ್ಕೆಲ್ಲ ತಾಳಿದಳು"[7]

ಅಜ್ಜಿ ಗೋದುಬಾಯಿಯ ಆರಾಧ್ಯದೈವತ - ಸದ್ಗುರುನಾಥ ಶ್ರೀ ಚಿದಂಬರ ದೀಕ್ಷಿತರು, ಇವರಿಂದ ಉಪದೇಶ ಪಡೆದು ಕಷ್ಟದ ಜೀವನದಲ್ಲಿಯೂ ಸ್ವರ್ಗಸುಖ ಅನುಭವಿಸಿದವಳು ಅವಳು. ಅವಳು ಹುಲಿಹಾಲು ಕುಡಿಸಿದ್ದರಿಂದ ಬೇಂದ್ರೆಯವರಲ್ಲಿ ಧೈರ್ಯ, ಎದೆಗಾರಿಕೆ ರೂಪಗೊಂಡಿತು. ಬಡತನದಲ್ಲಿ ಬಾಳುವುದು ಹೇಗೆ ಎಂಬ ತಂತಿಯ ಮೇಲೆ ನಡೆದಾಡುವ ಕೌಶಲ್ಯವನ್ನು ಬೇಂದ್ರೆ ಅರಿತರು. ಜೀವನವೇ

ಒಂದು ಮಹಾಯಜ್ಞ ಎಂಬ ಸೂತ್ರ ಬೇಂದ್ರೆ ತಪಕ್ಕೆ ಮಾರ್ಗದರ್ಶಕವಾಯಿತು. ಅವಳು ಪಡೆದ ಹದಿನೇಳು ಮಕ್ಕಳಲ್ಲಿ ಉಳಿದವನು ಒಬ್ಬನೇ ಮಗ. ಅವನಿಗೆ ಗುರುನಾಥ ಎಂದು ಹೆಸರು. ಅವನು ಹತ್ತು ವರ್ಷದವನಾಗಿ ಮಡಿದ. ಮಡಿಯುವ ಪೂರ್ವದಲ್ಲಿ ಅವನು ಮಾಡಿದ ಕಲಗಡಿಗೆ ಕಲ್ಲಿನಲ್ಲಿ ಕೆತ್ತಿದ ಹನುಮಂತನನ್ನು ಗೋದುಬಾಯಿ ತನ್ನ ಕೊನೆಯ ಉಸಿರಿನವರೆಗೂ ಪೂಜಿಸಿದಳು. ಕಾಣದಾದ ಮಗನ ಮೇಲಿನ ಪ್ರೇಮ, ಮಮತೆ, ವಾತ್ಸಲ್ಯ, ಕೃಪೆ ಕಣ್ಣೆದುರೇ ಬೆಳೆಯುವ ಮೊಮ್ಮಗನಾದ ಬೇಂದ್ರೆಯವರ ಮೇಲೆ ಧಾರಾಕಾರವಾಗಿ ಸುರಿಸಿದಳು. ಅವಳು ಸಿಂಪಿಯಾಗಿ ರಕ್ಷಿಸಿದಳು; ಬೇಂದ್ರೆ ಸ್ವಾತಿಯ ಮುತ್ತಾಗಿ ಬೆಳೆದರು. ಎಂಥ ಪ್ರಸಂಗದಲ್ಲಿಯೂ ಆತ್ಮಾಭಿಮಾನವನ್ನು ಕಳೆದುಕೊಳ್ಳಬಾರದು, ಯಾರ ಮುಂದೆಯೂ ದೈನ್ಯದಿಂದ ಕೈ ಒಡ್ಡಬಾರದು, ದೈವವನ್ನು ಸಂಪೂರ್ಣವಾಗಿ ನಂಬಿ, ಸರ್ವಸಮರ್ಪಣ ಬುದ್ಧಿಯಿಂದ, ಶುದ್ಧ ಭಾವದಿಂದ, ಪ್ರಯತ್ನದ ಸಾತತ್ಯದಿಂದ ಜೀವನವನ್ನು ಸಾಗಿಸಬೇಕು ಎಂಬ ಪ್ರಥಮ ಪಾಠಗಳನ್ನು ಬೇಂದ್ರೆಯವರು ಅಜ್ಜಿಯಿಂದ ಕಲಿತರು. ಅವರು ತಮ್ಮ ಜೀವನದಲ್ಲಿ ಅವುಗಳ ಅನುಷ್ಠಾನ ಮಾಡಿ ಗೆದ್ದರು. ಅಂತಹ ಧಾರ್ಮಿಕ ಕಷ್ಟಸಹಿಷ್ಣು ಕುಟುಂಬದಲ್ಲಿ ಹುಟ್ಟಿದ ದ. ರಾ. ಬೇಂದ್ರೆಯವರನ್ನು ರೂಪಿಸಿದ ಪರಿಸರವನ್ನು ಅವಲೋಕಿಸುವುದು ಕಾವ್ಯರೂಪಕ್ಕೆ ಕಾರಣವಾದ ನೆಲದ ಮತ್ತು ನೆಲೆಯ ಅನುಭವವಾಗುತ್ತದೆ.

**ಬೇಂದ್ರೆ ಮನೆತನ**

ಬೇಂದ್ರೆಯವರೇ ತಮ್ಮ ಮನೆತನದ ಬಗ್ಗೆ ಬರೆದುಕೊಂಡಿರುವುದು ಸ್ಪಷ್ಟತೆಗೆ ಕಾರಣವಾಗಿದೆ. "ಬೇಂದ್ರೆ ಮನೆತನ ಕರ್ನಾಟಕದಲ್ಲಿ ಶಿರಹಟ್ಟಿ ಎಂಬ ಊರಿನದು...... ಮೂಲಮನೆತನ ರತ್ನಾಗಿರಿ ಜಿಲ್ಲೆಯ 'ಕಿಳಶಿ' ಗ್ರಾಮದ್ದು...... ನಮ್ಮ ಮುತ್ತಜ್ಜಂದಿರ ಅಜ್ಜ ಕರ್ನಾಟಕಕ್ಕೆ ಬಂದರು. ನಮ್ಮ ಮುತ್ತಜ್ಜ ರಾಮಚಂದ್ರಪಂತರು ಸನ್ಯಾಸ ಗ್ರಹಣ ಮಾಡಿದ್ದರು. ಅವರ ಸಮಾಧಿ ಶಿರಹಟ್ಟಿಯ ಕೋಟೆಯಲ್ಲಿ ಹಾಳಭಾವಿಯ ಹತ್ತಿರ ಇದೆ... ನಮ್ಮ ಅಜ್ಜಂದಿರಾದ ಅಪ್ಪಾಭಟ್ಟರು ದಶಗ್ರಂಥಿಗಳೆಂದು, ಯಾಜ್ಞಿಕ ಧರ್ಮಶಾಸ್ತ್ರಗಳಲ್ಲಿ ಬಲ್ಲಿದರೆಂದು ಪ್ರಖ್ಯಾತರಾಗಿದ್ದರು.. ನಮ್ಮ ಅಜ್ಜಂದಿರಿಂದ ರಚಿತವಾದ 'ಛಂದೋದಾಹರಣ' ಎಂಬ ಒಂದು ಛಂದಶ್ಶಾಸ್ತ್ರೀಯ ಪ್ರಬಂಧವನ್ನು ಇತ್ತೀಚೆಗೆ ನಾನು ಪ್ರಕಟಿಸಿದ್ದೇನೆ. ಅದರಲ್ಲಿ ಅವರ ಭಾಗವತ ಪುರಾಣ ಪ್ರೇಮವು, ಕವಿ ಮೋರೋಪಂತ ಪ್ರಭಾವವು ಕಂಡುಬರುತ್ತದೆ.. ನಮ್ಮ ಚಿಕ್ಕಪ್ಪ ಬಂಡೋಪಂತ ಅವರು ಕಾವ್ಯಾಭ್ಯಾಸ ಮಾಡಿದ ಸಣ್ಣಪುಟ್ಟ ಬರವಣಿಗೆ ಹೇಗೋ ನನ್ನ ಹತ್ತಿರ ಉಳಿದುಕೊಂಡಿದೆ. ನಮ್ಮ ತಂದೆಯವರು ನಮ್ಮ ಅಜ್ಜಂದಿರ ಬಳಿ ಸಂಹಿತಾಂತ ಅಧ್ಯಯನ ಮಾಡಿದ್ದರು.."[8] "ನಮ್ಮ ತಂದೆ ರಾಮಚಂದ್ರಪಂತರು (ತಾತಂಭಟ್ಟ ಎಂದು ಅವರನ್ನು ಕರೆಯುತ್ತಿದ್ದರು.) ಮೊದಲನೆಯ ಹೆಂಡತಿಯನ್ನು ಬೇಗನೆ ಕಳೆದುಕೊಂಡರು.. ನಮ್ಮ ತಾಯಿ ಎರಡನೆಯ ಹೆಂಡತಿ. ತವರುಮನೆಯ ಹೆಸರು ಅಂಬೂತಾಯಿ, ಅತ್ತೆಯಮನೆಯ ಹೆಸರು ಪಾರ್ವತಿಬಾಯಿ.. ನಮ್ಮ ತಂದೆಯವರು ದೈವಯೋಗದಿಂದಲೋ ೧೨ ವರ್ಷ ಗಂಡಮಾಲೆಯ ರೋಗದಿಂದ ನವೆದು ಧಾರವಾಡದಲ್ಲಿ ನಮ್ಮ ಅಜ್ಜಿಯ ಮನೆಯಲ್ಲಿಯೇ ತೀರಿಕೊಂಡರು."[9] ಈ ಹಿನ್ನೆಲೆಯನ್ನು ಗಮನಿಸಿದಾಗ ಬೇಂದ್ರೆಯವರಲ್ಲಿ ಧಾರವಾಡದ ಶಾಲ್ಮಲಿಯಂತೆ ಕಾವ್ಯ, ಛಂದಸ್ಸು, ಶಾಸ್ತ್ರಾಧ್ಯಯನ ವಂಶಪರಂಪರೆಯಿಂದ ಹರಿದುಬಂದಿರಲು ಸಾಕು ಎಂದು ಹೇಳಬಹುದು.

**ಜೀವನ ನಿರ್ಮಾಣದಲ್ಲಿ ಅಜ್ಜಿ ತಾಯಿಯರ ಪಾತ್ರ**

ಈಗಾಗಲೇ ತಿಳಿದಿರುವಂತೆ ಬೇಂದ್ರೆಯವರನ್ನು ಸಾಕಿ ಸಲಹಿದ ಜೀವ ಅವರ ಅಜ್ಜಿ. ಆಕೆಯ

ಜೀವದ ತಂತು ಎಂದರೆ ಮಗಳು ಅಂಬಿಕೆ ಮತ್ತು ಅವಳ ಇಬ್ಬರು ಗಂಡುಮಕ್ಕಳು. ಅವರ ಉಳಿವೆ ಅವಳ ಉಸಿರಾಗಿತ್ತು. ತನ್ನ ಅರ್ಥರಹಿತ ಜೀವನದಲ್ಲಿ ಆ ಮಕ್ಕಳನ್ನು ಬೆಳೆಸುತ್ತ ಸಾರ್ಥಕತೆಯನ್ನು ಕಾಣಲು ಆಶಿಸುತ್ತಿದ್ದಳು. ತಮ್ಮ ಅಜ್ಜಿಯನ್ನು ಕುರಿತು ಬೇಂದ್ರೆಯವರು, "ನನ್ನ ತಾಯಿಯ ತಾಯಿ ಗೋದೂಬಾಯಿ, ಒಳ್ಳೆಯ ಧೈರ್ಯದ ಹೆಣ್ಣುಮಗಳು. ಆಕೆಯ ತವರುಮನೆ ನರಗುಂದದ ದೀಕ್ಷಿತರದು. ಆಕೆಯ ಜೀವದ ಕಷ್ಟದ ಕಥೆ ನೆನೆಸಿದಂತೆಲ್ಲ ಆಕೆ ಮಹಾತಪಸ್ವಿನಿ ಎಂದೆ ಭಾಸವಾಗುವುದು."[10] "ನಮ್ಮ ಅಜ್ಜಿ ಹುಲಿಯಂಥವಳು. ಆದರೆ ಆಕೆಗೆ ಆಳವಾದ ಮಮತೆಯ ಹೃದಯವು ಇತ್ತು. ವೈದಿಕ ಕುಟುಂಬದಲ್ಲಿ ತನ್ನ ಮಗಳನ್ನು ಕೊಟ್ಟಿದ್ದೇ ದೊಡ್ಡ ಪುಣ್ಯವೆಂದು, ಅವರ ಮಕ್ಕಳ ಸಂಗೋಪನ ಮಾಡುವುದು ಹೆಚ್ಚಿನ ಪುಣ್ಯವೆಂದು ಆಕೆ ತಿಳಿದಿದ್ದಳು"[11] ಎಂದು ನುಡಿದಿದ್ದಾರೆ. ಅವರ ಅಜ್ಜಿ ನಡೆಸುತ್ತಿದ್ದ ಖಾನಾವಳಿಯನ್ನು ಕುರಿತು ಬೇಂದ್ರೆಯವರ ಬಾಲ್ಯದ ಗೆಳೆಯ ಶ್ರೀಧರ ಖಾನೋಳಕರ ಹೀಗೆ ಹೇಳಿದ್ದಾರೆ: 'ಇವರ ತಾಯಿಯ ತಾಯಿ (ಅಜ್ಜಿ) ಖಾನಾವಳಿ ಹಾಕಿದ್ದರು. ಆಗಿನ ಖಾನಾವಳಿಯೆಂದರೆ ಅದೊಂದು ಸುಂದರವಾದ ಊಟದ ಮನೆ. ದೊಡ್ಡ ಆಫೀಸರರು, ಬಿ.ಎ., ಎಂ.ಎ., ಆದಂಥ ಶಾಲಾಮಾಸ್ತರರು, ಕೆಲವು ವಿದ್ಯಾರ್ಥಿಗಳು ಹೀಗೆ ಊಟ ಮಾಡುವವರು. ಹೆಸರಿಗೆ ಒಂದು ಖಾನಾವಳಿ. ಒಂದು ಮನೆಯಂತೆಯೇ ಇತ್ತು. ಯಾರಾದರೂ ಬೇನೆಬಿದ್ದರೆ ಇವರ ಅಜ್ಜಿಯೇ ಉಪಚಾರ ಮಾಡುತ್ತಿದ್ದರು. ಖಾನಾವಳಿಯಲ್ಲಿ ಊಟ ಮಾಡುವವರೆಲ್ಲರೂ ಇವರಿಗೆ ಮೊಮ್ಮಕ್ಕಳೇ ಅನ್ನಿರಿ! ಇಷ್ಟು ಪ್ರೀತಿಸುತ್ತಿದ್ದರು. ಅನೇಕ ವಿದ್ವಾಂಸರು ನಿತ್ಯ ಕಣ್ಣಿಗೆ ಬೀಳುವದೂ ಅವರ ಉದಾತ್ತ ವಿಚಾರಗಳಿಂದ ಪರಿಪ್ಲುತವಾದ ವಾದ ವಿವಾದಗಳನ್ನು ಕೇಳುವದೂ ಬೇಂದ್ರೆಯವರಿಗೆ ಮೊದಲಿನಿಂದಲೇ ಸಿಕ್ಕಿತು. ಆದ್ದರಿಂದ ಅವರಂತೆಯೇ ತಾವಾದರೂ ಯಾವದೊಂದು ದೊಡ್ಡ ಕಾರ್ಯವನ್ನು ವಹಿಸಿಕೊಂಡು, ಪಂಡಿತನಾಗಿ ದೇಶಸೇವೆಗೈಯಬೇಕೆಂಬ ಮಹತ್ವಾಕಾಂಕ್ಷೆಯು ಚಿಕ್ಕಂದಿನಲ್ಲಿಯೇ ತನ್ನಿಂದ ತಾನೇ ಹುಟ್ಟಿರಲಿಕ್ಕೆ ಸಾಕು!.[12]

ಬೇಂದ್ರೆಯವರು "ಅಜ್ಜಿಯ ಪೋಷಣೆಯಲ್ಲಿ ಬೆಳೆದವನಾದರೂ, ನಾನು ನಿಜವಾದ ಬಡತನವನ್ನನುಭವಿಸಲಿಲ್ಲ. ನನ್ನ ಅಜ್ಜಿ ಬಡವಿ. ಜನರ ಮನೆಯಲ್ಲಿ ಅಡಿಗೆಗೆ ಹೋಗುತ್ತಿದ್ದರೂ, ಕಟ್ಟಾಭಿಮಾನಿ. ಯಾರಿಗೂ ದೇಹಿ ಎಂದವಳಲ್ಲ. ನಮ್ಮದೂ ಅದೇ ಹಾದಿ"[13] ಎಂದು ನುಡಿದು, ಅಜ್ಜಿಯ ಶಿಸ್ತು, ಸಹಿಷ್ಣುತೆ, ಶ್ರದ್ಧೆ, ಕರ್ತವ್ಯಬದ್ಧತೆ ತನ್ನ ಬಾಲ್ಯವನ್ನು ರೂಪಿಸಿತು ಎಂದು ಹೆಮ್ಮೆಪಟ್ಟಿದ್ದಾರೆ. ಅವರನ್ನು ರೂಪಿಸಿದ ಇನ್ನೊಂದು ಶಕ್ತಿ ಅವರ ತಾಯಿ. ಆಕೆ ರಾಮನಾಮೋಪಾಸಕಳು, ಗೋಂದಾವಲೆಕರ ಮಹಾರಾಜರ ಭಕ್ತೆ. ಆಕೆ ಮತ್ತು ಪತಿ ರಾಮಚಂದ್ರ ಬೇಂದ್ರೆ ಅವರು 'ಗೋಂದಾವಲಿಗೆ ಹೋಗಿ ಮಹಾರಾಜರ ದರ್ಶನ ಪಡೆದು, ರಾಮನಾಮೋಪಾಸನೆ ಪ್ರಾರಂಭಿಸಿದರು. ಅನಂತರವೇ ಅವರಿಗೆ ಚೊಚ್ಚಿಲಮಗ - ದತ್ತಾತ್ರೇಯ ಬೇಂದ್ರೆ ಹುಟ್ಟಿದ್ದು'[14] ಎಂದು ವಾಮನ ಬೇಂದ್ರೆ ಹೇಳಿದ್ದಾರೆ.

**ಜಾನಪದ ಪರಿಸರ**

'ಬೇಂದ್ರೆಯವರದು ಮೂಲತಃ ಜಾನಪದ ಪ್ರತಿಭೆ; ಅವರ ಕಾವ್ಯದಲ್ಲಿ ಗೇಯತೆಯ ಗುಣ ಪ್ರಮುಖವಾದದ್ದು'[15] ಎಂದು ಕೀರ್ತಿನಾಥ ಕುರ್ತಕೋಟಿ ಅವರು ಹೇಳಿದ್ದಾರೆ. ಇದಕ್ಕೆ ಮೂಲ ಕಾರಣ ಅವರ ತಾಯಿ, ಅಜ್ಜಿ ಮತ್ತು ಅಂದಿನ ಧಾರವಾಡದ ಪರಿಸರ. ಬಾಲ್ಯದಲ್ಲಿ ಬೇಂದ್ರೆಯವರ ಕಿವಿಯ ಮೇಲೆ ಬಿದ್ದದ್ದು ಜನಪದ ಹಾಡುಗಳು, ಮಂತ್ರಗಳಲ್ಲ. ಅದರ ಪ್ರಭಾವ ಎಳೆಯ ಬಾಲಕನ ಮೇಲೆ ಉಂಟಾಗಿ ಅದು ತಾಯಿಯ ಮೊಲೆಹಾಲಿನಂತೆ ಬೇಂದ್ರೆ ಜೀವಸತ್ತ್ವದ ಭಾಗವಾಯಿತು. ಅದನ್ನು ಬೇಂದ್ರೆಯವರು 'ಕನ್ನಡ ಜಾನಪದ ಪ್ರಕೃತಿಯ ಪ್ರವೇಶವೂ ಆವೇಶವೂ ಎಂದು ನನ್ನಲ್ಲಿ ಗೂಡು ಮಾಡಿಕೊಂಡಿತೋ ನಾನು ಹೇಳಲಾರೆ. ತಾಯಿ,

ಅಜ್ಜಿ ಬೀಸುವಾಗ ಹೇಳುವ ಪದಗಳಿಂದ, ಬೆಳಗುಜಾವದಲ್ಲಿ ನನಗೆ ಎಚ್ಚರಿಕೆಗಿಂತ ನಿದ್ದೆ ಹೆಚ್ಚು. ಏನು ಆ ಅವಸ್ಥೆಯಲ್ಲಿಯೇ ಪರಿಣಾಮ ಹೆಚ್ಚೋ? ದಾಸರ ಗೋವಿಂದಪ್ಪ ಮೃದುತಾಳ ಭಜನೆಯೊಡನೆ "ಗರುಡಾSSನೇರಿ ಬರುವಾSS | ಇವನ್ನಾರಮ್ಮ್ಮಯ್ಯಾ||" ಎಂದೋ, "ಜಯ ಪಾಂಡುರಂಗಾSS| ಏನು ಮಾಡಿದೀ ಮಾನಭಂಗಾ!" ಎಂದೋ ರಾಗ ಎಳೆದಾಗ ನನಗೆ ಚುಕ್ಕುಬಡೆದು ಮಲಗಿಸಿದಂತಾಗುತ್ತಿತ್ತು. "ನಿಂಬಿಯ ಮರ ಹುಟ್ಟಿ ನಿಂಗಕ್ಕೆ ನೆರಳಾಗಿ ಬಂದ ಜಂಗಮಕS ಬಸSವಯ್ಯಾ ಸೂವಿ||" ಎಂದು ಬಾಲಬಸವರ ಹಾಡು ಕಿವಿಗೆ ಬೀಳುತ್ತಲೇ ನಮ್ಮ ಕಾಲು ಹೇಳದೆ ಕಿತ್ತಿ ಅವರಿದ್ದಲ್ಲಿಗೆ ಹೋಗಿ ಅವರ ಸಾಕ್ಷಾತ್ಕಾರವಾದಾಗ ಈ ಕಣ್ಣಿಗೆ ತೃಪ್ತಿ. ಗೊಲ್ಲರು, ಕವಲೆತ್ತಿನವರು, ದುರ್ಗಮುರ್ಗಿಗಳು -ಎಂಥ "ತಾನಾ ತಂದಾನಾS" ಇದ್ದರೂ ಕಿವಿಗೆ ಔತಣವೆನಿಸುತ್ತಿತ್ತು"[16] ಎಂದು ನುಡಿದಿದ್ದಾರೆ.

**ಸಮುದಾಯದ ಬಾಲಕ**

ಅವರು ವಾಸವಾಗಿದ್ದ ಕಾಮನಕಟ್ಟೆ ಅಂದು ಧಾರವಾಡದ ಕೇಂದ್ರಸ್ಥಾನದಲ್ಲಿತ್ತು. ಕುತೂಹಲಿಯೂ, ಸೂಕ್ಷ್ಮದರ್ಶಿಯೂ ಆದ ಬಾಲಕ ಬೇಂದ್ರೆ ಆ ಸಮುದಾಯದ ಬಾಲಕನಾಗಿ ಬೆಳೆದುದರಿಂದ ಜನರ ಜೀವನದ ರೀತಿ ನೀತಿಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಯಿತು. ಮುಕ್ತ ಸ್ವಾತಂತ್ರ್ಯ ಬಾಲ್ಯವನ್ನು ಅನುಭವಿಸಿದ ಬೇಂದ್ರೆ ಅಂದಿನ ಬದುಕನ್ನು ಹೀರಿ ಪುಷ್ಟಿಗೊಂಡರು. ಆ ಪರಿಸರವನ್ನು ಚಿತ್ರಿಸುತ್ತ ತಾನು ಅದರ ಒಂದು ಭಾಗವಾದುದನ್ನು ಅವರು ಹೀಗೆ ವರ್ಣಿಸಿದ್ದಾರೆ: "ಪಗಡೆಯಾಟದ ಪಟ್ಟದಂತೆ ನಾಲ್ಕೂ ದಿಕ್ಕಿಗೆ ಚಾಚಿಕೊಂಡ ಕಾಮನಕಟ್ಟೆಯ ಆ ಕೂಟು ಅಲ್ಲಿಯ ಎಲ್ಲದಕ್ಕೂ ಆಶ್ರಯಸ್ಥಾನವಾಗಿತ್ತು. ವರ್ಷಕ್ಕೆ ನಾಲ್ಕು ಸಲವಾದರೂ ಆಗುವ ದೊಡ್ಡಾಟ, ಬಯಲಾಟ, ಕಾಮನಹಬ್ಬ, ಅಲಾಬಿಯ ಮೆರವಣಿಗೆ, ಶ್ರಾವಣಮಾಸದೊಳಗಿನ ಅತಿ ವಿಜೃಂಭಣೆಯ ಸೋಗಿನ ಪರಂಪರೆ ಜಂಗು, ಹೆಜ್ಜೆಮೇಳ, ಸನಾದಿಯವರ ಉತ್ಸಾಹದ ವಿಲಾಸ, ಹಬ್ಬ-ಹರಿದಿನಗಳಲ್ಲಿ ಕಂಡುಬರುವ ಉತ್ಸಾಹದ ಉಬ್ಬು, ಹುತ್ತಪ್ಪನ ಕೆಸರಾಟ, ಕಾಮನ ಓಕಳಿ, ಸಂಕ್ರಾಂತಿಯ ಕುಸುರೆಳ್ಳು, ದಸರೆಯ ಬಂಗಾರ, ದೀವಳಿಗೆಯ ಆರತಿ ಎಲ್ಲವನ್ನೂ ಸಾಕ್ಷಿಯಾಗಿ ನೋಡುತ್ತಿತ್ತು.

"ಎಲ್ಲ ಮನೆಯ ಹಿರಿಯರಿಗೂ ಕೆಲ ಹುಡುಗರು ಭಯಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಎಲ್ಲ ಮನೆಯ ಹೆಂಗಳೆಯರಿಗೂ ಎಲ್ಲ ಓಣಿಯ ಹುಡುಗರು ತಮ್ಮವಾಗಿ ತೋರುತ್ತಿದ್ದವು. ಕಾರ್ತೀಕಮಾಸದಲ್ಲಿ ಸುತ್ತು ಹತ್ತು ಓಣಿಯ ಹಾಳುಗುಡಿಗಳಲ್ಲಿಯೂ ಪೂಜೆಯ ಸಂಭ್ರಮವಿರುತ್ತಿತ್ತು. ಮಂತ್ರ, ಭಜನೆ, ಜಾಂಗಟೆ, ಶಂಖ ಎಲ್ಲ ಸೇವೆ ಮಾಡುವುದರಲ್ಲಿ ಬಾಲಕರ ಕಪಿಸೈನ್ಯಕ್ಕೆ ಅನಿರ್ಬಂಧ ಸ್ವಾತಂತ್ರ್ಯವಿತ್ತು. ಜಂಗಿನ ಪದಗಳು, ಜಂಗಮರ ಹಾಡುಗಳು, ವೆಂಕಟೇಶ ಪಾರಿಜಾತದ ಆಲಾಪನೆ, ಅರಳೀಕೋಟೆ ಹಾಕಿದ ಹೆಣ್ಣುಮಕ್ಕಳ ಡೌಲು ಆಢ್ಯತೆ, ರಥದ ಎಳೆದಾಟದ ಸಂಭ್ರಮ, ಒಂದೇ ಎರಡೇ. ಆ ಕಾಲಕ್ಕೆ ಋತುಮಾನ ಚಿತ್ರ ವಿಚಿತ್ರ ವಿಲಾಸದಿಂದ ಕುಣಿಯುತ್ತಿತ್ತು."[17] ಆ ಪರಿಸರದಲ್ಲಿ ಬೇಂದ್ರೆಯವರ ಅಂತರಂಗದ ಭಾವ ಕನ್ನಡದ ದೇಸಿಯ ಸೊಗಡನ್ನು ನೂರಕ್ಕೆ ನೂರರಷ್ಟು ಸೂರೆಗೊಂಡಿತು.

**ಆಟಗಾರ**

ಬೇಂದ್ರೆಯವರು ಬಾಲ್ಯದಲ್ಲಿ ಆಡಿದ ಆಟ ಅವರ ಕಾವ್ಯದ ಉಪಮಾನಗಳಾಗಿ, ರೂಪಕಗಳಾಗಿ, ಪ್ರತಿಮೆಗಳಾಗಿ ಕನ್ನಡ ಕಾವ್ಯಶಕ್ತಿಯನ್ನು ಹೆಚ್ಚಿಸಿವೆ. ಅದಕ್ಕೆ ಕಾರಣ ಅವರು ಬಾಲ್ಯದಲ್ಲಿ ತನ್ಮಯತೆಯಿಂದ ಆಡಿದ ಆಟ. ಅದಕ್ಕೆ ಅವಕಾಶ ಮಾಡಿಕೊಟ್ಟ ಅವರ ತಾಯಿ. ಅವರು ಆಡಿದ ಆಟಗಳನ್ನು 'ಚಿಣಿಫಣಿ, ಚಂಡು, ಬೊಗರೆ, ಗಾಳಿಪಟ, ಆಕಾಶಬುಟ್ಟಿ, ಜಿದ್ದು, ಕಸರತ್ತಿನ ಕೆಲಸ, ಗೋಲಿಗುಂಡು, ತಿಳ್ಳಿ,

ಹುಡುತುತ್ತು, ಗಂಗಾಳಮುರಗಿ' ಎಂದು ಹೇಳುತ್ತ, ಅವರು 'ಹೆಣ ಎತ್ತುವ ಮೊದಲು ಬಾರಿಸುವ ಹಲಗೆಯಲ್ಲಿಯೂ ನಮಗೊಂದು ಸಲಿಗೆಯಿತ್ತು'[18] ಎಂದು ಬಾಲ್ಯದ ಮುಕ್ತ ಆಟವನ್ನು ನೆನೆದಿದ್ದಾರೆ. ಅದರ ದನಿಯನ್ನು ಕಾವ್ಯದಲ್ಲಿ ಹೀಗೆ ನೀಡಿದ್ದಾರೆ:

'ಸತ್ತರೆ ಸತ್ತೇನಿ' ಇದ್ದವರ ಮೆರವಣಿಗೆ
ಹಲಿಗೆ ಸೊಲ್ಲಿಸುತಿತ್ತು ಕೊನೆಯ ರಿಣಾ'[19]

**ಕತ್ತಲೆ ಬೆಳಕು**

ಬೇಂದ್ರೆಯವರ ತಾಯಿ ಮುದ್ದು ಬಾಲಕ ಬೇಂದ್ರೆಯನ್ನು ಬೆಳೆಸುತ್ತಿರುವಾಗ ಆತ ಕೇಳುತ್ತಿದ್ದ ಪ್ರಶ್ನೆಗಳಿಗೆ ಸಹನೆಯಿಂದ ಉತ್ತರ ನೀಡಿ ಅವನನ್ನು ರೂಪಿಸುತ್ತಿದ್ದಳು. ಬೇಂದ್ರೆಯವರನ್ನು ಚಿಕ್ಕಂದಿನಲ್ಲಿ ಕಾಡಿದ್ದು ಬೆಳಕು ಮತ್ತು ಕತ್ತಲೆಯ ಒಗಟು. ಅದು ಅವರನ್ನು ಚಿಂತನೆಗೀಡುಮಾಡಿ ಕಾವ್ಯದಲ್ಲಿ ಪ್ರಕಾಶವಾಗಲು ಕಾರಣವಾಗಿದೆ ಎಂದು ಹೇಳಬಹುದು. ಅವರು ಆ ಘಟನೆಯನ್ನು ನೆನೆದು "ನನ್ನ ತಾಯಿ 'ಈ ಅಡಿಗೆ ಮಾಡಿಬಿಟ್ಟು ದೇವರನ್ನು ನೆನಸಿ ನಿನಗೆ ಉಣಲಿಕ್ಕೆ ಹಾಕ್ತೇನಪ್ಪ' ಅನ್ನುತ್ತಿದ್ದರು. ತಾಯಿಯನ್ನು ಕುರಿತು ಚಿಕ್ಕಂದಿನಲ್ಲಿ ನಾನು ಬರೆದ ಕವಿತೆಯೊಂದಿದೆ. ನಾನು ಎರಡು ವರ್ಷದ ಕೂಸಿದ್ದಾಗ ಕೈಗೆ ಸಿಗುತ್ತಿರಲಿಲ್ಲವಂತೆ. '೯ ತಿಂಗಳಿನಲ್ಲಿ ನಿನಗೆ ಕಾಲೂ ಬಂತು, ಬಾಯೂ ಬಂತು' ಎನ್ನುತ್ತಿದ್ದರು ತಾಯಿ. ಯಾರ ಮನೆಯೊಳಗೋ ಹೋಗಿ ಮಾತಾಡ್ತಾ ಕೂತಿರ್ತಾನೆ - ಹುಡುಕಿಕೊಂಡು ತಂದು ಊಟಕ್ಕೆ ಹಾಕಬೇಕು. ಅಲ್ಲಿ ಬಂದಮೇಲೆ ಕೋಣೆ ಎಲ್ಲ ಕತ್ತಲು ಮಾಡಬೇಕು. ಆಮೇಲೆ ದೀಪ ಹಚ್ಚಬೇಕು. ದೀಪ ಹಚ್ಚಿದ ಮೇಲೂ ಉಣ್ಣು ಅಂದರೆ ಉಣತಿದ್ದಿಲ್ಲ. ಯಾಕುಣ್ಣೋದಿಲ್ಲಾ? ಎಂದು ಪ್ರಶ್ನಿಸಿದಾಗ, ಹೊರಗೆ ಬೆಳಕಿತ್ತು, ಇಲ್ಲಿ ಕತ್ತಲೆ ಹೇಗಾಯ್ತು? 'ಬೆಳಕೆ ಬೆಳಕಿದ್ದು ಕತ್ತಲೆಯು ಆಯಿತು ಹೇಗೆ?' ಈ ಅನಾದಿ ಪ್ರಶ್ನೆ 'ತಮಸೋಮಾ ಜ್ಯೋತಿರ್ಗಮಯ' ಎಂದು ಮುಂದೆ ದೊಡ್ಡವನಾದ ಮೇಲೆ ತಿಳಿಯಿತು."[20] ಎಂದು ಹೇಳಿದ್ದಾರೆ. ಹೀಗೆ ಬಾಲ್ಯದಲ್ಲಿಯೇ ಬೇಂದ್ರೆಯವರ ಭಾವುಕತೆ Sentimental ಆಗದೆ Emotion ಆಯಿತು. ಹಾಗಾಗಿ ಅವರ ಭಾವಗೀತೆ ಸತ್ಯಕ್ಕೆ ಪ್ರತೀಕ. ಭಾವವೆಂದರೆ ಇರುವುದು ಹಾಗೂ ಸತ್ಯ.

**ಧಾರ್ಮಿಕ ನಂಬಿಕೆ ಮತ್ತು ಸಂಸ್ಕೃತ ಕಾವ್ಯ**

ಬೇಂದ್ರೆಯವರ ಅಜ್ಜಿ ಮತ್ತು ತಾಯಿ ಗೋಂದವಲೇಕರರ ಭಕ್ತರು ಎಂದು ಈ ಮೊದಲೇ ಹೇಳಿದೆ. ಗೋಂದವಲೇಕರರಿಂದ ಜಪದೀಕ್ಷೆಯ ಅನುಗ್ರಹವನ್ನು ತನ್ನ ತಂದೆ ತಾಯಿ ಪಡೆದಿದ್ದನ್ನು ಅವರು "..... ನಮ್ಮ ಅಜ್ಜಿ ನನ್ನ ತಾಯಿ-ತಂದೆಗಳೊಡನೆ ಬಾಲಕನಾದ ನನ್ನನ್ನು ಕರೆದುಕೊಂಡು ನರಗುಂದಕ್ಕೆ ಮೊಟ್ಟಮೊದಲನೆಯ ಸಲ ೧೯೦೨-೧೯೦೩ರಲ್ಲಿ ಹೋದಳು. ಆಗ ಅಲ್ಲಿ ಗೋಂದವಲೇಕರ ಮಹಾರಾಜರು ಬಂದಿದ್ದರು. ನಮ್ಮ ತಂದೆ ತಮ್ಮ ತಂದೆಯ ಹೇಳಿಕೆಯಂತೆ ಮಹಾರಾಜರಿಂದ ಜಪದೀಕ್ಷೆಯ ಅನುಗ್ರಹ ಪಡೆದಿದ್ದರು. ನಮ್ಮ ತಾಯಿಗೆ ತಾವು ಗುರುಗಳಾಗಿ ಜಪ ಕೊಟ್ಟರು"[21] ಎಂದು ನುಡಿದಿದ್ದಾರೆ. ಇಂತಹ ಕುಟುಂಬದಲ್ಲಿ ಜನಿಸಿದ ಬೇಂದ್ರೆಯವರು ಗುರುಗಳನ್ನು ಆರಾಧಿಸುವ ಮನೋಭಾವದವರಾಗಿ ರೂಪುಗೊಂಡು ಶ್ರೀ ಅರವಿಂದರ ಚಿಂತನೆಗಳನ್ನು ಮೈಗೂಡಿಸಿಕೊಳ್ಳಲು ಸಮರ್ಥರಾದರು. ಅವರಲ್ಲಿ ಧಾರ್ಮಿಕ ನಂಬಿಕೆ ಮತ್ತು ಕಾವ್ಯಚಿಂತನೆ ಬೆಳೆಯಲು ತಾಯಿ ತುಂಬಾ ಪ್ರೇರಕಳಾಗಿದ್ದಳು. ಆಕೆಯು ಮಗನಿಗೆ ಧಾರ್ಮಿಕ ಗ್ರಂಥಗಳನ್ನು ಓದಿಹೇಳಿ, ಜೊತೆಗೆ ಅವನು ಕುಳಿತು ಓದುವಂತೆ ಮಾಡಿದ ಪುಣ್ಯವಂತೆ. ಆಕೆಯ ಕಾವ್ಯ ಮತ್ತು ಆಧ್ಯಾತ್ಮಿಕ ಬಾಳು ಆ ಬಾಲಮನದಲ್ಲಿ ತಾಯಿಯ ಸ್ಪರ್ಶದಂತೆ ಪ್ರವೇಶಿಸಿತು. ನೈತಿಕತೆಯ ಕಲ್ಪನೆ ಮೂಡಿಸಿತು. ಮಾತೃ ಪ್ರೇಮದ ಪರಿಕಲ್ಪನೆ ಬೇಂದ್ರೆ ಕಾವ್ಯದ

ಮೂಲ ನೆಲೆಯಾಯಿತು. ಅದನ್ನು ಬೇಂದ್ರೆಯವರು 'ನಮ್ಮ ತಾಯಿ ಮನೆಯಲ್ಲಿರುವಾಗ ಅನೇಕ ಪ್ರಾಕೃತ ಓವಿ ಗ್ರಂಥಗಳನ್ನು ತಾನು ಓದಿದಳು, ನನ್ನಿಂದ ಓದಿಸಿದಳು. ಕಾಶಿಖಂಡ, ಜೈಮಿನಿಭಾರತ, ಏಕನಾಥ ಭಾಗವತ, ದಾಸಬೋಧ, ಇವುಗಳ ಶ್ರವಣ ಈ ಕಾಲದಲ್ಲಿಯೇ ಆಯಿತು. ಊರಲ್ಲಿಯ ಪುರಾಣ ಪ್ರವಚನ, ಕೀರ್ತನೆಗಳು ಅವು ಬೇರೆ. ಸಹಸ್ರಬುದ್ಧೆ ಅವರ ಸಂಸ್ಕೃತ ಪಾಠಶಾಲೆಯೊಳಗಿನ ವಿದ್ಯಾಭ್ಯಾಸ, ಮೇಘದೂತ, ಭರ್ತೃಹರಿ ಶತಕ, ಕಾಲಿದಾಸನ ನಾಟಕ ಇವುಗಳ ಸಂಸ್ಕಾರ ಮೂಡಿತು. ಜಗನ್ನಾಥಪಂಡಿತನ ಕೃತಿಗಳು ನನ್ನ ಪ್ರೀತಿಯ ಪಠನ ಪುಸ್ತಕಗಳಾಗಿದ್ದವು. ಅದರೊಳಗಿನ ಅನ್ಯೋಕ್ತಿ ಶಾಂತಿ ವಿಲಾಸಗಳಂತೆ, ಅವನ ಗಂಗಾಲಹರಿ ಮತ್ತು ಬೇರೆ ಲಹರಿಗಳು ನನ್ನನ್ನು ತಿಳಿಯದೆ ಕಾವ್ಯ ಪ್ರದೇಶದಲ್ಲಿ ಎಳೆದೊಯ್ದವು'[22] ಎಂದು ಹೇಳಿದ್ದಾರೆ.

**ಜೀವ - ಸಾವು**

ಬೇಂದ್ರೆಯವರು ತಮ್ಮ ಬಾಲ್ಯದಲ್ಲಿ ತಮ್ಮಂದಿರ, ತಂದೆಯ, ಬಂಧುಬಾಂಧವರ, ಅಜ್ಜಿಯ ಸಾವನ್ನು ಹತ್ತಿರದಿಂದ ಕಂಡವರು. ಅವರಿಗೆ ಇತರರ ಸಾವು, ಪ್ಲೇಗು ಕಾಲರಾ, ಮೈಲಿಯ ಉಪಟಳದಿಂದ ಸತ್ತವರ ಮೆರವಣಿಗೆ ನೋಡುವದು ಅಪರೂಪವಾಗಿರಲಿಲ್ಲ. 'ಕೆಲವೊಂದು 'ವಿಮಾನ'ದ ಮೆರವಣಿಗೆ ನೋಡಲು ನಾವು ಸಾಲೆ ಬಿಟ್ಟು ಕೂಡ ಬರುತ್ತಿದ್ದೆವು. ಮುಸಲ್ಮಾನರ ಹೆಣದ ಹಿಂದಿಂದೆ ಹೋಗುವುದರಲ್ಲಿ ಒಂದು ಸುವಾಸನೆಯ ಎಳೆತವಿತ್ತು. ಅತಿ ಜುಗುಪ್ಸೆಯ ನೋಟ ಎಂದರೆ ಬ್ರಾಹ್ಮಣರ ಹೆಣದ್ದು. ಅದನ್ನು ನಾವು ತುಂಬಾ ಭಯದಿಂದಲೇ ನೋಡುತ್ತಿದ್ದೆವು'[23] ಎಂದು ಹೇಳಿದ್ದಾರೆ. ಈ ಸಾವು ಅವರನ್ನು ಚಿಕ್ಕಂದಿನಲ್ಲಿ ಮುಂದಿನ ಕರುಳುಕುಡಿಗಳ ಸಾವನ್ನು ಸಹಿಸುವ ರುದ್ರಚೇತನವನ್ನು ರೂಪಿಸಲು ಕಾರಣವಾಯಿತು ಎಂದು ಎನಿಸುತ್ತದೆ. ಬಡತನದ ಜೀವನದಲ್ಲಿ ಅವರನ್ನು ನುಂಗಿ ನೊಣೆಯುವಂತೆ ಸಾವು ಕಾಡಿದ್ದು ಅವರ ಆಧ್ಯಾತ್ಮಿಕ ಚಿಂತನೆಯನ್ನು ಗಟ್ಟಿಗೊಳಿಸಲು ಕಾರಣವಾದಂತೆ ಕಾಣುತ್ತದೆ. ೧೮೯೮ರಲ್ಲಿ ಅವರ ತಮ್ಮ ಹುಟ್ಟಿದ, ತೀರಿಕೊಂಡ. ೧೯೦೫ರಲ್ಲಿ ಚಿಕ್ಕಪ್ಪ ಬಾಳಾಕಾಕಾ (ನರಸಿಂಹ) ಮತ್ತು ಗೋಖಲೆ ಗೋವಿಂದರಾಯರು ತೀರಿದರು. ೧೯೦೭ರಲ್ಲಿ ಇಂಗ್ಲಿಷ್ ೫ನೇ ಇಯತ್ತೆ ಓದುವಾಗ ತಂದೆ ತೀರಿಕೊಂಡರು. ೧೯೧೩ಮೆಟ್ರಿಕ್ಯುಲೇಷನ್ ಪಾಸಾದಾಗ ತಮ್ಮ ಮನೆಯ ಆಧಾರವಾದ ಅಜ್ಜಿ ತೀರಿಕೊಂಡಳು. ಹೀಗೆ ಬಾಲ್ಯದ ಬಾಳು ಸಾವಿನ ಜೊತೆಜೊತೆಗೆ ಸಾಗುತ್ತ ಅದರ ಸತ್ಯದರ್ಶನವನ್ನು ಕಾವ್ಯವಾಗಿಸಿತ್ತು.

> 'ಮಣ್ಣಾದ ಮೈವಂತಾ, ಮಾತಾದಾ ಗುಣವಂತಾ
> ತಾನಾಗಿ ಉಳಿದಿತ್ತು ತನ್ನತನಾ'[24]

ಈ ಸಾವುಗಳಲ್ಲಿ ತಮ್ಮನಾದ ರಾಘುವಿನ ಸಾವು ಅಸಹಾಯಕ ಬಡವರ ಬಾಳಿನ ಒಂದು ಗಾಥೆಯಂತಿದೆ. ಅಂತಹ ಕ್ರೂರ ನೋವನ್ನು ಅನುಭವಿಸಿದುದರಿಂದಲೇ ಬೇಂದ್ರೆ ಬದುಕಿನ ಬೆಂಕಿಯಲ್ಲಿ ಉಕ್ಕುಗೊಂಡು 'ರಸವೆ ಜನನ ವಿರಸ ಮರಣ| ಸಮರಸವೇ ಜೀವನ|' ಎಂಬ ಚಿಂತನೆಯನ್ನು ನೀಡಲು ಸಾಧ್ಯವಾಯಿತು. ಬೇಂದ್ರೆಯವರಿಗೆ ಶಾಲೆಯಷ್ಟೇ ಮುಖ್ಯವಾದುದು ಆಟವಾಗಿತ್ತು. ಅಜ್ಜಿ ತೀರ್ಥಯಾತ್ರೆ ಹೋದಾಗ ಮನೆಯಲ್ಲಿ ತಾಯಿ ತಮ್ಮಂದಿರ ಜೊತೆ ಇದ್ದ ಬಾಲಕ ಬೇಂದ್ರೆ ಅಜ್ಜಿ ಹಿಂತಿರುಗಿ ಬಂದೊಡನೆ ಎರಡು ದಿನ ಆಟ ಬಿಟ್ಟಿದ್ದವನು ಹೆಚ್ಚು ಹೊತ್ತು ಆಟವಾಡಿ ತಡಮಾಡಿ ಮನೆಗೆ ಬಂದಾಗ ತಾಯಿ ರಾಘುವಿನ ಗೊಬ್ಬರ ಜ್ವರದಿಂದ ಗಾಬರಿಯಾಗಿ ಆ ಎಂಟೊಂಬತ್ತು ವರ್ಷದ ಹುಡುಗನನ್ನು ಬಗಲಲ್ಲಿ ಹೊತ್ತುಕೊಂಡು ಡಾಕ್ಟರಲ್ಲಿಗೆ ಹೋಗುವವಳು. ತಾಯಿಯ ಜೊತೆಗೂಡಿ ಹೋದ ಬಾಲಕ ಬೇಂದ್ರೆ ತಮ್ಮ ಅಸಹಾಯಕತನವನ್ನು 'ಗೋಖಲೆ ಕೃಷ್ಣ ಮಾಮಾ ಬಿಲ್ಲಿನ ವಿಷಯ ಡಾಕ್ಟರಿಗೆ ಏನೋ ಹೇಳಿ

ಹೋಗಿರಬೇಕು. ಡಾಕ್ಟರು ಏನೋ ಪ್ರಕೃತಿ ನೋಡಿದರು. ಔಷಧ ಬಾಟ್ಲಿಯನ್ನು ಕೊಟ್ಟರು' ಎಂದು ಹೇಳಿದ್ದಾರೆ. ಹಿಂತಿರುಗಿ ಮನೆಯ ಬಾಗಿಲಿಗೆ ಬರುವಾಗ್ಗೆ ಆ ಮಗ ತಾಯಿಯ ಕಂಕುಳಲ್ಲಿಯೇ ಪ್ರಾಣ ಬಿಡಲು 'ತಾಯಿ ಕುಕ್ಕರಿಸಿಬಿಟ್ಟಳು.' 'ತಾಯಿಯ ದುಃಖ ಕಟ್ಟೊಡೆದು ಆರ್ಭಟಿಸಿದಾಗ ಅಜ್ಜಿ, ನೆರೆಮನೆಯ ಹೆಂಗಸರು ಬಂದರು.' ಅಂದಿನ ಆ ಕಾಳರಾತ್ರಿಯ ಸಾವಿನ ಸ್ಪರ್ಶ ಆ ಕುಟುಂಬವನ್ನು ಆವರಿಸಿದ ರೀತಿ, ಅದನ್ನು ಅವರು ಎದುರಿಸಿದ ಧೈರ್ಯ 'ಎಂಟು ಎದೆಯ ಬಂಟ ಬಡವ'ನದಾಗಿದೆ. ಅದನ್ನು ಬೇಂದ್ರೆಯವರು 'ಹತ್ತು, ಹನ್ನೊಂದು, ಹನ್ನೆರಡು, ಒಂದು ಎರಡು ಹೊಡೆದವು. ನೆರೆಯವರು ಮನೆ ಸೇರಿದರು. ನಾವು ಮೂವರು ಆ ಹುಡುಗನನ್ನು ಎದುರಿಗೆ ಹಾಕಿಕೊಂಡು ಕುಳಿತುಬಿಟ್ಟೆವು. ತಮ್ಮ ಕೃಷ್ಣನಿಗೇನೋ ನಿದ್ದೆ ಚೆನ್ನಾಗಿತ್ತು. ಅದೂ ಒಂದು ಸಮಾಧಾನದ ವಿಷಯ. ಬೆಳಗಾದ ಮೇಲೂ ಈ ಹೆಣ ಹೀಗೆ ಇಟ್ಟುಕೊಂಡಿರುವುದೇ? ಎಂಬ ವಿಚಾರ ನಮ್ಮ ಅಜ್ಜಿಗೆ ತಲೆದೋರಿ ಚಿಂತೆಗೂ ಯೋಚನೆಗೂ ಪ್ರಾರಂಭವಾಯಿತು. ನೆರೆಹೊರೆಯ ಒಬ್ಬಿಬ್ಬರು ಗೃಹಸ್ಥರು ನಮಗೆ ಸಮಾಧಾನವನ್ನಾಗಲಿ, ಸಹಾಯವನ್ನಾಗಲಿ ಮಾಡಲಾರರೇ? ಮಧ್ಯರಾತ್ರಿಗೇ ಹೋಗಿಬಿಟ್ಟಿದ್ದರು.'

ಹಣಮಂತರಾವ ಎಂಬೊಬ್ಬ ವೈಷ್ಣವ ಸದ್ಗೃಹಸ್ಥರು ರೈಟರ ಓಣಿಯಲ್ಲಿ ಆ ಕಾಲಕ್ಕಿರುತ್ತಿದ್ದರು. ಅವರೂ ಒಂದು ಕಾಲಕ್ಕೆ ನಮ್ಮಲ್ಲಿ ಉಂಡು, ಓದಿ, ಕೆಲಸಕ್ಕೆ ಹತ್ತಿ ಈಗ ಸಂಸಾರ ಮಾಡಿಕೊಂಡಿರುತ್ತಿದ್ದರು. ರಾತ್ರಿಯಲ್ಲಿ ನಾನೊಬ್ಬನೇ ಹೋಗಿ ಆ ಗೃಹಸ್ಥರಿಗೆ ಸದ್ಯದ ಮಾತು ಹೇಳಿ ಬರಬೇಕು ಎಂಬ ಆಜ್ಞೆಯಾಯಿತು.'[25]

ಅಜ್ಜಿಯ ಆಜ್ಞೆಯನ್ನು ಪಾಲಿಸಲು ಬೆಳಗಿನಿಂದ ಏನನ್ನೂ ತಿನ್ನದೆ ದಣಿವಾಗುವವರೆಗೆ ಆಡಿದ್ದ ಬಾಲಕ ಬೇಂದ್ರೆ ನಾಲ್ಕು ಗುಟುಕು ನೀರು ಕುಡಿದು 'ಹಾದಿಯಲ್ಲಿ ಬಿದ್ದ ಒಂದು ದಂಟನ್ನು ಧೈರ್ಯಕ್ಕೆಂದು ಕೈಯಲ್ಲಿ ಎತ್ತಿಕೊಂಡು'[26] ಹಣಮಂತರಾಯರ ಮನೆ ಹುಡುಕಿ ಹೇಳಿಬರುತ್ತಾನೆ. ಅದು ಬಡತನದ ಬಾಳು ಮತ್ತು ಸ್ತ್ರೀ ಪೋಷಿತ ಬಾಲ್ಯ ಕಲಿಸಿದ ಶಿಸ್ತು. ಆ ಶಿಸ್ತೇ ಅವರ ಕಾವ್ಯದ ಶಿಸ್ತು.

**ಶಿಕ್ಷಣ**

ಬೇಂದ್ರೆಯವರು ಧಾರವಾಡದ ಪರಿಸರದಲ್ಲಿ ಪಡೆದ ಶಿಕ್ಷಣವನ್ನು ಶೈಕ್ಷಣಿಕ ಮತ್ತು ಸಮುದಾಯ ಎಂದು ಎರಡು ವಿಧವಾಗಿಸಬಹುದು. ಶೈಕ್ಷಣಿಕವಾಗಿ ಬಾಲಕ ಬೇಂದ್ರೆಯ ವಿದ್ಯಾಭ್ಯಾಸದ ಪ್ರಗತಿ ಉತ್ತಮವಾಗಿತ್ತು. ಆದರೂ ಅವನು ಮೆಟ್ರಿಕ್ ವಿದ್ಯಾಭ್ಯಾಸ ಪಡೆಯುವ ಹೊತ್ತಿಗೆ ಶಿಕ್ಷಕರ ದೃಷ್ಟಿಯಲ್ಲಿ ಉಡಾಳನಾಗಿದ್ದನು. ಆದರೆ ಆಂತರಿಕವಾಗಿ ಸ್ವಶಿಸ್ತನ್ನು ರೂಢಿಸಿಕೊಳ್ಳುವ ಮನೋಸ್ಥೈರ್ಯದವನಾಗಿದ್ದನು. ಅವನು ತನ್ನನ್ನು ದೂಷಿಸುತ್ತಿದ್ದ ಶಿಕ್ಷಕರನ್ನು ಗೆಲ್ಲಲು ಕಾವ್ಯದ ಮೊರೆಹೋಗಿಯೇ ಆದರ್ಶದ ಬೆನ್ನುಹತ್ತಿದ್ದು ಆತನ ಆತ್ಮಸ್ಥೈರ್ಯ ಮತ್ತು ಸೃಷ್ಟಿಶೀಲ ಚಿಂತನೆಯನ್ನು ಗೋಚರಿಸುತ್ತದೆ. ಅವರು 'ನಾನು, ಒಂದು ಕಲ್ಪನಾವಿಲಾಸವನ್ನು ಬರೆದೆ. ಶಾಲೆಯಲ್ಲಿ ಉಡಾಳ ಎನಿಸಿದ್ದ ನಾನು, ವಿವೇಕಾನಂದ ಸ್ವಾಮಿಗಳಂತೆ ಸಂನ್ಯಾಸಿಯಾಗಿ, ದೇಶ-ವಿದೇಶಗಳನ್ನು ಸುತ್ತಿ, ಅಸೀಮ ಕೀರ್ತಿಯನ್ನು ಸಂಪಾದಿಸಿ ಭಾರತಕ್ಕೆ ಮರಳಿ, ಒಂದು ದಿನ ಅಹಮದಾಬಾದಿನಲ್ಲಿ ಭಾಷಣ ಕೊಡುತ್ತಿದ್ದಾಗ, ಶ್ರೋತೃವೃಂದದಲ್ಲಿದ್ದ ಗುತ್ತಲ ರಂಗಾಚಾರ್ಯರು ಬೆರಗಾದರು ಎಂಬುದು ಅದರ ಸಾರವಾಗಿತ್ತು'[27] ಎಂದು ತನ್ನನ್ನು ಉಡಾಳ ಎಂದ ಗುರುಗಳನ್ನು ಬೆರಗುಗೊಳಿಸಬೇಕೆಂಬ ಉನ್ನತ ಚಿಂತನೆ ಮೂಡಿದ್ದನ್ನು ದಾಖಲಿಸಿದ್ದಾರೆ. ಈ ಕಾರಣದಿಂದ ಮತ್ತು ಮೇಲೆ ತಿಳಿಸಿದ ತಮ್ಮನ ಸಾವಿನ ಸಮಯದಲ್ಲಿ ಧೈರ್ಯದಿಂದ ಅಜ್ಜಿಯ ಆಜ್ಞೆ ಪಾಲಿಸಿದ ಬೇಂದ್ರೆಯವರಲ್ಲಿ ಶಿಸ್ತು ಎಂಬುವುದು ಶಾಲಾ ಕವಾಯತಿನ ಶಿಸ್ತಾಗದೆ, ಕುದುರೆಗೆ ಹಾಕಿದ

ಕಣ್ಣುಪಟ್ಟಿಯಂತಾಗದೆ, ಮಾನವನ ಬೆಳವಣಿಗೆಯ ಆವಶ್ಯಕ ಆಂತರಿಕ ಶಿಸ್ತಾಗಿತ್ತು ಎಂದು ಹೇಳಬಹುದು.

ಅವರ ಶಾಲಾ ಶಿಕ್ಷಣ ಮತ್ತು ಅವರ ಅಂದಿನ ಗುರುಗಳು ಅವರನ್ನು ರೂಪಿಸಿದ ರೀತಿ ಅಚ್ಚರಿಯನ್ನುಂಟುಮಾಡುತ್ತದೆ. ಇಂಗ್ಲಿಷ್ ಮತ್ತು ಸಂಸ್ಕೃತವನ್ನು ಬರಿ ಪಠ್ಯವಾಗಿ ಬೋಧಿಸದೆ ಅದನ್ನು ನಾಟಕವಾಗಿ ಪ್ರಯೋಗಿಸಿ, ಕಾವ್ಯವಾಚನ ಸ್ಪರ್ಧೆಗಳನ್ನು ನಡೆಸಿ, ಅದು ಬಾಲಕರ ಮನಸ್ಸಿನಲ್ಲಿ ಸದಾ ಉಳಿಯುವಂತೆ ಮಾಡುತ್ತಿದ್ದರು. ಶಿಕ್ಷಕರ ಆಸಕ್ತಿ ವಿದ್ಯಾರ್ಥಿಯನ್ನು ತನಗರಿವಿಲ್ಲದಂತೆ ವಿಷಯ ಒಳಹೊಗುವಂತೆ ಮಾಡುತ್ತಿತ್ತು. ಅಂತಹ ಶೈಕ್ಷಣಿಕ ಪರಿಸರದಲ್ಲಿ ಕಾವ್ಯದ ಆಹ್ಲಾದ ಅವರ ಮನಸ್ಸನ್ನು ಸೇರಿ ಅವರು ಕವಿಯಾಗಿ ರೂಪುಗೊಂಡರು. ಬೇಂದ್ರೆಯವರು ತಾವು ಪಡೆದ ಆ ಶಿಕ್ಷಣವನ್ನು ಕುರಿತು:" ಇಂಗ್ಲಿಷ್ ನಾಲ್ಕನೇ ಇಯತ್ತೆಯಲ್ಲಿ ನಾನು ಓದುತ್ತಿದ್ದ ಮೆಕಾಲೇನ 'ಹೊರೇಶಸ್' ಎಂಬ ಕವಿತೆ ಬಹಳ ಮನಸ್ಸು ಹಿಡಿಯಿತು. ತುಂಬ ಕಂಠಪಾಠವಾಗಿತ್ತು. ಇಂಗ್ಲಿಷ್ ಶಬ್ದ ವ್ಯುತ್ಪತ್ತಿಯನ್ನು ಆಗ ನಮಗೆ ಕಲಿಸುತ್ತಿದ್ದರು. ಅದು ನನ್ನ ಮೇಲೆ ಸ್ಥಾಯಿಯಾದ ಪ್ರಭಾವ ಬೀರಿತು. ಈ ವರ್ಗದಲ್ಲಿರುವಾಗಲೆ ಹುಯಿಲಗೋಳ ನಾರಾಯಣರಾಯರು ಸಂಸ್ಕೃತದ ಶಿಕ್ಷಕರಾಗಿ ಬಂದರು. ಐದನೆಯ ಇಯತ್ತೆಯಲ್ಲಿ ಇವರು ವರ್ಗದ ಶಿಕ್ಷಕರಾಗಿ ಲ್ಯಾಂಬನ "Stories from Shakespeare" ಪಾಠ ಹೇಳಿದರು. "Merchant of Venice" ನಾಟಕವನ್ನು ಗ್ಯಾದರಿಂಗಿನಲ್ಲಿ ಮಾಡಿಸಿದರು. ಅದರಲ್ಲಿ ನನ್ನ ಪಾತ್ರ, ಕೋರ್ಟಿನ ಕಾರಕೂನನಾದರೂ ಇಡೀ ನಾಟಕ ಕಂಠಪಾಠ ಬರುತ್ತಿತ್ತು. ಈ ವರ್ಷಗಳಲ್ಲಿಯೇ ವ್ಹಿಕ್ಟೋರಿಯಾ ಹೆಸ್ಕೂಲಿನವರು 'ಶಾಕುಂತಲಾ', 'ವೇಣೀಸಂಹಾರ', 'ಮಹಾವೀರಚರಿತ' ಇತ್ಯಾದಿ ಸಂಸ್ಕೃತ ನಾಟಕಗಳನ್ನು ಬಹಳೇ ಯಶಸ್ವಿಯಾಗಿ ಆಡಿತೋರಿಸಿದರು."[28]" ಮೊದಲಿನ ಮೂರು ಇಯತ್ತೆಗಳಲ್ಲಿ ನಾನು ಹಾಗೂ ಖಾನೋಳಕರರು ಇಂಗ್ಲಿಷ್ ರೆಸಿಟೇಶನ್ನಿನಲ್ಲಿಯೂ ಕನ್ನಡ ಕವಿತೆ ಅನ್ನುವದರಲ್ಲಿಯೂ ಸಾಕಷ್ಟು ಪ್ರಮುಖರಾಗಿದ್ದೆವು."[29]

**ತಾಲೀಮುಖಾನೆಯ ಕುಸ್ತಿಪಟು**

ಬೇಂದ್ರೆಯವರು ವಾಮನ ಆಕಾರದಲ್ಲಿದ್ದರೂ, ವ್ಯಕ್ತಿಪರಿಪುಷ್ಟವಾದ (ವ್ಯಾಯಾಮ, ಆಟ, ಕುಸ್ತಿ) ದೈಹಿಕ ಮತ್ತು ಮಾನಸಿಕ ಆರೋಗ್ಯವನ್ನು ಚಿಕ್ಕಂದಿನಿಂದಲೇ ರೂಢಿಸಿಕೊಂಡಿದ್ದರು. ಅಜ್ಜಿ, ತಾಯಿ, ಶಾಲೆ ಹಾಗೂ ಸಮಾಜದಿಂದ ಮಾನಸಿಕ ಸದೃಢತೆ ಪಡೆದಂತೆ; ವಿವಿಧ ಆಟಗಳಿಂದ ತಾಲೀಮುಖಾನೆಯಿಂದ ದೈಹಿಕವಾಗಿ ಗಟ್ಟಿ ಆಳಾಗಿದ್ದರು. 'A sound mind in a sound body' ಎಂಬುದನ್ನು ಅರಿತ ಸರ್ವರೀತಿಯ ಪರಿಪೂರ್ಣ ಬಾಲ್ಯವನ್ನು ತಮ್ಮದಾಗಿಸಿಕೊಂಡರು. ಅವರು ಐದನೆಯ ಇಯತ್ತೆ ಓದುವಾಗ ಎಡ್ವರ್ಡ್ ಪಾರ್ಕ್ (ಇಂದಿನ ಆಝಾದ ಉಪವನ)ದಲ್ಲಿ ಎಡ್ವರ್ಡ್ ಬಾದಶಹನ ಉತ್ಸವದಲ್ಲಿ ನಡೆದ ಘಟನೆ ಅವರ ತಾಲೀಮುಖಾನೆಯ ಪರಿಣತ ಫಲಿತಾಂಶವನ್ನು ಬಿತ್ತರಿಸುತ್ತದೆ. 'ಆ ಉತ್ಸವದಲ್ಲಿ ನಾನು ಇಬ್ಬರೊಡನೆ ಕುಸ್ತಿಯಾಡಿ ಬೀಳಲಿಲ್ಲ; ಒಬ್ಬಿಬ್ಬರನ್ನು ಕೆಡವಿದೆ. ಬಾಳೆಹಣ್ಣು, ಬತ್ತಾಸ ಇನಾಮಾಗಿ ದೊರಕಿಸಿದೆ. ಆಗಿನ ನನ್ನ ಚುಟಿಯನ್ನು ನೋಡಿ ಮಹಮ್ಮದೀಯ ತಾಲೀಮು ಮಾಸ್ತರರೊಬ್ಬ (ಅವರ ಮನೆ ತುಪ್ಪದವರ ಓಣಿಯಲ್ಲಿತ್ತು.) ನನ್ನ ಕಡೆಯಿಂದ ಚಮತ್ಕಾರದ ಒಂದೆರಡು ಆಟಗಳನ್ನು ಆಡಿಸುವ ರೂಢಿ ಇಟ್ಟರು. ಸಾಲೆಯ ಕವಾಯತಿಗೆ ನಿಂತ ಸಾಲಿನಲ್ಲಿ - ನನ್ನ ಮ್ಯಾಟ್ರಿಕ್ಕಿನವರೆಗೂ - ನಾನು ಕೊನೆಯಿಂದ ಮೊದಲನೇ ನಂಬರಿನವನಾಗಿದ್ದೆ. ಅಷ್ಟು ಗಿಡ್ಡ ಕುಳ್ಳನಾಗಿದ್ದೆ. ವರ್ಷದಲ್ಲಿ ಮೂರು ನಾಲ್ಕು ಕಡೆಗೆ ತಮ್ಮ ತರಬೇತಿ ಪ್ರದರ್ಶನ ಮಾಡುವದಿದ್ದರೆ ನನ್ನ ಕಾರ್ಯಕ್ರಮ ಇದ್ದೇ ಇರುತ್ತಿತ್ತು. ಹುಡುಗರಲ್ಲಿ ಒಂದು ವಿಧದ ಖ್ಯಾತಿಯನ್ನು ನನಗೆ ತಂದುಕೊಡಲು ಇದೂ ಕಾರಣ."[30]

**ಸಮುದಾಯ ಶಿಕ್ಷಣ**

ಹಿಂದೆಯೇ ತಿಳಿಸಿರುವಂತೆ ಬೇಂದ್ರೆ ಸಮುದಾಯದ ಬಾಲಕರಾಗಿ ಬೆಳೆದವರು. ಅವರು ಶಾಲೆಯ ಓದಿಗಿಂತ ಪ್ರಕೃತಿಯ ಮತ್ತು ಜನರ ಬಗೆಬಗೆಯ ರೂಪವಿಲಾಸವನ್ನು ಕಂಡು ಅದರ ಒಳಗೆ ಹರಿವ ಜೀವಸೆಲೆಯನ್ನು ತಿಳಿಯಲು ಪ್ರಯತ್ನಿಸುತ್ತಿದ್ದರು. ಅವರು ಆಡುತ್ತಿದ್ದ ಆಟ ಹಾಗೂ ಧಾರವಾಡದ ಜನರ ಬದುಕೇ ಅವರಿಗೆ ಪಾಠಶಾಲೆಯಂತಿತ್ತು. ಅದೇ ಮೂಲದ್ರವ್ಯದಂತೆ ಅವರಲ್ಲಿದ್ದು ಕಾವ್ಯರೂಪಿಯಾಗಿ ಹೊರಬಿದ್ದು ಕನ್ನಡ ಕಾವ್ಯರಸಿಕರನ್ನು ಅಚ್ಚರಿಗೊಳ್ಳುವಂತೆ ಮಾಡಿತು. ಬೇಂದ್ರೆಯವರ ಅಂದಿನ ಶಾಲಾ ದಿನಗಳನ್ನು ಕುರಿತು ವಾಮನ ಬೇಂದ್ರೆಯವರು "ಶಾಲೆಗೊಯ್ಯುವ ಪಾಟೀಗಂಟಿನಲ್ಲಿ ಪುಸ್ತಕದ ಜೊತೆಗೆ ಚಾವಂಗ, ಕುಂಟ್ಟಲಪಿ, ಬುದ್ಧಿಬಳ, ಗಂಜೀಪು, ಹುಲಿಹಳ್ಳು ಮೊದಲಾದ ಆಟದ ಸಾಮಾನು ಹೆಚ್ಚಾಗಿ ಬೇಕು. ಶಾಲೆಗೆ ಹೋಗುವ ಹಾದಿಯಲ್ಲಿ ಮಂಗಾಟ, ಕರಡಿಕುಣಿತ, ಕೌಲೆತ್ತು, ಕಸರತ್ತು ನಡೆದಿದ್ದರೆ ಅದನ್ನು ನೋಡುವುದರಲ್ಲಿ ಬೇಂದ್ರೆಯವರ ಮನಸ್ಸು ಮೈಮರೆಯುತ್ತಿತ್ತು. ಶಾಲೆ ಬಿಡುವ ಹೊತ್ತಿಗೆ ಶಾಲೆಯ ಕಡೆಗೆ ಬೇಂದ್ರೆಯವರ ಸವಾರಿ ಹೊರಟಿದ್ದನ್ನು ಅವರ ಬಾಲ್ಯ ಸ್ನೇಹಿತರು ಚೇಷ್ಟೆ ಮಾಡುತ್ತಿದ್ದರು. ಶಾಲೆಯ ಓದಿಗಿಂತ ತನ್ನ ಸುತ್ತಮುತ್ತಲಿನ ಜೀವನ ನಿರೀಕ್ಷಣೆಯಲ್ಲಿ ಬೇಂದ್ರೆಯವರ ಮನಸ್ಸು ತೊಡಗಿರುತ್ತಿತ್ತಂತೆ"[31] ಎಂದು ಹೇಳಿದ್ದಾರೆ.

**ರಾಷ್ಟ್ರೀಯ ಚಿಂತನೆ ಹಾಗೂ ವಿಸ್ತಾರ ಓದು**

ಬೇಂದ್ರೆಯವರು ವಾಸಿಸುತ್ತಿದ್ದ ಕಾಮನಕಟ್ಟೆಯಲ್ಲಿ ಸಾಹಿತ್ಯಕ, ರಾಷ್ಟ್ರೀಯ ಮತ್ತು ಸಾಂಸ್ಕೃತಿಕ ಚಿಂತನೆಯನ್ನು ಹೊತ್ತ ಶಾಂತಕವಿ, ಕಾವ್ಯಾನಂದ (ನರಸಿಂಹಾಚಾರ್ಯ) ಪುಣೇಕರ, ವೆಂಕಟ ರಂಗೋ ಕಟ್ಟಿ, ಗರಗ ಸಿದ್ಧಸಿಂಗಪ್ಪ, ಸೋಂಡಿ ಲಕ್ಷಾಧೀಶ, ರಾವಸಾಹೇಬ ಮಾಳಾಪುರ, ನಾ.ಶ್ರೀ. ರಾಜಪುರೋಹಿತ, ಕಡಪಾ ರಾಘವೇಂದ್ರರಾವ್, ನರಗುಂದಕರ ವಕೀಲ, ಮಧ್ವಾಚಾರ್ಯ ಕಟ್ಟಿ ಮಾಸ್ತರ ಅವರು ವಾಸಿಸುತ್ತಿದ್ದರು. ಅಲ್ಲಿಯೇ ವಿಕ್ಟೋರಿಯಾ ಹೈಸ್ಕೂಲು, ನೇಟಿವ್ ಜನರಲ್ ಲೈಬ್ರರಿ, ವಿದ್ಯಾವರ್ಧಕ ಸಂಘ, ಎರಡು ಥೇಟರುಗಳು, ಛಾಪಾಖಾನೆಗಳು ಇದ್ದು ಅದು ಆಲೂರರ ರಾಷ್ಟ್ರೀಯ ಚಳವಳಿಯ ಕೇಂದ್ರವಾಗಿತ್ತು. ಅದನ್ನು ಅವರ ಶಿಕ್ಷಕರಾದ ನಾ. ಶ್ರೀ. ರಾಜಪುರೋಹಿತರು ಹೀಗೆ ಹೇಳಿದ್ದಾರೆ. 'ವಂಗಭಂಗ ಚಳವಳಿಯಲ್ಲಿ ಶ್ರೀ ಆಲೂರ ವೆಂಕಟರಾಯರು ಮತ್ತು ನಾನು ಸೇರಿ 'ಕರ್ನಾಟಕ ನೂತನ ವಿದ್ಯಾಲಯ' ಎಂಬುದೊಂದು ರಾಷ್ಟ್ರೀಯ ಶಾಲೆಯನ್ನು ಸ್ಥಾಪಿಸಿ, ರಾಷ್ಟ್ರೀಯ ಶಿಕ್ಷಣದ ಕಾರ್ಯವನ್ನು ಕೈಕೊಂಡಿದ್ದೆವು. ಈ ರಾಷ್ಟ್ರೀಯ ವಿದ್ಯಾಲಯವು ಶ್ರೀ ಬೇಂದ್ರೆ ಇವರ ಮನೆಯ ಎದುರಿನಲ್ಲಿಯೇ ಇದ್ದಿತು. ಈ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗೆ ಅತಿರಥಿ ಮಹಾರಥಿಗಳಾದ ರಾಷ್ಟ್ರೀಯ ಮುಖಂಡರು ಮೇಲಿಂದ ಮೇಲೆ ಭೇಟಿಯನ್ನು ಕೊಡುತ್ತಿದ್ದರು. ಈ ಉಜ್ವಲವಾದ ರಾಷ್ಟ್ರೀಯ ವಾತಾವರಣವು, ಬಾಲಕರಾದ ಬೇಂದ್ರೆಯವರ ಕೋಮಲವಾದ ಅಂತಃಕರಣದ ಮೇಲೆ ಸಂಸ್ಕಾರವನ್ನುಂಟುಮಾಡದೆ ಬಿಡಲಿಲ್ಲ."[32] ಅಂತಹ ಪರಿಸರದಲ್ಲಿ ಬೆಳೆದ ಬೇಂದ್ರೆಯವರಿಗೆ ಸಾಹಿತ್ಯ, ಸಂಸ್ಕೃತಿ, ರಾಷ್ಟ್ರೀಯತೆ, ಕನ್ನಡ ಭಾಷಾಭಿಮಾನ ಸಹಜ ರೀತಿಯಲ್ಲಿ ಜೀವದ್ರವ್ಯದಂತಾಯಿತು. ಅಲ್ಲಿದ್ದ ಎಲ್ಲ ಹಿರಿಯರ ಆದರ್ಶದ ಚಿಂತನೆಯು ಬಾಲಕ ಬೇಂದ್ರೆಯನ್ನು ರೂಪಿಸಲು ಕಾರಣವಾಯಿತು. ಜೊತೆಜೊತೆಗೆ ಬಾಲಕ ಬೇಂದ್ರೆಯ ನಿರಂತರ ಓದು ಆತನಿಗೆ ಸಾಹಿತ್ಯದ ಆಳ ವಿಸ್ತಾರವನ್ನು ಒದಗಿಸಲು ಕಾರಣವಾಯಿತು. ಅವರು 'ಶಾಲಾ ಪುಸ್ತಕಗಳನ್ನು ಓದಲು ಪುರಸೊತ್ತಿಲ್ಲದಿದ್ದರೂ, ರಾತ್ರಿಯಲ್ಲಿ ನಮ್ಮ ಮನೆಯ ಬಳಿ ಇದ್ದ ಫಾಟಕ, ಆಲೂರ್ ಲೈಬ್ರರಿ (ಭಾರತ ಪುಸ್ತಕಾಲಯ - ಇದು ಆ ಕಾಲದ ಶ್ರೇಷ್ಠತಮ ಲೈಬ್ರರಿಗಳಲ್ಲೊಂದಾಗಿತ್ತು)ಯಲ್ಲಿ ಸಿಕ್ಕ ಎಲ್ಲ ಇಂಗ್ಲಿಷ್,

ಸಂಸ್ಕೃತ, ಮರಾಠಿ ಪುಸ್ತಕಗಳನ್ನೂ ಪತ್ರಿಕೆಗಳನ್ನೂ ಓದುತ್ತಿದ್ದೆ.'[33] 'ನನ್ನ ಮಟ್ಟಿಗೆ.... ಭಾರತ ಪುಸ್ತಕಾಲಯದ ದುರ್ಲಕ್ಷಿತ ಪುಸ್ತಕಗಳ ರಾಶಿ ಬಹಳೇ ಉಪಯುಕ್ತವಾಯಿತು. ನಾಲ್ಕು ವರ್ಷ ನಾನು ಶಾಲಾಭ್ಯಾಸವನ್ನು ದುರ್ಲಕ್ಷಿಸಿ ಸಿಕ್ಕ ಸಾಹಿತ್ಯವನ್ನು ಮೆಯ್ದೆ. ಈ ಸಂಸ್ಕಾರ ನಾನು ಪೂನಾಕ್ಕೆ ಹೋದಮೇಲೆ ನಾನೂ ಒಬ್ಬ ವ್ಯಕ್ತಿ ಎಂಬ ಪುಷ್ಠಿ ಕೊಟ್ಟಿತು'[34] ಎಂದು ಹೇಳಿದ್ದಾರೆ.

**ಪರಂಪರೆಯ ಪ್ರೇರಣೆ**

ಈ ಎಲ್ಲ ಹಿನ್ನೆಲೆಯಲ್ಲಿ ಬೇಂದ್ರೆಯನ್ನು ಅಭ್ಯಾಸ ಮಾಡಿದಾಗ ಅವರು ಧಾರವಾಡದ ಪರಿಸರ, ಜನಪದರ ನಡೆನುಡಿ, ಆಟ-ನೋಟಗಳಿಂದ ತನ್ನನ್ನು ರೂಪಿಸಿಕೊಂಡ ರೀತಿ ಅರಿವಾಗುತ್ತಿದ್ದಂತೆ ಅವರು ತಮ್ಮ ಕಾವ್ಯಜೀವನದಲ್ಲಿ ಆ ಪ್ರೇರಣೆಗಳಿಂದ ಇಟ್ಟ ಹೊಸ ಹೆಜ್ಜೆಯೂ ಪ್ರಮುಖವಾಗುತ್ತದೆ. ಅವರು ಧಾರ್ಮಿಕ ಪರಂಪರೆಯಲ್ಲಿ ಆಧ್ಯಾತ್ಮಿಕ ಚಿಂತನೆಯನ್ನು ರೂಢಿಗತಗೊಳಿಸಿಕೊಂಡಂತೆ, ಸಾಮಾಜಿಕ ವಿಷಮತೆಗಳ ಪರಿಣಾಮವನ್ನೂ ಅಷ್ಟೇ ತೀವ್ರತೆಯಿಂದ ಗಮನಿಸಿದ್ದಾರೆ. ಅಂದಿನ ವೈದಿಕ ಕುಟುಂಬಗಳಲ್ಲಿದ್ದ ಬಾಲ್ಯವಿವಾಹ, ವಿಧವೆಯರ ದಾರುಣ ಸ್ಥಿತಿ ಅವರನ್ನು ತೀವ್ರವಾಗಿ ಕಾಡಿದೆ. ಅಂದಿನ ಆ ವಾತಾವರಣದಲ್ಲಿ ವೆಂಕಟ ರಂಗೋ ಕಟ್ಟಿ ಅವರು ತೆಗೆದುಕೊಂಡ ತೀರ್ಮಾನ ಅವರಿಗೆ ಮಾರ್ಗದರ್ಶಿಯಾಗಿದೆ. 'ನಮ್ಮ ವೆಂಕಟ ರಂಗೋ ಕಟ್ಟಿ ಅವರು ಧಾರವಾಡ ಕಟ್ಟಿದವರಲ್ಲಿ ಒಬ್ಬರು. ಕಾಮನಕಟ್ಟಿಯೊಳಗ ಅವರ ಮನಿ. ಕನ್ನಡ ಸಾಲಿಗೆಲ್ಲಾ ಕ್ರಮಿಕ ಪುಸ್ತಕಗಳನ್ನು ಬರೆದು ಪೂರೈಸಿದವರು. ಆದರ ನಮ್ಮ ಜನ ಅವರ್ನ ಸರಿಯಾಗಿ ನೋಡಿಕೋಳಿಲ್ಲ. ಸ್ವಂತ ಅಳಿಯ ಸತ್ತರ, ಮಗಳಿಗೆ ವಿಧವಾ ವಪನ ಕೂಡದು ಅಂದರು. ನಮ್ಮ ಧರ್ಮಶಾಸ್ತ್ರದೊಳಗ ಇದಕ್ಕೆ ಆಧಾರ ಇಲ್ಲಾಂತ ಬರೆದರು. ಆದರ ನಮ್ಮ ಜನಾ ಇದನ್ನ ಕೇಳಲಿಲ್ಲಾ'[35] ಎಂದು ಎನ್ಕೆ ನುಡಿದಿದ್ದಾರೆ.

**ಕಾವ್ಯರಚನೆಯಲ್ಲಿ ಹೊಸ ಹೆಜ್ಜೆ**

ಬೇಂದ್ರೆಯವರು ಜನಪದ ಕಾವ್ಯ ಪರಿಸರದಲ್ಲಿ ಹುಟ್ಟಿ ಬೆಳೆಯುತ್ತ ಜನಪದ ಹಾಡುಗಾರರ ನಾದ ಲಯ ಮಾಧುರ್ಯಕ್ಕೆ ಕಿವಿಗೊಟ್ಟು; ಜೊತೆಯಲ್ಲಿಯೇ ಕನ್ನಡ, ಮರಾಠಿ, ಇಂಗ್ಲೀಷ್, ಸಂಸ್ಕೃತ ಹಾಗೂ ಹಿಂದಿ ಶಿಷ್ಟ ಸಾಹಿತ್ಯವನ್ನು ಬಾಲ್ಯದಲ್ಲಿಯೇ ಅಭ್ಯಾಸ ಮಾಡಿದವರಾಗಿದ್ದರು. "ಇಂಗ್ಲಿಷ್ ಶಾಲೆಯಲ್ಲಿ ಬೇರೆ ಸ್ವರ ಕಿವಿಗೆ ಬಿತ್ತು. "There was an old woman, who lived in a shoeass" ನಮಗೆ ತಮಾಷೆ. "Lars Porsena of clusium By the nine gods he swore." "Achilles wrath to Greece". ಹೊಸ ಹೊಸ ಧಾಟಿ"[36] ಎಂದು ಇಂಗ್ಲಿಷ್ ಭಾಷೆಯ ಲಯವನ್ನು ಕುರಿತು ಅವರು ನುಡಿದಿದ್ದಾರೆ. ಹೀಗಾಗಿ ಹೊಸ ಕಾವ್ಯ ರಚನಾ ರೀತಿಯನ್ನು ಅವರ ಮನಸ್ಸು ಆಲೋಚಿಸುತ್ತಿತ್ತು ಎಂದು ಹೇಳಬಹುದು. ಧಾರವಾಡದಲ್ಲಿ ಅವರಿಗೆ "ಶಾಂತಕವಿಗಳು ಕಾವ್ಯಾನಂದ ಪುಣೇಕರ ಅವರು ಅವರ ಜಾನಪದ ಒಲವಿನ ಮೂಲಕವಾಗಿಯೂ ರಾಷ್ಟ್ರೀಯ ವೃತ್ತಿಯ ಮೂಲಕವಾಗಿಯೂ ಆತ್ಮೀಯರಾಗಿ ತೋರುತ್ತಿದ್ದರು."[37] ಅವರುಗಳ ಕಾವ್ಯವನ್ನು ಅಭ್ಯಾಸ ಮಾಡಿ, ಕನ್ನಡ ಸಾಹಿತ್ಯ ಪರಂಪರೆಯನ್ನು ತಿಳಿದಿದ್ದ ಬೇಂದ್ರೆಯವರು ಕನ್ನಡ ಕಾವ್ಯಕ್ಕೆ ಹೊಸ ಛಂದೋಲಯಗಳನ್ನು ನೀಡಲು ಪ್ರಯತ್ನಿಸಿದರು. ಅದು ಯಶಸ್ವಿಯಾಯಿತು.

**ಹೊಸ ಛಂದಸ್ಸು**

ಬೇಂದ್ರೆಯವರು 'ಭಾವಗೀತೆಗಳಲ್ಲಿ ನಾನು ಗತಾನುಗತಿಕ ಷಟ್ಪದಿಗಳನ್ನು ಬಳಸಿದೆ, ಸಂಗಡವೇ ಹೊಸ ಛಂದಸ್ಸುಗಳ ಪ್ರಯೋಗವನ್ನೂ ಮಾಡಿದೆ. ಮುಂದೆ ಮಾಸ್ತಿಯವರಿಗೂ ನನಗೂ ಗಹನ ಸ್ನೇಹಕ್ಕೆ

ದ್ದಾರಿ ಮಾಡಿಕೊಟ್ಟ, ಮೊದಲು 'ಸ್ವಧರ್ಮ'ದಲ್ಲಿ ಬೆಳಕು ಕಂಡ ಮತ್ತು 'ಗರಿ'ಯಲ್ಲಿ ಪ್ರಥಮ ಪದ್ಯವಾಗಿ ಮುದ್ರಿತವಾದ 'ಬೆಳಗು' (ಮೂಡಲಮನೆಯಾ ಮುತ್ತಿನ ನೀರಿನ) ಕವಿತೆಯೇ ಬಹುಶಃ ನನ್ನ ಮೊದಲ ನೂತನ ಛಂದಃಪ್ರಯೋಗ (೧೯೧೯). ಇದು ಹೊಸ ಛಂದಸ್ಸು... ಬಹುಶಃ ಇಕ್ಕಟ್ಟಾದ ಮಾತ್ರಾ ಮಿತಿಗಳುಳ್ಳ ಷಟ್ಪದಿಗಳು, ನನ್ನ ಸ್ವಾಭಾವಿಕ ಸ್ವಾತಂತ್ರ್ಯಪ್ರಿಯ ಆತ್ಮಕ್ಕೆ ಹಿಡಿಸಿರಲಿಕ್ಕಿಲ್ಲ. ಧಾರವಾಡದಲ್ಲಿ ಯಾವಾಗಲೂ ಕಿವಿದೆರೆದು ಓಡಾಡುವ ನನಗೆ, ದಾಸರ ಪದದಿಂದ, ಗೊಲ್ಲರ ಹಾಡಿನವರೆಗೆ ಎಲ್ಲವನ್ನೂ ಕೇಳಿ, ಕೇಳಿ, ಒಂದು ಸಂಸ್ಕಾರ ಬಂದಿರಬೇಕು. ಸಾಂಗತ್ಯ ಮತ್ತು ಲೋಕಗೀತಗಳ ಅಂಶಗಣಗಳು ಕೊಡುವ ಸ್ವಾತಂತ್ರ್ಯ ಮಾಧುರ್ಯಗಳು ರಕ್ತಗತವಾಗಿರಬೇಕು. ಇವೆಲ್ಲ ಸೇರಿ ಛಂದಸ್ಸುಗಳಲ್ಲಿ ನವನವೋನ್ಮೇಷಣೆ ನನಗೆ ಸಾಧ್ಯವಾಗಿರಬೇಕು"[38] ಎಂದು ಹೇಳಿದ್ದಾರೆ. ಅವರು ಜನಪದ ಮತ್ತು ಶಿಷ್ಟ ಆಲೋಚನೆ ಮತ್ತು ಶೈಲಿಯನ್ನು ತನ್ನದನ್ನಾಗಿಸಿಕೊಂಡು ಅದರ ಪಕ್ವ ಫಲದಂತೆ ತಮ್ಮ ಕಾವ್ಯ ಛಂದಸ್ಸನ್ನು ರೂಪಿಸಿಕೊಂಡಿದ್ದಾರೆ. ಅವರ ಪ್ರತಿ ಕವನದಲ್ಲಿಯೂ ಹೊಸ ಹೊಸ ಛಂದಶ್ಶರೀರವಿದೆ. ಭಾವಲಹರಿಗೆ ತಕ್ಕಂತೆ ಛಂದಸ್ಸಿನ ಸೃಷ್ಟಿಯಾಗಿದೆ.

**ಹೊಸ ಶೈಲಿ**

ಪ್ರತಿಯೊಬ್ಬ ಕವಿಯೂ ತನ್ನದೇ ಆದ ಶೈಲಿಯಲ್ಲಿ ನುಡಿಯುತ್ತಾನೆ. ಅದು ಅವನ ಕಾವ್ಯಭಾಷೆ. ಅದು ಅವನ ಕಂಠದ ದನಿಯಂತೆ ಅತಿ ಸಹಜವಾದುದು. ಅದು ಅವನದೇ. ಹಾಗೆ ಬೇಂದ್ರೆ ಶೈಲಿ ತನ್ನದೇ ಆದ ಪಾಂಗಿನಿಂದ ಕೂಡಿದೆ. ಜಾನಪದರ ಗ್ರಾಮೀಣತೆ, ಸರಳತೆ, ನಾದ, ಲಯದ ಕುಣಿತ ಆನಂದದ ಭಾಗವಾದ ಬೇಂದ್ರೆಯವರು ಜಾನಪದ ಭಾಷೆಯನ್ನು ಶಿಷ್ಟ ಕಾವ್ಯವನ್ನು ಕಸಿಗೊಳಿಸಲು ಬಳಸಿದ್ದಾರೆ. ಅವರ ಕಾವ್ಯದಲ್ಲಿ ಜಾನಪದ ಭಾಷೆ ಶಿಷ್ಟದ ನಿಯೋಗಕ್ಕೆ ಒಳಗಾಗಿದೆ. ಅವರ ಛಂದಸ್ಸು ಸ್ಫೂರ್ತವಾಗಿ ಹೊಮ್ಮಿ ಬಂದಂತೆ ಶೈಲಿಯು ಅತಿ ಸಹಜವೆಂಬಂತೆ "ಭೃಂಗದ ಬೆನ್ನೇರಿ ಬಂತು ಕಲ್ಪನಾವಿಲಾಸ ಮಸೆದ ಗಾಳಿ ಪಕ್ಕ ಪಡೆಯುತ್ತಿತ್ತು ಸಹಜ ಪ್ರಾಸ" ಎಂಬ ಅವರ ಸ್ಫೂರ್ತಕಾವ್ಯದಂತೆ ಜೊತೆ ಜೊತೆಗೆ ಹೊಮ್ಮಿ ಬಂದಿದೆ. ಅದನ್ನು ಅವರು ಹೀಗೆ ವ್ಯಕ್ತಪಡಿಸಿದ್ದಾರೆ: "ನನ್ನ ಜನಪದ ಶೈಲಿಯ ಮಾತೂ ಅಷ್ಟೆ. ನನ್ನ ಕಿವಿಗೆ ನಾನೇ ಪ್ರಮಾಣ. 'ಗ್ರಾಂಥಿಕ' ಎನಿಸುವ ಶೈಲಿಯಲ್ಲಿ ಬರೆದಾಗಲೂ ಜನಪದದ ಹಸುರು ಮಾತುಗಳು ಅಲ್ಲಲ್ಲಿ - ಮೊದಲಿನಿಂದಲೂ - ತಾವಾಗಿ ಬರುತ್ತವೆ. ಅದನ್ನು ಹೊರದಬ್ಬಲು ನಾನು ಇಷ್ಟಪಡುವುದಿಲ್ಲ. ಯಾವುದಕ್ಕೆ ಯಾವ ಶೈಲಿ ಯೋಗ್ಯವೋ ಆ ಶೈಲಿಯಲ್ಲಿ ನನ್ನ ಹಾಡು ತಾನಾಗಿ ಬರುತ್ತದೆ."[39]

**ಬೇಂದ್ರೆ ಕವಿತ್ವದ ನೆಲೆಗಳು**

೧೯೧೯ ಮೇ ತಿಂಗಳಲ್ಲಿ ಆರ್ಯ ಸಂಚಿಕೆಯಲ್ಲಿ ಶ್ರೀ ಅರವಿಂದರು ಬರೆದ ಕೀಟ್ಸ್ ಕವಿಯ ಕಾವ್ಯವಿಮರ್ಶೆ ಪ್ರಕಟವಾಗಿತ್ತು. ಕವಿಯು ಸೌಂದರ್ಯದ ನಾಲ್ಕು ನೆಲೆಗಳನ್ನು ಮುಟ್ಟಿದರೆ ಪೂರ್ಣತೆ ಬರುತ್ತದೆ ಎಂಬ ವಿಚಾರ ಆ ವಿಮರ್ಶಾ ಲೇಖನದಲ್ಲಿತ್ತು. ಪ್ರತಿಯೊಂದು ನುಡಿಯಲ್ಲಿ ಒಂದೊಂದು ನೆಲೆ. ನಾಲ್ಕು ನುಡಿ ನಾಲ್ಕು ನೆಲೆ. ಇದನ್ನು ನಾಲ್ವರಿ-ನಾಲ್ಕು ಬಗೆಯ ತಿಳುವಳಿಕೆ, ಜ್ಞಾನ ಎಂಬುದಾಗಿ ಬೇಂದ್ರೆ ತಿಳಿದರು. ಈ ಜ್ಞಾನವನ್ನು ಚತುರ್ಮುಖ ಸೌಂದರ್ಯ ಎಂಬುದಾಗಿ ಸಿದ್ಧಪಡಿಸಿದರು. Sensuous Beauty, Imaginative Beauty, Intellectual Beauty, Ideal Beauty ಎಂದು ಶ್ರೀ ಅರವಿಂದರು ವಿವರಿಸಿದ ಪರಿಭಾಷೆಯನ್ನು ಗೆಳೆಯರ ಗುಂಪಿನವರು 1) ಹೊರಗಣ್ಣು, 2)ಒಳಗಣ್ಣು, 3) ತಿಳಿಗಣ್ಣು, 4) ಹೊಳೆಗಣ್ಣು ಎಂಬುದಾಗಿ ಅನುವಾದಿಸಿದರೆ, ವಿ. ಕೃ. ಗೋಕಾಕ ಅವರು "The dream of the Geleyara Gumpu"

ಎಂಬ ಪ್ರಬಂಧದಲ್ಲಿ 1) ಐಂದ್ರಿಯಿಕ ಸೌಂದರ್ಯ, 2) ಕಾಲ್ಪನಿಕ ಸೌಂದರ್ಯ, 3) ಬೌದ್ಧಿಕ ಸೌಂದರ್ಯ, 4) ಆದರ್ಶ ಸೌಂದರ್ಯ ಎಂಬುದಾಗಿ ಅನುವಾದಿಸಿದರು.

ಭಗವದ್ಗೀತೆಯೊಳಗಿನ 'ಇಂದ್ರಿಯಾಣಿ ಪರಾಣ್ಯಾಹುಃ ಇಂದ್ರಿಯೇಭ್ಯೋ ಪರಂ ಮನಃ|| ಮನಸಸ್ತು ಪರಾ ಬುದ್ಧಿಃ ಯೋ ಬುದ್ಧೇ ಪರತಸ್ತು ಸಃ||' ಎಂಬ ಶ್ಲೋಕವು ಇಂದ್ರಿಯ, ಮನ, ಬುದ್ಧಿ ಹಾಗೂ ಪರಾತ್ಪರ ಪರಮಾತ್ಮ ವಸ್ತು ಎಂಬಲ್ಲಿ ಸೌಂದರ್ಯದ ನಾಲ್ಕು ನೆಲೆಗಳನ್ನೇ ವಿವರಿಸಿರುವುದಾಗಿ ಬೇಂದ್ರೆ ನಿಶ್ಚಯಿಸಿದರು. ಅದೇ ರೀತಿ ಕನಕದಾಸರು ' ಬಯಲು ಆಲಯದೊಳಗೊ, ಆಲಯವು ಬಯಲೊಳಗೊ, ಬಯಲು ಆಲಯಗಳೆರಡು ನಯನದೊಳಗೊ|| ನಯನ ಬುದ್ಧಿಯ ಒಳಗೊ, ಬುದ್ಧಿ ನಯನದೊಳಗೊ, ಬುದ್ಧಿ ನಯನಗಳೆರಡು ನಿನ್ನೊಳಗೊ ಹರಿಯೇ' ಎಂಬಲ್ಲಿ ಬಯಲು, ಆಲಯ, ನಯನ ಮತ್ತು ಹರಿ ಎಂಬ ನಾಲ್ಕು ನೆಲೆಗಳನ್ನೇ ಅನುಭವಿಸಿದ್ದನ್ನು ಬೇಂದ್ರೆ ಅನುಭವಿಸಿದರು. "ಪರಮಾತ್ಮನನ್ನು ನಯನದಲ್ಲಿ ಕಾಣು" ಎಂಬುದಾಗಿ ಭಾರತೀಯ ಸಾಧುಸಂತರು ವಿವರಿಸಿದ್ದನ್ನು ಆಧರಿಸಿ ಬೇಂದ್ರೆಯವರ ಚತುರ್ಮುಖ ಸೌಂದರ್ಯ ಸಿದ್ಧಾಂತದಿಂದ 'ಚಂದ್ರ', 'ಗಂಡುಸು ಹೆಂಗುಸಿಗೆ', 'ಚತುರ್ಮುಖ ಸೌಂದರ್ಯ' ಮತ್ತು 'ಹಂಪೀ-ವಿಜಯನಗರ ದರ್ಶನ' ಎಂಬ ಕವನಗಳು ರೂಪಗೊಂಡವು. ಅವು ೧೯೩೨ರಲ್ಲಿ ಪ್ರಕಟಗೊಂಡ 'ಗರಿ' ಕವನ ಸಂಗ್ರಹದಲ್ಲಿ ಸೇರ್ಪಡೆಯಾದವು. ಈ ಎಲ್ಲ ಕವನಗಳಲ್ಲಿ ಮೊದಲನೆಯ ನುಡಿ ಐಂದ್ರಿಯಿಕ ಸೌಂದರ್ಯ, ಎರಡನೆಯ ನುಡಿ ಕಾಲ್ಪನಿಕ ಸೌಂದರ್ಯ, ಮೂರನೆಯ ನುಡಿ ಬೌದ್ಧಿಕ ಸೌಂದರ್ಯ ಹಾಗೂ ಕೊನೆಯ ನುಡಿ ಆದರ್ಶ ಸೌಂದರ್ಯವನ್ನು ವಿವರಿಸಲು ಬೇಂದ್ರೆ ಮೀಸಲಿಟ್ಟರು. ಉದಾಹರಣೆಗೆ ಚತುರ್ಮುಖ ಸೌಂದರ್ಯ ಕವನವನ್ನು ವಿಶ್ಲೇಷಿಸಿ ನೋಡೋಣ:

"ಮೈಮುಟ್ಟೆ, ಮನಮುಟ್ಟ ಬರುವೆ, ರೂಪವ ನೋಡೆ
ನೀ ಮೂಡಿ ಬುದ್ಧಿಯೊಳು ನೆಡುವೆ, ರಸವನು ಸವಿಯೆ
ಧೀಮೂಢತೆಯನೊಡೆದು ನಿಲ್ಲಿಸುವೆ ಚಿತ್ತವನು ಚಿತ್ರಿಸಿದ ಬೊಂಬೆಯಂತೆ ||
ಈ ಮಾತುಗಳ ಗಾಳಿ ಕಿವಿಯ ಗವಿಯಲ್ಲುಲಿಯೆ
ಸೀ ಮಾತುಗಳ ಸೊನೆಯ ಸುರಿಸಿ ಎದೆ ಮುಗುಳಿಂದೆ
ನಾ ಮೂಸೆ ಸೂಸಿದೈ ಹಮ್ಮು ನೆಮ್ಮದಿಯಿಂದ ಮೈಮರೆಯುವಂತೆ ಮಾಡಿ ||"

ಈ ಷಟ್ಪದಿಯಲ್ಲಿ ಮೈ, ಮನ, ಬುದ್ಧಿ (ಧೀ), ನಾಲಿಗೆ, ಕಿವಿ, ಎದೆ, ಮೂಗು (ಮೂಸೆ) ಎಂಬ ಪದಾವಳಿ ಜ್ಞಾನೇಂದ್ರಿಯಗಳ ಜ್ಞಾನಗಮ್ಯತೆಯನ್ನು ವಿವರಿಸುತ್ತವೆ. ಎರಡನೆಯ ಷಟ್ಪದಿ:

"ಜಗದಿ ಜಗುಲಿಯ ಕಟ್ಟೆಯೊಂದೆ ಕಾಲಲಿ ಮೆಟ್ಟಿ
ಜಿಗಿಜಿಗಿಯುತಿಹ ಸಪ್ತಸಾಗರಗಳಂ ಕಟ್ಟಿ
ನಗೆನಗುತಲೆದ್ದು ಹೊರಬಿದ್ದು ಮೇಲಕ್ಕೇರಿ ಮರುತಲೋಕವನ್ನು ಮುಟ್ಟಿ,
ದಿಗಿಲೆದ್ದ ಗಾಳಿಗಳ ಗೂಳಿಗಳ ಬಿಗಿದಿಟ್ಟು
ಹಗಲ ಹೆಗಲಿನ ಮೇಲೆಯೊಂದು ಕಾಲನ್ನಿಟ್ಟು
ಮುಗಿಲಿನೊಳು ಮುಗಿಯದಂತಾಗಿ ಮೇಲಕೆ ಸಾಗಿ ನಿಂತೆಯೊ ವಿರಾಟನಾಗಿ"

ಜಗದ ಕಟ್ಟೆ, ಸಪ್ತಸಾಗರ, ಮರುತಲೋಕ, ಗಾಳಿಗಳ ಗೂಳಿ, ಹಗಲ ಹೆಗಲು ಮತ್ತು ವಿರಾಟ್ ಎಂಬ ಪದಗಳು ಜ್ಞಾನೇಂದ್ರಿಯ ಗಮ್ಯ ಅನುಭವ, ವಿರಾಟ್ ರೂಪದ ಅನುಭೂತಿಯಾಗುವ ಕಲ್ಪನೆಯನ್ನು ವಿವರಿಸುತ್ತವೆ. ಮೂರನೆಯ ಷಟ್ಪದಿ -

"ಕಂಡ ರೂಪಕ್ಕಿಂತ ಕಾಣದೊಡವೆಯ ಸೊಬಗು
ಉಂಡ ರುಚಿಗಳಿಗಿಂತ ಉಣ್ಣದಮೃತದ ಸವಿಯು
ಮಿಂದ ನೀರಿಂದಲೂ ಮೀಸಲಿರುವಂಥ ನೀರಿಂದ ಬಂದಂಥ ತಂಪು ||
ಅಂದ ಹಾಡಿಂದಲೂ ಬಂದ ಹಾಡಿನ ಸೊಗಸು
ಬಂದ ಗಂಧಕ್ಕಿಂತ ಬರಲಿರುವ ಹೂಗಂಪು
ಅಂದವದು, ಚೆಂದವದು, ಆನಂದಕಂದವದು ಕಂದದದು ಕುಂದದೆಂದೂ ||"

ಅನುಭೂತ ಮತ್ತು ಅನನುಭೂತ; ವರ್ಣನೀಯ ಮತ್ತು ಅವರ್ಣನೀಯ ನೆಲೆಗಳನ್ನು ನಾವು ಬುದ್ಧಿಯಿಂದ ಅರಿತು ಆನಂದಿಸುವುದು ಹೇಗೆ ಎಂಬುದನ್ನು - ಕಂಡ, ಕಾಣದ ಸೊಬಗು; ಉಂಡ, ಉಣ್ಣದ ಸವಿಯು; ಮಿಂದ, ಮೀಸಲಿರುವ ತಂಪು; ಅಂದ, ಬಂದ ಹಾಡಿನ ಸೊಗಸು; ಬಂದ ಗಂಧ, ಬರಲಿರುವ ಹೂಗಂಪು ಮತ್ತು ಇವುಗಳಿಂದ ನಿರ್ಮಾಣಗೊಳ್ಳುವ ಬೌದ್ಧಿಕ ಅಂದ, ಚೆಂದ, ಆನಂದಕಂದ ಎಂಬ ಪದಪುಂಜಗಳು ಸಮರ್ಥಿಸುತ್ತವೆ. ಕೊನೆಯ ಷಟ್ಪದಿ -

"ಹೆಸರಾಚೆಗಿರುವ ಚೆಲ್ವಿಕೆಯ ನಿನ್ನಯ ಹೆಸರ
ಕುಸುರು ಕುಶಲತೆಯಿಂದಲೂ ಉಸಿರಲಳವುಂಟೆ
ಎಸೆವೆ ದಶದಿಶೆಗಳಲಿ ಮಸಗಿ ಪೊಸ ಪೊಸ ತೆರದಿ ಜಡ ಜೀವಜ್ಯೋತಿಯಿಂದ ||
ಒಸಗೆಯಾಯಿತು ಬಾಳು, ಹೊಸತು ಕಂಡಿತು ಹಾಳು
ಬೆಸಲಾಯಿತೀಗ ಬಯಲೆಲ್ಲ, ಆಹ!ಬಗೆಸೊಲ್ಲ
ಬಸಿರು ಹಿಡಿಸದು, ಬಾಯಿಗೇನೊ ಬಂದಿತು, ಎಂದೆ 'ನಮೋಪರಾತ್ಪರವೆ' ಎಂದು ||"

ಎಂಬಲ್ಲಿ ಸೌಂದರ್ಯ ಎಂಬ ಹೆಸರಿನ ಆಚೆಗೆ ಇರುವ ಕುಸುರಿನ ಕೌಶಲ್ಯ; ಅದು ಕೊಡುವ ಸಂತೋಷ (ಒಸಗೆ); ಅದು ಹೊಟ್ಟೆಯಲ್ಲಿ (ಬಸಿರು) ಹಿಡಿಸಲಾರದಷ್ಟು ಹೊರಹೊಮ್ಮಿಸುವ ಆನಂದ ಲಭ್ಯವಾಗಬೇಕಾದರೆ ಸೌಂದರ್ಯ ರಸಶಕ್ತಿಗೆ ನಮಸ್ಕರಿಸುವುದೊಂದೇ ಹಾದಿ ಎಂಬ ಆದರ್ಶವನ್ನು ಬೇಂದ್ರೆ ವಿವರಿಸಿದ್ದಾರೆ. ನಮಸ್ಕಾರ ಕ್ರಿಯೆಯಲ್ಲಿ ಅಹಂಕಾರರಾಹಿತ್ಯ ಇರುತ್ತದೆ. ಕವಿಯ ಅಹಂಕಾರ ಅಡಗದೆ ಕಾವ್ಯ ಅವತರಿಸದು ಎಂಬುದು ಬೇಂದ್ರೆ ಕಾವ್ಯದ ಮೊದಲನೆಯ ನಿಲುವು.

"'ನಲ್' ಎಂಬ ಬೀಜಾಕ್ಷರದಲ್ಲಿದೆ ಸಾರಸಂಪತ್ತಿ. ದ್ರಾವಿಡರಸ ವಿಚಾರವು ಎಷ್ಟು ಗಾಢವೂ ಗೂಢವೂ ಆಗಿತ್ತೆಂಬುದು ಆ ಒಂದು ಶಬ್ದದಿಂದ ತಿಳಿಯುವಂತಿದೆ. 'ಆನಂದಾತ್ ಖಲ್ವಿಮಾನಿ ಭೂತಾನಿ ಜಾತಾನಿ' ಎಂಬುದನ್ನು ಅವರು ಬಲ್ಲವರಾಗಿದ್ದರು. ರಸ-ರಮಣೀಯತೆ, ಪ್ರೇಮ ಆನಂದಗಳ ಚತುರ್ಮುಖನು ಸಾಹಿತ್ಯ ವೇದವಾದಿಯೆಂದು ಅವರು ತಿಳಿಯುತ್ತಿದ್ದರು. ರಸ, ರಮಣೀಯತೆ, ಪ್ರೇಮ ಮತ್ತು ಆನಂದ ಎಂಬ ಈ ನಾಲ್ಕು ರೂಪಗಳ ಸಮನ್ವಯಿತ ಏಕರೂಪವಾದ 'ನಲ್' ಎಂಬ ಆದಿಶಕ್ತಿಯ ದರ್ಶನದಿಂದಲೇ ಮಾನವನು ಕವಿಯಾಗುವನು - ಋಷಿಯಾಗುವನು. ಆದರ್ಶಾನುಭವದಿಂದಾಗುವ ಆನಂದವನ್ನು ವಾಚಕರಲ್ಲಿ ಉಂಟುಮಾಡುವಂತೆ ವಾಗರ್ಥ ಸಂಜ್ಞೆಗಳಿಂದ ವರ್ಣಿತವಾದುದೇ ಕಾವ್ಯವು! ಮಂತ್ರವು"[40]

'ಯೇನ ಸರ್ವ ಇದಂ ತತಂ' ಎಂದು ಹೊಗಳಿಸಿಕೊಂಡಿರುವ ಆ ಗೂಢಶಕ್ತಿಯ ಶ್ರೀಮತ್ ಮತ್ತು ಊರ್ಜಿತವಾದ ರೂಪವನ್ನೇ - ವಿಭೂತಿಯನ್ನೇ ವರ್ಣಿಸುವುದು ಕವಿಯ ವಿಷಯವಾಗಿದೆ. ಇದಕ್ಕೆ 'ಯೋಗವು' ಅವಶ್ಯವು. ಯೋಗವಿಲ್ಲದೆ ಇದು ದುಸ್ಸಾಧ್ಯವೂ ಅಲ್ಲ; ಆದರೆ ಅಸಾಧ್ಯ. ಇದಕ್ಕೆ

ಕಾವ್ಯಯೋಗವೆಂದು ನಾಮಕರಣ ಮಾಡಬಹುದು. ಶ್ರೀಮದ್ ವಾಲ್ಮೀಕಿ ಋಷಿಗಳಲ್ಲಿ ಸ್ಥಾಯಿಯಾಗಿದ್ದ ದಿವ್ಯಶೋಕಭಾವವು ಕ್ರೌಂಚಮಿಥುನ ವಿಯೋಗ ಪ್ರಸಂಗದಿಂದ ಉದ್ದೀಪಿತವಾಗಿ ನವೋನವ ರಾಮಾಯಣಕ್ಕೆ ಜನ್ಮವನ್ನು ಕೊಟ್ಟುದುದು ಇದೇ ನಲ್‌ಕೂಟದ ಪ್ರಭಾವದಿಂದ, 'ಕಾವ್ಯಯೋಗ'ದಿಂದ. ಈ ಯೋಗವು ಪ್ರತಿಭೆಯ ಜನಕ. ಯೋಗಸ್ಥರಾಗಿ ಹೇಳಿದ ಹಾಡೇ ಅಮರಕಾವ್ಯ; ಉಳಿದುದು ರಂಜನೆಯ ವಿಧಿ. ಕಾಲಕಾಲಕ್ಕುಂಟಾಗುವ ಧರ್ಮಗ್ಲಾನಿಯನ್ನು ಹೋಗಲಾಡಿಸಲು ಸರಸ್ವತಿಯು ಇದೇ ಯೋಗವನ್ನಾಶ್ರಯಿಸಿ ನವಕವಿಗಳ ಮುಖಾಂತರವಾಗಿ ಅಭಿನವ ಸಾಹಿತ್ಯರೂಪದಿಂದ ಅವತರಿಸುವಳು! ಮತ್ತು ಜಗತ್ತಿನ ರಸ, ರಮಣೀಯತೆ, ಪ್ರೇಮ, ಆನಂದ ಕಾವ್ಯಧರ್ಮವನ್ನು ಅಚ್ಯುತವಾಗುವಂತೆ ಪ್ರತಿಷ್ಠೆಗೊಳಿಸುವಳು"[41] ಎಂದು ಬೇಂದ್ರೆಯವರು 'ನಲ್' ಮತ್ತು 'ಕಾವ್ಯಯೋಗ'ವನ್ನು ಕುರಿತು ಹೇಳಿದ್ದಾರೆ. ಬೇಂದ್ರೆಕಾವ್ಯದ ಮುಖ್ಯ ಪ್ರತೀಕ 'ನಲ್'. ಅದೇ ಅವರ ಕಾವ್ಯದ ರಸ, ಪ್ರೇಮ, ಹಿಗ್ಗು, ಸಾಮರಸ್ಯ. ವಾಲ್ಮೀಕಿ ಪರಂಪರೆಯನ್ನು ಬೇಂದ್ರೆಕಾವ್ಯ ತಳಹದಿಯಾಗಿ ಒಪ್ಪಿಕೊಂಡು, (ಕಾವ್ಯೋದ್ಯೋಗ - ಯೋಗ, ಆಯೋಗ, ಪ್ರಯೋಗ, ವಿಯೋಗ, ಸಂಯೋಗ, ಅಭಿಯೋಗ ಮತ್ತು ಉತ್‌ಯೋಗ) ಎಂಬ ಏಳು ನೆಲೆಗಳಲ್ಲಿ ಕಾವ್ಯವನ್ನು ಸೃಷ್ಟಿಸುವ ಹೊಸ ಹೆಜ್ಜೆ ಬೇಂದ್ರೆ ಇಟ್ಟರು. ಗೆಳೆಯರ ಗುಂಪನ್ನು ಕಟ್ಟಿ ೧೯೨೬ ರವರೆಗೆ ಹಂತಹಂತವಾಗಿ ಕಾವ್ಯಲೀಲಾ ಸಾಧನೆಗೆ ಸಾಮಷ್ಟಿಕ ರೂಪಕೊಡುತ್ತ ಹೋದರು. ಬೇಂದ್ರೆಯವರ ಕಾವ್ಯದ ಈ ಹೊಸ ಹೆಜ್ಜೆ ೧೯೧೮ರಿಂದ ೧೯೨೪ರವರೆಗೆ ರೂಪಗೊಂಡಿತ್ತು. ಇದು ಬೇಂದ್ರೆ ಕಾವ್ಯದ ಮೊದಲ ಹೊಸ ಹೆಜ್ಜೆ.

೧೯೨೪ರಲ್ಲಿ ಬೇಂದ್ರೆ ಕಾವ್ಯಚಿಂತನೆಗೆ ಹೊಸ ರೂಪಬರಲು ಆರಂಭವಾಯಿತು. 'ಮೂರ್ತಿ' ಎಂಬ ಅಣು ಮಹಾಕಾವ್ಯ ಚಿಂತನೆಯಲ್ಲಿ ಬೇಂದ್ರೆ ತೊಡಗಿದಾಗ "ಕಲಾಸೃಷ್ಟಿಯಲ್ಲೂ ಹಳೆಯ ಅನುಭವದ ಪ್ರಳಯಾಂಧಃಕಾರದೊಳಗಿಂದಲೇ ನವೀನ ಅನುಭವದ ಸೃಷ್ಟಿಯ ತರಂಗಗಳೇಳುವವು; ಹೊಸ ಮೂರ್ತಿಯ ದರ್ಶನವಾಗುವದು. 'ಮೂರ್ತಿ'ಯ ರೂಪಕದಲ್ಲಿ ನನ್ನ ಜೀವ ಒಂದು ಹೊಸ ನವೋನ್ಮೇಷವನ್ನು ಕಂಡಿತು. ಈ ಬಾಳಿನ ನಿಜವೇನು? ಎಂದು ನೆನೆಸಿದಾಗ ಅದರ ಗುಟ್ಟನ್ನು ಶಬ್ದದಲ್ಲಿ ಹಿಡಿದಿಡಬೇಕು. ಸಂಖ್ಯೆಯಿಂದ ಅಳೆದು ತೋರಿಸಬೇಕು ಎಂಬ ಆಸೆ ಪ್ರಬಲವಾಗುವುದು. ಅಮೇಯವಾದುದನ್ನು ಒಂದು ಪ್ರಮೇಯವೆಂಬಂತೆ ತರ್ಕತಾಂಡವಕ್ಕಿಳಿಸಿದಾಗ ವಾಚ್ಯದೊಳಗಿಂದ ಧ್ವನಿ ಹೊರಟಂತೆ, ತರ್ಕದ ಹಿಂದೆ ಒಂದು ಅತರ್ಕ್ಯವಾದ ಮೂರ್ತಿ ಎದ್ದು ನಿಲ್ಲುತ್ತದೆ. ಅಮರಜೀವಕ್ಕೆ ಅನಂತದೇವನಿಲ್ಲದೆ ಆನಂದವಿಲ್ಲ. ಪೌರುಷದ ಗಮ್ಯದಾಚೆಗೆ ಅಪೌರುಷೇಯದ ಅಗಮ್ಯವೊಂದು ತಲೆಯೆತ್ತುವುದು. ಮನನದ ಭವ್ಯತೆಗೆ ಆತ್ಮ ಹೆಚ್ಚಲ್ಲ; ಕಲ್ಲು ಕಡಿಮೆಯಲ್ಲ; ಕಲ್ಲಿನ ಬಾಳಿನಲ್ಲಿಯೂ ಸ್ಫುಟವಾಗುವ ರಮ್ಯತೆಯು ಆತ್ಮಾನುಸಂಧಾನದ ಫಲವೇ"[42] ಎಂಬ ನಿಲುವಿನ ಸಾಕ್ಷಾತ್ಕಾರ ಪಡೆದರು. ಬೇಂದ್ರೆ ಕಾವ್ಯ ರಚಿಸಿದ್ದು - ಆತ್ಮಾನುಸಂಧಾನಕ್ಕಾಗಿ; ರಂಜನೆಗಾಗಿ ಅಲ್ಲ. ಈ ಹೊಸ ಹೆಜ್ಜೆಯಲ್ಲಿ ಬೇಂದ್ರೆ ಕಾವ್ಯ ಕೇವಲ ಮಾನುಷ ಕ್ರಿಯೆಯಲ್ಲ. ಇದರಲ್ಲಿ ಕವಿ ಹಾಗೂ ಈಶ ಸಂಕಲ್ಪಗಳ ಸಾಮರಸ್ಯ ಅಭಿವ್ಯಕ್ತಗೊಳ್ಳುವ ಅನುಭಾವ ಕ್ರಿಯೆಯನ್ನು ಅನುಭವಿಸತೊಡಗಿದರು. ಈ ಹೊಸ ಹೆಜ್ಜೆಯನ್ನು ಅವರು ೧೯೩೪ರಲ್ಲಿ ಪ್ರಕಟಪಡಿಸಿದರು. ೧೯೨೪ರಿಂದ ೧೯೬೪ರವರೆಗೆ ನಲವತ್ತು ವರ್ಷ ಬೇಂದ್ರೆ ಕಾವ್ಯ ಈ ನೆಲೆಯಲ್ಲಿ ಕಾವ್ಯೋದ್ಯೋಗ ಸಾಧನೆಯನ್ನು ಮಾಡುತ್ತಿತ್ತು. ಇದು ಬೇಂದ್ರೆ ಕಾವ್ಯದ ಎರಡನೆಯ ಹೊಸ ಹೆಜ್ಜೆ.

೧೯೬೪ರಲ್ಲಿ 'ನಾಕುತಂತಿ'ಯನ್ನು ಪ್ರಕಟಿಸುವಾಗ "ಭೋಗಸಾಧನೆಯ (ಭೋ=೪; ಗ=೩ = ೪೩. ೪ + ೩ = ೭) ಕವನ ಭಂಡಾರವೂ ಇದೆ. ಯೋಗಸಾಧನೆಯ (ಯೋ = ೧; ಗ =೩ = ೧೩. ೧

+ ೩ = ೪. ೪ ಚತುರ್ಮುಖತೆ ; ೧೩ ಅವ್ಯಯ ಪುರುಷ-ಕ್ಷೇತ್ರಜ್ಞ ಸಾಧನೆ) ಕವನ ಮಾರ್ಗವೂ ಇದೆ. ಸಾಮಾನ್ಯತೆಯ ಅಜ್ಞಾನ, ಅಹಂಕಾರಗಳಿಗೆ ನಾವು ಪಟ್ಟಗಟ್ಟಿ ಅದನ್ನು ಶಿಲಾಶಾಪಕ್ಕೆ ಗುರಿಪಡಿಸಬಾರದು. ರಾಮ (ರಾ= ೨; ಮ = ೫. ೨ + ೫ = ೭ ಯೋಗಸಾಧನೆಯ ಏಳು ನೆಲೆ) ಪಾದಸ್ಪರ್ಶ ಅದಕ್ಕೂ ಬೇಕು. ಆ ದಿವ್ಯದರ್ಶನದಲ್ಲಿ ವ್ಯಾಧನು ವಾಲ್ಮೀಕಿಯಾಗುತ್ತಾನೆ. ಇಂಥ ಹುತ್ತದ ಸುತ್ತ ಆನು, ತಾನು, ನಾನು, ನೀನು - ನಾಕುತಂತಿಯ ಚೌದಂತ ವೀಣೆ ಮಿಡಿಯುತ್ತದೆ"[43] ಎಂದು ತನ್ನ ಕಾವ್ಯಮಾರ್ಗದ ಮೂರನೆಯ ಹೊಸ ಹೆಜ್ಜೆಯನ್ನು ಬೇಂದ್ರೆ ಪ್ರಕಟಿಸಿದರು. ಕಾವ್ಯದ ಚತುರ್ಮುಖ ಸೌಂದರ್ಯ ದರ್ಶನದಿಂದ ಬೇಂದ್ರೆ ಕಾವ್ಯ ಆತ್ಮಾನುಸಂಧಾನದ ಚತುರ್ಮುಖ ದರ್ಶನ ಪಡೆಯಿತು. ನಾನು = ಕವಿ; ನೀನು = ಕಾವ್ಯ; ಆನು = ಆಧಾರ ಪರಂಪರೆ; ತಾನು = ಈಶ ಸಂಕಲ್ಪದಿಂದ ಇಟ್ಟ ಹೊಸಹೆಜ್ಜೆ.

"ಕಾವ್ಯ ಭಾವ (ಭಾ = ೪; ವ = ೪. ೪ + ೪ = ೮.) (ಎಂಟು = ಹಿಂದೆ, ಮುಂದೆ, ಮೇಲೆ ಕೆಳಗೆ, ಎಡಕ್ಕೆ, ಬಲಕ್ಕೆ, ಒಳಗೆ, ಹೊರಗೆ ಎಂಬ ಆತ್ಮಪ್ರಜ್ಞೆ) ವಿಸ್ತಾರದ ಜಗತ್ತು, ಮಠದ ಆಜ್ಞಾಪತ್ರವಲ್ಲ; ರಾಜನ ಶಾಸನವಲ್ಲ. ಶಬ್ದವೇ ಕಾವ್ಯ (ಸಂಖ್ಯೆಯೂ ಕಾವ್ಯ) ಅದು ದೇವ (ದೇ = ೮. ವ = ೪. ೮ + ೪ = ೧೨. ೧೨ = ಜ್ಞ) ರ ನಾಮ = ಕಾವ್ಯಯಜ್ಞ = ಮಂತ್ರ"[44].

"ರಾಮಾಯಣ ಮತ್ತು ಮಹಾಭಾರತ - ಅನುಷ್ಟುಪ್ ೩೨ ಅಕ್ಷರಗಳ ಮಾರ್ಗ (೮ X ೪ = ಚೌಪದಿ). ಕೃತಿ, ಆಕೃತಿ, ಪ್ರಕೃತಿ, ವಿಕೃತಿ, ಸಂಕೃತಿ, ಅಭಿಕೃತಿ, ಉತ್ಕೃತಿ - ಇವು ಬರಿ ಛಂದೋನಾಮಗಳಲ್ಲ. ಛಂದದೊಂದಿಗೆ ಭಾವ, ಬುದ್ಧಿಯ, ಪ್ರಜ್ಞೆಯ ನೆಲೆಯೂ ಬೆಳೆಯಬೇಕು. (ಭಾವ = ೪೪; ಬುದ್ಧಿ = ೩೯; ಪ್ರಜ್ಞೆ = ೨೧೨). ೧೩೬ ಅಕ್ಷರ ಹಾಗೂ ೨೭೨ ಮಾತ್ರೆಗಳವರೆಗೆ ಹಿಗ್ಗಿಸಿದ ಛಂದಸ್ಸಿನಲ್ಲಿ ಕಾವ್ಯರಚನೆ ಮಾಡುವ ಸಂಕಲ್ಪ, ಪ್ರಯತ್ನ ಕವಿಗಳು ಮಾಡಬೇಕು. ಅಕ್ಷರಗಣ, ಮಾತ್ರಾಗಣ, ಅಂಶೀಗಣ ಇವುಗಳ ತೂಕಾಟ, ತೇಕಾಟ, ಆಲಾಪನೆ, ಗಮಕ, ಯಮಕದ ಗತ್ತುಗಾರಿಕೆ ಎಲ್ಲವೂ ಇಂದು ಮಿಶ್ರ, ಸಂಮಿಶ್ರವಾಗಿ ಮಂಥನ ನಡೆಯಬೇಕು.[45*]

"ಮೈತ್ರಿ, ಕರುಣಾ, ಮುದಿತಾ, ಉಪೇಕ್ಷಾಬಲವೂ ಸಾಹಿತ್ಯಾಭ್ಯಾಸದಿಂದ ಸ್ಥಾಯಿಯಾಗದಿದ್ದರೆ - ನಮಗೆ ಹೊನ್ನು, ಹೆಣ್ಣು, ಮಣ್ಣೇ ಕಾಮ್ಯಾರ್ಥ. ಎಂಥ ಅಧರ್ಮಕ್ಕೂ ಹೇಸದಿರುವುದೇ ಭಾವವಾದರೆ ಪಾಂಚಜನ್ಯವಲ್ಲದೇ ಧರ್ಮಕ್ಷೇತ್ರದಲ್ಲಿ ಬೇರೆ ಯಾವ ಧ್ವನಿ ಮೂಡೀತು? ಮುಕ್ತರ ಧರ್ಮವೇ ಭಕ್ತರ ಜೀವನ. ಇದು ಎಲ್ಲ ಉತ್ತಮ ಕಾವ್ಯಗಳ ಧ್ವನಿ. ಭಾವಗಳ ಸೋಪಾನವೇರದೇ ನೆಲಕ್ಕೆ ಒರಗಿದರೆ, ಯಾವ ಉನ್ನತಿಯನ್ನು ಒಂದು ದೇಶ, ಭಾಷೆ, ಜನ ಕಂಡೀತು?"[46]

"ಜೀವನ, ಕಾವ್ಯದರ್ಶನ, ಸಹೃದಯ ವಿಮರ್ಶೆ, ಹೃದಯಸಂಸ್ಕಾರ - ಇವು ನಡೆಯದ ಸಮಾಜವು ಬದ್ಧ, ಹತಬದ್ಧ.... ಕಾವ್ಯದ ಭಾವಗರ್ಭವನ್ನು ಎಲ್ಲಿಂದಾದರೂ ಸ್ಪರ್ಶಿಸಿ ನೋಡುವುದು ಸಹೃದಯತೆ. .... ಕಾವ್ಯವು ಐಹಿಕ ರಾಜಕಾರಣವಲ್ಲ; ಪಾರಮಾರ್ಥಿಕ ಮುಕ್ತಿಮಾರ್ಗವಲ್ಲ. ಅದು ಧರ್ಮಕಾಮವಾಗಲುನ್ನತಿಸುವ ಕಾಮ - ಧರ್ಮ.... ಸಜ್ಜನಿಕೆಯ ಸಾಮರ್ಥ್ಯವು ಚಾರಿತ್ರ್ಯ. ಕಾವ್ಯಶಾಸ್ತ್ರ ವಿನೋದವಲ್ಲ. ಸತ್ಯಪ್ರೀತಿಯು ಚಾತುರ್ಯದ ಸರ್ಜನಶಕ್ತಿ; ವಾದಿರಣಾಂಗಣವಲ್ಲ.

---

* ಬೇಂದ್ರೆಯವರ ಸಂಖ್ಯಾಶಾಸ್ತ್ರದ ಪ್ರಕಾರ ಅಕ್ಷರಗಳಿಗೆ ಸಂಖ್ಯೆಯನ್ನು ನೀಡಿ ಅವುಗಳನ್ನು ಸ್ಪಷ್ಟವಾಗಿ ತಿಳಿಯಲು ಪ್ರಯತ್ನಿಸಿದ್ದೇನೆ. ವಾಮನ ಬೇಂದ್ರೆಯವರ ಮಾರ್ಗದರ್ಶನದಲ್ಲಿ ಅದನ್ನು ತಿಳಿದು ಆವರಣದಲ್ಲಿ ನೀಡಿದ್ದೇನೆ. ಆವರಣದಲ್ಲಿ ನೀಡಿರುವ ವಿವರಗಳು ನನ್ನವು.

ಸೌಂದರ್ಯಾನಂದವು ರಸಿಕತೆಯ ಝುರಿ; ಉನ್ಮತ್ತರ ಪೈಶಾಚಿಕ ವೃತ್ತಿಯಲ್ಲ. ಪುರುಷ - ಪ್ರಕೃತಿಗಳ ಮಧುರ ಸಮ್ಮೇಳದಲ್ಲಿ ಸೃಷ್ಟಿಯ ಲೀಲಾನಾಟ್ಯವಿದೆ. ಪಾಶವಿಕ ತ್ರಾಣವು ಸಾತ್ವಿಕದ ಪ್ರಾಣವಾದಾಗ, ಮಾನವತೆಯ ದ್ವಂದ್ವ ಸ್ಪರ್ಧೆಯು ಅನಸೂಯೆಯ ಪ್ರಿಯಂವಾದಿ ಮೈತ್ರಿಯಾದಾಗ; ದೈವಿಕತೆಯು ಭೂಮಿಯಲ್ಲಿ ಅವತಾರಿಕ ಕ್ಷೇತ್ರ ಕಂಡು ಐಹಿಕವನ್ನು ತೀರ್ಥಯಾತ್ರಾಸ್ಥಳ ಮಾಡದೆ, ನೆಲಸುವ ಬೀಡು ಮಾಡಿದಾಗ ಯುಗ ಯುಗಾಂತರದ ಕಾವ್ಯವು ಸಾರ್ಥಕವಾಗುವದು.... ಕ್ಷೇತ್ರಜ್ಞನಾದ ಚಿತ್ತಚೈತ್ಯಪುರುಷನ ಸೂತ್ರಮಯ ಅಂತರ್ಯಾಮಿಕತೆ ಬೇಕು. ಅವರ ಉದ್ಭವ ಸಾಲದು. ಅವರ ಅವತರಣ ಬೇಕು. ಆಗ ಸಾಹಿತ್ಯದ ವಿರಾಟ್‌ಶಕ್ತಿಯು ತನ್ನ ವಿಶ್ವರೂಪದರ್ಶನದಲ್ಲಿ 'ಏಕಂಸತ್ತಿ'ನ ಸಂಪತ್ತಿಯನ್ನೂ, ವೈಭವವನ್ನೂ ಸೂರೆ ಮಾಡುವದು. ಇದು ಸಹೃದಯ ತಂತ್ರ."[47] ಸಾಹಿತ್ಯದ ವಿರಾಟ್ ಸ್ವರೂಪ ಪುಟ ೧೨೯ ರಿಂದ ೧೪೩ ರವರೆಗೆ ತಂತ್ರಚತುರ್ಮುಖ ಎಂಬ ಪ್ರಬಂಧದಲ್ಲಿ ಭಾವ, ಛಂದ, ಧ್ವನಿ ಮತ್ತು ಸಹೃದಯತೆ ಎಂಬ ಚತುರ್ಮುಖ ಸಿದ್ಧಾಂತದ ವಿವರಣೆ ಇದೆ.

ಕವಿ ಸಹೃದಯನಾಗದೆ ಕಾವ್ಯದ ಅವತರಣವಾಗದು ಎಂಬುದು ಬೇಂದ್ರೆ ಕಾವ್ಯದ ನಾಲ್ಕನೆಯ ಹೊಸ ಹೆಜ್ಜೆ. ಕಾವ್ಯದಲ್ಲಿ ಅಣು-ಮಹತ್ ಶಕ್ತಿ ಇರುತ್ತದೆ. ಅದು ಅವತರಣವಾಗಬೇಕಾದರೆ ಕವಿ ಯೋಗಮಾರ್ಗದ ಸಾಧಕನಾಗುವುದು ಅತ್ಯಂತ ಅವಶ್ಯ. ಯೋಗಮಾರ್ಗವು ಪ್ರತಿಯೊಬ್ಬ ಮನುಷ್ಯನ ದೇಹದಲ್ಲಿ ಮೂಲಾಧಾರ, ಸ್ವಾಧಿಷ್ಠಾನ, ಮಣಿಪುರ, ಅನಾಹತ, ವಿಶುದ್ಧಿ, ಆಜ್ಞಾ, ಸಹಸ್ರಾರ ಎಂಬ ಏಳು ಚಕ್ರಗಳನ್ನು = ಶಕ್ತಿ ಕೇಂದ್ರಗಳನ್ನು ಕಂಡುಹಿಡಿದಿದೆ. ಮೂಲಾಧಾರದಲ್ಲಿ ಗಣಪತಿಯ ವಾಸಸ್ಥಾನ. ಸ, ವ, ಶ, ಷ ಎಂಬವು ಅಲ್ಲಿಯ ಬೀಜಮಂತ್ರಾಕ್ಷರಗಳು. ('ಸವಿಶೇಷ' ಸಾಹಿತ್ಯದ ವಿರಾಟ್‌ಸ್ವರೂಪ ಪುಟ ೧೪೦ರಲ್ಲಿ ಉಲ್ಲೇಖವಿದೆ) ಇವುಗಳ ಪಠಣದಿಂದ ಸಾಧನೆಯ ಆರಂಭ ಎಂಬುದಾಗಿ ಪ್ರಾಚೀನ ಋಷಿಪರಂಪರೆ ಕಂಡಿದೆ. ಕವಿ ಮತ್ತು ಋಷಿ ಎಂಬ ರೂಪಕವನ್ನು ಕಾವ್ಯಶಾಸ್ತ್ರ ಒಪ್ಪುವುದರಿಂದ ಬೇಂದ್ರೆಯವರು ಕಾವ್ಯೋದ್ಯೋಗ ಸಾಧನೆ ಇಲ್ಲಿಂದ ಪ್ರಾರಂಭವಾಗಬೇಕು ಎಂಬ ನಿರ್ಣಯಕ್ಕೆ ತಲುಪಿದರು. ಅವತರಣ ಶಕ್ತಿಯನ್ನು ಹೃದಯಕ್ಕೆ ಇಳಿಸಿಕೊಳ್ಳಬೇಕು ಎಂಬುದಾಗಿ ಶ್ರೀ ಅರವಿಂದರ ಯೋಗಮಾರ್ಗ ಹೇಳುತ್ತದೆ. ಈ ಹೊಸಹೆಜ್ಜೆಯ ಅವಲಂಬನವನ್ನು ಬೇಂದ್ರೆ ಕಾವ್ಯ ಮಾಡಿತು. ಇದರಿಂದ ಕವಿಯ ಮನಸ್ಸು ಅನ್ನ, ಪ್ರಾಣ, ಮನ, ಚಿಂತನದಿಂದ ಬಿಡಿಸಿಕೊಂಡು, ಮುಕ್ತವಾಗಿ ವಿಜ್ಞಾನದ ನಿಲುವಿಗೆ ತಲುಪಿದಾಗ ಅವನಿಗೆ ಪ್ರಚಲಿತ ಎಲ್ಲ ವಿಜ್ಞಾನಗಳೊಂದಿಗೆ (Sciences) ಕಾವ್ಯಕ್ಕೆ ಇರುವ ಸಂಬಂಧದ ದರ್ಶನವಾಗುತ್ತದೆ. ಆ ನಿಲುವಿಗೆ ಸ್ಥಿರವಾದ ಕವಿ ಸತ್, ಚಿತ್, ಆನಂದ ಶಕ್ತಿಗೆ ಸಾವಿರಾರು ನಮನಗಳನ್ನು ಸಲ್ಲಿಸಿದಾಗ ಮಾತ್ರ ಅವನಲ್ಲಿ ಶುದ್ಧಕಾವ್ಯದ ಅವತರಣವಾಗುತ್ತದೆ ಎಂಬ ಐದನೆಯ ನಿಲುವಿಗೆ ಬೇಂದ್ರೆ ಬಂದರು.

ಬೇಂದ್ರೆಯವರು ತನ್ನ ಕಾವ್ಯದ ಆರನೆಯ ನಿಲುವಿಗೆ ಏರಿದಾಗ ಸಾಂಖ್ಯಲೋಕದ ದರ್ಶನವಾಯಿತು. ಈ ನಿಲುವಿನಲ್ಲಿ ಬೇಂದ್ರೆಯವರೊಂದಿಗೆ ಎಲ್ಲ ಶಬ್ದಗಳು ಸಂಖ್ಯೆಯ ಭಾಷೆಯಲ್ಲಿ ಮಾತನಾಡತೊಡಗಿದವು. ಪ್ರಜ್ಞೆಯ ನವನವ ಉನ್ಮೇಷದ ಪ್ರತಿಭೆ ಕಾವ್ಯಕಾರಣ ಎಂಬುದಾಗಿ ಕಾವ್ಯಶಾಸ್ತ್ರ ಪರಂಪರೆ ಸಾರುತ್ತ ಬಂದಿದೆ. ಬೇಂದ್ರೆಯವರಿಗೆ ಪ್ರಜ್ಞೆ ಎಂದರೆ ೨೧೨. (ಪ್ರ =೨; ಜ್ಞೆ = ೧೨). ೨ + ೧ + ೨ = ೫. ಪ್ರತಿಯೊಂದು ಕೈಗೆ ಐದು ಬೆರಳುಗಳಿವೆ. "ಕೈನಲ್ಲಿ 'ಬದರಾ'ತಿಳಿಬೇಕೋ ಚದುರಾ ಅಂದಾ".[48] ಇಲ್ಲಿ ಬದರಾ = ದರಾಬೇ. ದ.ರಾ.ಬೇಂದ್ರೆ ಕವಿಯ ಸಾಂಖ್ಯನಾಮ ದರಾಬೇ = ೮೨೩. ನವನವ ಈ ಪ್ರಜ್ಞೆ ಬೇಂದ್ರೆಯವರಿಗೆ "ಕದ್ದು ಮುಚ್ಚಿಯಾಕ? ಬಿಚ್ಚಿ ಇರಲಿ ಬಾಳು, ಕಚ್ಚಿ ಬಿಗಿದು (ಸಂಯಮದಿಂದ) ತಾಳು

ನಾಕು ದಿನ"[49] ಎಂಬ ಸಂದೇಶ ಕೊಟ್ಟಿತು. ಇಂದ್ರಿಯಗಳ ಸಂಯಮವೇ ವಿವೇಕ. ವಿ = ೪; ವೇ = ೪, ಕ = ೧. ಆದುದರಿಂದ ವಿವೇಕ = ೯. ಇಂದ್ರಿಯ ಸಂಯಮದ ವಿವೇಕವನ್ನು ಕವಿಯು ಸಾಧಿಸಿದಾಗ ಅವನ ಜೀವನ ಸಾರ್ಥಕವಾಗುತ್ತದೆ, ಮೌಲಿಕ ಬಾಳಾಗುತ್ತದೆ. ಈ ಪ್ರಜ್ಞೆ ಪ್ರತಿಭೆಯಾದಾಗ (ಪ್ರ = ೨, ತಿ = ೬, ಭೆ = ೪. ೨ + ೬ + ೪ = ೧೨) ಬೇಂದ್ರೆಯವರಿಗೆ ಕಾವ್ಯಜೀವನವೇ ಯಜ್ಞ. ಯಜ್ಞದ ಸಂಕೇತ ಜ್ಞ = ೧೨. ಇಲ್ಲಿ ಅವರಿಗೆ "ಕೈಬೆರಳು ಜೋಡೀಸಿ ಹೂಪಕಳಿ ಕೂಡೀಸಿ ಭಗವಂತನ ಮೂಡೀಸಿ ನೋಡಬೇಕು"[50] ಎಂಬ ಸಂದೇಶ ಬಂದಿತು. ಬೇಂದ್ರೆಯವರು ಸತತ ನಮಸ್ಕಾರ ಮುದ್ರೆಯಿಂದ ಕಾವ್ಯಶಕ್ತಿಯ ಆರಾಧನೆ ಪ್ರಾರಂಭಿಸಿದರು. ಆಗ ಅವರ ಎಲ್ಲ ಭಾವಗಳು (ಭಾವ - ಭಾ = ೪, ವ = ೪. ೪ + ೪ = ೮. ಆತ್ಮದ ಅಷ್ಟಾಂಗ ಅರಿವು) ಜಾಗೃತವಾದವು. ಬೇಂದ್ರೆ ಕಾವ್ಯಭಾವಕ್ಕೆ ಏಳು ಸೋಪಾನಗಳು. ಭಾವ, ಅಭಾವ, ಪ್ರಭಾವ, ವಿಭಾವ, ಸಂಭಾವ, ಅಭಿಭಾವ ಮತ್ತು ಉದ್‌ಭಾವ. ಈ ಉದ್‌ಭಾವ ನಿಲುವಿನಲ್ಲಿ ಭಕ್ತಕವಿ ಮತ್ತು ಭಗವಂತನಲ್ಲಿ ಅದ್ವೈತ, ಐಕ್ಯ ಸಾಧ್ಯವಾಗುತ್ತದೆ. ಈ ಸಮರಸ ಐಕ್ಯ ಸಾಧಿಸಿದಾಗ ಅವರಲ್ಲಿ ನವರಸಗಳ (ರ = ೨, ಸ = ೭. ೭ + ೨ = ೯) ಹೊಸಹೊಸ ಮುಖಗಳ ಸಾಕ್ಷಾತ್ಕಾರವಾಗುತ್ತದೆ. ಆತ್ಮಸಾಕ್ಷಾತ್ಕಾರ ದರ್ಶನಕ್ಕಾಗಿ ಕಾವ್ಯೋದ್ಯೋಗ ಸಾಧನೆಯನ್ನು ಬೇಂದ್ರೆಯವರು ಮಾಡಿ ಪಡೆದ ಆನಂದ ಸ್ಪರ್ಶ (ಆ = ೨, ನ = ೦, ದ = ೮. ೮ + ೨ = ೧೦) ಈ ಹತ್ತು:

"ಬಾಳಾ ಕೇಳೋ ಬೋಧ
ಗುರುವಿನ ಶೋಧಾ
ಆತನನುರೋಧಾ
ಎದಿಗವಿಯಲ್ಲಿ.
ಎಲ್ಲೆ ಕತ್ತಲುಂಟೋ
ಅಲ್ಲೆ ಬೆಳಕಿನಗಂಟು
ಸ್ನೇಹದಾಗಿನ ಅಂಟು
ನಿಜದ ನಂಟು.
ನಂದು ನಿಂದು ಎಂದು
ತಿಂದಬಿಟ್ಟರಿಲ್ಲಾ
ಕೊಡುಕೊಳೆಯ ಬಲ್ಲಾ
ಧೀರಾ ವೀರಾ.
ನೈವೇದ್ಯ ಪ್ರಸಾದ
ನೀರು ತೀರ್ಥ ಕಾಣೊ
ಗಾಳಿ ಬಾಳಿನ ಗುಟ್ಟು
ಪ್ರಾಣದೇವಾ.
ಅಂಬಿಕೆಯ ಗರ್ಭಾ
ತುಂಬಿದಾ ಬೆಳಕಾ
ಸೂರ್ಯನ ಝುಳಕಾ
ದತ್ತಮಿಂದಾ."[51]

ಈ ಕವನಸೃಷ್ಟಿಗೆ ಉಪನಿಷತ್ತಿನ ಪೂರ್ಣಮಿದಂ ಪೂರ್ಣಮದಃ ... ಅತ್ಯತಿಷ್ಟತ್ ದಶಾಂಗುಲಂ - ದಶಾವತಾರಿ ಕೃಷ್ಣನ ಚಿಂತನ ಪರಂಪರೆ ಇದೆ. ಇದೇ ಚಿಂತನ ಗಂಗಾವತರಣ ಕವನಸಂಗ್ರಹದಲ್ಲಿಯ - ತುಂಬಿ -

"ಆ ಇದೂ ತುಂಬಿ ಆ ಅದೂ ತುಂಬಿ ಯಾವುದೂ ತುಂಬಿ ಇರದೇ
ತುಂಬಿ ಕಳೆದರೂ ತುಂಬಿ ಉಳಿದರೂ ತುಂಬಿ ತುಂಬಿ ಬರದೇ"[52]

ಎಂಬ ಶಬ್ದಕಾವ್ಯವಾಗಿತ್ತು. ಅದೇ ಭಾವ ಬಾಲಬೋಧೆಯ ಹತ್ತನೆಯ ನುಡಿಯಾಗುತ್ತದೆ. ಈ ಸಂಖ್ಯಾಜ್ಞಾನಕ್ಕೆ ವೇದ, ಜೈನ, ವೀರಶೈವ, ಬ್ರಾಹ್ಮಣ, ಕ್ರೈಸ್ತ, ಮಹಮ್ಮದೀಯ ಸಾಹಿತ್ಯದಲ್ಲಿ ಚಿಂತನ ಪರಂಪರೆ ಇದೆ. ಅದನ್ನು ಹಿಗ್ಗಿಸಿ ಆಧುನಿಕ ವಿಜ್ಞಾನಗಳಲ್ಲಿಯ ಸಂಖ್ಯೆಗಳೊಡನೆ ಇರುವ ಸಾಮರಸ್ಯವನ್ನು ಪ್ರತಿಪಾದಿಸಿದ್ದು ಬೇಂದ್ರೆ ಸಾಂಖ್ಯವಿಜ್ಞಾನ ಸಿದ್ಧಾಂತದರ್ಶನದ ಮಹತಿಯಾಗಿದೆ.

"ಇಲ್ಲಿ ತುಂಗಭದ್ರೆಯ ಉತ್ತರಾಪಥದ 'ದೇಶಿ'ಯ ಮಾರ್ಗವನ್ನು ಹುಡುಕುವ ಹಾಗೆಯೇ ಹುಟ್ಟಿಸುವ ಕುರುಹಿದೆ" ಎಂಬ ವಿಚಾರವನ್ನು ಬೇಂದ್ರೆ 'ಗರಿ' ಯ ಮುನ್ನುಡಿಯಲ್ಲಿ ಪ್ರತಿಪಾದಿಸಿದರು. "ಮೈಸೂರು, ಧಾರವಾಡ, ಮಂಗಳೂರು ಎಂಬ ಭೇದ ಅಡಗಿ, ಹಳ್ಳಿ-ಪಳ್ಳಿಗಳಲ್ಲಿಯೂ ಹೆಣ್ಣು-ಗಂಡು ಒಂದೇ ಕನ್ನಡ ಆಡಬೇಕು"[53] ಎಂದಿದ್ದರು. ಅದು ಇಂದಿಗೂ ಸಾಧ್ಯವಾಗಿಲ್ಲ. ಬೇಂದ್ರೆ ಕಾವ್ಯದ ಧಾರವಾಡ ಕನ್ನಡ ಮೈಸೂರು, ಮಂಗಳೂರಿನವರಿಗೆ ತಕ್ಕಮಟ್ಟಿಗೆ ತಿಳಿಯುವಂತೆ ಮಾಡಿದ್ದು ಬೇಂದ್ರೆಕಾವ್ಯದ ಶ್ರೇಯಸ್ಸು. ಆನಂತರ ಅವರ ಕಾವ್ಯ -

೧. ಐಂದ್ರಯಿಕ, ಕಾಲ್ಪನಿಕ, ಬೌದ್ಧಿಕ, ಆದರ್ಶ ಎಂಬ ಚತುರ್ಮುಖ ಸೌಂದರ್ಯದ ವಿಶ್ಲೇಷಣೆಯನ್ನು ಮಾಡಿತು.
೨. ರಸ, ರಮಣೀಯತೆ, ಪ್ರೇಮ, ಆನಂದ ಎಂಬ ನಾಲ್ಬಗೆಯ ಜ್ಞಾನವನ್ನು ಪ್ರತಿಪಾದಿಸಿತು.
೩. ಬಾಳಿನ ನಿಜವನ್ನೂ ಶಬ್ದದಂತೆ ಸಂಖ್ಯೆಯಲ್ಲಿಯೂ ಅರಿಯಲು ಹವಣಿಸಿತು.
೪. ಭೋಗಕಾವ್ಯದ ಮೇರೆ ಮೀರಿ ಯೋಗಕಾವ್ಯದ ಸಂಚಾರ ಸಾಗಿಸಿ - ನಾನು, ನೀನು, ಆನು, ತಾನು ಎಂಬ ನೆಲೆಗಳನ್ನು ತಲುಪಿತು.
೫. ಭಾವ, ಛಂದ, ಧ್ವನಿ ಮತ್ತು ಸಹೃದಯತೆಯ ಸಾಕ್ಷಾತ್ಕಾರಕ್ಕಾಗಿ ಯೋಗ ಸಾಧನೆಯನ್ನು ಮಾಡಿತು.
೬. ಸಂಖ್ಯಾಸಾಮರಸ್ಯ ಕಂಡಿತು.

ಇದು ಅವರು ಕಂಡ ಕನ್ನಡ ಕಾವ್ಯಮಾರ್ಗದಲ್ಲಿಯ ಹೊಸಹೆಜ್ಜೆ ಎನ್ನಬಹುದು.

ಬೇಂದ್ರೆಯವರ ಹೊಸಹೆಜ್ಜೆಗಳಿಗೆ ಪರಂಪರೆಯ ತಳಹದಿ ಇದೆ. ಪರಂಪರೆ ಕಾಣದ ಒಂದು ಹೊಸ ಹಾದಿ ಹುಡುಕುವುದೇ ಅವರ ಮನೋಧರ್ಮವಾಗಿತ್ತು. ಅವರು 'ಕನ್ನಡ ಸಾಹಿತ್ಯದಲ್ಲಿ ಸಂಪ್ರದಾಯ ಮತ್ತು ಹೊಸರೀತಿ'ಯನ್ನು ಕುರಿತು ಹೇಳಿದ ಕೆಲವು ಅಭಿಪ್ರಾಯಗಳು ಹೀಗಿವೆ :

"ಯಾವ ಜ್ಞಾನ, ಶಕ್ತಿ, ರೀತಿ, ನಡತೆ ಪದ್ಧತಿ ಅನೂನವೆಂಬಂತೆ ಪರಂಪರೆಯಿಂದ ಬರುತ್ತದೋ ಅದು ಸಂಪ್ರದಾಯ.... ಸಂಪ್ರದಾಯದಲ್ಲಿ ಬುದ್ಧಿಪೂರ್ವಕ ಮಾಡಿದ ಯಾವ ಹೆಚ್ಚುಕಡಿಮೆಯೂ ಅದರಿಂದ ತೀರ ಭಿನ್ನವಾದ ರೀತಿಯೂ 'ಹೊಸರೀತಿ' ಎನಿಸಿಕೊಳ್ಳುವುದು.

ಇದ್ದುದನ್ನು ಇದ್ದಂತೆ ಕಾಯ್ದುಕೊಂಡು, ನಡೆಸಿಕೊಂಡು ಹೋಗುವುದೆ ಸಂಪ್ರದಾಯವಾದರೆ ಅದೊಂದು ಸಮಾಜದ ಜಡಬುದ್ಧಿ, ತಾಮಸಜಾತಿ ಎನ್ನಬಹುದು. ಎಂಥದಾದರೂ ಮಾರ್ಪಾಡೇ ಹೊಸರೀತಿಯಾಗಬಹುದಾದರೆ ಅದು ಸಾಮೂಹಿಕ ಚಾಂಚಲ್ಯ ಅಥವಾ ವೈಯಕ್ತಿಕ ರಾಜಸವೃತ್ತಿ

ಎನ್ನಬಹುದು. ಆದರೆ 'ಸಂಪ್ರದಾಯ'ವೆಂದರೆ ಇದ್ದ ಒಳ್ಳೆಯ ಗುಣಗಳನ್ನು ಕಾಯ್ದುಕೊಳ್ಳುವದೆಂದಾದರೆ, 'ಹೊಸ ರೀತಿ'ಯೆಂದರೆ ಇದುವರೆಗೆ ತಮ್ಮಲ್ಲಿ ಬೆಳೆಯದಿದ್ದ ಗುಣಗಳನ್ನು ಬೆಳೆಸಿಕೊಳ್ಳುವದು ಎಂದಾಗಬಹುದು.

'ಸಂಪ್ರದಾಯ' ಎಂದರೆ ದೇಹಶುದ್ಧಿ, ಆನುವಂಶಿಕ ಗುಣಸಂಪತ್ತಿ, ದೈವದ ಆನುಕೂಲ್ಯ; ಹಾಗೆಯೇ 'ಹೊಸರೀತಿ' ಎಂದರೆ ಗುಣವೃದ್ಧಿ, ಪೌರುಷದ ಪ್ರಾಚುರ್ಯ, ಸಾಹಸದ ಸಮೃದ್ಧಿ. ಸಂಪ್ರದಾಯ ಹೊಸರೀತಿಗಳು ಸಮ ತೂಕದಿಂದ ಕೂಡಿಕೊಂಡಲ್ಲಿ ರಾಜಸ ತಾಮಸಗಳ ವೈಷಮ್ಯವಡಗಿ ಹೊಸದೊಂದು ತತ್ತ್ವವೇ ತಲೆಯೆತ್ತೀತು. ಸಾಹಿತ್ಯಕ್ಕೆ ಬೇಕಾದದ್ದು ಇದು.

ಸಾಹಿತ್ಯದ ಸಾರದಲ್ಲಿ ಸಂಪ್ರದಾಯ ಮತ್ತು ಹೊಸರೀತಿಗಳ ಬಡಿದಾಟಕ್ಕೆ ಸ್ಥಾನವಿರಬಾರದು...... 'ಸಂಪ್ರದಾಯ' ಮತ್ತು 'ಹೊಸರೀತಿ' ಎನ್ನುವವು ಒಂದು ರೀತಿಯ ಮನೋಧರ್ಮಗಳನ್ನು ಸೂಚಿಸುವ ಮಾತುಗಳು."[54]

ಬಾಲ್ಯದಿಂದಲೂ ಬೇಂದ್ರೆಯವರ ಮನೋಧರ್ಮ ಸ್ವತಂತ್ರ ವಿಚಾರವುಳ್ಳ ಹೊಸಹೆಜ್ಜೆಯ ಹುಡುಕಾಟದ್ದು ಆಗಿತ್ತು. ವಿದ್ಯಾರ್ಥಿಯಾಗಿದ್ದಾಗ ಯಾವುದೇ ಪುಸ್ತಕ ಓದುವಾಗ ಅದರಿಂದ ಹೊಸದೇನನ್ನು ತಿಳಿಯಬಹುದು ಎಂಬ ವಿಚಾರದಲ್ಲಿ ತಲ್ಲೀನರಾಗುತ್ತಿದ್ದರು. ಒಂದು ಪುಟದ ವಾಚನದೊಡನೆ ಗಂಟೆಗಟ್ಟಲೆ ಅದರ ವಿಶ್ಲೇಷಣೆ ಮಾಡುತ್ತಿದ್ದರು. ಹೀಗಾಗಿ ಸಹಪಾಠಿಗಳು, ಹೆಚ್ಚು ಗುಣಗಳನ್ನು ಪಡೆಯುವದಷ್ಟೇ ಧ್ಯೇಯವಿಟ್ಟುಕೊಂಡವರು ಅವರಿಂದ ಬಹುಬೇಗ ದೂರ ಸರಿಯುತ್ತಿದ್ದರು.

ಬೇಂದ್ರೆಯವರ ವಾಚನ ಪದ್ಧತಿಯಲ್ಲಿ ಅನೇಕ ಪ್ರಶ್ನೆಗಳು ಉದ್ಭವಿಸುತ್ತಿದ್ದವು. ಅದಕ್ಕೆ ಉತ್ತರಗಳನ್ನು ಅವರ ವಿಚಾರ ಪದ್ಧತಿ ಕಂಡುಹಿಡಿಯುತ್ತಿತ್ತು. ನಿಃಸಂಶಯದ ನಿಲುವು ತಲುಪುವವರೆಗೆ ಅವರು ವಿಚಾರ ಮಾಡುತ್ತಿದ್ದರು. "ಸ್ವತಂತ್ರ ವಿಚಾರವಂತನು ಬುದ್ಧಿಗೆ ಮುಸುಕಿದ ಅಮಾಸಿಯನ್ನು ತನ್ನ ಬುದ್ಧಿಮಂತ್ರದಿಂದ ಹುಣ್ಣಿವೆಯಾಗಿ ಮಾಡುವನು. ಇಂಥ ವಿಚಾರವಂತನಾಗುವದೇ ನಮ್ಮ ಧ್ಯೇಯ. ಈ ಕ್ರಾಂತಿಯೆ ದಿವ್ಯಸಂಕ್ರಾಂತಿ"[55] ಆದುದರಿಂದ ಬೇಂದ್ರೆ ಕಾವ್ಯಪದ್ಧತಿಯಲ್ಲಿ ಅನೇಕ ಹೊಸಹೆಜ್ಜೆಗಳು ಮೂಡಿವೆ.

## ಸಂಖ್ಯಾ ಟಿಪ್ಪಣಿಗಳು

1. ದ. ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ, 1974, ಪು. 40.
2. ದ. ರಾ. ಬೇಂದ್ರೆ, ಮತ್ತೆ ಶ್ರಾವಣಾ ಬಂತು, ಸಮಾಜ ಪುಸ್ತಕಾಲಯ, ಧಾರವಾಡ, 1973, ಪು. 3.
3. ಅದೇ, ಪು. 5
4. ಅದೇ, ಪು. 4.
5. ದ. ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. 42.
6. ಅದೇ, ಪು. 41.
7. ದ. ರಾ. ಬೇಂದ್ರೆ, ಮತ್ತೆ ಶ್ರಾವಣಾ ಬಂತು, ಪೂರ್ವೋಕ್ತ, ಪು. 4-5.
8. ದ. ರಾ. ಬೇಂದ್ರೆ, 'ಆತ್ಮಕಥನ', ಜಿ. ಬಿ. ಜೋಶಿ, ಕೆ. ಡಿ. ಕುರ್ತಕೋಟಿ, (ಸಂ.), ಪುಟಬಂಗಾರ (ಸಂಪುಟ ಐದು) ಶ್ರಾವಣ ಪ್ರತಿಭೆ, ಮನೋಹರ ಗ್ರಂಥಮಾಲೆ, ಧಾರವಾಡ 1987, ಪು. 409, 410, 411.
9. ದ. ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. 42.
10. ಅದೇ, ಪು. 41.

11. ದ. ರಾ. ಬೇಂದ್ರೆ, 'ಆತ್ಮಕಥನ', ಪೂರ್ವೋಕ್ತ, ಪು. 420.
12. ಶ್ರೀಧರ ಖಾನೋಳಕರ, 'ಗೆಳೆಯ ಬೇಂದ್ರೆ', ಚುಳಕಿ ಗೋವಿಂದರಾಯರು (ಸಂ.), ಕವಿವರ ಬೇಂದ್ರೆ, ಲಲಿತ ಸಾಹಿತ್ಯಮಾಲೆ ಧಾರವಾಡ, 1946, ಪು. 11.
13. ದ. ರಾ. ಬೇಂದ್ರೆ, 'ನನ್ನ ನಾ ಕಂಡಂತೆ', ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ, ಶ್ರೀಮಾತಾ ಪ್ರಕಾಶನ, ಧಾರವಾಡ, 1998, ಪು. 94.
14. ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ, ಶ್ರೀಮಾತಾ ಪ್ರಕಾಶನ, ಧಾರವಾಡ, 1968, ಪು. 9.
15. ಕೀರ್ತಿನಾಥ ಕುರ್ತಕೋಟಿ, 'ಮನೋಗತ' , ಪುಟಬಂಗಾರ (ಸಂಪುಟ ಐದು) ಪೂರ್ವೋಕ್ತ, ಪು. VII.
16. ದ. ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. 52.
17. ದ. ರಾ. ಬೇಂದ್ರೆ, 'ಆತ್ಮಕಥನ', ಪೂರ್ವೋಕ್ತ, ಪು. 423.
18. ಅದೇ, ಪು. 424.
19. ದ. ರಾ. ಬೇಂದ್ರೆ, ಮತ್ತೆ ಶ್ರಾವಣಾ ಬಂತು, ಪೂರ್ವೋಕ್ತ, ಪು. 13.
20. ದ. ರಾ. ಬೇಂದ್ರೆ, 'ಆತ್ಮಕಥನ', ಪೂರ್ವೋಕ್ತ, ಪು. 414.
21. ಅದೇ, ಪು. 414.
22. ಅದೇ, ಪು. 430.
23. ಅದೇ, ಪು. 424.
24. ದ. ರಾ. ಬೇಂದ್ರೆ, ಮತ್ತೆ ಶ್ರಾವಣಾ ಬಂತು, ಪೂರ್ವೋಕ್ತ, ಪು. 13.
25. ದ. ರಾ. ಬೇಂದ್ರೆ, 'ಆತ್ಮಕಥನ', ಪೂರ್ವೋಕ್ತ, ಪು. 422.
26. ವಿವರಗಳಿಗೆ ನೋಡಿ: ಅದೇ, ಪು. 420, 421.
27. ದ. ರಾ. ಬೇಂದ್ರೆ, 'ನನ್ನ ನಾ ಕಂಡಂತೆ', ಪೂರ್ವೋಕ್ತ, ಪು. 77.
28. ದ. ರಾ. ಬೇಂದ್ರೆ, 'ಆತ್ಮಕಥನ', ಪೂರ್ವೋಕ್ತ, ಪು. 417.
29. ಅದೇ, ಪು. 416.
30. ಅದೇ, ಪು. 415.
31. ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ, ಪೂರ್ವೋಕ್ತ, ಪು. 14,15.
32. ನಾ. ಶ್ರೀ. ರಾಜಪುರೋಹಿತ, 'ಮುಮುಕ್ಷು ಬೇಂದ್ರೆ', ಚುಳಕಿ ಗೋವಿಂದರಾಯರು (ಸಂ.) ಕವಿವರ ಬೇಂದ್ರೆ, ಪೂರ್ವೋಕ್ತ, ಪು. 90, 91.
33. ದ. ರಾ. ಬೇಂದ್ರೆ, 'ನನ್ನ ನಾ ಕಂಡಂತೆ', ಪೂರ್ವೋಕ್ತ, ಪು. 77.
34. ದ. ರಾ. ಬೇಂದ್ರೆ, 'ಆತ್ಮಕಥನ', ಪೂರ್ವೋಕ್ತ, ಪು. 430.
35. ಎನ್ಕೆ, ದ.ರಾ.ಬೇಂದ್ರೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1991, ಪು. 17.
36. ದ. ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. 53.
37. ದ. ರಾ. ಬೇಂದ್ರೆ, 'ಸಾಹಿತ್ಯ ಮತ್ತು ಸಾರ್ಥಕತೆ' , ಬೇಂದ್ರೆ ಜೀವನ ಪರಿಚಯ, ಪೂರ್ವೋಕ್ತ, ಪು. 88.
38. ಅದೇ, ಪು. 80.
39. ಅದೇ, ಪು. 81.
40. ದ. ರಾ. ಬೇಂದ್ರೆ, ಅನುಬಂಧ -2, ಗರಿ, ಸಮಾಜ ಪುಸ್ತಕಾಲಯ, ಧಾರವಾಡ, (ಆವೃತ್ತಿ 6), 1973, ಪು. 148.

41. ಅದೇ, ಪು. 148-149.
42. ದ. ರಾ. ಬೇಂದ್ರೆ, ಮುನ್ನುಡಿ, ಮೂರ್ತಿ ಮತ್ತು ಕಾಮಕಸ್ತೂರಿ, ಪ್ರತಿಭಾ ಮುದ್ರಣ, ಧಾರವಾಡ, 1955, ಪು. 4.
43. ದ. ರಾ. ಬೇಂದ್ರೆ, ಮುನ್ನುಡಿ, ನಾಕುತಂತಿ, ಶ್ರೀಮಾತಾ ಪ್ರಕಾಶನ, ಧಾರವಾಡ, 1997, ಪು. iii.
44. ದ. ರಾ. ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಪೂರ್ವೋಕ್ತ, ಪು. 131.
45. ಅದೇ, ಪು. 132, 133.
46. ಅದೇ, ಪು. 135.
47. ಅದೇ, ಪು. 136-143.
48. ದ. ರಾ. ಬೇಂದ್ರೆ, ಬಾಲಬೋಧೆ, ಮನೋಹರ ಗ್ರಂಥಮಾಲಾ, ಧಾರವಾಡ, 1983, ಪು. 5.
49. ಅದೇ, ಪು. 9.
50. ಅದೇ, ಪು. 15.
51. ಅದೇ, ಪು. 11.
52. ದ. ರಾ. ಬೇಂದ್ರೆ, ಗಂಗಾವತರಣ, ಶ್ರೀಮಾತಾ ಪ್ರಕಾಶನ, ಧಾರವಾಡ, 1989, ಪು. 95.
53. ದ. ರಾ. ಬೇಂದ್ರೆ, ಗರಿ, ಪ್ರ: ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮತ್ತು ಸ್ನೇಹಿತರು, ಬೆಂಗಳೂರು, 1932, ಪು. 6.
54. ದ. ರಾ. ಬೇಂದ್ರೆ, ವಿಚಾರಮಂಜರಿ, ಗೀತಾ ಬುಕ್ ಹೌಸ್, ಮೈಸೂರು, 1969, ಪು. 104-108.
55. ಅದೇ, ಪು. 68.

ಅಧ್ಯಾಯ ನಾಲ್ಕು

# ಬೇಂದ್ರೆ ಕಾವ್ಯದಲ್ಲಿ ಸ್ತ್ರೀ

## ಮುಖ ಒಂದು : 'ಅಂಬಿಕಾತನಯದತ್ತ'ನಲ್ಲಿನ ತಾಯಿ

**ಮಾನವ ಸಂಸ್ಕೃತಿಯನ್ನು ರೂಪಿಸಿದ ತಾಯಿ**

ಈ ಭೂಮಿಯ ಮೇಲೆ ಪ್ರಾಣಿಯಾಗಿ ಹುಟ್ಟಿದ ಜೀವವನ್ನು ಮಾನವನನ್ನಾಗಿ ಮಾಡಿದ ಶಕ್ತಿ ತಾಯಿ. ಬೇಟೆ ಹಾಗೂ ಕ್ರೌರ್ಯದ ಗಂಡಸುಪ್ರಾಣಿಯನ್ನು - ಗೃಹಸ್ಥನನ್ನಾಗಿ ಮಾಡಿದವಳು ತಾಯಿ. ಮಕ್ಕಳನ್ನು ಹಡೆಯುವ ಸಹಜ ಚೈತನ್ಯ ಪಡೆದ ತಾಯಿಜೀವಿಗಳು ಆ ಕಂದಗಳನ್ನು ರೂಪಿಸುವತ್ತ ತಮ್ಮ ಜನ್ಮಗಳನ್ನು ಸವೆಸಿವೆ. ಹಾಗೆ ಸವೆಸುತ್ತ ಸಂಸ್ಕೃತಿಯನ್ನು ರೂಪಿಸಿವೆ. ಹಾಗಾಗಿ ಈ ನೆಲದಲ್ಲಿ ಮೊದಲು ಮಾತೃಪ್ರಧಾನ ವ್ಯವಸ್ಥೆಯಿತ್ತು. ತಾಯಿ ಇಂದಿಗೂ ಉತ್ತಮಿಕೆಯನ್ನು ಸಾಧಿಸಲು ಮಾನವರನ್ನು ತಿದ್ದುತ್ತಲೇ ಸಾಗಿದ್ದಾಳೆ. ಹೀಗೆ ತಾಯಿ ಈ ನೆಲದ ಸಂಸ್ಕೃತಿ, ನಾಗರಿಕತೆಗೆ ತವರಾಗಿದ್ದಾಳೆ. 'The Mothers' ಎಂಬ ಪುಸ್ತಕದಲ್ಲಿ ರಾಬರ್ಟ್ ಬ್ರಿಪಾಲ್ಟ್ ತಾಯಿ ಚೇತನವು ಇಡೀ ಸಂಸ್ಕೃತಿಯನ್ನು ರೂಪಿಸಲು ಕಾರಣವಾದುದನ್ನು ಚಿತ್ರಿಸಿದ್ದಾರೆ. ಅವರ ಸಂಶೋಧನಾ ಬರಹವು ತಾಯಿಯನ್ನು ಕುರಿತ ಸತ್ಯದ ಆವಿಷ್ಕಾರವಾಗಿದೆ :

'Founders of modern social anthology notable Morgan, Tylor and Robertson Smith also established the fact that in primitive society the role of women and their influence was much greater than has been the case during historical times in civilized societies. This conclusion is generally called 'The theory of Matriarchy' - a name given to it by Mc Lennan in opposition to the theory which traced social origins to a patriarchal age such as is presented in the Bible. In our inquiry we shall start from the fact that primitive societies approximate more closely to animal groups in structure than advanced ones and their character is a consequence of this. In animals there is nothing corresponding to a patriarchal social group the male has little or no share in the formation or maintenance of animal family and is often entirely absent from it. If human society developed out of such

groups, it must have its origin in an association which represented female instincts only, and human culture must have been moulded in the first instance not by the fierce passions of hunters battling for food and women but by the instincts of the mother."[1]

ಈ ಹಿನ್ನೆಲೆಯಲ್ಲಿ ಬೇಂದ್ರೆಯವರಲ್ಲಿ ಉಂಟಾದ ಮಾತೃಪ್ರಜ್ಞೆಯನ್ನು ಶೋಧಿಸುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ. ಬೇಂದ್ರೆಯವರ ಕಾವ್ಯಶೋಧವೆಂದರೆ ಸಂಸ್ಕೃತಿಯ ನಾಗರಿಕತೆಯ, ಮಾನವ ಮೌಲ್ಯಗಳ ಶೋಧವೂ ಆಗಿದೆ. "ಈ ಜಗದ ಪೂರ್ಣ ಸತ್ಯವನ್ನು ತಿಳಿಯಲು ಪ್ರಯತ್ನಿಸುವ ಗಂಡಸು ವ್ಯಕ್ತಿ ತನ್ನ ಪ್ರಕೃತಿ ಸಹಜ ಇನ್ನೊಂದು ಮುಖವಾದ ಹೆಣ್ಣನ್ನು ತಿಳಿಯಬೇಕು. ಹಾಗೆ ಪ್ರಯತ್ನಿಸದಿದ್ದರೆ ತನ್ನನ್ನು ಸಂಪದ್ಭರಿತಗೊಳಿಸುವ ಪುನರ್ನವೀಕರಿಸುವ ಮೂಲ ಚೇತನದಿಂದ ವಂಚಿತನಾಗುತ್ತಾನೆ"[2] ಎಂದು ಫ್ಲೋರಿಡಾ ಸ್ಕಾಟ್ ಮ್ಯಾಕ್ಸ್‌ವೆಲ್ ಅವರು ತಿಳಿಸಿದ್ದಾರೆ.

ಬೇಂದ್ರೆಯವರಿಗೆ ಹೆಣ್ಣು ಎಂದರೆ ತಾಯಿ. ಅವರು ತಾಯಿಯ ವಿವಿಧ ರೂಪವೇ ಹೆಣ್ಣಾಗಿ - ಅಕ್ಕ, ತಂಗಿ, ಹೆಂಡತಿ, ಮಗಳು ಹಾಗೂ ಇತರ ಸ್ತ್ರೀಯರಾಗಿರುವುದನ್ನು ತಿಳಿಯುತ್ತ ತನ್ನ ಬದುಕಿನ ಶೋಧಕ್ಕೆ ತೊಡಗಿದ್ದಾರೆ. ತನ್ನ ಬದುಕಿನ ಶೋಧದಿಂದ ಸಮಾಜ, ಸಂಸ್ಕೃತಿ, ಕಾವ್ಯಶೋಧದ ಸೂಕ್ಷ್ಮ ವಲಯವನ್ನು ಪ್ರವೇಶಿಸಿ; ದೇಶ, ಕಾಲಾತೀತವಾದ ಸಾರ್ವತ್ರಿಕ ಸತ್ಯವನ್ನು ತಮ್ಮ ಕಾವ್ಯದಲ್ಲಿ ನೀಡಿದ್ದಾರೆ. ಹೀಗೆ ತಾಯಿಯನ್ನು ಶೋಧಿಸುತ್ತ ಸಾಗಿದ ಅವರ ಮನಸ್ಸನ್ನು ಆ ಮೂಲಕ ಅವರು ಕಂಡುಕೊಂಡ ಸತ್ಯ ಕಾವ್ಯರೂಪವಾಗಿರುವುದನ್ನು ಈ ಅಧ್ಯಾಯದಲ್ಲಿ ಪರಿಶೀಲಿಸೋಣ.

**ಸ್ಫೂರ್ತಿಯ ಸೆಲೆ ತಾಯಿ**

'ಅಂಬಿಕಾತನಯದತ್ತ'ರ ತಾಯಿ ಅಂಬಿಕೆ. ಆ ತಾಯಿಯ ಮಮತೆಯ ಕುವರ ದತ್ತಾತ್ರೇಯ. "ಅವರಿಗೆ ತಾಯಿಯೆಂದರೆ ಬಹು ಭಕ್ತಿ; ತಾಯಿಯೆಂದರೆ ದೇವಿ ಅವರ ಪಾಲಿಗೆ"[3] ಎಂದು ಸಿಂಪಿ ಲಿಂಗಣ್ಣ ನುಡಿದಿದ್ದಾರೆ. ಬೇಂದ್ರೆಯವರು "ನನ್ನ ಭಾವನೆಯಲ್ಲಿ ಸ್ಫೂರ್ತಿಯ ಸೆಲೆ ತಾಯಿ"[4] ಎಂದಿದ್ದಾರೆ. "ಬೇಂದ್ರೆಯವರ ವ್ಯಕ್ತಿತ್ವ ರೂಪುಗೊಳ್ಳುವುದಕ್ಕೆ ಅವರ ಮನೆತನ, ಸುತ್ತುಮುತ್ತಲಿನ ಪರಿಸರ, ವಿಶ್ವವಿದ್ಯಾಲಯದ ಶಿಕ್ಷಣ ಇವುಗಳ ಹೊಣೆ ನಾಲ್ಕರಲ್ಲೊಂದು ಪಾಲಾದರೆ ಉಳಿದ ಮೂರು ಪಾಲಿನ ಹೊಣೆ ತಾಯಿಯದು"[5] ಎಂದು ಕೀರ್ತಿನಾಥ ಕುರ್ತಕೋಟಿಯವರು ಹೇಳಿದ್ದಾರೆ. ಈ ಎಲ್ಲ ನುಡಿಯಿಂದ ಬೇಂದ್ರೆಯವರನ್ನು ರೂಪಿಸಿದ ಚೈತನ್ಯಶಕ್ತಿ ತಾಯಿ ಎಂಬುದು ಸ್ಪಷ್ಟವಾಗುತ್ತದೆ. ತಾಯಿ ಬೇಂದ್ರೆ ಕಾವ್ಯದ ಪ್ರತೀಕ. ಅವರು ತಾಯಿಯನ್ನು ಕುರಿತು ಚಿಂತನೆ ನಡೆಸಿದ ಬಗೆಯನ್ನು ಅಧ್ಯಯನ ಮಾಡಲು ನಾನು ಅವರ ಕಾವ್ಯದ ಮೂಲವನ್ನು ಆಧರಿಸಿದ್ದೇನೆ. ಬೇಂದ್ರೆಯವರ ಮೊದಲು ಪ್ರಕಟವಾದ ಕೃತಿ 'ಕೃಷ್ಣಾಕುಮಾರಿ' (೧೯೨೨) ಒಂದು ಖಂಡಕಾವ್ಯವಾಗಿದೆ. ಅದರಲ್ಲಿ ಅವರು ಪ್ರೇಮದೇವತೆಯನ್ನು ಪುರುಷಪ್ರಧಾನ ಸಮಾಜ ಬಲಿತೆಗೆದುಕೊಂಡ ಒಂದು ದಾರುಣ ಚಿತ್ರವನ್ನು ನೀಡಿದ್ದಾರೆ. ಆ ಚಿತ್ರಣದಲ್ಲಿ ಅವರಿಗೆ ಸ್ತ್ರೀಯ ಬಗೆಗಿದ್ದ ಒಲವು, ಆದರ ಕಂಡುಬರುತ್ತದೆ. ಅವರ ಎರಡನೆಯ ಕೃತಿ 'ಗರಿ' ಕವನಸಂಕಲನ (೧೯೩೨) ದಲ್ಲಿ ಅವರ ಚಿಂತನೆಯ ಹಲವು ಮುಖಗಳು ಕಾವ್ಯವಾಗಿ ಪ್ರಕಾಶವಾದುದು ಕಂಡುಬರುತ್ತದೆ. ಅದರಲ್ಲಿ 'ಗಂಡುಸು ಹೆಂಗುಸಿಗೆ'[6] ಎಂಬ ವಾರ್ಧಕ ಷಟ್ಪದಿಯ ಕವನದಲ್ಲಿ ಇಡೀ 'ಸ್ತ್ರೀ' ಸಮೂಹವನ್ನು 'ತಾಯಿ' ಎಂದು ಕರೆದಿದ್ದಾರೆ.

**ತಾಯೆ ಕನಿಮನೆಯೇ ನೀ**

'ತಾಯೆ ಕನಿಮನೆಯೇ ನೀ, ಅಕ್ಕ ಅಕ್ಕರತೆಯೇ
ಬಾಯೆನ್ನ ತಂಗಿ ಬಾ ಮುದ್ದು ಬಂಗಾರವೇ
ನೀಯೆನ್ನ ಹೆಂಡತಿಯೊ ಮೈಗೊಂಡ ನನ್ನಿಯೋ
ಮಗಳೊ ನನ್ನೆದೆಯ ಮುಗುಳೊ?
ಈಯೆನ್ನ ಇರವಿಂಗೆ ಜೀವನದ ಬಾಳ್ವಿಕೆಗೆ
ಈಯುತ್ತ ಕೈಮೈಗಳಂ ಜೀವಭಾವದಿಂ
ಸ್ತ್ರೀಯೆ, ಕಾಪಾಡಿದೌ ಪಾಡಾಗಿ ಮೂಢನನು
ತಕ್ಕೈಸಿ ನೂರು ತೆರದಿ'

ಎಂದು ಹೇಳಿರುವ ಚಿಂತನೆಯಲ್ಲಿ ಗಂಡಸಾಗಿ ತನ್ನೆಲ್ಲ ಪುರುಷಪ್ರಧಾನ ಭಾವನೆಗಳನ್ನು ಬದಿಗೊತ್ತಿ, ಸ್ತ್ರೀಶಕ್ತಿಯನ್ನು ಅರಿತು ಅಲ್ಲಿ ನೆಲಸಿರುವ ಕೋಮಲಾಂತಃಕರಣ ಮತ್ತು ಜೀವ ಪೋಷಕ ಸತ್ವದಿಂದ ತಾನು ಪೂರ್ಣನಾಗಲು ಪ್ರಯತ್ನಿಸಿರುವುದು ಕಂಡುಬರುತ್ತದೆ. ಮಿಂಚಿನ ಹೊಳಪಿನ ಸೃಷ್ಟಿ ಹಾಗೂ ಜ್ಞಾನದ ನೆಲೆ ತಾಯಿ ಎಂದು ತಿಳಿದು 'ತಾಯೆ ಕನಿಮನೆಯೆ ನೀ' ಎಂದಿದ್ದಾರೆ. ಅವರಿಗೆ ತಾಯಿಯೆಂದರೆ ಬೆಳಕು ಮತ್ತು ಜ್ಞಾನ. ಪ್ರೀತಿಯನ್ನು ಸದಾ ಹೊಂದಿರುವ ಅಕ್ಕನು ಅಕ್ಕರತೆಯ ಪ್ರತಿಮೂರ್ತಿ. ಪ್ರೀತಿಯ ತಂಗಿ, ಮುದ್ದು ಬಂಗಾರ. ವ್ಯಕ್ತಿ ಬೆಳೆದು ಯೌವನಸ್ಥನಾದಂತೆ ಹೆಣ್ಣನ್ನು ಹೆಂಡತಿಯಾಗಿ ಕಾಣುತ್ತಾನೆ. ಆ ಹೆಂಡತಿ ಎಂಬುವವಳು ಸತ್ಯ, ಪ್ರೀತಿ, ವಿಶ್ವಾಸವನ್ನೇ ಮೈಗೊಂಡವಳು. ಅವರ ಪ್ರೀತಿಯ ಫಲ ಮಗಳು. ಅವಳು ತನ್ನೆದೆಯ ಮುಗುಳು, ಆನಂದದ ನಗೆ ಎಂದಿದ್ದಾರೆ.

**ಕರುಳು**

ಬೇಂದ್ರೆಯವರು ಮಗುವಾಗಿ, ಮಗುವಿನ ಪ್ರೀತಿಯ ಕಣ್ಣಿನಲ್ಲಿ, ತನ್ನ ತಾಯಿಯನ್ನು ಕಾಣುತ್ತ ಅವಳೊಡನೆ ಆಡುತ್ತ ಅವಳ ಅಗಾಧಶಕ್ತಿಯನ್ನು ಅರಿಯಲು ಪ್ರಯತ್ನಿಸಿರುವ ಕವನಗಳು 'ಉಯ್ಯಾಲೆ' ಕವನಸಂಕಲನದಲ್ಲಿವೆ. ಅವು ಅವರು ತಾಯಿಯನ್ನು ಅರಿತುಕೊಳ್ಳಲು ಪ್ರಯತ್ನಿಸಿದ ಸಾರ್ಥಕ ಪ್ರಯೋಗಗಳಾಗಿವೆ. 'ಕರುಳು'[7] ಎಂಬ ಅಷ್ಟಷಟ್ಪದಿಯಲ್ಲಿ ಬೇಂದ್ರೆಯವರು ಮುತ್ತಿಗಾಗಿ ತಾಮ್ರಪರ್ಣಿಯಲ್ಲಿ ಹುಡುಕಿ ದುಡಿದು ಆಯಾಸಪಟ್ಟು ದ್ರವ್ಯವನ್ನು ಸಂಪಾದಿಸುವ ವ್ಯಕ್ತಿ ತನ್ನ ಹೊಟ್ಟೆಪಾಡಿಗಾಗಿಯಷ್ಟೆ ದುಡಿಯುವುದಿಲ್ಲ, 'ತಾಯಿ ಮಡದಿಯ ಹರ್ಷಬಾಷ್ಪವೇ ಅವನ ಬದುಕಿನ ಹುರುಳು' ಎಂದಿದ್ದಾರೆ. ಆ ಹುರುಳಿಗೆ ಮೂಲವಾದ ತಾಯಿಹೃದಯವನ್ನು ಷಟ್ಪದಿಯ ಎರಡನೆಯ ಭಾಗದಲ್ಲಿ ಭಾವತೀವ್ರತೆಯಿಂದ ಹಿಡಿದಿಟ್ಟಿದ್ದಾರೆ. ದುಡಿಮೆಯಲ್ಲಿ ಸಾಯುವತನಕ ಬದುಕುವುದು ತಪ್ಪದೆ ಇರುವಾಗ ವ್ಯಕ್ತಿಗೆ ಬದುಕು ಪ್ರಿಯವಾಗುವುದು ಸಹ್ಯವಾಗುವುದು ದುಡಿದು ಸುಸ್ತಾಗಿ ಬಂದಾಗ "ಅಯ್ಯೋ ನೊಂದೆ, ಬಂದೆಯಾ ಕಂದ ದಣಿದೆ ಎನ್ನುವ ಕರುಳು" ಎಂದು ತಾಯಿಯನ್ನು, ತಾಯಿಯ ನುಡಿಯಲ್ಲಿ ಬಣ್ಣಿಸಿದ್ದಾರೆ. ಹೀಗೆ ತಾಯಿಕರುಳು ನೀಡುವ ವಾತ್ಸಲ್ಯ ತುಂಬಿದ ಪ್ರೇಮ ಶ್ರೀರಕ್ಷೆಯನ್ನು ಮನೋವೈಜ್ಞಾನಿಕ ಚಿಂತನೆಯಲ್ಲಿ ಕಾವ್ಯವಾಗಿಸಿದ್ದಾರೆ.

**ಸಮಸ್ಯೆ**

ನಾನು ಅವರ ಬಾಲ್ಯವನ್ನು ಕುರಿತು ಬರೆಯುವಾಗ ಅವರನ್ನು ಕಾಡಿದ ಬೆಳಕು ಮತ್ತು ಕತ್ತಲೆಯ ಸಮಸ್ಯೆಯನ್ನು ಹೇಳಿದ್ದೇನೆ. ಬಾಲಕನಾದ ಬೇಂದ್ರೆಯವರು ತಾಯಿಯನ್ನು ಕೇಳುತ್ತಿದ್ದ ಪ್ರಶ್ನೆ : "ಬೆಳಕೆ

ಬೆಳಕಿದ್ದು ಕತ್ತಲೆಯು ತುಂಬಿತು ಹೇಗೆ?" ಈ ಬಗೆಯ ಚಿಂತನೆಯನ್ನು ವಿ. ಕೃ. ಗೋಕಾಕರು 'This is the question writ large in the Vedas and on the brows of suffering humanity' ಎಂದು ಕರೆದು ಬೇಂದ್ರೆಯವರಿಗೆ ಬಾಲ್ಯದಲ್ಲಿ ಕಾಡಿದ ಈ ಸಮಸ್ಯೆಯನ್ನು 'The utterance gains a stabbing irony in retrospective narration'[8] ಎಂದಿದ್ದಾರೆ.

**ಗುಮ್ಮ ಅಲ್ಲಿಯೂ ಕಂದನನಂಜಿಸದಿರಲೆ**

'ಗುಮ್ಮ' ಎಂಬ ಅಷ್ಟಷಟ್ಪದಿಯ ಕವನದಲ್ಲಿ ತಾಯಿಯು ಮಗನನ್ನು ನಿದ್ದೆಗೆಳೆಯಲು 'ಗುಮ್ಮ ಬಂದನು ಸುಮ್ಮನಿರು ಕಂದ' ಎಂದು ತಟ್ಟಿಸಿ ಮಲಗಿಸುವಾಗ ಆ ಗುಮ್ಮನನ್ನು ಕುರಿತು 'ಏನವನ ಕಣ್ಣು! ನಾಲಗೆಯೇನು ಕೆಂಪಿಗಿದೆ | ಕತ್ತಲಲಿ ಕೆಂಡ ಕಂಡಂತೆ | ಮೆಲ್ಲಗೆ ಬರುವ | ಸದ್ದು ಸದ್ದಿಲೆ ಕಂದ, ಸುಮ್ಮನಿರು ಅಳಬೇಡ |' ಎಂದು ಹೇಳುತ್ತಾಳೆ. "ಇಲ್ಲಿನ ಮೊದಲೆಂಟು ಸಾಲಿನ ಶಬ್ದವೈವಿಧ್ಯ ಹಾಗೂ ಒತ್ತುಪದಗಳ ನಾದದಲ್ಲಿಯೇ ಭಯ ಸೂಚಿತವಾಗಿದೆ. ಕೊನೆಯ ಆರು ಸಾಲಿನಲ್ಲಿ ಬರುವ ಲಾಲಿತ್ಯ ಇದಕ್ಕೆ ವಿರುದ್ಧವಾಗಿದ್ದು ಶಾಂತನಿದ್ರೆಯನ್ನು ಸೂಚಿಸುತ್ತದೆ"[10] ಎಂದಿದ್ದಾರೆ ಎಸ್. ಅನಂತನಾರಾಯಣ ಅವರು. ಹೀಗೆ ಮೃದು ಕೈಗಳಿಂದ ತಟ್ಟಿ ನುಡಿದ ಭಾವ ಷಟ್ಪದಿಯ ಎರಡನೇ ಭಾಗದಲ್ಲಿದ್ದು ಮಗುವನ್ನು ತಟ್ಟಿ ತಟ್ಟಿ ಮಲಗಿಸುತ್ತ ಅವನಿಗೆ ನಿದ್ದೆ ಸುಳಿದಾಗ - ಅದನ್ನು ಬೇಂದ್ರೆಯವರು "ಸುಳಿವಿಗೆ ಮೀನ ನಡುನೀರ ಹೊಗುವಂತೆ | ಸ್ತಬ್ಧ ಚೇತನೆ, ಉಸಿರು ಎಳೆಗಾಳಿ ಎಲೆಗಳೊಳು ಸುಳಿದಾಡುವಂತೆ" ಎಂದು ಉಪಮೆಗಳ ಮುಖಾಂತರ ಸ್ತಬ್ಧ ಚೇತನವಾದ ಮಗುವಿನ ನಿದ್ರೆಯನ್ನು ತಾಯಿಯ ಒಡಲಿನಿಂದ ನುಡಿದಂತೆ ನುಡಿದಿದ್ದಾರೆ. ಮಗು ನಿದ್ದೆಹೋದರೂ ಆ ತಾಯಿ ಮಗುವಿನ ನಿದ್ದೆಯಿಂದ ದೂರವಾಗುವುದಿಲ್ಲ. ಮಗು ನಿದ್ದೆಯಲ್ಲಿ ಆಡುವುದನ್ನು ನೋಡುತ್ತಾಳೆ, ತನ್ನ ಮಗುವಿಗೆ ಸರಿಯಾದ ನಿದ್ದೆ ಬಂದಿಲ್ಲ ಎಂದುಕೊಂಡು "ಇಗೊ ಮರುಳಾಡುತಿದೆ, ಎಲ್ಲೊ ಯಾವ ಕನಸಿನ ಕೆಳದಿಯೊಡಗೂಡಿ ಆಡುತಿದೆಯೊ" ಎಂದು ಅಂದುಕೊಂಡು ತುಸು ಸಂತಸಗೊಳ್ಳುತ್ತಾಳೆ. ಮಗುವಿಗೆ ನಿದ್ದೆ ಬರಿಸಲು ಸುಮ್ಮಸುಮ್ಮಗೆ ಗುಮ್ಮ ಬಂದ ಎಂದು ಹೇಳುತ್ತಿದ್ದ ತಾಯಿ, ಆ ಗುಮ್ಮನ ಗುಂಗಿನಿಂದ ಹೊರಬರದೆ ಆ ಗುಮ್ಮ ತನ್ನ ಮಗುವಿನ ನಿದ್ದೆಯನ್ನು ಪ್ರವೇಶಿಸಿದ್ದಾನೆ ಎಂಬ ಸಂಶಯ ಬಂದು - 'ಗುಮ್ಮ ಅಲ್ಲಿಯೂ ಕಂದನಂಜಿಸದಿರಲೆ' ಎಂದು ಹೇಳುತ್ತಾಳೆ. ಹೀಗೆ ನುಡಿಯುವಲ್ಲಿ ಹುಸಿಯಾದ ಗುಮ್ಮ ನಿಜವಾಗಿ ಬಂದು ತನ್ನ ಮಗುವನ್ನು ಎಲ್ಲಿ ಕಾಡುವನೋ ಎಂಬ ಧ್ವನಿಯಿದ್ದು, ಅದು ತಾಯಿಯು ಮಗುವಿನ ಎಚ್ಚರನಿದ್ದೆಗಳಲ್ಲಿ ರಕ್ಷಕಳಾಗಿರುವ ತಾಯಿಹೃದಯದ ದರ್ಶನವನ್ನು ನೀಡುತ್ತದೆ. ಬೇಂದ್ರೆ ಚಿತ್ರಿಸಿರುವ ತಾಯಿ-ಮಗು ಸಂಬಂಧ ಕಾಲವು ವಿಚಿತ್ರವಾಗಿತ್ತು. ಬಾಲಮೃತ್ಯು ಸಂಖ್ಯೆ ಹೆಚ್ಚಿತ್ತು. ದುಷ್ಟಶಕ್ತಿಗಳೇ ಈ ಮರಣಗಳಿಗೆ ಕಾರಣ ಎಂಬ ನಂಬಿಕೆಯಿತ್ತು. ಹೀಗಾಗಿ ತಾಯಿ ಯಾವಾಗಲೂ ತನ್ನ ಮಗುವನ್ನು ದುಷ್ಟಶಕ್ತಿಯಿಂದ (ಗುಮ್ಮ) ಕಾಪಾಡಲು ಹವಣಿಸುತ್ತಿದ್ದಳು.

**ಕರುಳಿನ ವಚನಗಳು**

ಬೇಂದ್ರೆಯವರ 'ಕರುಳಿನ ವಚನಗಳು' ವಾತ್ಸಲ್ಯದಲ್ಲಿ ಅದ್ದಿ ತೆಗೆದ ಕವನಗಳಾಗಿವೆ. ಇವು ತಾಯಿಯ ಮಮತೆಯ ಕರುಳ ಮಿಡಿತವಾಗಿವೆ. ಈ ಕವನಗಳನ್ನು ಕುರಿತು ಶಂಕರ ಮೊಕಾಶಿ ಪುಣೇಕರ ಅವರು "ಬೇಂದ್ರೆಯವರ ಮುಂಚಿನ ಸಂಗ್ರಹವಾದ 'ಕರುಳಿನ ವಚನಗಳು' ಈ ತಲೆಬರಹದ ಬಗ್ಗೆ ತಮ್ಮ ಲಕ್ಷ್ಯ ವೇಧಿಸುತ್ತೇನೆ. ಬೇಂದ್ರೆಯವರ ಕಾವ್ಯದ ಮೂಲಗುಣ 'ಕರುಳು'. ಲವಲವಿಕೆ, ಹಳಹಳಿಕೆ ಇಂಥ ಶಬ್ದಗಳು ಮೂಲಭಾವದ ನೇರ ಅಭಿವ್ಯಕ್ತಿಗಳು - Nostalgia, ಏನೋ ಅಸ್ಪಷ್ಟ ಕಳವಳ, ಈ ಭಾವಗಳು

ಮನುಷ್ಯನಲ್ಲಿ ಇದ್ದ ಮೂಲಕವೇ ಈ ಶಬ್ದಗಳು ಹುಟ್ಟಿಕೊಂಡವು. ಹೃದಯ ಪ್ರೇಮದ ದ್ಯೋತಕವಾದರೆ, ತಲೆ ವಿಚಾರಗಳ ಅಂಗವಾದರೆ, ಕರುಳು ನಮ್ಮ ಮೂಲ ಅಸ್ಪಷ್ಟ ಹಳಹಳಿಯ ಭಾವದ ಮೂರ್ತಿ"[11] ಎಂದು ಹೇಳಿದ್ದಾರೆ. 'ಅರ್ಧನಾರಿನಟೇಶ್ವರ'[12] ಎಂಬ ಕವನದಲ್ಲಿ ಮಗುವನ್ನು 'ಗಂಡು ಗಾಡಿಯಲ್ಲಿ ಹೆಣ್ಣು ಮೋಡಿ ಬೆರೆತು| ಅರ್ಧನಾರಿನಟೇಶ್ವರನ ಅಭಿನವ ಸೃಷ್ಟಿಯಾದೆಯಲ್ಲ |' ಎಂದು ಅಚ್ಚರಿ ವ್ಯಕ್ತಪಡಿಸಿದ್ದಾರೆ. 'ಚಿರಂತನ'[13] 'ಕವನದ ಭಾವ ಸಂದರ್ಭದಲ್ಲಿ ಚಿರಂತನದಲ್ಲಿ ಗಂಡು ಹೆಣ್ಣಿನ ಎಳೆತ ಸೆಳೆತದಲ್ಲಿ ಹುದುಗಿದ ಸಂತತಿಯ ಚಿರಂತನ ತತ್ವವಿದೆ.' ಎಂದು ನುಡಿದಿದ್ದಾರೆ. ದಂಪತಿಯ ಸ್ನೇಹ ಮಗುವಾಗಿ ಬೆಳಗುತ್ತದೆ ಎಂದು ನುಡಿದಿರುವ ನುಡಿ ಅನನ್ಯವಾಗಿದೆ :

'ಆ ಮುಖಾ - ಈ ಮುಖಾ
ಒಂದು ಸತ್ತು
ಒಂದು ಅತ್ತು
ಒಂದಕ್ಕೊಂದು ಸಮ್ಮುಖಾ
ಬೇರೆ ಬತ್ತಿ
ದೀಪ ಹತ್ತಿ
ಬೆಳಗುತಿಹುದು ಸ್ನೇಹವಾ
ತುಂಬಿ ಬೇರೆ ದೇಹವಾ'

ಇದೇ ಚಿಂತನೆಯು ಬೆಳೆಯುತ್ತ 'ಪರಮೆ-ತುಂಬಿ'[14] ಕವನದಲ್ಲಿ ಇನ್ನೂ ಸ್ಪಷ್ಟಗೊಳ್ಳುತ್ತ ಸಾಗಿದೆ.

'ತುಂಬಿ ಮೊರೆದು ಪರಮೆಯನ್ನು ಕರೆಯುವಂತಿದೆ
ತುಂಬು ಬಾಳಿಗಾಗಿ
ಪರಮ ಜೀವನದ ಜೇನ ಕೂಡಿಸಲು
ಇಂದು ನಾಳೆಗಾಗಿ'

ಇದೇ ಭಾವಲಹರಿ ಬೇಂದ್ರೆಯವರಲ್ಲಿ ಹೊಮ್ಮಿರುವ ಇನ್ನೊಂದು ಬಗೆ ಹೀಗಿದೆ :

'ತುಂಬಿ ಮೊರೆದು ಪರಮೆಯನು ಕರೆಯುತಿದೆ -
ಓವಮ್ಮನ (Ovum - ಸ್ತ್ರೀ ಅಂಡಾಣು) ಮನೆಗೆ
ಪರಮಪ್ಪ (Sperm -ವೀರ್ಯಬೀಜ) ಬಂದ
ಏನಂದ? ಚಂದ !
ಆ ಕಂದ
ಯಾರಿಂದ
ಅಂದ"[15]

ಈ ಸತ್ಯವನ್ನು ಅರಿತ ಬೇಂದ್ರೆಯವರು ಅರ್ಧನಾರಿನಟೇಶ್ವರರಾಗಿ ಹೆಣ್ಣನ್ನು ತಿಳಿಯಲು, ತಾಯಿಯ ಭಾವವನ್ನು ತೀವ್ರವಾಗಿ ವ್ಯಕ್ತಪಡಿಸಲು ಪ್ರಯತ್ನಿಸುತ್ತ - ತಾಯಿಯ ಒಲವನ್ನು ಕಾವ್ಯವಾಗಿಸಿದ್ದಾರೆ. ಫ್ಲೋರಿಡಾ ಮ್ಯಾಕ್ಸ್‌ವೆಲ್ ಅವರು 'Man inherits much of his nature from us, his compassion, his belief in tenderness and his knowledge of love come through us. Much of his creativity comes from his own feminine

side'[16] ಎಂದು ಹೇಳಿದ್ದಾರೆ. ಹೀಗಿರುವ ಕಾರಣದಿಂದ ಬೇಂದ್ರೆಯವರ ಸೃಜನಶೀಲ ಗುಣ ಅವರ ನಾರೀಭಾವದ ಫಲ ಎಂದು ಹೇಳಬಹುದು. ಈ ನಾರೀಭಾವದಲ್ಲಿ ತಾಯಿಯ ಅನುಭವವನ್ನು ತನ್ನದಾಗಿಸಿಕೊಂಡಿರುವ ಬೇಂದ್ರೆಯವರು ಮಗು ಮತ್ತು ತಾಯಿಯ ಸಂಬಂಧದಲ್ಲಿ ತಾಯಿಯ ಮನಸ್ಸನ್ನು ವಿಶ್ಲೇಷಿಸಲು ಪ್ರಯತ್ನಿಸಿದ್ದಾರೆ.

**ನನ್ನ ಮಾನಸದ ಮದಗವೆ**

'ಅಲೌಕಿಕ' ಕವನವನ್ನು ಕುರಿತು ವಿಮರ್ಶಿಸುತ್ತ ಜಿ. ಎಸ್. ಆಮೂರ ಅವರು "'ಅಲೌಕಿಕ'ದಲ್ಲಿ ಮುಖ್ಯವಾಗಿ ವ್ಯಂಜಿತವಾಗಿರುವುದು ಮಗುವಿನ ಅಲೌಕಿಕತೆಯ ದರ್ಶನದ ಮೂಲಕ ತಾಯಿಗೆ ದೊರಕುವ ಅನುಭವ. ಈ ಅನುಭವವನ್ನು ಅರ್ಥೈಸುವ ಅವಳ ಪ್ರಯತ್ನವೇ ಇಲ್ಲಿ ಶಬ್ದ, ಪ್ರತಿಮೆಗಳ ಮೂಲಕ ರೂಪವನ್ನು ಪಡೆಯುತ್ತದೆ. ಕಾಮ-ಪ್ರೇಮಗಳ ಸಂಬಂಧದಂತೆ ತಾಯಿ-ಮಗು ಸಂಬಂಧವೂ ಕೂಡ ಕೆಸರು-ಕಮಲಗಳ ಸಂಬಂಧವೇ. ಮಗು ತನ್ನದೇ ಆದರೂಕೂಡ ತನ್ನ ಮಿತಿಗಳಿಗೆ ಒಳಗಾಗದಿರುವುದು ತಾಯಿಯಲ್ಲಿ ಆಶ್ಚರ್ಯವನ್ನು ಹುಟ್ಟಿಸುತ್ತದೆ. ಅದಕ್ಕೆಂದೇ ಪಂಕ-ಪಂಕಜಗಳ, ನೀರ-ನೀರಜಗಳ ರೂಪಕಗಳು ಈ ವಿಲಕ್ಷಣ ಸಂಗತಿಯನ್ನು ಅರಿತುಕೊಳ್ಳಲು ಅವಳಿಗೆ ಸಹಾಯ ಮಾಡುತ್ತವೆ. ಆದರೂ ಮಗು ಅವಳಿಗೆ ರಹಸ್ಯವಾಗೇ ಉಳಿಯುತ್ತದೆ. ಅದು 'ಒಡೆಯಲುಬಾರದ ಒಡಪು' 'ಬಿಡಿಸಲುಬಾರದ ತೊಡಕು'"[17] ಎಂದಿದ್ದಾರೆ. ಕೀರ್ತಿನಾಥ ಕುರ್ತಕೋಟಿಯವರು ಈ ಕವನವನ್ನು ವಿಮರ್ಶಿಸುತ್ತ "ತಾಯಿ ಮತ್ತು ಮಗುವಿನ ಸಂಬಂಧದಲ್ಲಿಯ ರಹಸ್ಯಮಯತೆಯನ್ನು ಈ ಕವಿತೆಯಲ್ಲಿ ನಿರೂಪಿಸಲಾಗಿದೆ. ಮಗು ತಾಯಿಯ 'ಮಾನಸದ ಮದಗಜ' ನಿಜ. ಆದರೂ ಮಗು ಅವಳಿಗೆ ಒಡೆಯಲುಬಾರದ ಒಡಪಿನಂತೆ, ಮತ್ತು ಬಿಡಿಸಲು ಬಾರದ ತೊಡಕಿನಂತೆ"[18] ಎಂದು ಹೇಳಿದ್ದಾರೆ. ಕೃಷ್ಣ ಕಟ್ಟಿಯವರು "ಈ ಅನುಭವ ಪರಮಾತ್ಮ ಮತ್ತು ಭಕ್ತರ ಅನುಭವದಂತೆ ಇರುವುದರಿಂದ ಈ ಅನುಭವಕ್ಕೆ ಅನುಭಾವದ ಬಣ್ಣವಿದೆ"[19] ಎಂದು ಹೇಳಿದ್ದಾರೆ. ನನ್ನ ದೃಷ್ಟಿಯಲ್ಲಿ ಭಾವ, ಅನುಭಾವ, ಬಣ್ಣಗಳಲ್ಲ. ಅವು ನೆಲೆಗಳ ಶಕ್ತಿಕೇಂದ್ರ ಸ್ಥಾನಗಳು. ಭಾವವಿಲ್ಲದೆ ರಸವಿಲ್ಲ, ಅನುಭಾವವಿಲ್ಲದೆ ಆತ್ಮಾನುಭೂತಿ ಅತೀಂದ್ರಿಯ ದರ್ಶನವಿಲ್ಲ. ಆದುದರಿಂದ ಭಾವ ಹಾಗೂ ಅನುಭಾವವನ್ನು ಬಣ್ಣ ಎನ್ನುವುದು ಉಚಿತವಲ್ಲ. ಈ ಕವನದ 'ನನ್ನ ಮಾನಸದ ಮದಗವೆ' ಎಂಬ ರೂಪಕವನ್ನು ಕುರಿತು ನನ್ನ ಅಭಿಪ್ರಾಯ ಹೀಗಿದೆ : ಆ ಮಗುವನ್ನು ಒಡೆಯಲು ಬಾರದ ಒಡಪು, ಬಿಡಿಸಲು ಬಾರದ ತೊಡಕು ಎಂದು ಹೇಳುತ್ತ, 'ನನ್ನ ಮಾನಸದ ಮದಗವೆ' ಎಂದಿದ್ದಾರೆ. ಇದು ತಾಯಿ ತನ್ನ ಮಗುವನ್ನು ಕುರಿತು ವ್ಯಕ್ತಪಡಿಸಿದ ಬೇಂದ್ರೆ ಪ್ರತಿಭೆಯ ಅಪೂರ್ವ ರೂಪಕವಾಗಿದೆ. ಮದಗ ಎಂದರೆ ಕೆರೆತುಂಬಿ ಹರಿದು ಹೊರಚೆಲ್ಲಿದ ತೂಬಿನ ನೀರು. 'ನನ್ನ ಮಾನಸದ ಮದಗವೆ' ಎಂದಾಗ ತಾಯಿ ತನ್ನ ಮಗುವನ್ನು ಕುರಿತು, ತನ್ನ ಮನ ಹಾಗೂ ಜೀವ ತುಂಬಿ ಹರಿದ ಭಾವ ವ್ಯಕ್ತವಾಗಿದೆ. ಅವಳ ಚೇತನವಾದ, ಅವಳ ರೂಪು ಆದ, ಅವಳ ಜೀವದ ಭಾಗವಾದ ಅವಳ ಒಡಲಿನಿಂದ ಹೊರಬಂದ, ಅವಳೇ ಆದ ಮದಗ ಅದು.

'ನನ್ನ ಮಾನಸದ ಮದಗವೆ
ಮುಳುಗಿ ನೋಡಿದೆ, ಮುದ್ದಿಸಿ ನೋಡಿದೆ,
ಮೂಸಿ ನೋಡಿದೆ,
ಮುಟ್ಟಿ ನೋಡಿದೆ, ದಿಟ್ಟಿಸಿ ನೋಡಿದೆ,
ನಿನ್ನಳವು ಅಸದಳವು'

ಹೀಗೆ ಬೇಂದ್ರೆ ರೂಪಕಚಕ್ರವರ್ತಿಯಾಗಿ ಕನ್ನಡ ಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದಾರೆ.[20*]

ಹೀಗೆ ತಾಯಿತನವನ್ನು ಆವಿರ್ಭವಿಸಿಕೊಂಡ ಬೇಂದ್ರೆಯವರನ್ನು ಕಂಡಾಗ, ತಾಯಿತನ ಹೆಣ್ಣಿನಲ್ಲಿ ಉಂಟುಮಾಡುವ ಇಂದ್ರಿಯಾತೀತವಾದ ಅನುಭಾವವನ್ನು ಇಂದ್ರಿಯಾನುಭವವನ್ನಾಗಿಸುವ ರೂಪಕಶಕ್ತಿ ಅಚ್ಚರಿಯನ್ನುಂಟುಮಾಡುತ್ತದೆ. ಹೆಣ್ಣು ಫಲವತಿಯಾಗಿ ಮಗುವನ್ನು ಪಡೆಯುವ ಅನುಭವ ಅವಳಲ್ಲಿ 'ಅಲೌಕಿಕ ಶಕ್ತಿ'ಯಾಗಿ ಅರಳುತ್ತದೆ. 'Women are life carrying vessels and the biological role affects the entire concepts of women. Many women only reach their feeling through their sexuality and thus know their greatest richness of experience. When a woman conceives it can release the deep layers of the unconscious and it may mean a moment of mystic participation when the body and spirit are one. Such a woman is transcended by sexuality, for it is the release of life that allows her a glimpse of transcendant truth'[21] ಎಂದು ಫ್ಲೋರಿಡಾ ಸ್ಕಾಟ್ ಮ್ಯಾಕ್ಸ್‌ವೆಲ್ ಹೇಳಿರುವ ಮಾತು ಎಷ್ಟು ಸಹಜ ಮತ್ತು ಸತ್ಯ ಎನಿಸುತ್ತದೆ. ಬೇಂದ್ರೆ ಚಿಂತನೆ ಇನ್ನೂ ಮುಂದುವರಿದು ತಾಯಿಯ ಅಲೌಕಿಕ ಭಾವ ಮತ್ತೂ ಮೂರ್ತಗೊಳ್ಳುತ್ತದೆ:

'ಯಕ್ಷಾಂಗುಲಿಕೆಯಂತೆ ನಿನ್ನ ತೊಟ್ಟೂ
ನಿನ್ನೆಲ್ಲ ಗುಟ್ಟರಿಯೆ ನಾನು
ನವೋನವ ಚಮತ್ಕಾರವೆ ನೀನಾವಲೋಕದ ಜೀವಿ?'

ಹೀಗೆ ಮಗುವು ತಾಯಿಗೆ 'ಅಲೌಕಿಕ'ವಾಗಿ ಅಧ್ಯಾತ್ಮ ಯೋಗದ ಅನುಭಾವವನ್ನು ನೀಡುತ್ತದೆ. ಋಗ್ವೇದದ ಚಿಂತನೆಯ ಪ್ರಕಾರ Mysticism, being an experience, does not consist only of revelation - the complete mastery of ultimate knowledge; it also signifies a quest of the unknown. It asks questions and the answers come as new visions unfold themselves.[22] ಬೇಂದ್ರೆಯವರು ಈ ಬಗೆಯ ಅಮೂರ್ತ ಭಾವವನ್ನು ಸತ್ಯಸಾಕ್ಷಾತ್ಕಾರಗೊಳಿಸುವಂತೆ ತಾಯಿ-ಮಗುವಿನ ಪ್ರತಿಮೆಯಲ್ಲಿ ಮೂರ್ತಿಗೊಳಿಸಿ ಅಧ್ಯಾತ್ಮಯೋಗ ಒಂದು ಅನುಭವವಾಗುವಂತೆ ಕಾವ್ಯಕಲೆಯನ್ನು ಔನ್ನತ್ಯದ ಸ್ಥಾನಕ್ಕೆ ಒಯ್ದಿದ್ದಾರೆ. ಕುವೆಂಪು ಅವರು 'ರಸೋವೈಸಃ' ಕೃತಿಯಲ್ಲಿ ರೂಪಕ ಸೃಷ್ಟಿಯನ್ನು ಕುರಿತು ಹೇಳಿರುವ "ರೂಪಕ ಪ್ರತಿಮಾ ವಿಧಾನದ ಸರ್ವ ಲಕ್ಷಣಗಳಿಂದಲೂ ಸಂಪನ್ನವಾಗಿರುತ್ತದೆ. ಅದೊಂದು ಸೌಂದರ್ಯವಿಶೇಷ ಮಾತ್ರವಲ್ಲ, ಶಕ್ತಿವಿಶೇಷವೂ ಹೌದು. ಅದೊಂದು ಶಬ್ದದ ಪ್ರಕಾರ ಮಾತ್ರವಲ್ಲ; ಅರ್ಥಪ್ರಕಾರ ಮಾತ್ರವಲ್ಲ; ಅನುಭವ ಪ್ರಕಾರವೂ ಆಗಿದೆ. ಅದು ರಸಶಕ್ತಿಯ ಸಂಚಾರಕ್ಕೆ ಪ್ರಣಾಳಿಕೆ ಮಾತ್ರವಾಗಿರದೆ ರಸಶಕ್ತಿಯ ಉದ್ಭವಕ್ಕೆ ಆಕರವೂ, ಸ್ಥಾನವೂ ಆಗಿರುತ್ತದೆ. ಇದ್ದುದು ಯಾವುದನ್ನಾದರೂ ತೀಕ್ಷ್ಣವಾಗಿ ಹೇಳುವುದಷ್ಟೆ ಅದರ ಕೆಲಸವಲ್ಲ; ಅದುವರೆಗೂ ಇಲ್ಲದಿದ್ದುದನ್ನು ಸೃಷ್ಟಿಸುವುದೂ ಅದರ ಕರ್ತವ್ಯ....... ಅಲ್ಲಿ ಉಕ್ತಿಪ್ರಕಾರವೆ

---

* 'ಮಾನಸದ ಮದಗ' ವನ್ನು ಕುರಿತು ನಾನು ಕೀರ್ತಿನಾಥ ಕುರ್ತಕೋಟಿ ಅವರೊಡನೆ ನಡೆಸಿದ ಪತ್ರ ವ್ಯವಹಾರವನ್ನು ಅನುಬಂಧ I ರಲ್ಲಿ ನೀಡಿದ್ದೇನೆ.

ಅನುಭವಪ್ರಕಾರ. ಆಗ ಅದು ಅಲಂಕಾರವೂ ಅಲ್ಲ, ಚಮತ್ಕಾರವೂ ಅಲ್ಲ, ಅದೊಂದು ಅಪರೋಕ್ಷ ಸಾಕ್ಷಾತ್ಕಾರ" ಎಂಬ ನುಡಿ ಅಲೌಕಿಕ ಕವನದ ರೂಪಕ ಸೃಷ್ಟಿಯಲ್ಲಿ ಸತ್ಯವಾಗಿದೆ. ಇದೇ ಬಗೆಯ ತಾಯಿಯ ಅಚಿಂತ್ಯಾನುಭವವನ್ನು ಬೇಂದ್ರೆಯವರು ಇನ್ನೊಂದು ಕವನ 'ಕಂದಾ'[21]ದಲ್ಲಿ ಹೀಗೆ ವ್ಯಕ್ತ ಪಡಿಸಿದ್ದಾರೆ:

'ಅಧರದಲ್ಲಿ ಮುದ್ದಾಗಿ ಉದರದಲ್ಲಿ ಮುತ್ತಾಗಿ
ಇದಿರು ಮೂರ್ತಿಗೊಂಡು ನಿಂತ ಜೀವದ ಹೂವೇ!
ಬ್ರಹ್ಮಾಂಡವನೊಳಗೊಂಡ,
ನಾನು ಹೊತ್ತು ಹೆತ್ತ ಪಿಂಡವೆ'!

**ಚಿಂತಾಪಹಾರಕ ಚಿಂತಾಮಣಿ**

ತಾಯಿಯ ಅನುಭವ ಹೆಣ್ಣಿಗೆ ಚಿಂತಾಪಹಾರಕ ಚಿಂತಾಮಣಿಯಾಗಿ, ಅವಳನ್ನು ತಪಸ್ವಿನಿಯನ್ನಾಗಿಸಿ ಯೋಗಿಯನ್ನಾಗಿಸುತ್ತದೆ ಎಂದು ಬೇಂದ್ರೆಯವರು 'ಅವರೇನು ಬಲ್ಲರು?'[24] ಎಂಬ ಕವನದಲ್ಲಿ ನುಡಿದಿದ್ದಾರೆ.

'ನನ್ನ ಚಿಂತಾಪಹಾರಕ ಚಿಂತಾಮಣಿ!
ಚಿಂತೆಯ ಪಂಚಾಗ್ನಿಯಲ್ಲಿ ತಪ ಮಾಡಿಸಿ
ತಪಸ್ವಿನಿಯ ಮಾಡಿದೆ

☆ ☆

ನನ್ನ ಅಮೃತದ ಝುರಿಯೇ!
ನಿನ್ನ ವಿಷವುಂಡು ನೀಲಕಂಠಾಭರಣಳಾದೆ,
ಸುಖ ದುಃಖ ಸಮನೆಂಬ ಯೋಗಿಯ ಮಾಡಿದೆ'.

ಈ ಮೇಲಿನ ಮೊದಲ ನುಡಿಯಲ್ಲಿ ಬೇಂದ್ರೆಯವರು ಮಗುವನ್ನು ಚಿಂತಾಮಣಿಗೆ ಹೋಲಿಸಿದ್ದಾರೆ. 'ಚಿಂತಾಮಣಿ'ಯನ್ನು ಕಬ್ಬಿಣದ ತುಂಡಿಗೆ ಸ್ಪರ್ಶಿಸಿದಾಗ ಕಬ್ಬಿಣದ ತುಂಡು ಬಂಗಾರವಾಗುತ್ತದೆ ಎಂಬುದು ಕವಿಸಮಯ. ಆದರೆ ಬೇಂದ್ರೆಯವರು ಚಿಂತೆಯನ್ನು ಅಪಹರಿಸುವ ಮಣಿ ಎಂಬುದಾಗಿ ಚಿಂತಾಮಣಿಯ ವ್ಯುತ್ಪತ್ತಿಯನ್ನು ಕೊಟ್ಟಿದ್ದು ಔಚಿತ್ಯಪೂರ್ಣ. ತಾಯಿಯ ಚಿಂತೆಗಳನ್ನು ಪರಿಹಾರಗೊಳಿಸುವುದು ಮಕ್ಕಳ ಕರ್ತವ್ಯ. ದಂಪತಿಗಳು ಹೂಡಿದ ಸಂಸಾರದಲ್ಲಿ ಹೊತ್ತಿಸುವ ಬೆಂಕಿ ಪಂಚಾಗ್ನಿಗಳಲ್ಲಿ ಒಂದು. ಅವು ದಕ್ಷಿಣ, ಗಾರ್ಹಪತ್ಯ, ಅಹವನೀಯ, ಸಭ್ಯ ಹಾಗೂ ಆವಸತ್ಯ ಎಂದು ಹೇಳಲಾಗಿದೆ. ಗೃಹಸ್ಥನ ಮನೆಯಲ್ಲಿಯ ಅಗ್ನಿ ಗಾರ್ಹಪತ್ಯ. ಅಪತ್ಯ ಎಂದರೆ ಮಗು. ದಂಪತಿಗಳು ಪಡೆಯುವ ಸಂತಾನಕ್ಕೆ ಈ ಅಗ್ನಿಯ ಕೃಪೆಯೇ ಕಾರಣ. ಆದುದರಿಂದ ತಾಯಿಯ ಸ್ಥಾನ ತಪಸ್ವಿನಿಯ ಸ್ಥಾನ ಎಂಬುದಾಗಿ ಬೇಂದ್ರೆಯವರ ವಿಚಾರವಾಗಿದೆ. ಅಮೃತದ ಝುರಿಯಾದ ಮಗುವನ್ನು ಹೆರುವ ನೋವು ಜಗದ ಎಲ್ಲ ನೋವನ್ನು ಮೀರಿದ್ದು ಎಂದು ಹೇಳುತ್ತಾರೆ. ನೋವು ನಲಿವಿನ-ಬದುಕಿನ ಸಿಹಿ-ಕಹಿಯ ಅನುಭವವನ್ನು ಸ್ತ್ರೀ ಫಲವತಿಯಾಗುವಾಗ ಮತ್ತು ಮಗುವನ್ನು ಹೆರುವಾಗ ಹೆತ್ತ ಆನಂದದ ಉತ್ಕೃಷ್ಟ ಅನುಭವದಲ್ಲಿ ಕಾಣುತ್ತಾಳೆ. ಅವಳು ತಾಯಿಯಾದ ಅನುಭವವೇ ಅವಳನ್ನು ಯೋಗಿಯನ್ನಾಗಿಸುತ್ತದೆ ಎಂದು ಬೇಂದ್ರೆಯವರು ನಾರೀಸತ್ವದ ಚಿಂತನೆಯನ್ನು ಕಾವ್ಯಲಹರಿಯಲ್ಲಿ ಮೂಡಿಸಿದ್ದಾರೆ.

**ಮೊಲೆ**

ವಾತ್ಸಲ್ಯಮಯಿಯಾದ ತಾಯಿಯು ತನ್ನ ಜೀವದ ಕುಡಿಯನ್ನು ಪೋಷಿಸಿ ಬೆಳೆಸುವುದು ತನ್ನ

ಮೊಲೆಹಾಲಿನಿಂದ. ಮೊಲೆಯೂಡಿಸುತ್ತ ಮಣ್ಣಿನ ಗೊಂಬೆಯಂತಹ ಮಗುವನ್ನು ಗಟ್ಟಿಗೊಳಿಸುತ್ತ ಮಾನವಜೀವಿಯಾಗಿಸುತ್ತಾಳೆ. ತಾಯಿಯು ಮಗುವಿಗೆ ಸ್ತನ್ಯಪಾನ ಮಾಡಿಸುವುದನ್ನು ಬೃಹದಾರಣ್ಯಕೋಪನಿಷತ್ತಿನಲ್ಲಿ ಹೀಗೆ ವಿವರಿಸಿದೆ : "ಸರಸ್ವತಿಯೆ, ಫಲಸಹಿತವಾಗಿರುವ ಸರ್ವ ಪ್ರಾಣಿಗಳಿಗೂ ಅನ್ನವಾಗಿರುವ ಮತ್ತು ರತ್ನವನ್ನು (ಅಥವಾ ಹಾಲನ್ನು) ಕೊಡುವ, ಧನವನ್ನು ಪಡೆಯಿಸುವ, ಬಹಳವಾಗಿ (ಕಲ್ಯಾಣವನ್ನು) ಕೊಡುವ, ಯಾವ (ನಿನ್ನ) ಸ್ತನವುಂಟೋ ಮತ್ತು ಯಾವ (ಸ್ತನ)ದಿಂದ ಶ್ರೇಷ್ಠವಾದ (ದೇವಾದಿಗಳನ್ನು) ನೀನು ಕಾಪಾಡುತ್ತಿರುವೆಯೋ ಅದನ್ನು ಇಲ್ಲಿ ಪಾನಕ್ಕೆ ಇರಿಸು!" ಎಂದು (ಮಂತ್ರದಿಂದ) ಸ್ತನ್ಯವನ್ನು ಕೊಡಿಸಬೇಕು.

ಸರಸ್ವತಿಯ ಸ್ತನ್ಯಪಾನದಿಂದಾಗುವ ಫಲವೇ ತಾಯಿಯ ಸ್ತನ್ಯಪಾನದಿಂದ ಆಗಬೇಕು ಎಂಬ ಭಾವದಿಂದ ಮಾಡುವ ಪ್ರಾರ್ಥನೆಯಿದು."[25] ಮಾನಸಶಾಸ್ತ್ರಜ್ಞರು ತಾಯಿಯ ಮೊಲೆಹಾಲು ಮಗುವಿನ ದೇಹವನ್ನು ಪೋಷಿಸುವುದರ ಜೊತೆಗೆ ಅದರ ಮನಸ್ಸಿನ ಪೋಷಕವೂ ಆಗಿ ಅದರ ಜೀವಭಾವ ರೂಪಕಶಕ್ತಿಯಾಗಿದೆ ಎಂದು ಹೇಳಿದ್ದಾರೆ. ಅವಳ ಭಾವ, ಆದರ್ಶ, ಚಿಂತನೆಗಳನ್ನೂ ಉಣಿಸುತ್ತ ಆಕೆ ಮಗುವನ್ನು ಸಂಸ್ಕೃತಿ ಸಂಪನ್ನನಾಗಿಸುತ್ತಾಳೆ ಎಂಬುದು ನಮ್ಮ ಸಂಸ್ಕೃತಿಯಲ್ಲಿದೆ. ಅದನ್ನು ಎಚ್. ತಿಪ್ಪೇರುದ್ರಸ್ವಾಮಿಗಳು "ವಿಜಯನಗರದ ಪ್ರೌಢ ಪ್ರತಾಪದೇವರಾಯನ ಕಾಲದಲ್ಲಿ ರಚಿತವಾದ (ಸು.೧೪೧೧) ಹಂಪೆಯ ಶಾಸನದಲ್ಲಿ ಬರುವ ಒಂದು ಪದ್ಯ' ಸಾಮಾಜಿಕ ಜೀವನಕ್ಕೆ ಹಿನ್ನೆಲೆಯಾಗಿರಬೇಕಾದ ಉದಾತ್ತ ಸಂಸ್ಕೃತಿಯನ್ನು ಅರ್ಥವತ್ತಾಗಿ ಸೂಚಿಸುತ್ತದೆ. ಪ್ರೌಢ ಪ್ರತಾಪದೇವರಾಯನ ಮಂತ್ರಿ ಲಕ್ಷ್ಮೀಧರಾಮಾತ್ಯನು ಮಹಾಗಣಪತಿಯನ್ನು ಸ್ಥಾಪಿಸಿ ಅದಕ್ಕೆ ದತ್ತಿಗಳನ್ನು ಬಿಟ್ಟ ಸಂಗತಿ ಈ ಶಾಸನದಲ್ಲಿ ಬಂದಿದೆ. ಲಕ್ಷ್ಮೀಧರನು ಮಗುವಾಗಿದ್ದಾಗ ಅವನ ತಾಯಿ ಹಾಲೆರೆಯುತ್ತಾ ಅದರೊಂದಿಗೆ ಉದಾತ್ತ ವಿಚಾರದ ಸಂಸ್ಕೃತಿಯನ್ನು ರಕ್ತಗತವಾಗುವಂತೆ ಎರೆದಳೆಂಬುದನ್ನು ಶಾಸನದ ಕವಿ ಹೀಗೆ ಹೇಳಿದ್ದಾನೆ:

> 'ಕೆಱೆಯಂ ಕಟ್ಟಿಸು, ಭಾವಿಯಂ ಸವೆಸು, ದೇವಾಗರಮಂ ಮಾಡಿಸ
> ಜ್ಜೆಱೆಯೊಳ್ ಸಿಲ್ಕಿದನಾಥರಂ ಬಿಡಿಸು, ಮಿತ್ರರ್ಗಿಂಬುಕೆಯ್ ನಂಬಿದ |
> ರ್ಗ್ಗೆಱೆವೆಟ್ಟಾಗಿರು, ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ ಪಿರಿದೆ ತಾ
> ಯೆಱೆದಳ್ಪಾಲೆಱೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ ||'[26]

ಎಂದು ಶಾಸನದ ಆಧಾರದಿಂದ ಶ್ರುತಪಡಿಸಿದ್ದಾರೆ. ಈ ನಾಡಿನ ಸಂಸ್ಕೃತಿಯ ರೂಪಕರಾದ ಬೇಂದ್ರೆಯವರು ತಾಯಿಯ ಮೊಲೆಯನ್ನು ನಿರ್ಮಲಾಂತಃಕರಣದಿಂದ ಕಂಡು, ತಾನೇ ತಾಯಿಯೆಂಬ ಭಾವದಲ್ಲಿ ಮಿಂದು - ಕನ್ನಡ ಸಾಹಿತ್ಯ ಪರಂಪರೆಯಲ್ಲಿಯೇ ಅಪೂರ್ವವಾದ ರೀತಿಯಲ್ಲಿ ಬಣ್ಣನೆಯನ್ನು ಮಾಡಿದ್ದಾರೆ. ಆ ಪವಿತ್ರ ಮೊಲೆಯನ್ನು ಹಲವು ರೂಪಕಗಳಲ್ಲಿ ವಾತ್ಸಲ್ಯರಸವಾಗಿ ಹರಿಸಿರುವುದು ಅವರ ವಿಶ್ವದೌನ್ನತ್ಯ ಭಾವಕ್ಕೆ ಸಾಕ್ಷಿಯಾಗಿದೆ. ಈ ಮೊಲೆಗಳಿರುವಾಗ 'ಅವನಿಗೇನು ಕಡಿಮೆ' ಎಂದು ತಾಯಿ ತನ್ನ ಮಗನಿಗಾಗಿ ತಾನಿರುವುದು ಎಂದು ಪದೇ ಪದೇ ಹೇಳುವ ನುಡಿಯಲ್ಲಿ ಮಾತೃಭಾವ ಘನೀಭವಿಸಿ, ಮಾತೆಗೆ ಶರಣು ಹೋಗುವ ಮನಸ್ಸು ರೂಪುಗೊಳ್ಳುತ್ತದೆ. 'ಮೊಲೆ'[27] ಕವನದ ಪೂರ್ಣಪಾಠ ಈ ರೀತಿ ಇದೆ :

> 'ನನ್ನ ಬಾಲಗೋಪಾಲನ ಗೋದಲೆಗಳವ್ವಾ ಇವು;
> ಕಪಿಲೆ ಕಾಮಧೇನುಗಳು ಕಟ್ಟಿಹವಿಲ್ಲಿ,
> ಅವನಿಗೇನು ಕಡಿಮೆ?

ಗಂಗೆಗೆ ಉಣಿಸುವ ಹಿಮವತಿಯ
ತುಂಗ ಶಿಖರದ ಮಾದರಿಗಳಿವು.
ಅವನಿಗೇನು ಕಡಿಮೆ?
ವಾತ್ಸಲ್ಯದ ವಿಜಯ ಯಾತ್ರೆಯಲ್ಲಿ
ನನ್ನ ಕಂದನೂದುವ ಅವಳಿ ಶಂಖಗಳಿವು,
ಅವನಿಗೇನು ಕಡಿಮೆ?
ಎಲ್ಲರ ತಾಯಿಯಾದ ನಲ್ಲಮ್ಮನ ಗುಡಿಯ
ಜೋಡು ಕಳಸಗಳಿವು...
ಅವನಿಗೇನು ಕಡಿಮೆ?
ಹಾಲಿನ ಬಟ್ಟಲುಗಳಲ್ಲ; ಮಾಂಸದ ಒಟ್ಟಲುಗಳಲ್ಲ!
ಜಗದಂಬೆಯು ಜೀವಶಿಶುವನ್ನು ಮಲಗಿಸಿ ತೂಗುವ
ತೊಟ್ಟಿಲ ಕಾಲುಗಳಿವು,
ಅವನಿಗೇನು ಕಡಿಮೆ!

ಈ ಕಾವ್ಯ ಬೇಂದ್ರೆಯವರು ಅನುಭವಿಸಿದ ಮಾತೃವಾತ್ಸಲ್ಯದ ನುಡಿಮುತ್ತು. ಇದು ಸತ್ಯವನ್ನು ಸಾಕ್ಷಾತ್ಕರಿಸಿಕೊಂಡ ಕಾವ್ಯಾನುಭವ. ಈ ಅನುಭವದಲ್ಲಿ ತಾಯಿಯ ಮೊಲೆಯು ಹಾಲಿನ ಬಟ್ಟಲುಗಳಲ್ಲ, ಮಾಂಸದ ಒಟ್ಟಲುಗಳಲ್ಲ, ಅವು ಜೀವಶಕ್ತಿ ಸಂಜೀವಿನಿ ಎಂಬುದು ಅರಿವಾಗುತ್ತಿದ್ದಂತೆ ತಾಯಿ ಬರಿಜೀವಿಯಲ್ಲ, ಅಲೌಕಿಕ ಶಕ್ತಿ ಎಂದು ತಿಳಿಯುತ್ತದೆ. ಈ ಕವನವನ್ನು ವಿಮರ್ಶಿಸುತ್ತ ಸಿ. ಪಿ. ಕೆ. ಅವರು "ಒಂದೊಂದು ರೂಪಕವೂ ಸ್ತನಗಳ ಸಹಜ ಚಿತ್ರವನ್ನು ಒಂದು ಉದಾತ್ತವಾದ ನೆಲೆಯಲ್ಲಿ ಸೃಜಿಸುತ್ತದೆ. ಅವು ಅವಳಿ ಶಂಖಗಳು ಎಂಬುದಂತೂ ಎಷ್ಟು ಯಥಾರ್ಥವಾದ ಅಪೂರ್ವ ಚಿತ್ರ! ಪ್ರತಿಭೆಯೆಂದರೆ ಇದು"[28] ಎಂದು ಹೇಳಿದ್ದಾರೆ. ಬೇಂದ್ರೆಯವರಿಗೆ ಪ್ರತಿಭೆಯ ಉಗಮ ಸ್ಥಾನ ತಾಯಿಯ ಹೃದಯ.

**ಬೆಳಕಿನ ಬೆಳೆ**

ತಾಯಿಗೆ ತನ್ನ ಮಗುವಿನ 'ನಗು-ಅಳು'[29] ಎರಡೂ ರುಚಿಯಾದುದು. ಮಗು ಅವಳಿಗೆ ಬೆಲ್ಲದಚ್ಚಿನ ಗೊಂಬೆ. ಆ ಮಗುವನ್ನು ಮುದ್ದಿಸಿ ಸವಿದಷ್ಟೂ ರುಚಿ. ಅದು ನಕ್ಕು, ಅತ್ತು ಅವಳನ್ನು ತನ್ನತ್ತ ಸೆಳೆಯುತ್ತದೆ. ಅವಳನ್ನು ಕಂಡಾಗ ಅದರ 'ತುಟಿಯಲ್ಲಿ ನಗೆಯೂರು'ತ್ತದೆ. ಅವಳು ನುಡಿಯುತ್ತಾಳೆ :

'ನೀನು ನಕ್ಕರೆ ಬೆಳಕಿನ ಬೆಳೆ
ನೀನು ಅತ್ತರೆ ಮುತ್ತಿನ ಮಳೆ;
ನೀನು ನಕ್ಕರೊಂದು ರುಚಿ, ನೀನು ಅತ್ತರೊಂದು ರುಚಿ'.

**ನಲ್ಲನಿತ್ತ ಮುತ್ತು**

ಬೇಂದ್ರೆಯವರು 'ತಾಯಿ'[30] ಎಂಬ ಕವನದಲ್ಲಿ ತಾಯಿಯ ಮಹತ್ವವನ್ನು ಮನತುಂಬಿ ಬಣ್ಣಿಸಿದ್ದಾರೆ. ಹೆಚ್ಚು ಕಡಿಮೆ ಎಂಬುದೆಲ್ಲ ಇಚ್ಛೆಯಾಟ ಎಂದು ಹೇಳುತ್ತ, ನಮ್ಮನ್ನು ಈ ಜಗತ್ತಿಗೆ ತರುವ ಇಚ್ಛೆ ಹೊಂದಿರುವ, ತಂದು ನಮ್ಮನ್ನು ಸಲಹುವ ತಾಯಿಯೇ ಹೆಚ್ಚು ಎಂದು ಕವನದ ಮೊದಲಭಾಗದಲ್ಲಿ ನುಡಿದಿದ್ದಾರೆ. ಎರಡನೆಯ ಭಾಗದ ಮೊದಲ ಚರಣದಲ್ಲಿ ಇಚ್ಛೆ ಹಾಗೂ ಬಯಕೆಯ 'ಬೇನೆ ತಿಂದು ಬಳಲಿ ಹೆತ್ತು | ನಕ್ಕರಾರೋ ನನ್ನ ಚೆನ್ನ?' ಎಂಬ ಪ್ರಶ್ನೆ ಕೇಳಿ ಸುಮ್ಮನಾಗಿದ್ದಾರೆ. ಅದಕ್ಕೆ ಉತ್ತರ ತಾಯಿ

ಎಂಬುವುದು ಓದುಗನಿಗೆ ಮನನವಾಗುತ್ತ ಹೋಗುತ್ತದೆ. ಹೀಗೆ ಈ ಕಾವ್ಯದಲ್ಲಿ ತಾಯಿ ಅರ್ಥವಾಗುತ್ತ ಸಾಗುತ್ತಾಳೆ. ಇದೇ ರೀತಿ ಮಗುವಿನ ಹುಟ್ಟು ಹಾಗೂ ಬೆಳವಣಿಗೆಗೆ ಕಾರಣವಾದ ವಸ್ತುವಿಶೇಷವನ್ನು ಪ್ರತಿ ಚರಣದಲ್ಲಿರಿಸಿ, ಕೌತುಕವನ್ನುಂಟುಮಾಡುತ್ತ - ನಕ್ಕು, ನಲಿದು, ಅಲೆದು, ಒಲಿದು, ಬೆಳೆದು ಕುಣಿದವರು ಯಾರು ಎಂಬ ಪ್ರಶ್ನೆ ಎತ್ತುತ್ತ ತಾಯಿಯ ಮಹತ್ತು ಅರಿವಾಗುವಂತೆ ಮಾಡಿದ್ದಾರೆ. ಈ ಭಾಗದ ಕೊನೆಯ ಚರಣದಲ್ಲಿ:

'ನಲ್ಲನಿತ್ತ ಮುತ್ತನೊಂದ
ತನ್ನ ಹಾಲಿನಿಂದ ತೊಳೆದ
ಕಣ್ಣ ಬೆಳಗಿನಿಂದ ಬೆಳಗಿ
ಕುಣಿದರಾರೊ ನನ್ನ ಚೆನ್ನ?'

ಎಂದು ಪ್ರಶ್ನಿಸಿದ್ದಾರೆ. ಬೇಂದ್ರೆ ಕಾವ್ಯದ ಮುಖ್ಯ ಪ್ರತೀಕ 'ನಲ್'. ಅವರು 'ನಲ್' ಪದವನ್ನು ಕುರಿತು ಸಾಹಿತ್ಯದ ವಿರಾಟ್ ಸ್ವರೂಪದಲ್ಲಿ ನೀಡಿರುವ ವಿವರ ಹೀಗಿದೆ :

**ಕಾವ್ಯದ ಓಂ**

"ಓಂಕಾರವು ವೇದಾಂತ ವಿಚಾರದಲ್ಲಿದ್ದಂತೆ 'ನಲ್' ಎಂಬುದು ಕಾವ್ಯ ವಿಚಾರದಲ್ಲಿ. 'ನಲ್' ಎಂಬ ಬೀಜಕ್ಕೆ ಬೇರೆ ಬೇರೆ ಪ್ರತ್ಯಯಗಳು ಸೇರಿ ಅದರ ವಿವಿಧ ಗರ್ಭಿತಾರ್ಥವನ್ನು ಪ್ರಕಟಗೊಳಿಸಿವೆ. ಒಂದೇ ಮಾತ್ರೆಯು ಭಿನ್ನ ಅನುಪಾನಗಳ ಮೂಲಕ ಅನೇಕ ರೋಗಗಳಿಗೆ ಉಪಶಾಮಕವಾಗಬೇಕಾದರೆ, ಮೂಲಮಾತ್ರೆಯಲ್ಲಿ ಬೀಜಭೂತ ಗುಣವಿರಬೇಕು.

'ನಲ್'ದಲ್ಲಿ ರಸ, ಪ್ರೀತಿ, ಸೌಂದರ್ಯ, ಆನಂದಗಳು ಅಡಕವಾಗಿವೆ : 'ನಲ್' ಬೀಜದಿಂದ ನಲಿವು = ಆನಂದ = ನಲುಮೆ = ಪ್ರೀತಿ; ನಲ್ಲ = ಸುಂದರ; ನಾಲಗೆ = ರಸಜ್ಞೆಯಾದ ಜಿಹ್ವೆ; (ನಾನ್ = ಆರ್ದ್ರವಾಗು) ನಲ್ಲೆವಾಲು = ಸವಿಯಾದ ಹಾಲು. ಹೀಗೆ ಶಬ್ದಸಿದ್ಧಿಯಾಗಿದೆ. ನಲ್‌ದಲ್ಲಿ ರಸ, ಪ್ರೀತಿ, ಸೌಂದರ್ಯ, ಆನಂದಗಳು ಅಡಕವಾಗಿವೆ. ಕವಿಯ ಪ್ರತಿಭೆಯು ಪ್ರೀತಿಯ ರೀತಿ; ಕಾವ್ಯವಿಷಯವಾದ ಜಗತ್ತೆಲ್ಲ ಸೌಂದರ್ಯವು; ಅವುಗಳ ಅರಿವಿನ ಸಂಗಮವು ರಸವು; ಇವು ಮೂರಕ್ಕೂ ಆಧಾರವಾಗಿದ್ದುದು ಸೃಷ್ಟಿ ಸ್ಥಿತಿ ಲಯಗಳಿಗೆ ಬ್ರಹ್ಮಭೂತ ಆನಂದ. ಉಪನಿಷತ್ತು ವೇದಗಳಲ್ಲಿ 'ಮಧು' ಶಬ್ದವನ್ನು ಹೀಗೆಯೆ ಬಳಸಿದುದುಂಟು. ಆದರೆ ಅದಕ್ಕೆ ನಲ್ಲದ ಮೇಲ್ಮೈ ಬರಲಾರದು. ಇದರ ಬಣ್ಣ ಬೇರೆ, ಅದರ ಬಣ್ಣ ಬೇರೆ, ಇದರ ಧ್ವನಿ ಅದಕ್ಕಿಲ್ಲ."[31]

ತಾಯಿಗೆ ಪ್ರಿಯವಾದ ಮಗ ನಲ್ಮೆಯವನು. ಆ ಪ್ರಿಯ ಮಗ 'ನಲ್ಲನಿತ್ತ ಮುತ್ತ'ನ್ನು ಅಂದರೆ ಮೊಲೆಯುಣ್ಣಲು ಇತ್ತ ಮುತ್ತನ್ನು ತನ್ನ ಹಾಲಿನಿಂದ ತೊಳೆದು ತನ್ನ ಕಣ್ಣ ಬೆಳಕಿನಿಂದ ಅವನನ್ನು ಬೆಳಗಿ ಕುಣಿದವಳು ತಾಯಿ ಎಂದು ತಾಯಿಯ ನಲ್ಮೆಯನ್ನು ಬಣ್ಣಿಸಿದ್ದಾರೆ. ಅವಳು ತಾನು ಹೆತ್ತ ಜೀವವನ್ನು ಪೋಷಿಸಿ ಸಂತಸಪಡುವ ವರ್ಣನೆ ಈ ಭಾಗದಲ್ಲಿದ್ದರೆ, ಮೂರನೆಯ ಭಾಗದಲ್ಲಿ ಅದರ ಮುಂದಿನ ಹಂತವಾದ ತಾಯಿಯ ಮಾತಿನ ಮಹತ್ವವಿದೆ. ಬೇಂದ್ರೆಯವರು 'ತಾಯಿಗಿಂತದಾರು ಹೆಚ್ಚು?' ಎಂಬ ಪ್ರಶ್ನೆಹಾಕಿ ಉತ್ತರವಾಗಿ: 'ತಾಯಿಗಿಂತ ತಾಯಿ ಬಾಯಿ' ಎಂದಿದ್ದಾರೆ. ಹೀಗೆ ಹೇಳಲು ಕಾರಣ ತಾಯಿಯ ಬಾಯಿಯ ಮಾತು ನಮ್ಮನ್ನು ರೂಪಿಸಿರುವುದು.

'ಮಾತಿನೊಂದು ಮಂತ್ರದಿಂದ
ನಮ್ಮ ದೇಹ ಯಂತ್ರ ನಡೆಸಿ -

ದಂಥ ನಮ್ಮ ತಾಯಿ ಬಾಯಿ
ಆಸ ಮಾತೆ ಜನ್ಮದಾತೆ!'

ಎಂದು ಅವರು ನುಡಿವಲ್ಲಿ 'ಮಾತೆ' ಎಂಬ ನುಡಿ, ಮಾತು ಆಗಿ ಮಾತೆಯೂ ಆಗಿ ಶ್ಲೇಷಾರ್ಥದಿಂದ ತಾಯಿ ಮತ್ತು ಅವಳ ಮಾತು ಎರಡೂ ಶ್ರೇಷ್ಠ ಎಂಬುದು ಮನವರಿಕೆಯಾಗುತ್ತದೆ.

**ಎರಡನೇ ಹುಟ್ಟು - ದ್ವಿಜತ್ವ**

'ಒಡಲ ಹುಟ್ಟು ಮೊದಲ ಹುಟ್ಟು;
ಮಾತಿನಿಂದ ಪೂತನಾಗಿ
ತಾಯಿ ಮನದ ಮೂರ್ತಿಯಾಗಿ
ಅವಳ ಎದೆಯ ಗರ್ಭಗುಡಿಯ
ಮಿಣುಕು ಮಿಣುಕು ಬೆಳಕಿನಲ್ಲಿ
ಮುಗುಳು ನಗೆಯನರಳಿಸುತ್ತ
ನಿಲ್ಲಲಾಗ ಮರಳು ಹುಟ್ಟು.
ಆ ಹುಟ್ಟೆ - ನಮ್ಮ ಹುಟ್ಟು -
ನಮ್ಮ ಜನ್ಮದೆಲ್ಲ ಗುಟ್ಟು
ಅಲ್ಲಿ ಇಹುದು ಅಲ್ಲೆ ಇಹುದು.'

ತಾಯಿಗೆ ಮಗುವಿನ 'ಒಡಲ ಹುಟ್ಟು ಮೊದಲ ಹುಟ್ಟು'. ಆದರೂ ಅವಳಿಗೆ ನಿಜವಾದ ಸಂತಸವಾಗುವುದು ಅವನು ಎರಡನೇ ಹುಟ್ಟು ಪಡೆದಾಗ ಅಂದರೆ ಅವನಿಗೆ ಮಾತು ಬಂದಾಗ. ಆಗ ಅವಳು ಆನಂದ ತುಂದಿಲಳಾಗಿ ಅದನ್ನು ಎಲ್ಲರೊಂದಿಗೆ ಹೇಳಿ ಸಂಭ್ರಮದಿಂದ ಕುಣಿದು ಹಬ್ಬದಾನಂದವನ್ನು ಪಡೆಯುತ್ತಾಳೆ. ಅದು ಅವಳಿಗೆ ತನ್ನ ಮಗುವಿನ ಅಸ್ತಿತ್ವದ ಬಗ್ಗೆ ಧೈರ್ಯವನ್ನು ನೀಡುತ್ತದೆ. ಅವನು ಮೂಕನಾಗಿ ಹೋದರೆ ಅವನು ಒಡಲದೇಹ ಮಾತ್ರ ಪಡೆದವನಾಗಿ ಅಪೂರ್ಣ ವ್ಯಕ್ತಿಯಾಗಿ ಹೋಗುತ್ತಾನೆ. ಅವನು ತಾಯಿಗೂ ಇತರರಿಗೂ ಹೊರೆಯಾಗುತ್ತಾನೆ. ಅದನ್ನು ಅರಿತ ತಾಯಿ ಮೊಲೆಹಾಲನ್ನು ಕುಡಿಸುವಾಗ ನುಡಿಯ ಸವಿಯನ್ನೂ ಉಣಿಸುತ್ತಾಳೆ. ಅವನು ಮಾತನಾಡಿದಾಗ ಅವನು ಪೂತನಾದಂತೆ. ಪೂತದ ಅರ್ಥ Made clean or pure.

ವೈದಿಕ ಸಂಪ್ರದಾಯದಂತೆ ಉಪನಯನ ವಿಧಿಯು ಮಗುವಿನ ದ್ವಿಜತ್ವ ಆಗುತ್ತದೆ. ಏಕೆಂದರೆ ಅವನು ಇನ್ನು ಮುಂದಿನ ವಿದ್ಯಾಭ್ಯಾಸವನ್ನು ಗುರುಮನೆಯಲ್ಲಿ ಪ್ರಾರಂಭಿಸಬೇಕಾಗುತ್ತದೆ. ಮನೆಬಿಟ್ಟು ಹೊರಡುವಾಗ ಉಪನಯನ ವಿಧಿಯಲ್ಲಿ ತಂದೆಯಿಂದ ಗಾಯತ್ರಿ ಮಂತ್ರದ ಉಪದೇಶ ಪಡೆಯುತ್ತಾನೆ. ತಾಯಿಯ ಎಂಜಲ ತುತ್ತನ್ನು ಕೊನೆಯದಾಗಿ ಸೇವಿಸುತ್ತಾನೆ. ಬೇಂದ್ರೆಯವರ ದೃಷ್ಟಿಯಲ್ಲಿ ಈ ವಿಚಾರ ಸಂಪೂರ್ಣವಾಗಿ ಸ್ವತಂತ್ರ ರೂಪ ತಾಳಿ ಮಗುವಿಗೆ ಮಾತು ಬರುವುದೇ ದ್ವಿಜತ್ವ ಎಂದಿದ್ದಾರೆ. ತಾಯಿಯು ಮಾತು ಕಲಿಸುತ್ತ ಎರಡನೇ ಹುಟ್ಟನ್ನು ದಯಪಾಲಿಸುತ್ತಾಳೆ. ಅವಳ ಈ ಮಹಿಮೆಗೆ ಬೇಂದ್ರೆ ಮಹತ್ವ ಕೊಟ್ಟಿದ್ದಾರೆ. ಮಾತು ಬರುವ ಮಗು ಎಲ್ಲರ ಆಕರ್ಷಣೆಯ ಕೇಂದ್ರವಾಗುತ್ತದೆ. ಮಾತುಬಾರದ ಮಗು ಹಾಸ್ಯಕ್ಕೆ ಗುರಿಯಾಗುತ್ತದೆ. ಆದುದರಿಂದ ಮಾತು ಬಲ್ಲ ಮಗು ಪೂತವಾಯ್ತು, ಅರಳಿತು, ಪವಿತ್ರವಾಯ್ತು ಎಂಬ ಆನಂದದ ಅಭಿವ್ಯಕ್ತಿಯನ್ನು ಕವಿ ಕೊಟ್ಟಿದ್ದಾರೆ. ಈ ಚಿಂತನೆ ವೈದಿಕ ನಿಲುವನ್ನು ಮೀರಿ ವಿಶ್ವವ್ಯಾಪಿ ನಿಲುವನ್ನು ತಲುಪುವುದು ಬೇಂದ್ರೆ ಕಾವ್ಯದ ಹಿರಿಮೆಯಾಗಿದೆ.

ಈ ಕವನವನ್ನು ವಿಮರ್ಶಿಸುತ್ತ ರಂ. ಶ್ರೀ. ಮುಗಳಿಯವರು "ಒಡಲ ಹುಟ್ಟು ಮೊದಲ ಹುಟ್ಟು, ಮಾತಿನಿಂದ ಪೂತನಾಗಿ ನಿಲ್ಲಲಾಗ ಮರಳು ಹುಟ್ಟು' ಎಂಬ ಭಾವವು ತಾಯ್ನುಡಿ ಅಥವಾ ಮಾತೃಭಾಷೆಯ ಮಹತ್ವವನ್ನು ಎತ್ತಿತೋರುವದಾದರೂ ಕವನ ಪ್ರಾರಂಭದ ಮೂಲಭಾವದಿಂದ ಅನಿರೀಕ್ಷಿತವಾಗಿ ಮೊಗದಿರುವಿದಂತೆ ತೋರಿದರೆ ತಪ್ಪಿಲ್ಲ"[32] ಎಂದು ಹೇಳಿದ್ದಾರೆ. ಆದರೆ ಬೇಂದ್ರೆಯವರ ಈ ಕಾವ್ಯ ತಾಯ್ನುಡಿ ಅಥವಾ ಮಾತೃ ಭಾಷೆಯ ಮಹತ್ವವನ್ನು ಮೀರಿ ಇಡೀ ಮಾನವ ಸೃಷ್ಟಿಯ ಎರಡನೇ ಹುಟ್ಟಿನ ಚಿಂತನೆಯನ್ನು ತನ್ನಲ್ಲಿ ಒಳಗೊಂಡಿರುವುದು ಮಹತ್ವವಾಗಿದೆ.

ತಾಯಿಯ ಹೃದಯ ತುಂಬಾ ಮೃದು. ಅಲ್ಲಿಯ ಬೆಳಕು ಶಾಂತ ಸುಂದರವಾದುದು. ಅದನ್ನು ಮಿಣುಕು ಹುಳುವಿನ ರೂಪಕದಿಂದ 'ಮಿಣುಕು ಮಿಣುಕು ಬೆಳಕು' ಎಂದಿದ್ದಾರೆ. ಆ ಬೆಳಕಿನಲ್ಲಿ ಮುದ್ದು ಮುದ್ದು ಮಾತಿನಿಂದ 'ಮುಗುಳು ನಗೆಯನರಳಿಸುತ್ತ ನಿಲ್ಲಲಾಗ' ಎನ್ನುವ ಭಾವದಲ್ಲಿ ಮಗು ಮರುಸೃಷ್ಟಿ ಪಡೆದು ಮೂರ್ತಿಯಾದುದರ ಸ್ಪಷ್ಟತೆ ಇದೆ. ಅದು ಆಗ 'ತಾಯಿಮನದ ಮೂರ್ತಿಯಾಗುತ್ತದೆ.' ಮಗು ಅರಳಿದ್ದು ಮಾತಿನಿಂದ ಮರಳುತ್ತಿದೆ. ಅಂದರೆ ಮತ್ತೆ ಅರಳುತ್ತಿದೆ, ಅಂದರೆ 'ಮರಳು ಹುಟ್ಟು' ಪಡೆಯುತ್ತಿದೆ ಎಂದು ಅರ್ಥ.

**ತಾಯಿಯ ಪ್ರೀತಿ ಮತ್ತು ರೀತಿ**

ಕವನದ ನಾಲ್ಕನೆಯ ಭಾಗದಲ್ಲಿ ತಾಯಿ ಮತ್ತು ತಾಯಿಯ ಮಾತಿಗಿಂತ ಹಿರಿದಾದುದು ಏನು ಎಂಬ ಪ್ರಶ್ನೆಗೆ ಬೇಂದ್ರೆಯವರು 'ಅವಳ ಪ್ರೀತಿ ಮತ್ತು ಅವಳ ರೀತಿ' ಎಂದಿದ್ದಾರೆ. ಮಾತು ಬಂದ ತಕ್ಷಣ ಆ ಮಗುವಿಗೆ ಅಂದಿನವರೆಗೆ ಕುತೂಹಲದ ಕಣ್ಣಾಗಿದ್ದುದೆಲ್ಲ ಪ್ರಶ್ನೆಯಾಗುತ್ತದೆ. ಅದಕ್ಕೆ ತಾಯಿಯಾದವಳು ಪ್ರೀತಿಯಿಂದ ಉತ್ತರವನ್ನು ನೀಡಬೇಕು. ಹಾಗೆ ಪ್ರಶ್ನೆ ಕೇಳಿ ಉತ್ತರವನ್ನು ಪಡೆಯುವುದರಲ್ಲಿಯೇ ಆ ಮಗು ಅವಳ ರೀತಿಯನ್ನು ಅಂದರೆ ಅವಳ mode, manner, fashionಗಳನ್ನು ಗಮನಿಸತೊಡಗಿ ಅವಳ ರೀತಿಯಂತೆ ತನ್ನ ಸ್ವಭಾವವನ್ನು ರೂಪಿಸಿಕೊಳ್ಳುತ್ತದೆ. ಆದ ಕಾರಣ ಈ ಹಂತದಲ್ಲಿ ತಾಯಿಯ ರೀತಿ, ನಡತೆ, ತುಂಬಾ ಮುಖ್ಯವಾಗುತ್ತದೆ. ಆದಕಾರಣ ಬೇಂದ್ರೆಯವರು ಈ ಹಂತದಲ್ಲಿ 'ಅವಳ ಪ್ರೀತಿ ಅವಳ ರೀತಿ' ಹೆಚ್ಚು ಮುಖ್ಯವಾಗುತ್ತದೆ ಎಂದಿದ್ದಾರೆ. ಮಗನು ಕೀರ್ತಿವಂತನಾಗಬೇಕು ಎಂಬ ಸ್ವಾರ್ಥ ತಾಯಿಯ ಪ್ರೀತಿಯಾಗಿ ರೂಪ ತಾಳುತ್ತದೆ. 'ರೀತಿರಾತ್ಮಾ ಕಾವ್ಯಸ್ಯ' ಎಂಬುದು ಕಾವ್ಯಶಾಸ್ತ್ರದ ಒಂದು ಸೂತ್ರ. ರೀತಿ ಎಂಬುದು ಆತ್ಮದ ಪ್ರತೀಕ. ಮಗು ಆತ್ಮಾಂಶ ಎಂಬುದು ಸುಳ್ಳಲ್ಲ. ತಾಯಿಯ ರೀತಿ ನೀತಿ ನಡತೆಯೇ ಮುಖ್ಯ ಎಂಬ ದೃಷ್ಟಿಯಿಂದ ಅವುಗಳಿಗೆ ಬೇಂದ್ರೆಯವರು ಆತ್ಮದ ಉನ್ನತಿಯನ್ನು ಕೊಟ್ಟಿದ್ದಾರೆ. ಈ ಜಗತ್ತಿನಲ್ಲಿ ಯಾವಾಗ ಜನನ ಎಂಬುದು ಶುರುವಾಯಿತೊ ಅಂದಿನಿಂದ 'ಕಡಲಿನೊಡಲ ಸಿಂಪಿನಂತೆ' ತಾಯಿ ಮಗುವನ್ನು ಹೆತ್ತು ಸಲಹುತ್ತಿದ್ದಾಳೆ. ಅವಳೇ 'ನನ್ನ ನಿನ್ನ ಅವನ ತಾಯಿ' ಎಂದು ತಾಯಿಯ ಬಗೆಗಿನ ಸಾರ್ವಕಾಲಿಕ ಸತ್ಯವನ್ನು ಸಾರಿದ್ದಾರೆ.

ಈ ಕವನದ ಕೊನೆಯ ಭಾಗವು ಜೀವನದಲ್ಲಿರುವ ಉಪ್ಪುನೀರ ಬಾಳನ್ನು ಕಾಣಿಸುತ್ತ, ಅದನ್ನು ಗೆಲ್ಲುವ ಮಾರ್ಗ ಯಾವುದು ಎಂಬ ಪ್ರಶ್ನೆಯನ್ನು ಎತ್ತಿದೆ. ಈ ಉಪ್ಪುನೀರ ಬಾಳನ್ನು ತೊರೆಯುವಹಾಗಿಲ್ಲ. ಆದಕಾರಣ ಬೇಂದ್ರೆಯವರು ಒಂದು ರೂಪಕದಿಂದ ಅದರ ಪರಿಹಾರವನ್ನು ಸೂಚಿಸಿದ್ದಾರೆ. 'ಕಪ್ಪುನೀರ ಕುಡಿಯಬಹುದು' ಎಂದರೆ ಒಂದು ಕಪ್ಪು (cup) ನೀರನ್ನು ಕುಡಿಯಬಹುದು. ಅದು ಪ್ರತಿಯೊಬ್ಬನ ಮಿತಿ ಮತ್ತು ಉಳಿವಿಗೆ ಬೇಕಾದುದು. ಆದರೆ ಅದು ಉಪ್ಪು ಉಪ್ಪು ಆದಾಗ ಕುಡಿಯಲು ಸಾಧ್ಯವಿಲ್ಲ. ಹೀಗಿರುವಾಗ ಬಾಳೆಲ್ಲ ಉಪ್ಪು ನೀರಾದಾಗ ಬದುಕುವುದು ಹೇಗೆ ಎಂಬ ಪ್ರಶ್ನೆ ಏಳುತ್ತದೆ. ಅದಕ್ಕೆ

ಬೇಂದ್ರೆಯವರು ತಾಯಿಯ ನಗೆಯ ಅಮೃತ ಈ ಉಪ್ಪುನೀರ ಬಾಳನ್ನು ಸುಖಮಯವಾಗಿ ಮಾಡಲು ಶಕ್ತವಾಗಿದೆ ಎಂದು ಹೇಳಿದ್ದಾರೆ.

ಯಾರ ಸಂಸಾರವೂ ಅಮೃತವಲ್ಲ. ಸಂಸಾರದಲ್ಲಿ ಅಮೃತದಂಥ ಸಿಹಿ ತೆರೆಗಳು ದುಃಖದ ಉಪ್ಪುಪ್ಪು ತೆರೆಗಳು ಏರೇರಿ ಬಂದೇ ಬರುತ್ತವೆ. ಹಾಗೆಯೇ ಬಂದಂತಹ ತೆರೆಗಳನ್ನೂ ತಾಯಿ ನಗೆಮುಖದಿಂದ ಸ್ವಾಗತಿಸುತ್ತಾಳೆ. ಆದರೆ ಆ ನಗೆ ಬಹಳ ಕಾಲ ಉಳಿಯುವುದಿಲ್ಲ. ಬುರುಗಿನಂತೆ ಕಂಡು ಕರಗಿ ಹೋಗುತ್ತದೆ. ಇದನ್ನು ಮೀರಿ ಆನಂದ ಪಡೆಯುವ, ಆನಂದ ಕೊಡುವ ಶಕ್ತಿ ತಾಯಿಯಲ್ಲಿ ಇರುತ್ತದೆ ಎಂಬುದು ಕವಿಯ ಅನುಭವ.

**ತಾಯಿಯೋಗಿನಿ**

'ತಾಯಿಯ ಮೈಯು ಕೆಲಸದಲ್ಲಿ ತೊಡಗಿದಾಗಲೂ, ಜೀವ ಕೂಸಿನಲ್ಲಿರುತ್ತದೆ. 'ಒಡಲೆರಡು ಜೀವವೊಂದು' ಎಂಬ ಈ ಕರುಣಮಧುರಾನುಭವವನ್ನು ತಾಯಿಯಂತೆ ಕಂಡವರಾರು?' ಎಂಬ ಭಾವಸಂದರ್ಭವನ್ನು ಹೊಂದಿದ 'ತಾಯಿ-ಕೂಸು'[33] ಕವನದ ತಾಯಿಗೆ ಸದಾ ಕೂಸಿನದೆ ಚಿಂತೆ. ಹೀಗಾಗಲು 'ತಾಯಿ ಮಗುವಿನ ಸಂಬಂಧದಲ್ಲಿ ಶಾರೀರಿಕ ಏಕತೆಯು ಇರುವುದರಿಂದ ಅವರಿಬ್ಬರಲ್ಲಿ ಅತ್ಯಂತ ನಿಕಟವಾಗಿ ಸ್ಥೂಲ ಹಾಗೂ ಸ್ಪರ್ಶವೇದ್ಯ ಸಂಬಂಧವಿರುತ್ತದೆ'[34] ಎಂದು ಶ್ರೀಮಾತಾ ಅವರು ನುಡಿದಿದ್ದಾರೆ. 'ಹಸುಗೂಸು ಹಸಿವು ಭಯ ಮುದ್ದಾಟ'ವಿಲ್ಲದ ಕನಸಿನಾಚೆಗೆ ಇರುವ ನಿದ್ದೆಯಲ್ಲಿರುವಾಗ ಆ ನಿದ್ದೆಯ ಸ್ಥಿತಿಯನ್ನು ಬೇಂದ್ರೆಯವರು-

'ಉಸಿರದಾರದ ತುದಿಗೆ
ಹಾರು ಹಕ್ಕಿಯ ಬದಿಗೆ
ಜೀವಪಟ ಹೆಡೆಯಾಟವಾಡುತಿಹುದು'

ಎಂದು ಬಣ್ಣಿಸಿದ್ದಾರೆ. ಇದನ್ನು ಶಂಕರ ಮೊಕಾಶಿ ಪುಣೇಕರ ಅವರು - 'ಈ ಕವನದಲ್ಲಿ ಕೂಸಿನ ಶ್ವಾಸೋಚ್ಛ್ವಾಸವು ಹಾವಿನಂತೆ ಹೆಡೆಯಾಡಿಸುತ್ತಿರುವಾ ಗಾಳಿಪಟಕ್ಕೆ ಹೋಲಿಸಲ್ಪಟ್ಟಿರುತ್ತದೆ. ಅದರ ಪೂರ್ಣ ಔಚಿತ್ಯವನ್ನು ತಿಳಿಯದೆಯೇ ಅದು ಎಷ್ಟೋ ವರ್ಷಗಳವರೆಗೆ ನನ್ನ ಮನಸ್ಸನ್ನು ಸೂರೆಗೊಂಡಿರುತ್ತದೆ. ಇಂಥ ಉಪಮಾನಗಳು ಬುದ್ಧಿ ಭಾವನೆಗಳನ್ನು ಮೀರಿ ಅವ್ಯಕ್ತ ಸ್ವರೂಪವನ್ನೇ ಕೆಣಕುವಂಥವು'[35] ಎಂದು ಹೇಳಿದ್ದಾರೆ.

ಮಗುವಿನ ಹಕ್ಕಿಗೊರಲನ್ನು, ಮೃದು ಮನಸ್ಸನ್ನು ಅರಿತು ಅದನ್ನು ಹಕ್ಕಿಯ ಸಂಗಾತಿಯಾಗಿಸಿದ್ದಾರೆ. ಈ ಬಗೆಯ ಆಟ 'ಮೇಲ್ಮುಗಿಲ ಗಾಳಿಯಲಿ | ತನ್ನೊಂದು ಲೀಲೆಯಲಿ | ತೀರಲದು ತಾನೆ ಇಳೆಗಿಳಿಯಲಹುದು'. ಹೀಗೆ ಮಗು ನಿಶ್ಚಿಂತೆಯಾಗಿ ಮಲಗಿದ್ದರೂ ತಾಯಿಗೆ ಆ ಕೂಸಿನದೇ ಚಿಂತೆ.

'ಕೆಲಸದಲಿ ಬಿಡುವಿಲ್ಲ
ಕೂಸಿನಲಿ ಮನವೆಲ್ಲ
ತಾಯಿಯೋಗಿನಿ ಮೈಲಿ ದುಡಿಯುತಿಹಳು'

ಇಲ್ಲಿಯ 'ಮೈಲಿ' ಎಂಬ ಪದ ಶ್ಲೇಷಾರ್ಥದಲ್ಲಿದ್ದು, ತಾಯಿಯೋಗಿನಿಯು ತನ್ನ ಮೈಯನ್ನು ದುಡಿಮೆಯಲ್ಲಿ ತೊಡಗಿಸಿರುವುದು ಒಂದು ಅರ್ಥವಾದರೆ; ಇನ್ನೊಂದು ಅರ್ಥ ದುಡಿಯುವ ಹೆಂಗಸರು ಮಗುವನ್ನು ಬಿಟ್ಟು ಮೈಲಿ ದೂರ ದುಡಿಯುತ್ತಿರುವ ಚಿತ್ರಣವನ್ನು ನೀಡುತ್ತದೆ. ಹೀಗೆ ದುಡಿಯುವ ತಾಯಿ ತನ್ನ ಒಡಲ ಕುಡಿಯನ್ನು ಸದಾ ತನ್ನ ಮನದಲ್ಲಿಟ್ಟು ತೂಗುತ್ತಾಳೆ ಎಂಬುದು ಬೇಂದ್ರೆಯವರು 'ತನ್ನೆದೆಯ

ತೊಟ್ಟಿಲಲಿ| ಕಂದನನು ಇಟ್ಟಲ್ಲಿ | ಕಂಠದಲಿ ಜೋಗುಳವ ನುಡಿಸುತಿಹಳು|' ಎಂದು ತಾಯಿಯ ಹೃದಯದ ಮಿಡಿತವನ್ನು ಅರಿತು ತಾಯಿಯ ಭಾವವನ್ನು ಕಾವ್ಯವಾಗಿಸಿದ್ದಾರೆ. 'ತನ್ನ ಕರ್ತವ್ಯವನ್ನು ಮಾಡುತ್ತಲೆ ದೇವರ ನೆನಪಿನಲ್ಲಿ ಮುಳುಗಿ ಕರ್ಮಯೋಗಿಯಂತೆ ತಾಯಿಯೋಗಿನಿ ತೋರಿರುವುದು ಸಹಜ'[36] ಎಂದು ರಂ. ಶ್ರೀ. ಮುಗಳಿಯವರು ನುಡಿದಿದ್ದಾರೆ. ತಾಯಿ ಸದಾ ಮಗುವನ್ನು ತನ್ನೆದೆಯ ತೊಟ್ಟಿಲಲ್ಲಿ ನೆನೆಯುತ್ತ ಜೋಗುಳ ನುಡಿಯುವಾಗ ಅದು ಕಂದನಿಗೆ ತಲುಪುತ್ತದೆ ಅದರ 'ಮುಖ ಮುಖ ಮಂಡಲದಿ ಭಾವ ಭಾವ'. ಇದು ಬೇಂದ್ರೆಯವರ ತಾಯಿ ಹೃದಯದ ಹೃದ್ಯಗೀತ.

**ಅಂಬಿಕಾತನಯದತ್ತ**

ಬೇಂದ್ರೆಯವರ ಚಿಂತನೆಯು ಅರವಿಂದ ಮತ್ತು ಶ್ರೀಮಾತೆಯವರಿಂದ ಪುಷ್ಟಿಗೊಂಡಿರುವುದಾಗಿದೆ. ಶ್ರೀಮಾತೆಯವರು ತಾಯ್ತನ ಮತ್ತು ಮಕ್ಕಳನ್ನು ಕುರಿತು ಈ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. "ನಿಜವಾದ ತಾಯ್ತನವು ಪ್ರಜ್ಞಾನಯುತವಾದ ಜೀವವನ್ನು ಹುಟ್ಟಿಸುವುದರಿಂದ, ಆತ್ಮದ ಬೆಳವಣಿಗೆಯನ್ನು ಸಂಕಲ್ಪ ಬಲದಿಂದ ರೂಪಿಸುವುದರಿಂದ ಹೊಸ ಶರೀರವನ್ನು ಉಪಯೋಗ ಮಾಡಿಕೊಳ್ಳುವುದರಿಂದ ಪ್ರಾರಂಭವಾಗುತ್ತದೆ. ಸ್ತ್ರೀಯರ ಪಾತ್ರವಿರುವುದು ಆಧ್ಯಾತ್ಮಿಕತೆಯಲ್ಲಿ."[37]

'ಸಂಕಲ್ಪಶಕ್ತಿಯಿಂದ ಮಕ್ಕಳನ್ನು ಪಡೆಯಬಹುದು. ಆತ್ಮಸಹಿತವಾದ ಅವತಾರಿಯಾದ ಆಕಾರ ಪಡೆದ ಪುತ್ರರನ್ನು ಪಡೆಯಬಹುದು. ಆದರೆ ಅವರ ಸಂಕಲ್ಪಶಕ್ತಿಯು ಅಂಥ ಅಭೀಪ್ಸೆಯನ್ನು ಪ್ರಾರ್ಥನಾಶಕ್ತಿಯನ್ನು ಪಡೆದಿರಬೇಕಾಗುತ್ತದೆ.'[38]

'ಜೀವ ಶರೀರವನ್ನು ಹೇಗೆ ಪ್ರವೇಶಿಸುತ್ತದೆ' ಎಂಬ ಪ್ರಶ್ನೆಗೆ ಉತ್ತರವಾಗಿ, '..... ಬೆಳವಣಿಗೆಯಾಗುತ್ತಿರುವ ಅಥವಾ ಸಂಪೂರ್ಣವಾಗಿ ಬೆಳೆದ ಜೀವಿಯು ಪುನರ್ಜನ್ಮವಾಗುವಾಗ ಪ್ರಾಣಿ ಜೀವನದ ಜನ್ಮದಿಂದುಂಟಾದ ಪರಿಸ್ಥಿತಿಯೊಡನೆ, ತನ್ನ ನಿಜವಾದ ಪಥವನ್ನು ಕಂಡುಹಿಡಿಯಲು ಹೋರಾಡಬೇಕಾಗುತ್ತದೆ. ತನ್ನ ಸಂಪೂರ್ಣ ಆತ್ಮಸಾಕ್ಷಾತ್ಕಾರ ಮಾಡಬೇಕಾಗುತ್ತದೆ'[39] ಎಂದು ಶ್ರೀಮಾತಾ ಅವರು ತಿಳಿಸಿರುವ ಹಿನ್ನೆಲೆಯಲ್ಲಿ 'ಅಂಬಿಕಾತನಯದತ್ತ' ಕವನವನ್ನು ಅಧ್ಯಯನ ಮಾಡೋಣ.

ಬೇಂದ್ರೆಯವರ ಕಾವ್ಯದ ಕೇಂದ್ರ ಪ್ರತಿಮೆ ತಾಯಿಯಾದುದರಿಂದ ಅವರು ತಮ್ಮ ಕಾವ್ಯ ನಾಮವನ್ನು 'ಅಂಬಿಕಾತನಯದತ್ತ'ವೆಂದಿಟ್ಟುಕೊಂಡರು. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಓರ್ವ ಶ್ರೇಷ್ಠ ಕವಿಯಾಗಿ ತನ್ನ ತಾಯಿಯ ಹೆಸರಿನ ಕಾವ್ಯ ನಾಮವನ್ನಿಟ್ಟುಕೊಂಡ ಮೊದಲಿಗರು ದ.ರಾ. ಬೇಂದ್ರೆ. 'ಅಂಬಿಕೆ' ಅವರಿಗೆ ತನ್ನ ತಾಯಿಯಂತೆ ವಿಶ್ವ ಮಾತೆಯೂ ಆದುದರಿಂದ ಆ ಶಕ್ತಿ ತನ್ನನ್ನೂ ಈ ಜಗತ್ತನ್ನೂ ನಡೆಸುತ್ತಿದೆ ಎಂದು ಭಾವಿಸಿದರು. ಅವರು ನಮ್ಮ ಭಾರತೀಯ ಕಾವ್ಯ ಪರಂಪರೆಯ ಭಕ್ತ ಕವಿಗಳಾದ ಶರಣರು, ದಾಸರು ತಮ್ಮ ಕಾವ್ಯದಲ್ಲಿ 'ಅಂಕಿತನಾಮ'ವನ್ನು ಬಳಸಿದಂತೆ 'ಅಂಬಿಕಾತನಯ'ವನ್ನು ಅಂಕಿತವಾಗಿಯೂ ಬಳಸಿದರು. ಅವರು 'ಅಂಕಿತ'ವಾಗಿ ಸೂಚಿಸಿರುವ ಕಾವ್ಯದಲ್ಲಿ ಅನುಭಾವದ ಸ್ಪರ್ಶವಿದೆ.

'ಅಂಬಿಕಾತನಯನ ಜಂಬದ ಪಾಡಳಿದು
ನಂಬಿಕೆಯ ಹಾಡಾಗಿ ಬಂತಿಲ್ಲಿಗೆ'

ದೃಢವಾದ ನಂಬಿಕೆ, ಶ್ರದ್ಧೆ, ಸಮರ್ಪಣ ಮತ್ತು ನಿಷ್ಠೆ ಅರವಿಂದರ ತತ್ವಜ್ಞಾನದ ಪ್ರಮುಖ ಭಾವಗಳಾಗಿವೆ. ಭಗವಂತನಿಗೆ ಸಂಪೂರ್ಣ ಸಮರ್ಪಣೆ ಎಂದಾಗ ಬರಿ ದೇಹ, ಪ್ರಾಣ, ಮನಸ್ಸು ಹೃದಯವಲ್ಲ; ಅವುಗಳನ್ನು ಪೂರ್ಣವಾಗಿ ಅರ್ಪಿಸುವುದು. ಅದು ಬೇಂದ್ರೆ ಕಾವ್ಯದ ತತ್ವ. ಅವರು 'ಬಾಲ್ಯಕಾಂಡ'[40] ದಲ್ಲಿ -

'ಅಂಬಿಕೆ ಎಂಬವಳ ಹೃದಯಾಂಬರದಲ್ಲಿ
ತತ್ತಿಯನಿಟ್ಟಿತ್ತು ನವ ಮೇಘವು
ಆ ತಾಯಿ ಮಾತಾಯಿ ಈ ಬಾಯಿ ತುತ್ತಲ್ಲ
ಅವಳನ್ನು ಸ್ತುತಿಸಲು ಎದೆ ಸಾಲದು
ಮೌನದಲ್ಲಿರುವದು, ಧರ್ಮಕೆ ಹೊರತೆಂದು
ಎದೆ ಮಾತು ಸಾಲಾಗಿ ಉಸಿರುವೆನು'

ಎಂದು ತಾಯಿ ಅಂಬಿಕೆಯನ್ನು ಕುರಿತು ತಾನು ನುಡಿಯಲೇಬೇಕಾದ ಧರ್ಮವನ್ನು ವ್ಯಕ್ತಪಡಿಸಿದ್ದಾರೆ. ಅವರು 'ಅಂಬಿಕಾತನಯದತ್ತ'[41] ಕವನದ ಭಾವಸಂದರ್ಭದಲ್ಲಿ 'ನನ್ನ ಜೀವ ಯಾವ ಪಥವನ್ನು ಹಿಡಿದಿದೆ, ಏಕೆ ಹಿಡಿದಿದೆ ಎಂಬುದರ ಧ್ಯಾನದಿಂದ ಬಂದುದು' ಎಂದು ಹೇಳಿದ್ದಾರೆ. ಆ ಧ್ಯಾನದಲ್ಲಿ ಫಲಿತವಾದ ಅಮೂರ್ತ ಕಲ್ಪನೆಯನ್ನು ಧ್ಯಾನದ ಪ್ರಾಣವನ್ನು ಹಿಡಿದು ನುಡಿಗಳಲ್ಲಿ ಮೂರ್ತಗೊಳಿಸಿದ್ದಾರೆ.

'ಯಾವ ಯೋಗನಿದ್ರೆಯಲ್ಲಿ ಏನು ಕನಸ ಕಂಡೆನೋ!
ಯಾರ ಹಾಲನುಂಡೆನೊ
ಈ ವಿಶ್ವಜಾಲದಲ್ಲಿ ಬಂದೆ ಅದಕೆ ಮಿಡುಕುತಾ
ಅದರ ಧಾರೆ ಹುಡುಕುತಾ'

ಎಂಬುದನ್ನು 'ತಾಯಿಯ ಕೃಪೆಯಿಂದ ತನ್ನ ಸೃಷ್ಟಿ, ತನ್ನ ಕಾವ್ಯಸೃಷ್ಟಿ ಎಂಬುದನ್ನು ಒಂದು ಹೊಸ ಊಹೆಯ ರೂಪದಲ್ಲಿ ಕವಿ ಹೀಗೆ ಬಣ್ಣಿಸಿದ್ದಾರೆ' ಎಂದು ರಂ. ಶ್ರೀ. ಮುಗಳಿಯವರು ಹೇಳಿದ್ದಾರೆ. ಆತ್ಮ ಪರಮಾತ್ಮನ ಯೋಗ-ಸಂಯೋಗ ಎಲ್ಲ ಕೇಳಿರುವುದು. ಅದು ಕಂಡ ಬಗೆ ಕಣ್ಣಿಗೆ ಕಟ್ಟಿಲ್ಲ. ಇಂದ್ರಿಯಾನುಭವವಾಗಿಲ್ಲ. ಆದರೆ ಇಲ್ಲಿ ಒಂದು ಆತ್ಮ, ತನ್ನ ಯೋಗನಿದ್ರೆಯಲ್ಲಿ ಕಂಡ ಕನಸಿಗಾಗಿ ಈ ವಿಶ್ವಜಾಲದಲ್ಲಿ ಮಿಡುಕುತ್ತಾ ಪರಮಾತ್ಮ ಸ್ವರೂಪಿ ಧಾರೆಗಾಗಿ ಹುಡುಕುತ್ತಾ ಬಂದಿದೆ. ಇಲ್ಲಿ ಜೀವಶಾಸ್ತ್ರಕ್ಕೆ ಸಂಬಂಧಿಸಿ ಮಗು ಜೀವ ಪಡೆಯುವುದನ್ನು ಅನುಭಾವ ಸಂಬಂಧಿಯಾಗಿ ಪರಿವರ್ತಿಸಿ ಕವಿಯು ತನ್ನ ಮತ್ತು ತನ್ನ ತಾಯಿಯ ಸಂಬಂಧವನ್ನು ಚಿತ್ರಿಸಿದ್ದಾರೆ. ಹೀಗೆ ಬಂದ ಆತ್ಮವನ್ನು ಪರಮಾತ್ಮಸ್ವರೂಪಿ ತಾಯಿಹೃದಯ ತನ್ನ ಪ್ರೇಮ ಶಿಖರವನ್ನೇತ್ತಿ ಅದನ್ನು ಮುತ್ತಿಕೊಂಡಿತು, ತಬ್ಬಿಕೊಂಡಿತು ಎಂದು ಹೇಳಿದ್ದಾರೆ. ಈ ಆತ್ಮ-ಮಾತೃ ಆತ್ಮವನ್ನು ಸೇರುವ ಬಗೆ ಅತಿ ಸಹಜ ಆಕರ್ಷಣೆ ಎಂಬಂತೆ 'ಲೋಹಚುಂಬಕವನ್ನು ಕಂಡ ಲೋಹದಂತೆ ನುಗ್ಗಿದೆ' ಎಂದು ಹೇಳಿದ್ದಾರೆ. ಆಗ ಆ ಆತ್ಮ 'ಮಮತೆಯಿಂದ' ಹಿಗ್ಗಿದೆ. ಹೀಗೆ ತಾಯಿಯ ಒಡಲನ್ನು ತಾನು ಯೋಗಿಯಾಗಿ ಸೇರಿ ಆ ಫಲದಿಂದ ಆನಂದ ಪಡೆಯುತ್ತ ವಿಕಾಸವನ್ನು ಹೊಂದಿದೆ ಎಂದು ಹೇಳಿದ್ದಾರೆ.

ಆತ್ಮವು ಬ್ರಹ್ಮಾಂಡದಾಳದಲ್ಲಿ ಆಳುವ ನಕ್ಷತ್ರ. ಆ ಚುಕ್ಕೆ ಭಿಕ್ಷೆ ಬೇಡುವಂತೆ ಅದರ ಕಿರಣ ಉರುಳಿ ಭೂಮಿಯತ್ತ ಹೊರಳಿದಾಗ ಈ ನೆಲದಲ್ಲಿ ನೀರಿನೊಂದು ನೀರಜಾತ ಕಮಲದ ಹೂವಿನಂತಹ ಅಂಬಿಕೆಯ ಒಡಲು ಆ ಬೆಳಕಿಗಾಗಿ ಕೆರಳಿದಾಗ, ಆ ಕಿರಣ ಅಲ್ಲಿ ಅರಳಿತು. ಹೂವ ಹೊಕ್ಕ ಕಿರಣ ಹೂ ನೀರನೆಕ್ಕಿ ಆ ಅಂಬಿಕೆಯ ರುಚಿಗೆ ಮೆಚ್ಚಿ ನೆಲೆಯಾಗಲು ಅದು ಕೂಸಾಗಿ ಹೊಮ್ಮಿತು. ಹೀಗಾಗಲು ಕೂಸುತನದಲ್ಲಿ ಅಂಬಿಕೆ ಮುದ್ದುಗೊಂಬೆಯನ್ನು ಚುಂಬಿಸಿದ್ದು, ಅದೇ ಅವಳ 'ಮನದ ಮೂಸೆಯಲ್ಲಿ ಭಾವವಾಗಿ ಕರಗಿ' ಜೀವವಾಗಿ ಮಿರುಗಿ'ದೆ - ತಾಯಿ ಚಿಕ್ಕಂದಿನಿಂದ ಯೋಗಿಣಿಯಂತೆ ಹಂಬಲಿಸಿ ಪಡೆದ

ಫಲ ತಾನು - ಎಂಬುದಾಗಿ ಬೇಂದ್ರೆಯವರು ಹೇಳಿದ್ದಾರೆ. ಈ ರೀತಿ ತಾಯಿಯು ಮಗುವನ್ನು ಪಡೆಯಲೇಬೇಕೆಂದು ಹಂಬಲಿಸಿ ಪಡೆಯುತ್ತಾಳೆ ಎಂಬ ಭಾವವು 'ಹಂಗು'[42] ಕವನದಲ್ಲಿದ್ದು, ಅಲ್ಲಿ ತಾಯಿಯು -

'ನನ್ನ ನನಸಿನ ನನೆಯೇ!
ನನ್ನ ಕನಸಿನ ಕೆನೆಯೇ!
ಹಣ್ಣಾಗುವೆಯಾ - ಬಳಗದ ಬಲದಲ್ಲಿ?
ಬೆಣ್ಣೆಯಾಗುವೆಯಾ - ಜಗದ ಹುಳಿತಿಳಿಯಲ್ಲಿ'?

ಎಂದು ಪ್ರಶ್ನಿಸಿರುವುದು ಕಂಡುಬರುತ್ತದೆ. ಹೀಗೆ ಬೇಂದ್ರೆಯವರು ಆಧ್ಯಾತ್ಮಿಕ ಅನುಭಾವಕ್ಕೂ ಭೌತಶಾಸ್ತ್ರಾನ್ವಯದ ಸೃಷ್ಟಿಗೂ ಸಂಬಂಧವಿದೆಯೆಂದು :

'ನಿನ್ನ ರಕ್ತ ಮಾಂಸದಲ್ಲಿ ಮೈಯ್ಯ ಮನೆಯ ಕಟ್ಟಲು|
ಅದನು ನಾನು ಮುಟ್ಟಲು
ನಿನ್ನ ಉಸಿರಲುಸಿರಾಡಿಸಿ ಬಸುರಿನಲ್ಲಿ ಬೆಳೆದೆನು
ಒಂದು ರೂಪ ತಳೆದೆನು'

ಎಂದು ನುಡಿದಿದ್ದಾರೆ. ಹೀಗೆ ಪ್ರಜ್ವಲಿತ ನಕ್ಷತ್ರ ಜ್ಯೋತಿಯ ಕಿರಣವಾದ ಆತ್ಮ ಅಂಬಿಕೆಯ ಉದರದಲ್ಲಿ ಪಿಂಡಗೊಂಡು ನುಡಿದಿದೆ; 'ಮಗುವು ಆಗಿ ತೊಡೆಗೆ ಬಂದೆ ತೊರೆದು ಬಂತು ನಿನ್ನೆದೆ | ಅಂತು ಇಂತು ಎನ್ನದೆ |'. ಆ ತಾಯಿಯು ಎದೆಯ ಹಾಲಿನೊಂದಿಗೆ ಪ್ರೇಮರಸವನ್ನು ಕುಡಿಸಿ ಬೆಳೆಸಲು ಬೇಂದ್ರೆ ಆ ತಾಯಿ ಜೀವವನ್ನೆನಂಬಿ ಬೆಳೆಯಿತು.

**ತಾಯಿಗಿಂತ ತಾಯಿ ಬಾಯಿ ಹೆಚ್ಚು**

ತಾಯಿಯು ಎದೆಹಾಲಿನ ಜೊತೆ ತನ್ನ ಮಾತಿನಿಂದ ಅದರ ತಿಳಿವನ್ನು ಹೆಚ್ಚಿಸುತ್ತಾಳೆ. ಅದಕ್ಕೆ ದ್ವಿಜತ್ವವನ್ನು ನೀಡುತ್ತಾಳೆ ಎಂದು ಹಿಂದಿನ 'ತಾಯಿ' ಕವನದಿಂದ ತಿಳಿದಿದ್ದೇವೆ. ಅದರಂತೆ ತಾಯಿ ಅಂಬಿಕೆಯನ್ನು 'ಮುದ್ದಿನೊಡನೆ ಮುದ್ದು ಮಾತು ಕಲಿಸಿ ಉಲಿಸಿ ನಲಿಸಿದೆ | ನಿನ್ನ ತಿಳಿವ ಸಲಸಿದೆ |' ಎಂದಿದ್ದಾರೆ.

ಇದೆಲ್ಲವನ್ನೂ ಮಗು ದತ್ತಾತ್ರೇಯ ಪಡೆದಿದ್ದು ತಾಯಿಯು ತನ್ನನ್ನು ಹೆತ್ತದ್ದರಿಂದ ಮತ್ತು ತಿಳಿವನ್ನು ನೀಡಿದ್ದರಿಂದ. ಅದಕ್ಕಾಗಿ ಕವಿ ಬೇಂದ್ರೆ ಶ್ಲೇಷಾರ್ಥದಲ್ಲಿ 'ಈಯಲು' ಎಂಬ ಪದವನ್ನು ಬಳಸುತ್ತ 'ನಿನ್ನ ತನುವಿನಿಂದ ಬಂದ ಮುದ್ದು ತನಯನೀತನು | ನೀನು ಈಯಲಿತ್ತನು' ಎಂದು ನುಡಿದಿದ್ದಾರೆ. ಹೀಗಾದಾಗ ಕವಿ ಆತ್ಮ ತಾನು ಸ್ವಂತವಾಗಿ ಏನನ್ನೂ ಈ ಜಗತ್ತಿಗೆ ಕೊಡಲಾಗಲಿಲ್ಲ. ತನ್ನದು ಏನೂ ಇಲ್ಲ ಎಲ್ಲವೂ ಪರಮಾತ್ಮನದು. ಅದು ಇತ್ತುದನ್ನು ಪಡೆದು - ಇದು ತನ್ನದು - ಎಂದು ನೀಡುವುದಷ್ಟೆ ಎಂಬ 'ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದವರಂತೆ ಕಾಣಿರೊ' ಎಂಬ ದಾಸವರೇಣ್ಯ ಪುರಂದರದಾಸರ ವಾಣಿಯಂತೆ 'ತಾಯೆ ಮಾಯೆ, ಅಂಬಿಕೆಯೇ! ನಿನ್ನತನಯದತ್ತನು | ನೀನು ಇತ್ತುದಿತ್ತನು' ಎಂದು ಹೇಳಿದ್ದಾರೆ.

ಹೀಗೆ ತಾಯಿಯಿಂದ ಕವಿಯಾಗಿ ರೂಪುಗೊಂಡ ಬೇಂದ್ರೆಯವರು - ತಾಯಿಯ ಜೀವನದ ಹೋರಾಟ, ಬದುಕಿಗಾಗಿ ಅವಳು ಪಟ್ಟ ಪಾಡು, ಅವಳು ತನ್ನ ಕರುಳಕುಡಿಗಾಗಿ ಜೀವ ಸವೆಸಿದ ರೀತಿಯೇ - ತನ್ನನ್ನು ಕವಿಯಾಗಿ ಮಾಡಿದೆ ಎಂದು ಹೇಳಿಕೊಂಡಿದ್ದಾರೆ. ಬೇಂದ್ರೆಯವರ ಬದುಕಿನ ಘೋರ ಕಾವು

ಅವರ ಹೃದಯವನ್ನು ಮೃದು ಮಾಡಿದೆ; ಪ್ರೇಮದ ಝುರಿ ಹರಿಸಿದೆ. ಹೀಗಾಗಲು ಸಹನೆ, ಮೌನ, ತಿಳಿವಳಿಕೆಯಿಂದ ಕೂಡಿದ ತಾಯಿ ಯೋಗಿನಿಯ ಜೀವನವೇ ಕಾರಣ. ಆದುದರಿಂದ ಕವಿ ಹೇಳುತ್ತಾರೆ :

'ನಿನ್ನ ಜನುಮದೊಂದು ಪಾಡು, ಹಾಡು ಆಗಿ ಮೂಡಿತು |
ನನ್ನ ಕೊರಳು ಹಾಡಿತು'

ಹೀಗಾದಾಗ ಜನ ಆ ಕೊರಳಿನ ದನಿಗೆ, ನಾದಕ್ಕೆ ಹೊಸ ಅರಿವಿಗೆ ಕಿವಿತೆರೆದು ಕೊರಲನ್ನು ಆರಾಧಿಸತೊಡಗಿದಾಗ ಕವಿಗೆ ತಾನು ಮೂರ್ತಿಯಾದೆನಲ್ಲ, ನನ್ನನ್ನು ತುಂಬಿಸಿಂತ ಗರ್ಭಿಸಿಕೊಂಡ ಗುಡಿಗೆ - ಆ ತಾಯಿ ಜನುಮಕ್ಕೆ ಜನ ನಮನ ಸಲ್ಲಿಸಲಿಲ್ಲ. ಏಕೆ ಇದೇನು ಸೋಜಿಗ ಎಂಬ ಅಳುಕು ಕಾಡಿದೆ. ಆ ಅಳುಕನ್ನು ಪ್ರತಿಭಾವಂತ ಕವಿ ನವೋನವ ರೂಪಕದಿಂದ ತಗ್ಗಿಸಿಕೊಂಡು ನುಡಿಯುತ್ತಾನೆ; ಓ ತಾಯಿ ಮೂರ್ತಿಗಾಗಿ ಮುಗಿದ ಕೈ ಗುಡಿಗೂ ಸಲ್ಲುತ್ತದೆ. ನಾನು 'ದತ್ತಮೂರ್ತಿ' ನೀನು ನನ್ನನ್ನು ಗರ್ಭಿಸಿಕೊಂಡ 'ಗುಡಿ ಅಂಬಿಕೆ'. ನಾನು ಜನಕ್ಕೆ ಅಂಬಿಕಾತನಯನಾಗುತ್ತೇನೆ. ನೋಡು : 'ಮೂರ್ತಿಗಾಗಿ ಮುಗಿದ ಕೈಯ್ಯು ಗುಡಿಗೆ ಸಲ್ಲುವಂತೆಯೇ | ಎರಡು ಒಂದೆಂಬಂತೆಯೇ' ನಾವಿದ್ದೇವೆ ಎಂದು ಹೇಳುತ್ತಾನೆ.

ನಾನು ಕಟ್ಟಿ ಹಾಡಿದ ಕಾವ್ಯಕ್ಕೆ ಜನ ನನ್ನನ್ನು ಕವಿ ಎಂದು ಕರೆದರೂ, ನಿನ್ನ ಹೆಸರು ಮರೆಗೆ ಉಳಿಯಿತು. 'ನಿನ್ನ ಲಲ್ಲೆಯಲ್ಲಿ ಹುಟ್ಟಿ ಬೆಳೆದು ಬಂದ ಸೊಲ್ಲಿದು | ಬೇರೆ ಏನು ಬಲ್ಲದು!' ಎಂದು ತನ್ನನ್ನು ಪ್ರಶ್ನಿಸಿಕೊಂಡಿದ್ದಾರೆ. ತಾನು ತಾಯಿಯ ಒಡಲಕುಡಿ, ಅವಳ ಉದರದ ಹೂವು ಮತ್ತು ಅವಳಿಂದ ಬೇರೆಯಾಗದ ಉದುರಿಹೋಗದ ಹೂವು ಎಂದು ತಿಳಿದು 'ಉದರ' ಎಂಬ ಪದವನ್ನು ಧ್ವನ್ಯಾರ್ಥದಲ್ಲಿ ಬಳಸುತ್ತ 'ನಿನ್ನ ಉದರದೊಂದ ಹೂವ ಸರಸ್ವತಿಗೆ ಸಲಿಸಿದೆ | ಚುಕ್ಕೆಯಾಗಿ ನಿಲಿಸಿದೆ' ಎಂದು ಹೇಳಿದ್ದಾರೆ. ಈ ಚುಕ್ಕೆ ಜನಮನದಲ್ಲಿರುವ ಧ್ರುವ ನಕ್ಷತ್ರದಂತಹ ಚುಕ್ಕೆ, ಕನ್ನಡ ಸಾಹಿತ್ಯಲೋಕದ ಧ್ರುವತಾರೆ. ಹೀಗೆಂದುಕೊಂಡಾಗ ಅತಿಯಾದ ಸಂತಸದಲ್ಲಿ ಸಾವು ಕಾಡುತ್ತದೆ. ಆ ಸಾವು ಬೇಂದ್ರೆಯವರಲ್ಲಿ ಮತ್ತೆ ವಾಚ್ಯಾರ್ಥದ ಹರಹು ಪಡೆಯುತ್ತಾ ಸಾವು ಈ ದೇಹದ ಸಾವಿರಬಹುದು, ಆತ್ಮ ಪರಮಾತ್ಮಕ್ಕೆ ಸಾವಿಲ್ಲ ಅದು ಶಾಶ್ವತ ಎಂದಾಗುತ್ತದೆ. ದತ್ತ ಮತ್ತು ಅಂಬಿಕೆ ಸರಸ್ವತಿಯ ಮನೆ ಹೊಕ್ಕು 'ಅಂಬಿಕಾತನಯದತ್ತ'ರಾದಾಗ ಸಾವಿರಾರು ಮನೆಯಲ್ಲಿ ಅವರ ಧ್ಯಾನ ಚಿಂತನೆ ನಡೆಯುತ್ತದೆ. ಹಾಗೆಯೇ ವಾಗ್ದೇವಿಯ ಸಾವಿರದ ಸಾಹಿತ್ಯ ಪ್ರಪಂಚದಲ್ಲಿ ಸದಾ ಉಳಿಯುತ್ತದೆ. ಇದು ಪರಮಾತ್ಮಳಾದ ತಾಯಿ ಹೂಡಿದ ಆಟ ಎಂದು ತಿಳಿದ ಬೇಂದ್ರೆ ನುಡಿಯುತ್ತಾರೆ. 'ಸಾವಿರದ ಮನೆಗಳಲ್ಲಿ ನನಗೆ ಮನೆಯ ಮಾಡಿದೆ| ತಾಯಿ ಆಟ ಹೂಡಿದೆ.'

ಇದು ಇಷ್ಟು ಸ್ಪಷ್ಟವಾದಾಗ ಈ ಜಗತ್ತು ಇದನ್ನು ತಿಳಿಯದಿರುವುದು ಕವಿಗೆ ಸೋಜಿಗವಾಗಿ ಕಂಡಿದೆ. ಕವಿ - ಪರಮಾತ್ಮ ತಾಯಿಯನ್ನುದ್ದೇಶಿಸಿ ನುಡಿಯುತ್ತಾರೆ : 'ನಿನ್ನ ಹೆಸರಿನಲ್ಲಿ ನಾನು ಬರೆವುದೇನು ಸೋಜಿಗ | ತಿಳಿಯಲಾರದೀಜಗ.' ಈ ಕವನ ಬರೆದಾಗ ಕನ್ನಡ ಜನಕ್ಕೆ ಸೋಜಿಗದಂತಿತ್ತು. ಅದನ್ನು ಬೇಂದ್ರೆಯವರು 'ಮಾತೃನಾಮಖ್ಯಾತನಾಗುವದು ಸಂಪ್ರದಾಯವಂತರಿಗೆ ಸರಿತೋರಲಿಲ್ಲ. ಸಾಹಿತ್ಯಕ್ಕೆ ಸರಸ್ವತಿ, ವಾಣಿಗೆ ಮೂಲ ಭಾರತಿ, ಐತರೇಯ ಮಹೀದಾಸನಿಗೆ ತಾಯಿ ಗುರು ಸ್ಥಾನೀಯ, ಶ್ರೀರಾಮ ಕೌಸಲ್ಯಾನಂದನ, ಅರ್ಜುನ, ಕೌಂತೇಯ. ಆದರೂ ಕೆಲವು ಮೂಗುಗಳಿಗೆ ಈ ವಾಸನೆ ಸರಿಹೋಗಲಿಲ್ಲ.'[43]

ಆದರೆ ಕಾಲ ಅದನ್ನು ಈ ಜನ ಅರ್ಥ ಮಾಡಿಕೊಳ್ಳುವಂತೆ ಮಾಡಿದೆ. ಸೋಜಿಗ ಅಷ್ಟೆ ಆಗಿ ಉಳಿಯದೆ ಅದು ಸತ್ಯದರ್ಶನ ಎಂಬುದು ಹೊಳೆದಿದೆ.

**ನಲ್‌ತಾಯಿ**

ಅಂಬಿಕಾತನಯದತ್ತರ ತಾಯಿ ಅಂಬಿಕೆ ತೀರಿಕೊಂಡ ಮೇಲೆ ಏಕಾಂಗಿಯಾಗಿ ಉಳಿದ ದತ್ತಾತ್ರೇಯನ ಅನುತಾಪ 'ನಲ್‌ತಾಯಿ' ಎಂಬ ಕಾವ್ಯವಾಗಿದೆ. 'ನಲ್' ಎಂಬ ಪದದ ವಿವರವನ್ನು ನಾವು ಈಗಾಗಲೇ ತಿಳಿದಿದ್ದೇವೆ. ಅದರ ವಿಸ್ತೃತ ರೂಪವೆ ತಾಯಿ. ಅದೇ ಅರಿವು. ಆ ನಲ್ ಮತ್ತು ಅರಿವನ್ನು ತಿಳಿಯುವಷ್ಟರಲ್ಲಿ ಅದು ನಮ್ಮಿಂದ ದೂರವಾಗಿ ಹೋಗಿರುತ್ತದೆ. ಕವಿ ಅರಿವು ಎಂಬ ಅಮೂರ್ತ ಭಾವವನ್ನು ಮೂರ್ತಚೇತನ ತಾಯಿಯಲ್ಲಿ ಆವಿರ್ಭವಿಸಿಕೊಂಡು ಅದನ್ನು ಅನುಭವವಾಗಿಸಿಕೊಳ್ಳುವಲ್ಲಿ ಅದು ತನ್ನಿಂದ ದೂರವಾದ ಭಾವವೂ ಇಲ್ಲಿದೆ.

ತಾಯಿಯಾಗಿ ತಾನು ತಿಳಿಯಬೇಕು ಎನ್ನುವಷ್ಟರಲ್ಲಿ ಅವಳು ತನ್ನಿಂದ ದೂರವಾದಾಗ:

> 'ತಿಳಿವಳಿಕೆಯಂಥ ತಿಳಿಗೇಡಿ ಎಲ್ಲಿಯು ಇಲ್ಲ |
> ಕಳಕೊಂಡ ಹೊರತು ಬೆಲೆಯರಿಯದದು ಫಲವಿಲ್ಲ ||'

ಎಂದು ತಾಯಿಯಾಗಿ ಅಗಲಿಕೆ ನುಡಿಯಾಗಿ ಮರುಹುಟ್ಟು ಪಡೆದಿದೆ. ತಾಯಿಯನ್ನು ತಿಳಿಯಬೇಕು, ತಾಯಿಯ ಋಣ ತೀರಿಸಬೇಕು ಎನ್ನುವಷ್ಟರಲ್ಲಿ ಅವಳು ಇನ್ನು ಇಲ್ಲವಾದ ನೋವನ್ನು 'ಇದ್ದಾಗ ತಿಳಿಯಲಿಲ್ಲೆನ್ನ ತಿಳಿವು | ಮುದ್ದಾಡಿ ಕೊಳುವಷ್ಟರಲ್ಲಿ ಬಂದಿತಳಿವು|| ಯಾವ ಜನ್ಮದಲಿನ್ನು ರಿಣವ ತೀರಿಸಲಿ | ಯಾವ ಸೇವೆಯ ಮಾಡಿ ಹೆಸರ ಬೀರಿಸಲಿ|' ಎಂದು ಹೇಳುತ್ತ ತಾಯಿಯನ್ನು ತಿಳಿಯಲು ಆಗುವುದಿಲ್ಲ ಮತ್ತು ಅವಳ ಋಣವನ್ನು ತೀರಿಸಲು ಸಾಧ್ಯವಿಲ್ಲ ಎಂದು ಹೇಳಿದ್ದಾರೆ. ತಾಯಿಯ ಸಾವು ಅವರಿಗೆ ಆಕಸ್ಮಿಕವಾಗಿದ್ದು ಆ ನೋವನ್ನು -

> 'ಕನಸಿಗು ಹೊಳೆಯದ ಬರಸಿಡಿಲೆರಗಿತು
> ತಾಯಿ-ಗಿಡವು ಮಾಯವಾಯಿತಲೇ'

ಎಂದು 'ಸಖೀಗೀತ'[44] ದಲ್ಲಿ ನುಡಿದಿದ್ದಾರೆ. ತಾಯಿಯ ವಾತ್ಸಲ್ಯ ಅಪಾರವಾದುದು. ಆದರೆ ಮಕ್ಕಳು ಅವಳ ಬಗ್ಗೆ ತೋರಿಸುವ ಮಮತೆ ಅದೂ ಅವಳು ಸತ್ತನಂತರ ತೀವ್ರವಾಗುವುದನ್ನು ಅದು ಎಷ್ಟು ವ್ಯರ್ಥವೆಂದು ಒಂದು ಉಪಮೆಯ ಮೂಲಕ ಸ್ಪಷ್ಟಪಡಿಸಿದ್ದಾರೆ.

> 'ವ್ರಣ ನೋಡಿ ಬಂದದರ ಮೇಲ್ಕೂತ ನೊಣದಂತೆ
> ರಿಣಗೇಡಿ ಜೀವವಿನ್ನೇಕೆ ಮಮತೆಯ ಚಿಂತೆ'

ಎಂದು ಕ್ಷುಲ್ಲಕ ನೊಣದ ಉಪಮಾನದಿಂದ ರಿಣಗೇಡಿ ಮಕ್ಕಳ ಹುಸಿ ಮಮತೆಯನ್ನು ಛೇಡಿಸುತ್ತ ಆತ್ಮಶೋಧಕರಾಗಿ ವಸ್ತುನಿಷ್ಠ ಚಿಂತನೆಯನ್ನು ಭಾವನಿರ್ಭರರಾಗಿ ಸಾಧಿಸಿದ್ದಾರೆ. ತಾಯಿ ಸತ್ತನಂತರ ಎಷ್ಟೇ ಅತ್ತರೂ ಅವಳನ್ನು ಮತ್ತೆ ಪಡೆಯಲು ಸಾಧ್ಯವಿಲ್ಲ. ಆ ವಾತ್ಸಲ್ಯ ಮತ್ತೆ ಲಭಿಸದು. ತಾಯಿಯನ್ನು ಅವಳ ವಾತ್ಸಲ್ಯವನ್ನು ನೂರು ಜನ್ಮವೆತ್ತಿದರೂ ಪಡೆಯಲು ಸಾಧ್ಯವಿಲ್ಲ. ಆದಕಾರಣ ಅತ್ತು ಪ್ರಯೋಜನವಿಲ್ಲ ಎಂದಿದ್ದಾರೆ. 'ತಾಯಿಗಿಂತ ತಾಯಿ ಬಾಯಿ ಹೆಚ್ಚು' ಎಂದು ಈಗಾಗಲೇ ಬೇಂದ್ರೆಯವರು ಹೇಳಿರುವುದನ್ನು ತಿಳಿದಿದ್ದೇವೆ. ಆ ಬಾಯಿ ಅವನಿಗೆ ಎರಡನೆ ಹುಟ್ಟನ್ನು ನೀಡಿ ಕವಿಯನ್ನಾಗಿ ಮಾಡಿದೆ. 'ಅವಳ ಪ್ರತಿ ನುಡಿಯೂ ಹರಕೆ, ಹರಕೆಯೆ ತಾಯಿ. ಅವಳು ಇಲ್ಲವಾದರೆ ಇನ್ನೆಲ್ಲಿ ನನಗೆ ಹಾರೈಕೆ' ಎಂದು ನೊಂದು ನುಡಿಯುತ್ತಾರೆ.

'ಬಿಕ್ಕೆಲ್ಲ ಬಿಕ್ಕಿದರು ನೂರಿಂಥ ಕಾಯ
ಧರಿಸಿದರು ನಿನ್ನಂಥ ತಾಯಿ ಸಿಕ್ಕಾಳೆ? |
ಹರಸೆನ್ನ 'ಬಾ ಮಗುವೆ' ಎಂದು ನಕ್ಕಾಳೇ?'

ಈ ನುಡಿಯನ್ನು ಓದಿದಾಗ 'It has been said that Hindu grows old, not when his hair turns grey, but where he losses his mother'[45] ಎಂಬ ನುಡಿ ಎಷ್ಟು ಸತ್ಯ ಎಂಬುದು ಅರ್ಥವಾಗುತ್ತದೆ. ಅಂತಹ ತಾಯಿಯ ಮರಣ ಸಮಯದಲ್ಲಿ ತಾನಿರಲಿಲ್ಲ. ಮರಣ ನೋಡಲಿಲ್ಲ. ಅವಳ ಆಶಸ್ ಅಂದರೆ ಅವಳೆಲ್ಲ ಬದುಕಿನ ಅರ್ಥ ನುಡಿಯಾಗಿ ಹೊರಬರುವ ಸಮಯದಲ್ಲಿ ಅದು ತನ್ನ ಇಚ್ಛೆಯನ್ನು ತಿಳಿಸುವುದರ ಜೊತೆಗೆ ತನ್ನ ಆಪ್ತರಿಗೆ ಆಶೀರ್ವಾದವೂ ಆಗಿರುತ್ತದೆ. ಅಂತಹ ಸುವರ್ಣ ಸಮಯದಲ್ಲಿದ್ದು 'ಮರಣವ ನೋಡಲಿಲ್ಲ' ಎಂದು ನೊಂದ ಎಲ್ಲ ಮನುಜರ ವ್ಯಥೆಯಾಗಿ ಈ ಕಾವ್ಯ - ಬೇಂದ್ರೆ ಎಂಬ ವ್ಯಕ್ತಿಯ ನೋವನ್ನು ಮೀರಿ - ಸಾರ್ವತ್ರಿಕ ನೋವಾಗಿ - ನೋವು ಅರಿವಾಗುವ ಶಕ್ತಿಯುತ ಕಾವ್ಯವಾಗಿದೆ.

**ಚಿಂತ್ಯಾಕೊ ನನ್ನ ಬಾಳ**

"ತೇಕಾಡುವಾಗ ಮನಸು
ಮೇಲಾಡತಾವ ಕನಸು
ತಾಕಾಡುವಾಗ ಇತ್ತ
ತೇಕಾಡತಾವ ಚಿತ್ತ"[46]

ಎಂಬ ಮಾತು ಉದ್ಧರಣ ಚಿಹ್ನೆಯಲ್ಲಿರುವುದರಿಂದ ಇವು ಸ್ವಪ್ನದಲ್ಲಿ ಕೇಳಿಬಂದ ಮಾತುಗಳು ಎಂಬುದು ಬೇಂದ್ರೆ ಕಾವ್ಯಾಭ್ಯಾಸದಿಂದ ತಿಳಿಯುತ್ತದೆ. ಇದೇ ರೀತಿಯ 'ಭೃಂಗದ ಬೆನ್ನೇರಿ ಬಂತು ಕಲ್ಪನಾವಿಲಾಸ' ಎಂಬ ನುಡಿಯನ್ನು ವಿಶ್ಲೇಷಿಸುತ್ತಾ ರಾ. ಶಿ. ಯವರು 'ತುಂಬಾ ವಿಚಾರವನ್ನು ನಡೆಸಿದ ನಂತರ ಬೇಂದ್ರೆಯವರ ಮನಸ್ಸಿನಲ್ಲಿ ಈ ನುಡಿಗಳು ಮೂಡಲಿಲ್ಲ. ಭಾವನೆಯು - emotion - ಅವರ ಅಂತಃಕರಣವನ್ನು ತುಂಬಿಕೊಂಡಿತು. ಕಡೆದ ಮೊಸರಿನಲ್ಲಿ ಬೆಣ್ಣೆಯು ತೇಲಿಬರುವಂತೆ, ಭಾವನಾ ಮನಸ್ಸಿನಿಂದ ಈ ನುಡಿಗಳು ತಾವಾಗಿ ತಾವೇ ಮೂಡಿಬಂದವು. ಮನಸ್ಸಿನ ಚಟುವಟಿಕೆಗಳಲ್ಲಿ ಭಾವರಾಗದ್ವೇಷಾದಿಗಳೂ ಪಾತ್ರವನ್ನು ವಹಿಸುತ್ತವೆ. ಮನಸ್ಸಿನ ಈ ಗುಣವನ್ನು ಸ್ಫೂರ್ತಿ ಎಂದೆನ್ನುತ್ತಾರೆ. ತನ್ನ ಇಷ್ಟದಂತೆ ಮೂಡಿಬರುವ, ನಮ್ಮ ಇಷ್ಟದಂತೆ ನಡೆಯದೇ ಇರುವ, ಸ್ಫೂರ್ತಿಯೂ ಮನಸ್ಸಿನ ಒಂದು ಪ್ರದರ್ಶನ. ಕೆಲವೇ ಮಂದಿಗೆ ಲಭಿಸುವ ಗುಣ'[47] ಎಂದು ಹೇಳಿದ್ದಾರೆ.

ಬೇಂದ್ರೆಯವರ ಕನಸನ್ನು ಕುರಿತು ಶಂಕರ ಮೊಕಾಶಿ ಪುಣೇಕರ ಅವರು : "ಅಂಥ ಕನಸು ಕಾಣಬಲ್ಲ ಮನಸ್ಸಿನ ಬಗ್ಗೆಯೇ ಮೊದಲು ಗೌರವವೆನಿಸಬೇಕು, ಆದರೆ ಅದಕ್ಕೂ ಮುಂದೆ ಹೋಗಿ, ಮುಟ್ಟಿದರೆ ಮಾಸುವ ಕನಸಿನ ಸೂಕ್ಷ್ಮತೆಗೆ ಎಲ್ಲಿಯೂ ಬಾಧೆ ತರದೆ ಕನಸಿನಷ್ಟೆ ಹಗುರಾದ ಕವನ ಕಟ್ಟಿದ ವ್ಯಕ್ತಿಯ ಮೋಡಿಗೆ ಓದುಗ ಮೊರೆ ಹೋಗುತ್ತಾನೆ. ಬೇಂದ್ರೆಯವರ ಆಂತರಿಕ ಜೀವನದ ಮನೋವೈಜ್ಞಾನಿಕ ಅಭ್ಯಾಸವೂ ಇಲ್ಲಿ ಅವಶ್ಯ'[46] ಎಂದು ಹೇಳಿದ್ದಾರೆ. ಈ ಬಗೆಯ ಭಾವನಾ ಮನಸ್ಸಿನಿಂದ ಮೂಡಿಬಂದ ಬೆಣ್ಣೆಯಂತಹ ಭಾವ ಓದುಗರನ್ನು ಮೃದುವಾಗಿ ಸ್ಪರ್ಶಿಸಿ ಚಿಂತನೆಯ ಚೈತನ್ಯವನ್ನು ನೀಡುತ್ತದೆ. ಹೀಗೆ ಮೂಡಿಬಂದ ಭಾವಕ್ಕೆ ಮೂಲವಾದ ಕಾರಣವನ್ನು ಬೇಂದ್ರೆಯವರು ಈ ಕವನದ ಭಾವಸಂದರ್ಭದಲ್ಲಿ: "ತೇಲಾಡುವಾಗ ಮನಸು' ಎಂಬ ಕವನದ ಸಂದರ್ಭ ಮಿಶ್ರ ಸ್ವರೂಪದ್ದು. ಒಂದು ಇಣಚಿಯ ಮರಣಕ್ಕೆ

ನಾನೂ ಕಾರಣನಾದೆ ಒಮ್ಮೆ. ಅಂದು ರಾತ್ರಿ ಬಿದ್ದ ಎರಡು ಕನಸುಗಳಲ್ಲಿ ಒಂದು ನನ್ನ ತಾಯಿ ಧೈರ್ಯಕೊಡುವಂತಿತ್ತು. ಇನ್ನೊಂದರಲ್ಲಿ ನಾನು ಹೇಳಿದ ಒಂದು ಕವನ ಕೇಳಿ ಅಣ್ಣ ಮಾಸ್ತಿ ಮೆಚ್ಚಿದಂತಿತ್ತು. ಎಚ್ಚರಾದ ಮೇಲೆ ಅದರೊಳಗಿನ ನಾಲ್ಕೆ ಸಾಲು ನೆನಪುಳಿದವು. ಈ ಮೂರು ಘಟನೆಗಳ ಒಳಸೂತ್ರದ ಭಾವ ಇಲ್ಲಿಯ ಕವನದ ದ್ರವ್ಯವಾಗಿದೆ." ಎಂದು ಹೇಳಿದ್ದಾರೆ.

ಪ್ರಾಣಿಪ್ರಿಯನೂ ಅಹಿಂಸಾವಾದಿಯೂ ಆದ ಕವಿ ಆಕರ್ಷಣೀಯವೂ, ಸುಂದರವೂ, ನಿರುಪದ್ರವಿಯೂ ಆದ ಇಣಚಿಯ ಮರಣಕ್ಕೆ ತಾನು ಕಾರಣನಾದೆನೆಂದು ಹೇಳಿಕೊಂಡಿದ್ದಾರೆ. ಆ ಭಾವ ಅವರನ್ನು ತುಂಬಾ ಕಾಡಿದೆ. ಅದು ಅವರ ಜಾಗ್ರತ, ಸುಪ್ತ, ಸುಷುಪ್ತ ಮನಸ್ಸನ್ನು ಆವರಿಸಿಕೊಂಡಿದೆ. ರಾ.ಶಿ. ನುಡಿದಂತೆ ಭಾವನೆಯು - emotion - ಅವರ ಅಂತಃಕರಣವನ್ನು ತುಂಬಿಕೊಂಡ ಕಾರಣ ಅದು ಕನಸ್ಸಿನಲ್ಲಿ ಭಾವಲಹರಿಯಾಗಿ ಹೊರಹೊಮ್ಮಿದೆ. ಹಿಂಸಾಭಾವ ಅವರನ್ನು ಆವರಿಸಿ ಅದರಿಂದ ಚಡಪಡಿಸುತ್ತಿದ್ದಾರೆ. ಆ ನೋವಿನಲ್ಲಿ ಕವಿ 'ಅಯ್ಯಯ್ಯೋ ತಾಯಿ ನೊಂದೆ | ಕೈಯ್ಯೀಯೇ ಸತ್ತೆ ಎಂದೆ" ಎಂದು ನುಡಿದ ಮಾತಿನಲ್ಲಿ ತನ್ನ ಅಸಹಾಯಕ ಮನಸ್ಥಿತಿಯಲ್ಲಿ ಆಧಾರಕ್ಕೆ ಕೂಗಿಕೊಂಡದ್ದು ತನ್ನನ್ನು ಪಾಪದ ಕೂಪದಿಂದ ಮೇಲೆತ್ತಿ ಕಾಪಾಡು ಎಂದು ಕೇಳಿಕೊಂಡದ್ದು ತಾಯಿಯನ್ನು. ಹೀಗೆ ಅವರ ಕನಸು ಮನಸ್ಸಿನಲ್ಲಿ ತಾಯಿ ಆವರಿಸಿಕೊಂಡದ್ದನ್ನು ಕಾಣಬಹುದಾಗಿದೆ. ಹಾಗೆ ಆರ್ತನಾಗಿ ಕೂಗಿದಾಗ ತಾಯಿ ಮಗನಿಗೆ ಮುದ್ದಿನಿಂದ ಧೈರ್ಯ ನೀಡುತ್ತಾಳೆ. ಪ್ರೀತಿಯ ಅಂತರಾಳದಿಂದ 'ಚಿಂತ್ಯಾಕೊ ನನ್ನ ಬಾಳ' ಎಂದು ನುಡಿಯುತ್ತಾಳೆ. ಇದು ವ್ಯಕ್ತಿ ತನ್ನ ಅಸಹಾಯಕತೆಯಲ್ಲಿ, ನೋವಿನಲ್ಲಿ, ತನ್ನನ್ನು ಈ ಜಗತ್ತಿಗೆ ತಂದ ತನ್ನ ತಾಯಿಯನ್ನೇ ನೆನಸಿ ಅವಳನ್ನೇ ಆಧಾರವಾಗಿಸಿಕೊಂಡು ಬದುಕುಳಿಯುವ ಮಾನಸಿಕ ಕ್ರಿಯೆ. ಅವನ ಚಡಪಡಿಕೆಗೆ ಅವನ ಒಳ ಮನಸ್ಸು ತಾಯಿಯಾಗಿ ನೀಡುವ ಆಂತರಿಕ ಸ್ಥೈರ್ಯ.

ತಾಯಿಜೀವವು ಮಗು ಎಚ್ಚರವಾಗಿದ್ದಾಗ ಮಾತ್ರವಲ್ಲ ಅದು ನಿದ್ದೆಯಲ್ಲಿದ್ದಾಗಲೂ 'ಮಿಡುಕಾಡಿ ಬಗೆಯ ಬಾಯಿ | ಹುಡುಕಾಡತಾವ ತಾಯಿ' ಎಂದು ನುಡಿದಿದ್ದಾರೆ. ಹೀಗೆ ತಾಯಿ ಮತ್ತು ತಾಯಿಯ ಬಾಯಿ, ಅವಳ ಧೈರ್ಯದ ನುಡಿಯನ್ನು ಬಣ್ಣಿಸುತ್ತ - ಮಗ ತಪ್ಪು ಮಾಡಿ ಪಾತಾಳ ಕಂಡರೂ ಅವಳು ಬಿಡುವುದಿಲ್ಲ. ಈ ಶರೀರವನ್ನು ಕೊಟ್ಟ ಅವಳು ಅದನ್ನು ಸದಾ ಕಾಯುತ್ತಾಳೆ. 'ಕಾಯವನ್ನು ಹೆತ್ತ ಕರುಳು| ಕಾಯುವುದು ಹಗಲು ಇರುಳು' ಎಂದು ನುಡಿದಿದ್ದಾರೆ. ಅವಳಿಂದ ಜೀವ ಪಡೆದ 'ಈ ತಲೆಯು ಇರಲಿ ಬುರುಡೆ' ಎಂದು ಇದು ಬರಿ ಬುರುಡೆಯಾದರೂ 'ಆ ತಾಯಿ ಏನು ಕುರುಡೆ?' ಅವಳು ಸದಾ ಎಚ್ಚರದಿಂದಿರುವ ಶಕ್ತಿ. ಈ ಬುರುಡೆಯನ್ನು ಕಾಯುತ್ತಾಳೆ ಎಂಬ ಭಾವವನ್ನು ವ್ಯಕ್ತಪಡಿಸಿದ್ದಾರೆ. ಈ ಬುರುಡೆ ಎಂಬುದನ್ನು ಬೇಂದ್ರೆಯವರು 'ಬರಿ ತಲೆಬುರುಡೆ' ಎಂದು ಮೇಲಿನ ಸಾಲಿನಲ್ಲಿ ಕರೆದವರು ಅದಕ್ಕೆ ಜೀವಶಕ್ತಿಯನ್ನು ತುಂಬುವ ಚೇತನಶಕ್ತಿ ತಾಯಿಯೆಂಬುದನ್ನು ಒಂದು ರೂಪಕದ ಮೂಲಕ ಇನ್ನೂ ಸ್ಪಷ್ಟಪಡಿಸುತ್ತಾರೆ.

ಬೇಂದ್ರೆಯವರು ಮೊದಲೇ ಕನಸಿನ ಕಥೆಯನ್ನು ಹೇಳುತ್ತಿದ್ದಾರೆ. ಕನಸಿನ ಕಥೆಯಲ್ಲಿ ತಾಯಿ ಜೀವ ಕಣ್ಣಿಟ್ಟು ನೋಡುತ್ತಿರುವುದರಿಂದ ಅದಕ್ಕೆ ಜೀವ ತುಂಬಿದೆ. ಆ ಜೀವದ ಮುಂದಿನ ಮಿಡುಕು ನಲ್ಮೆಯ ನಾದದ ಆನಂದ. ಅದು ಕಾವ್ಯದಲ್ಲಿ ರೂಪು ಪಡೆಯುತ್ತದೆ. ಆ ತಾಯಿಯ ತೊಡೆಗೆ ಈ ಬುರುಡೆ ತಾಗಿದ ತಕ್ಷಣ ಅದರಲ್ಲಿ ಜೀವ ಸಂಚಾರವಾಗಿ 'ನೂಕೀತು ಹಾಡ ಹೆಡೆಯು' ಎಂದಿದ್ದಾರೆ. ತಾಯಿಯದು ತುಂಬಿದೆದೆ. ಅದಕ್ಕೆ ತಂಬೂರಿಯಂತೆ ಆತುಕೊಂಡ ಜೀವ ನಾದಮಯವಾಗುತ್ತದೆ, ಹಾಡುತ್ತದೆ ಎಂದಿದ್ದಾರೆ.

'ತುಂಬೆದೆ ಸೋತು ಕೂತು
ತಂಬೂರಿ ಹಾಗೆ ಆತು
ಬರತಾವ ತಾನೆ ತಾನಾ
ಹರದಾಡತಾವ ಗಾನಾ
ನೂರಾಡಿ ಏನು ಫಲವು
ತಾರಾಡುವಾಗ ಒಲವು
ಕಿವಿಗಿಳಿದು ಬರಲು ಹಾಡು
ಸವಿಗಾಗ ಯಾವುದೀಡು?
ಸಡಲಿದರು ಪ್ರಾಣತಂತು
ಮಿಡಿದೊಡನೆ ಜೀವ ಬಂತು
ಮುಟ್ಟುತಲೆ ತಾಯಬೆರಳು
ಹುಟ್ಟುವದು ಹುರುಳು ತಿರುಳು
ನಮ್ಮಿಂದ ಹರಿದು ಚಿಂತಿ
ಜುಮ್ಮೆನ್ನತಾವ ತಂತಿ
ಮುಳುಗುವವು ವಾದಗೀದ
ತುಳುಕಾಡಿ ಏಕನಾದ.

ತಾಯಿ ಎದೆಗಾನಿಸಿಕೊಂಡು ನುಡಿದೊಡನೆ ಎಲ್ಲ ಚಿಂತೆ ಹರಿದು, ಈ ಜೀವದ ನರನಾಡಿಯು ಜುಮ್ಮೆನುತ್ತ ವಾದವು ಮುಳುಗಿ, ಏಕನಾದ ತುಳುಕುತ್ತ ಚಿಂತಾಪಹಾರವಾಯಿತು ಎಂದಿದ್ದಾರೆ. ತಾಯಿಯ ಹೊಟ್ಟೆಯಲ್ಲಿ ಬೆಚ್ಚಗೆ ಮಲಗಿ ಸುಂದರ ಕನಸು ಕಾಣುತ್ತ ಎಚ್ಚೆತ್ತಾಗ ಅವ್ವನನ್ನು ಬಿಗಿಹಿಡಿದು ಸೀರೆಯ ಸೆರಗಿನ ಎರಡು ನೂಲು ತನ್ನ ಕೈಹಿಡಿತದಲ್ಲಿ ಸಿಕ್ಕಿದ ಮಗುವಿನಂತೆ :

'ಹಾಸಾದ ಮಿಂಚಿನಿಂದ
ಬೀಸಿದ್ದ ಸೆರಗಿನಿಂದ
ಸೆಳೆದಂತೆ ಎರಡುನೂಲು
ಉಳಿದಾವ ನಾಕುಸಾಲು'

ಎಂದು ನುಡಿವ ನುಡಿಯಲ್ಲಿ ಕಲ್ಪನಾಲೋಕದ ಸ್ಫೂರ್ತಿಶಕ್ತಿ ತಾಯಿಯು ಕವಿಯ ಹಿಡಿತಕ್ಕೆ ಸಿಗುವಷ್ಟನ್ನೇ ನೀಡಿ ಅದರ ಬೆಳಕಲ್ಲಿ ತನ್ನನ್ನು ಅರ್ಥೈಸಿಕೊಳ್ಳಲು ಬಿಟ್ಟಿದ್ದಾಳೆ ಎಂಬ ಭಾವವಿದೆ. ಈ ರೀತಿಯಲ್ಲಿ ತನ್ನ ತಾಯಿಯನ್ನು ಸ್ಫೂರ್ತಿಚೇತನೆಯಂತೆ ಕನಸು ಕಣಸುಗಳಲ್ಲಿ ಬೇಂದ್ರೆಯವರು ಕಂಡಿದ್ದಾರೆ.

**ತಾಯಿ ತಂದೆಗಿಂತಲೂ ಶ್ರೇಷ್ಠ**

ನಾವು ಈಗಾಗಲೇ ಎರಡನೆಯ ಅಧ್ಯಾಯದಲ್ಲಿ ಭಾರತೀಯ ಸಮಾಜದಲ್ಲಿ ಸ್ತ್ರೀಯ ಸ್ಥಾನಮಾನವನ್ನು ಕುರಿತು ಸಾಕಷ್ಟು ತಿಳಿದಿದ್ದೇವೆ. ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ವೇದಕಾಲದಿಂದಲೂ ತಾಯಿಗೆ ತುಂಬಾ ಗೌರವವಿತ್ತು. ತಾಯಿಯನ್ನು "ಗುರುವಿಗಿಂತಲೂ, ತಂದೆಗಿಂತಲೂ ಹೆಚ್ಚಾಗಿ ಗೌರವಕ್ಕೆ ಪಾತ್ರಳು ಎಂದು ವಸಿಷ್ಠನು ಹೇಳುತ್ತಾನೆ. ಪ್ರಾಚೀನವಾದ ಶ್ಲೋಕವೊಂದನ್ನು ಈ ಸಂಬಂಧವಾಗಿ ಅವನು ಉದ್ಧರಿಸುತ್ತಾನೆ. 'ಗುರುವು ಒಬ್ಬ ಉಪಾಧ್ಯಾಯನಿಗಿಂತಲೂ ಹತ್ತು ಪಾಲು ಹೆಚ್ಚಿನ ಗೌರವಕ್ಕೆ ಪಾತ್ರನು;

ತಂದೆಯು ಗುರುವಿಗಿಂತ ನೂರು ಪಾಲು ಹೆಚ್ಚು; ಆದರೆ ತಾಯಿಯು ತಂದೆಗಿಂತಲೂ ಸಾವಿರ ಪಾಲು ಹೆಚ್ಚು ಗೌರವಕ್ಕೆ ಪಾತ್ರಳು. ಇದು ಏಕೆಂದರೆ ಅವಳು ಅವನನ್ನು ಗರ್ಭದಲ್ಲಿ ಹೊತ್ತು ಸಲಹುತ್ತಾಳೆ' "[49] ಇದನ್ನೆಲ್ಲ ತಿಳಿದಿದ್ದ ಬೇಂದ್ರೆಯವರು ಅದನ್ನು ಆಧುನಿಕ ಜನಮನಕ್ಕೆ ಅರಿವಾಗುವಂತೆ; ತಮ್ಮ ಅನುಭವಕ್ಕೆ ಲೋಕಾನುಭವವಾಗುವ ಕಾಂತಶಕ್ತಿಯನ್ನು ನೀಡಿ ಕಾವ್ಯರೂಪದಲ್ಲಿ ನೀಡಿದ್ದಾರೆ.

**ಬೆಳಕಿನ ಬಾಂಧವ್ಯದಿಂದ ತಾಯಿ ಸೆರಗ ಹಿಡಿದೆವು**

ಬೇಂದ್ರೆಯವರ ಕಾವ್ಯದ ಶೋಧವೆಂದರೆ ಅದು ಬೆಳಕು ಮತ್ತು ಅರಿವಿನ ಶೋಧವಾಗಿದೆ. ಅವರಿಗೆ ಚಿಕ್ಕಂದಿನಿಂದ ಕಾಡಿದ ಬೆಳಕು-ಕತ್ತಲೆಯ ಕುತೂಹಲ ಈಗಾಗಲೇ ನಾವು ತಿಳಿದಿದ್ದೇವೆ. ಬೇಂದ್ರೆ ಕಾವ್ಯದ ಸ್ಥಾಯಿಭಾವ ಬೆಳಕು. ಬೆಳಕು ಎಂದರೆ ಅರಿವು. ಅವರಿಗೆ ತಾಯಿಯೆಂದರೆ ಬೆಳಕು ಮತ್ತು ಅರಿವು. ಆದುದರಿಂದ ಬೇಂದ್ರೆ ನುಡಿಯುತ್ತಾರೆ :

'ಬೆಳಕಿನ ಬಾಂಧವ್ಯದಿಂದ ತಾಯಸೆರಗ ಹಿಡಿದೆವು
ಬೆಳಕಿನಿಂದ ಬಂದೆವಣ್ಣ ಬೆಳಕಿನತ್ತ ನಡೆದೆವು'[50]

ಅವರು ಜೀಬ್ರಾನ್‌ನನ್ನು ಕುರಿತು ಬರೆಯುವಾಗ 'ಜೀಬ್ರಾನ್ ನಿತಾಂತ ಮಾತೃಭಕ್ತ. ಅವನ ತಾಯಿ ಮಗನಲ್ಲಿ ಜ್ಯೋತಿ ಕಂಡ ವತ್ಸಲೆ.'[51] ಎಂದು ಹೇಳಿದ್ದಾರೆ. ಬೇಂದ್ರೆಯವರ ತಾಯಿ ಮಗನಿಗೆ ಜ್ಞಾನದ ಬೆಳಕನ್ನು ಸಂಪಾದಿಸಲು ಸದಾ ಆಸರೆಯಾಗಿ ನಿಂತವಳು. ಬಡತನದ ಜೀವನ ಸಾಗಿಸುತ್ತಿದ್ದರೂ ಅವನ ಜ್ಞಾನದ ಸಿರಿ ಹೆಚ್ಚಲು ತನ್ನ ಅಮೂಲ್ಯ ಒಡವೆಯನ್ನು ನೀಡಿದ ಪುತ್ರವತ್ಸಲೆ ಅವಳು. ಅದನ್ನು ಬೇಂದ್ರೆಯವರು 'ಪೂನಾದಲ್ಲಿ ಮಹಾರಾಷ್ಟ್ರ ಕುಟುಂಬ ಮಾಲೆಯ ಮೂಲ ಸಂಪಾದಕರಾದ 'ಸಹಕಾರಿ ಕೃಷ್ಣ'ರ ಗ್ರಂಥ ಭಂಡಾರವನ್ನೇ ನಾವು ಗೆಳೆಯರು ಕೊಂಡೆವು; ಪುತ್ರವಾತ್ಸಲ್ಯದಿಂದ ನನ್ನ ತಾಯಿ ತನ್ನ ಬಂಗಾರದ ಉಂಗುರವನ್ನೇ ಈ ಕೆಲಸಕ್ಕೆ ಕೊಟ್ಟಳು'[52] ಎಂದು ಹೇಳಿಕೊಂಡಿದ್ದಾರೆ. ಅವರು ಪೂನಾದಲ್ಲಿ ಬಿ.ಎ. ಓದುವಾಗ 'ಶಿಕ್ಷಕನಾಗಬೇಕೆಂಬ ಹಂಬಲ ಇದೇ ಕಾಲಕ್ಕೆ ಮೂಡಿ ಮೂರ್ತಗೊಳ್ಳುತ್ತಿತ್ತು. ಗೆಳೆಯ-ಶಿಕ್ಷಕ-ಕವಿ-ದೇಶಭಕ್ತ ಈ ಚತುರ್ಮುಖ ತಿಳಿಯದೆ ಹೊಳಪುಹಾಕಿತ್ತು. ಇದರಲ್ಲಿ ಕವಿ ಪ್ರಬಲನಾದ. ತಾಯಿಯ ಋಣ ತೀರಿಸಲು ಇದು ಸಹಜ ಹಾದಿಯಾಯಿತು'[53] ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಅವರು ಕವಿತೆಯನ್ನು ರಚಿಸಿ ತಾಯಿಗೆ ಓದಿಹೇಳಿ ಆಕೆಯ ಆಶೀರ್ವಾದವನ್ನು ಪಡೆಯುತ್ತ ಬೆಳೆದುದನ್ನು ಅವರೇ ಹೇಳಿಕೊಂಡಿದ್ದಾರೆ. ಈ ಕಾರಣದಿಂದ ಅವರ ಎಲ್ಲ ಬಗೆಯ ಕವನಗಳನ್ನು ಎಲ್ಲ ಜನರು - ಸ್ತ್ರೀ-ಪುರುಷ ಭೇದವಿಲ್ಲದೆ, ವಯೋಭೇದವಿಲ್ಲದೆ ಒಟ್ಟಿಗೆ ಕುಳಿತು ಆಸ್ವಾದಿಸಬಹುದಾಗಿದೆ. ಅವು ಉನ್ನತಭಾವವನ್ನು ಹೊಂದಿದ, ಶುದ್ಧ ಸಂಸ್ಕಾರ ರೂಪಿಸುವ ಗುಣವನ್ನು ಒಳಗೊಂಡಿವೆ.

ಬೇಂದ್ರೆಯವರು ತಾಯಿ ಕಂಡ ಕನಸನ್ನು ಕವಿಯಾಗಿ ಅರ್ಥೈಸಿರುವ ರೀತಿ ಅನನ್ಯವಾಗಿದ್ದು, ಅದು ಸಾಹಿತ್ಯದ ವಿರಾಟ್ ಸ್ವರೂಪದಲ್ಲಿ ಹೀಗೆ ಬಣ್ಣಿತವಾಗಿದೆ: 'ನನ್ನ ತಾಯಿ ತನ್ನ ಮರಣಕಾಲದ ಪೂರ್ವದಲ್ಲಿ ಒಂದು ಕನಸು ಕಂಡಳು (ಆಗ ನನಗೆ ೨೯ ವಯಸ್ಸು, ತಾಯಿಯದು ೪೫-೪೭ ಇರಬೇಕು.) ದೇವಿಯ ಗುಡಿ; ಅವಳಿದಿರು ಈಕೆ ಪ್ರಾರ್ಥನೆ ಮಾಡಿಕೊಳ್ಳುತ್ತಾಳೆ -'ಮತ್ತೇತಕ್ಕೂ ಅಲ್ಲ, ದಾನ ಧರ್ಮಕ್ಕಾಗಿ ಸಾಕಷ್ಟು ಸಂಪತ್ತು ಕೊಡು' ಎಂದು. ಪ್ರದಕ್ಷಿಣೆ ಹಾಕಿ ಬಂದು ನೋಡುತ್ತಾಳೆ - ಅಲ್ಲಿ ದೇವಿಯಿದ್ದಲ್ಲಿ ದತ್ತಮೂರ್ತಿ! ಈ ಕನಸಿನ ಅರ್ಥವೇನು ಎಂದು ಕೇಳಿದಳು ತಾಯಿ. ನಾನೋ ಆಗ ರಾಷ್ಟ್ರೀಯ ಶಾಲೆಯ ಬಡ ಶಿಕ್ಷಕ. 'ಪ್ರಭಾತ ಮಾಸಿಕ' ದಲ್ಲಿ ಕವನ ಮುದ್ರಿತವಾಗಿದ್ದವು. ಗೆಳೆಯರ ಗುಂಪು ಸಂಘಟಿತವಾಗುತ್ತಿತ್ತು. 'ಕೃಷ್ಣಾಕುಮಾರಿ' ಕವನ ಪ್ರಕಾಶ ಕಂಡಿತ್ತು. ಕನಸಿನ ಅರ್ಥ ಹೇಳಿದೆ: ನೀನು ಗೋದೂಬಾಯಿಯ ಮಗಳು ಅಂಬಾಬಾಯಿ. ನಾನು

ಅಂಬಿಕಾತನಯ ಕವಿ ಕನ್ನಡನಾಡಿಗೆ ಈ 'ದತ್ತ'ನನ್ನೆ ದಾನ ಮಾಡಿದ್ದೀಯಾ, ಮತ್ತೇನು ಬೇಕು? ಸಂಪಾದನೆ ಇಲ್ಲದವನ ಈ ಮಹಾಭಾಷ್ಯ ಅವಳನ್ನು ಅವಾಕ್ಕಾಗಿ ಮಾಡಿತು."[54]

ಬೇಂದ್ರೆಯವರ ತಾಯಿಯನ್ನು ಕುರಿತು ಕೀರ್ತಿನಾಥ ಕುರ್ತಕೋಟಿಯವರು ಹೇಳಿರುವ ಮಾತು ಮನನೀಯವಾಗಿದೆ. ಅವರು "Every genius takes after his mother' - W.B. Yeats ಬೇರೊಂದು ಸಂದರ್ಭದಲ್ಲಿ ಆಡಿದ ಈ ಮಾತು ಬೇಂದ್ರೆಯವರ ಮಟ್ಟಿಗಂತೂ ಅಕ್ಷರಶಃ ಸತ್ಯವಾಗಿದೆ. ತಮ್ಮ ತಾಯಿಯ ಬಾಹ್ಯ ವ್ಯಕ್ತಿತ್ವ ಹೇಗಿತ್ತು ಎನ್ನುವುದರ ಬಗ್ಗೆ ಅವರು ತಮ್ಮ ಆತ್ಮಕಥನದಲ್ಲಿ ಎಲ್ಲಿಯೂ ಹೇಳಿಲ್ಲ. ಒಮ್ಮೆ ಮುಖತಃ ಮಾತನಾಡುವಾಗ, 'ನಮ್ಮ ತಾಯಿ ಕರಿಯ ಚಿಕ್ಕೆಗಳುಳ್ಳ ಒಂದು ಹಳದೀ ಪತ್ತಲ ಉಡುತ್ತಿದ್ದಳು; ಕ್ಯಾಟಿಯ ಹಾಡು ಹಾಡುವದರಲ್ಲಿ ಓಣಿಯ ಎಲ್ಲ ಹೆಣ್ಣುಮಕ್ಕಳನ್ನೂ ಸೋಲಿಸಿಬಿಡುತ್ತಿದ್ದಳು' ಎಂದಿಷ್ಟೇ ಹೇಳಿದ್ದರು"[55] ಎಂದು ದಾಖಲಿಸಿದ್ದಾರೆ.

ಬೇಂದ್ರೆಯವರಿಗೆ ತಾಯಿಯ ಬಾಹ್ಯ ವ್ಯಕ್ತಿತ್ವಕ್ಕಿಂತ ಅಂತರಂಗದ ವ್ಯಕ್ತಿತ್ವ ಪ್ರಮುಖವಾಗಿತ್ತು. ಹೀಗಾಗಲು ಕಾರಣವಾದ ಒಂದು ಪ್ರಸಂಗವನ್ನು ವಾಮನ ಬೇಂದ್ರೆ ತಿಳಿಸಿದ್ದು ಹೀಗೆ : ಲಂನೆಯ ವಯಸ್ಸಿನ ಹಂತದಲ್ಲಿ ಬೇಂದ್ರೆ ಒಂದು ಕನಸು ಕಂಡರು. "ನಿನ್ನ ತಾಯಿ ಮತ್ತು ಹಿರಿಯ ಮಗ (ರಾಮಚಂದ್ರ ಬೇಂದ್ರೆ) ಹಕ್ಕಿಗಳಾಗಿ ಯಾವಾಗಲೂ ನಿನ್ನ ತಲೆಯ ಮೇಲೆ ಹಾರುತ್ತ ಕಾಪಾಡುತ್ತಾರೆ." ಆಗ ಬೇಂದ್ರೆಯವರು ಸ್ವಪ್ನದಲ್ಲಿ ಪ್ರಶ್ನಿಸುತ್ತಾರೆ. "ನಿಮ್ಮನ್ನು ನಾನು ಗುರುತಿಸುವುದು ಹೇಗೆ?" ಆಗ ಆ ಧ್ವನಿಯು - "ನಮ್ಮ ಮೈಮೇಲೆ ಹಳದಿಯ ಚಿಕ್ಕೆಗಳಿರುತ್ತವೆ" ಎಂದು ಹೇಳುತ್ತದೆ. ಬೆಳಗು ಹಳೆಯ ಪತ್ರವ್ಯವಹಾರವನ್ನು ಹುಡುಕಾಡುವಾಗ ಬೇಂದ್ರೆಯವರಿಗೆ ತಾಯಿಯ ಮತ್ತು ಮಗನ ಹಳೆಯ ಭಾವಚಿತ್ರ ಸಿಗುತ್ತದೆ. ಅವುಗಳ ಮೇಲೆ ಹಳದಿ ಚಿಕ್ಕಿ ಇದ್ದುದನ್ನು ಕಂಡು ಬೇಂದ್ರೆ ಭಾವಪರವಶರಾಗುತ್ತಾರೆ. ಭಾವಚಿತ್ರದ ಮೇಲೆ ಹಳದಿ ಚಿಕ್ಕೆ ಬರಲು ರಾಸಾಯನಿಕ ದ್ರವದ ಪರಿಣಾಮ ಎಂದು ನಮಗೆ ತೋರಿದರೆ, ಬೇಂದ್ರೆಯವರಿಗೆ ಅದು ಸ್ವಪ್ನದ ಸಮರ್ಥೀಕರಣ. ಹೀಗಾಗಿ ಅವರು ವಾಮನನಿಂದ ಹಳದಿ ಬಣ್ಣದ ಒಂದು ರುಮಾಲು ಪೇಟೆಯಿಂದ ತರಿಸಿ ಯುಗಾದಿಯ ದಿವಸ ಮಂಗಳೂರಿಗೆ ಹೋದಾಗ ಮಂಗಳಗೌರಿಯ ಎದುರಿಗಿಟ್ಟು, ಅದನ್ನು ತನ್ನ ರಕ್ಷಾಕವಚವಾಗಿ ತಲೆಗೆ ಸುತ್ತಲು ಪ್ರಾರಂಭಿಸಿದರು. ಇದು ಕವಿಯ ಜೀವನ ದೃಷ್ಟಿಕೋನವನ್ನು ಸೂಚಿಸುತ್ತದೆ. ಉತ್ತರಕಾಲದಲ್ಲಿ ಬೇಂದ್ರೆಯವರು ಹಳದಿ ರುಮಾಲನ್ನು ಸುತ್ತಿಕೊಂಡು ಅನೇಕ ಉಪನ್ಯಾಸಗಳನ್ನು ಕೊಟ್ಟದ್ದು ಅನೇಕರು ಕಂಡಿದ್ದಾರೆ

ಬೇಂದ್ರೆಯವರ ತಮ್ಮನ ಶಾಲಾ ಶಿಕ್ಷಕರಾದ ಸ.ಪ.ಗಾಂವಕರ ಅವರು ಬೇಂದ್ರೆಯವರ ತಾಯಿಯ ವ್ಯಕ್ತಿತ್ವವನ್ನು ಕುರಿತು ಹೀಗೆ ನುಡಿದಿದ್ದಾರೆ: "ಬೇಂದ್ರೆಯವರ ತಂದೆ ಚಿಕ್ಕಂದಿನಲ್ಲಿ ಮಕ್ಕಳಿಬ್ಬರನ್ನು ಬಿಟ್ಟುಹೋಗಿದ್ದಾನೆ. ಅವರ ಪಾಲನೆ ಪೋಷಣೆಯ ಭಾರ ಸುಶೀಲೆಯೂ, ವ್ರತಸ್ಥಳೂ, ಮಿತಭಾಷಿಯೂ ಆದ ಅವರ ತಾಯಿಯ ತೂಗುವ ತೊಟ್ಟಿಲದ ಪಾಲಿಗೆ ಬಂದುಬಿದ್ದಿದೆ. ಒಂದಿಷ್ಟು ಗಟ್ಟಿ ಹೆಣ್ಣುಮಗಳಲ್ಲದಿದ್ದರೆ ಮಕ್ಕಳನ್ನು ಮಾಣಿಕವಾಗಿ ಮಾಡಲು ಸುತರಾಂ ಸಾಧ್ಯವಿರಲಿಲ್ಲ. ಅಂತೆಯೆ ಸಾಲೆಯಲ್ಲಿ ಕಲಿಯುವ ನಾಲ್ಕಾರು ಹುಡುಗರಿಗೆ ಊಟಕ್ಕೆ ನೀಡಿ ಮಕ್ಕಳಿಬ್ಬರನ್ನು ಜತನದಿಂದಲೂ ಜಾಗ್ರತೆಯಿಂದಲೂ ಬೆಳೆಸಿಕೊಂಡು ಬರುತ್ತಿದ್ದಾಳೆ. ಬೇಂದ್ರೆ ದತ್ತು ಚಿಕ್ಕಂದಿನಿಂದಲೇ ಸಂತೆಗಿಂತೆ ಚೆನ್ನಾಗಿ ಮಾಡಿ ತಾಯಿಗೆ ತುಂಬಾ ನೆರವಾಗುತ್ತಿದ್ದಾನೆ. ಮಮತಾಪೂರ್ಣ ಮಾತೃಮಂದಿರದಲ್ಲಿ ಆಗಾಗ್ಗೆ ಅವರ ದರ್ಶನವಾಗುತ್ತಿದೆ."[56]

ಬೇಂದ್ರೆಯವರ ಶಾಲಾ ಶಿಕ್ಷಕರಾದ ನಾ. ಶ್ರೀ. ರಾಜಪುರೋಹಿತ ಅವರು ಬಾಲಕ ಬೇಂದ್ರೆಯನ್ನು

ತುಂಬಾ ಹತ್ತಿರದಿಂದ ಕಂಡು ಅವರ ತಾಯಿಯ ಪ್ರಭಾವದಿಂದ ಅವರ ಗೃಹಶಿಕ್ಷಣ ರೂಪುಗೊಂಡ ರೀತಿಯನ್ನು ಹೀಗೆ ಹೇಳಿದ್ದಾರೆ: "ನಾನು ಇನ್ನೂ ಗೃಹಸ್ಥಾಶ್ರಮವನ್ನು ಸ್ವೀಕರಿಸಿದ್ದಿಲ್ಲ; ಆದುದರಿಂದ ನಮ್ಮ ರಾಷ್ಟ್ರೀಯ ವಿದ್ಯಾಲಯದ ಬಳಿಯಲ್ಲಿಯೇ ಇದ್ದ ಶ್ರೀ ಬೇಂದ್ರೆ ಇವರ ಮನೆಯಲ್ಲಿಯೇ ಊಟ ಮಾಡುತ್ತಿದ್ದೆನು. ಕೇವಲ ಅಧ್ಯಯನ, ಅಧ್ಯಾಪನ ಇವೆರಡೇ ಕಾರ್ಯಗಳಲ್ಲಿ ತತ್ಪರವಾಗಿದ್ದೆನು. ಅರ್ಥಾತ್ ಈ ನಮ್ಮ ರಾಷ್ಟ್ರೀಯ ವಿದ್ಯಾಲಯ, ಪುಸ್ತಕಾಲಯಗಳು ಹಗಲಿರುಳೂ ನನ್ನ ವಾಸಸ್ಥಾನವಾಗಿದ್ದವು. ಆತ ಏವ ಶ್ರೀ ಬೇಂದ್ರೆ ಇವರ ಗೃಹ ಶಿಕ್ಷಣದಿಂದ ಇವರ ಮೇಲೆ ಹೇಗೆ ಪರಿಣಾಮವಾಗುತ್ತಿತ್ತೆಂಬುದನ್ನು ಪ್ರತ್ಯಕ್ಷವಾಗಿ ನೋಡುವ ಸಮಯವು ನನಗೆ ಪ್ರಾಪ್ತವಾಗುವುದು ಸ್ವಾಭಾವಿಕವಾಗಿದೆ.

ಶ್ರೀ ಬೇಂದ್ರೆ ಇವರ ತಾಯಂದಿರಾದ ಮಾತೃಶ್ರೀ ಅಂಬಾಬಾಯಿಯವರು ಸುವಿಚಾರಶೀಲರು, ಏಕಪಂಥೀ ಭಾಗವತದಂಥ ತತ್ವಪ್ರಧಾನವಾದ ಪ್ರಾಸಾದಿಕ ಪುರಾಣಗ್ರಂಥವನ್ನು ಪಾರಾಯಣ ಮಾಡುತ್ತಿದ್ದರು. ಇವರಿಗೆ ಚಿ. ದತ್ತಾತ್ರೇಯ, ಚಿ. ಕೃಷ್ಣ ಇವರಿಬ್ಬರೇ ಗಂಡಸುಮಕ್ಕಳು. ಇವರು ತಮ್ಮ ಮಕ್ಕಳ ಶಿಕ್ಷಣ ಮತ್ತು ಆರೋಗ್ಯಗಳ ವಿಷಯದಲ್ಲಿ ಅತ್ಯಂತ ದಕ್ಷತೆಯನ್ನು ವಹಿಸುತ್ತಿದ್ದರೆಂಬುದನ್ನು ಬೇರೆ ಹೇಳುವ ಕಾರಣವೇ ಇಲ್ಲ."[57]

ಬೇಂದ್ರೆಯವರ ಕಂಠವು ಇಡೀ ಕರ್ನಾಟಕದಲ್ಲಿ ಅವರ ಕಾವ್ಯಕ್ಕೆ ಓಜಸ್ಸು, ತೇಜಸ್ಸು, ಮಾಧುರ್ಯ, ಗಾರುಡಿಗತನವನ್ನು ತಂದಂತಹದ್ದು. ಆ ಕಂಠವನ್ನು ಕುರಿತು ಸ್ವತಃ ಬೇಂದ್ರೆಯವರು 'ಜನರನ್ನು ಮುಗ್ಧಗೊಳಿಸುವ ಕಂಠಸಂಪತ್ತು ಬಹುಶಃ ನನಗೆ ನನ್ನ ತಾಯಿಯಿಂದ ಬಳುವಳಿಯಾಗಿರಬೇಕು. ಚಿಕ್ಕಂದಿನಲ್ಲೆ ನಾನು ಲಗ್ನದ ಮನೆಯಲ್ಲಿ ಮರಾಠಿ ಹಾಡುಗಳನ್ನು ಅನ್ನತೊಡಗಿದರೆ, ಸಭೆ ಮುಗ್ಧವಾಗಿ ಕೇಳುತ್ತಿತ್ತು'[58] ಎಂದು ಹೇಳಿದ್ದಾರೆ. ಹೀಗೆ ಸರಳತೆ ಮತ್ತು ಹಾಡುಗಾರಿಕೆಯನ್ನು ತಾಯಿಯಿಂದ ವರವಾಗಿ ಪಡೆದ ಬೇಂದ್ರೆಯವರು ಇಳಿವಯಸ್ಸಿನಲ್ಲಿಯೂ ತಾಯಿಯನ್ನು ಸದಾ ನೆನೆಸುತ್ತಿದ್ದುದು ಅವರ ಮಾತೃಭಕ್ತಿಯನ್ನು ದರ್ಶಿಸುತ್ತದೆ. ಅಂತಹ ತಾಯಿಯ ಧ್ಯಾನದ ಮನನದ ಕವನಗಳು 'ಮತ್ತೆ ಶ್ರಾವಣಾ ಬಂತು' ಕವನಸಂಕಲನದಲ್ಲಿವೆ.

**ತಾಯಿಯ ಕಳಕೊಂಡು ಪ್ರೌಢನಾದೆನು ನಾನು**

'ಮತ್ತೆ ಶ್ರಾವಣಾ ಬಂತು'[59] ಕವನ ಸಂಕಲನದಲ್ಲಿ "೧೯೧೮ರ ಪೂರ್ವದ ಮತ್ತು ಅನಂತರದ ಬೇಂದ್ರೆಯವರ ಜೀವನವು ಮೊದಲನೆಯ ವಿಭಾಗವಾದ ಶ್ರಾವಣಾ ಬಂತು - ಬಾಲ್ಯ ಕಾಂಡದ ವಿಷಯವನ್ನು ಒಳಗೊಂಡಿದೆ. 'ಬಾಲ್ಯಕಾಂಡ' ೪೫೭ ಸಾಲಿನ ಒಂದು ರಚನೆ ೨೪ ಸಾಲಿಗೆ ಒಂದು ಸ್ಮೃತಿ"ಯನ್ನು[60] ಹೊಂದಿದೆ. ಈ ಸ್ಮೃತಿಚಿತ್ರದಲ್ಲಿ ೧೯೨೪ರಲ್ಲಿ ಅವರ ತಾಯಿ ಅಂಬಿಕೆ ತೀರಿಹೋದ ನಂತರ, ಅವರನ್ನು ತೀವ್ರವಾಗಿ ಕಾಡಿದ ಭಾವವು ಕಾವ್ಯವಾಗಿದೆ. ಅವರು ನುಡಿದಿರುವ 'ತಾಯಿಯ ಕಳಕೊಂಡು ಪ್ರೌಢನಾದೆನು ನಾನು' ಎಂಬ ಭಾವಾಭಿವ್ಯಕ್ತಿ ದೇಶಕಾಲಾತೀತವಾದ ಸಾರ್ವತ್ರಿಕ ಸತ್ಯವಾಗಿದೆ. ಬೇಂದ್ರೆಯವರು ತನ್ನ ತಾಯಿಯನ್ನು ಕುರಿತು ಹೇಳಲೇಬೇಕಾದುದು ತನ್ನ ಧರ್ಮ ಎಂದು ಹೇಳಿರುವುದನ್ನು ಈಗಾಗಲೇ ತಿಳಿದಿದ್ದೇವೆ. ಅದು ಆತನ ಎದೆಮಾತು. ಆ ಎದೆಮಾತು ಜಗದೆಲ್ಲ ಪುರುಷರು ತಿಳಿಯಬೇಕಾದ ಹಿರಿತತ್ತ್ವವನ್ನು ಹೊಂದಿರುವುದರಿಂದ - ಅದು ಜಗದ ಶಾಂತಿಗೆ, ಸುಖದ ಬಾಳ್ವೆಗೆ ಅತಿ ಅವಶ್ಯವಾದುದರಿಂದ ಅದನ್ನು ಕವಿ ಕಾವ್ಯವಾಗಿಸಿದ್ದಾರೆ ಎಂದು ಹೇಳಬಹುದು. ಆ ತಾಯಿಯು ತನ್ನ ಕುವರನಿಗೆ 'ಹೆಣ್ಣು ಎನ್ನುವ ಮಾತು ತಾಯಿ ಎನ್ನುವ ಮಾತು ಎರಡಲ್ಲ ಒಂದೆಂದು ತಿಳಿಸಿದಳು.' ಇಂತಹ ಹಿರಿತತ್ತ್ವ ಮನನವಾಗುವಂತೆ ಆ ತಾಯಿಯು ಮಗನಿಗೆ :

'ಆ ಬಸಿರೆ ಬ್ರಹ್ಮಾಂಡ, ಹೆಸರಿಗೆ ಪಿಂಡಾಂಡ
ಕುಸುರೀಗೆ ಬೆಲೆ ಎಂದು ಕಲಿಸಿದಳು'

ಹೀಗೆ ಬೇಂದ್ರೆಯವರ ಬಾಲಮನದಲ್ಲಿ ಜಗದೆಲ್ಲ ಹೆಣ್ಣು ತಾಯಿ ಎನ್ನುವ ಚಿಂತನೆಯನ್ನು ಅಂಬಿಕೆಯು ಮೂಡಿಸಿ ಅದು ಅವನಿಗೆ ಅರಿವಾಗುವಂತೆ ಕಲಿಸಿದುದರಿಂದ ಬೇಂದ್ರೆಯವರು ಮಾತೃ ಆರಾಧಕರಾದರು.

ಚಿಕ್ಕ ವಯಸ್ಸಿನಲ್ಲಿಯೇ ಪತಿಯನ್ನು ಕಳೆದುಕೊಂಡ ತನ್ನ ತಾಯಿ ಅಂಬಿಕೆಯನ್ನು ಕೊನೆಯವರೆಗೂ ಕೈಹಿಡಿದು ನಡೆಸಿದ್ದು ರಾಮನಾಮ ಎಂದು ಹೇಳುವ ಬೇಂದ್ರೆಯವರು ಅವಳ ವ್ರತರೂಪನಿಷ್ಠವಾದ ಜೀವನವನ್ನು

'ವಾಸನೆಯ ಕಳಕೊಂಡ ಬಾಳಿಗೆ ಎಲ್ಲಿಂದ
ದುರ್ವಾಸನ ಪೀಡೆ ಕಾಡುವದು?
ಹೃದಯ ವೃಂದಾವನದ ತುಳಸಿಯ ಸಸಿಯಾಗಿ
ಕ್ಷೀರಸಮುದ್ರವ ಕಾಣುವದು'*

ಎಂದು ಕಾವ್ಯವಾಗಿಸಿದ್ದಾರೆ.

ಬೇಂದ್ರೆಯವರ ತಾಯಿಯು ಧಾರ್ಮಿಕ ಚಿಂತನೆಯ, ರಾಮನಾಮ ಧ್ಯಾನದ ವ್ರತರೂಪಿಯಾಗಿ, ಬದುಕಿನ ಹೋರಾಟದಲ್ಲಿ - ತನ್ನ ಒಡಲಕುಡಿಗಳ ಒಳಿತಿಗಾಗಿ ತನುವನ್ನು ತಪ ಮಾಡಿಕೊಂಡಿದ್ದಳು. ಆಕೆ ತನ್ನ ಕವಿಪುತ್ರನು ಜನಕ್ಕೆ ಒಳಿತನ್ನೇ ನೀಡಬೇಕೆಂದು ಆಶಿಸುತ್ತ, ಉನ್ನತವಾದ ದೈವಚಿಂತನೆಯನ್ನು ಕಾವ್ಯವಾಗಿಸಬೇಕೆಂದು ಹೇಳುತ್ತಿದ್ದಳು. ಅದನ್ನು ನೆನೆದು ಬೇಂದ್ರೆಯವರು :

'ದೇವರ ನೆನೆದರೆ ಕವನ ಸಾರ್ಥಕವಹುದು
ಗುಬ್ಬಿ ಕಾಗೆಯ ಪದ್ಯಯಾಕವನ?
ಆಕೆ ಹೀಗೆಂದರು, ನನ್ನ ಕವಿತೆಯ ಕೇಳಿ
ಉತ್ಸಾಹ ಪಡೆದಿತ್ತು ತಾಯಿ ಮನ'.

ಹೀಗಿದ್ದರೂ ಅವರು ಜಗದ ಮನುಜರನ್ನೇ ಕುರಿತು ಹೆಚ್ಚು ಕಾವ್ಯ ರಚಿಸಿದ್ದು ಅವರಿಗಿದ್ದ ಜನಸಾಮಾನ್ಯರ ವಾಸ್ತವ ಬದುಕಿನ ಒಲವನ್ನು, ಆ ಜನರ ನೋವು ನಲಿವಿನ ಅರಿವಿನ ವಿಸ್ತಾರವನ್ನು ತಿಳಿಸುತ್ತದೆ. ಆದರ್ಶ ಶಿಕ್ಷಕರಾದ ಬೇಂದ್ರೆಯವರು ತಮ್ಮ ಅನುಭವವನ್ನೂ ಸಾಧಾರಣೀಕರಣ

---

* ಬೇಂದ್ರೆಯವರ ತಂದೆಯವರಿಗೆ ಗಂಡಮಾಲೆಯ ರೋಗವಾಗಿತ್ತು. ಆ ಗಂಟುಗಳಿಂದ ಹೊರಸೂಸುವ ದ್ರವಕ್ಕೆ ಉಗ್ರವಾದ ಹೊಲಸು ವಾಸನೆಯಿರುತ್ತಿತ್ತು. ಅವರ ಸೇವೆಯನ್ನು ಮಾಡುವ ತಾಯಿ ತನಗೆ ಮೂಗೇ ಇಲ್ಲ ಎಂಬ ಭಾವಕ್ಕೆ ತಲುಪದೆ ಉಪಚಾರ ಮಾಡುವುದು ಅಸಾಧ್ಯವಾಗಿತ್ತು. ಪತಿಯ ಮರಣದ ಅನಂತರ ತಾಯಿಯವರಿಗೆ ಯಾವ ವಾಸನೆಯೂ ಬರುತ್ತಿರಲಿಲ್ಲ. 'ಮೂಗೇ ಹೋಗಿಬಿಟ್ಟಿದೆ' ಎನ್ನುತ್ತಿದ್ದರಂತೆ ಅವರು. ಒಂದು ದಿವಸ ಅವರಿಗೆ ತುಳಸಿಯ ವಾಸನೆ ಬರಲು ಪ್ರಾರಂಭಿಸಿತು. ಪಂಢರಾಪುರಕ್ಕೆ ಯಾತ್ರಾರ್ಥಿಯಾಗಿ ಹೋಗಿ ವಿಠ್ಠಲ ರುಕುಮಾಯಿಯ ಪಾದಗಳ ಮೇಲೆ ಹಣೆಯಿಟ್ಟಾಗ ಆ ಮೂರ್ತಿಯ ಕೊರಳಲ್ಲಿ ಹಾಕಿದ ತುಳಸಿಯ ಹಾರದ ವಾಸನೆಯು ಮತ್ತು ಧಾರವಾಡದಲ್ಲಿ ತನ್ನ ಮೂಗಿಗೆ ಬಂದ ತುಳಸಿಯ ವಾಸನೆ ಒಂದೇ ಎಂಬುದನ್ನು ಅರಿತು ರೋಮಾಂಚಿತರಾದರು. ಈ ಪ್ರಸಂಗವನ್ನು ತಾಯಿಯವರು ಬೇಂದ್ರೆಯವರಿಗೆ ವಿವರಿಸಿದ್ದರು - ಎಂಬ ಈ ಪ್ರಸಂಗದ ಅಭಿವ್ಯಕ್ತಿ ಮೇಲಿನಂತೆ ಕವನರೂಪ ತಾಳಿದೆ ಎಂದು ವಾಮನ ಬೇಂದ್ರೆಯವರು ತಿಳಿಸಿದರು.

ಗೊಳಿಸಿದ್ದಾರೆ. ಹಾಗಾಗಿ ಅದು ಮನುಷ್ಯ ಕುಲದ ಅನುಭಾವವಾಗಿದೆ. ತಾನು ಬರೆದ ಕೃಷ್ಣಾಕುಮಾರಿಯ ಕತೆ ಮತ್ತು ಇತರ ಕವನಗಳನ್ನು ಓದಿಹೇಳಿ, ತಾಯಿಯ ಮೆಚ್ಚಿಗೆ ಪಡೆದ ಕಾಲವನ್ನು ಕವಿ ಅತಿ ಸಹಜವಾಗಿ 'ಹುಡುಗಾಟವೆನಿಸಿತ್ತು ಹೇಳುವುದೇ?' ಎಂದು ಅಮ್ಮನ ಜೊತೆ ಕಾವ್ಯರಚನೆಯ ಹುಡುಗಾಟದಲ್ಲಿ ಕಳೆದ ಸಂತಸದ ಕ್ಷಣಗಳನ್ನು ನೆನೆಸಿಕೊಂಡಿದ್ದಾರೆ. ತಾಯಿ ಸದಾ ದಾಸರ ಪದ, ಪುರಾಣ ಪ್ರವಚನದಲ್ಲಿ ದಿನ ಕಳೆಯುತ್ತ ಜಪ, ತಪ, ಸಂತರ ಕತೆಯೇ ಆಕೆಗೆ ಸಾಧನೆಯಾಗಿರುವಾಗ ಆ ಸಾಧನೆಯ ಪ್ರಭಾವಳಿಯಲ್ಲಿ ಕವನ ರಚಿಸಿದ ಬೇಂದ್ರೆಯವರು ದೈವಭಕ್ತರಾಗಿ ಪ್ರಕೃತಿ ಆರಾಧಕರಾಗಿ ಸತ್ಯಶೋಧಕರಾಗಿ ರೂಪುಗೊಂಡದ್ದನ್ನು ಕಾಣಬಹುದು. 'ಮಾತಾ - ಸೂತ್ರವು ತನ್ನ ಪೋಣಿಸಿತು' ಎಂದು ನುಡಿಯುವ ಅವರು ತಮ್ಮ ಕವಿನಾಮ ರೂಪುಗೊಂಡ ಆ ಸುಂದರ ಭಾವಲಹರಿಯನ್ನು, ಆ ಆನಂದವನ್ನು ಹೀಗೆ ನುಡಿಯಲ್ಲಿ ಹಿಡಿದಿಟ್ಟಿದ್ದಾರೆ :

'ಕಾಣಿಸಿತೊ, ಕೇಳಿಸಿತೊ ಲಲನಾಚಕ್ರಕ್ಕೇರಿ
ಮಂತ್ರವನ್ನೂದಿತ್ತು ಒಳಗಿವಿಗೆ
'ಅಂಬಿಕಾತನಯ'ನ ಕಂಚುಕ ತೆರೆಯುವದೆ
ಕರ್ಮವಾಗಿತ್ತಾಗ ಒಳ-ಕವಿಗೆ.

ಈ ರೀತಿಯಲ್ಲಿ 'ಅಂಬಿಕಾತನಯ' ಕಾವ್ಯನಾಮದಿಂದ ತಾಯಿಯ ಹೆಸರಿನ ಹೆಮ್ಮೆಯಿಂದ ಗೀತಗೋವಿಂದ, ಶಂಕರ ಸ್ತೋತ್ರ, ಗಂಗಾಲಹರಿ ಮುಂತಾದ ಕಾವ್ಯಗಳ ವಾಚನ ಮಾಡಿ ತಾನು ಹುಚ್ಚಾಗಿ ತಾಯಿಗೆ ಸಂತೋಷ ತರುತ್ತಿದ್ದುದನ್ನು ಬಣ್ಣಿಸಿದ್ದಾರೆ.

'ಗೀತಗೋವಿಂದವ ಹಾಡಿ ಹುಚ್ಚಾದೆನು
ಶಂಕರರ ಸ್ತೋತ್ರಕ್ಕೆ ಮರುಳಾದೆನು
ಗಂಗಾಲಹರಿಯ ಮೆಚ್ಚಿ, ಏನೋ ಧಾಟಿಯ ಹಚ್ಚಿ
ತಾಯಿಗೆ ಸಂತೋಷ ತರುತ್ತಿದ್ದೆನು'

ಈ ಬಗೆಯ ಮಾತೃಭಾವದ ಚಿಂತನೆಯಲ್ಲಿ ಗಟ್ಟಿಗೊಳ್ಳುತ್ತಿದ್ದ ಬೇಂದ್ರೆಯವರಿಗೆ ತಾಯಿಯು ಇಹಲೋಕ ತ್ಯಜಿಸಿದ್ದು ಆಘಾತದಂತಾಗಿತ್ತು. ಅದನ್ನು ತಡೆದುಕೊಂಡು ತಾಯಿಗೆ ಸಾವಿಲ್ಲ; ತಾಯಿ ಅಮರ ಎಂಬ ಚಿರಂತನ ಸತ್ಯವನ್ನು ಸಾರುತ್ತ ಕವಿ ಭಾವ ಅನುಭಾವವಾಗುವುದನ್ನು ದೃಗ್ಗೋಚರವಾಗುವಂತೆ, ಸ್ಪರ್ಶಾನುಭವವಾಗುವಂತೆ ಕಾವ್ಯದಲ್ಲಿ ಮೋಡಿ ಮಾಡಿದಂತೆ ನುಡಿದಿದ್ದಾರೆ:

'ಮೈಗೊಟ್ಟ ತಾಯಿಯು ಮೈ ಬಿಟ್ಟು ಹೋಗುವಳೆ?
ಏನೇನೊ ಎಂದೆಂದು ನಾನತ್ತೆನು.
ಮೈಮರೆತು, ಮೈ ಅರಿತು, ಮೈ ಬೆವೆತು, ಮನ ಬೆರೆತು
ಕಣ್ಣೀರಧಾರೆಯಲೆ ನೀರ್ಬಿಟ್ಟೆನು'

ತನಗೆ ಮೈಕೊಟ್ಟ ತಾಯಿಯು ಎಲ್ಲಿಯೂ ಹೋಗಿಲ್ಲ. ಅವಳು ತನ್ನಲ್ಲಿಯೇ ಈ ಮೈ ಮನಸ್ಸಿನಲ್ಲಿ ಇದ್ದಾಳೆಯೆಂದು ಭಾವ ಕಲ್ಲೋಲವಾದುದನ್ನು 'ಮೈಮರೆತು, ಮೈ ಅರಿತು, ಮೈ ಬೆವೆತು, ಮನ ಬೆರೆತು' ಎಂಬ ನುಡಿಯಲ್ಲಿ ಆ ಮರೆವು ಅರಿವು ಕೂಡಿ ಆಡುವ ಚಿಂತನೆ ಮೈಗೂಡಿ ಬಂದಿದೆ. ಆ ಚಿಂತನೆಯ ಕಾವಿಗೆ ಮೈ ಮನಸ್ಸು ಬೆವರಿದೆ. ಅದು ದುಃಖವೂ ಹೌದು, ಆನಂದಬಾಷ್ಪವೂ ಹೌದು. ಆ ತಾಯಿಯ

ಮೂರ್ತಿಯನ್ನು ಹೊತ್ತ ಜ್ಯೋತಿ ಕಣ್ಣು. ಅದೇ ಆ ಅಗಲಿದ ತಾಯಿಗೆ ತರ್ಪಣವನ್ನು ಬಿಡುತ್ತಿದೆ ಎಂಬ ಭಾವದಲ್ಲಿ ಕವಿ 'ಕಣ್ಣೀರಧಾರೆಯಲೆ ನೀರ್ಬಿಟ್ಟೆನು' ಎಂದಿದ್ದಾರೆ.

ಬೇಂದ್ರೆಯವರು ತಾಯಿಯನ್ನು ಕಳೆದುಕೊಂಡಾಗಿನ ನೋವನ್ನು ಪರಿಪರಿಯಾಗಿ ಬಣ್ಣಿಸುತ್ತ 'ತಾಯಿಯ ಪಾದದ ಮೇಲೆ ಉರುಳಿದೆ, ಹೊರಳಿದೆ, ತಲೆಯಿಟ್ಟೆ, ಕೈಯಿಟ್ಟೆ ಮುಂದಾಡಿದೆ' ಎಂದಿದ್ದಾರೆ. ಹೀಗೆ ನೋಡುತ್ತಿರುವಾಗ ತನ್ನನ್ನು ತೀರಿಹೋದ ತಾಯಿ ಬೆನ್ಸವರಿದಂತಾಗಿ ರೋಮಾಂಚನವಾಯಿತು ಎಂದು ಹೇಳುತ್ತಾ ತನ್ನ ತಾಯ್ಗರುಳ ಮಾಯೆಯನ್ನು ಕೊಂಡಾಡುತ್ತಾರೆ.

'ಕರುಳಿನ ಸಂಬಂಧ ತಿಳಿಯುವದು ಕರುಳಿಗೆ
ತಲೆಗೇನು ಕಂಡೀತು ಅದರ ತಲೆ!
ಆದರೂ, ಏನೇನೊ ಆದರು, ಮೈಯಂಥ
ಮೈಗೂನು ಹೊಳೆಯುವದದರ ನೆಲೆ'

ಕರುಳಕುಡಿಯಾದ ತನಗೆ ತನ್ನ ತಾಯಿಯ ಅರಿವು ಕರುಳಿಗಷ್ಟೇ ಅಲ್ಲ ಅವಳಿತ್ತ ಮೈಗೂ ಅರಿವಾಗುತ್ತದೆ ಎಂದು ಮೈ-ಮನಸ್ಸು ತಾಯಿಯನ್ನು ತಿಳಿಯುವುದನ್ನು ಕಾವ್ಯ ರೂಪವಾಗಿಸಿದ್ದಾರೆ. ಇದು ಬೇಂದ್ರೆಯವರು ಹೆತ್ತ ತಾಯಿಯನ್ನು ಅರ್ಥಮಾಡಿಕೊಂಡು ಕಾವ್ಯ ರಚಿಸಿ ಓದುಗರಿಗೆ ಮಾತೃಸ್ಪರ್ಶ ನೀಡಿರುವ ಅನನ್ಯ ರೀತಿ.

**ಸಂಖ್ಯಾ ಟಿಪ್ಪಣಿಗಳು**

1. ರಾಬರ್ಟ್ ಬ್ರಿಫಾಲ್ಟ್, The Mothers, ರಸ್ಕಿನ್ ಹೌಸ್, ಜಾರ್ಜ್ ಅಲೆನ್ ಅಂಡ್ ಅನ್‌ವಿನ್ ಲಿ., ಲಂಡನ್, 1959, ಪು. 27.
2. ಫ್ಲೋರಿಡಾ ಮ್ಯಾಕ್ಸ್‌ವೆಲ್, Women and sometimes men, ರೋಟ್‌ಲೆಡ್ಜ್ ಅಂಡ್ ಕೇಗನ್ ಪಾಲ್, ಲಂಡನ್, 1957, ಪು. 84.
3. ಸಿಂಪಿ ಲಿಂಗಣ್ಣ, ದತ್ತ ಸಾಹಿತ್ಯ, ಸಾಧನ ಮುದ್ರಣಾಲಯ, ಧಾರವಾಡ, (ವರ್ಷ ನಮೂದಿಸಿಲ್ಲ) ಪು. 3.
4. ದ. ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ, 1974, ಪು. 51.
5. ಕೀರ್ತಿನಾಥ ಕುರ್ತಕೋಟಿ, ಬಾರೋ ಸಾಧನಕೇರಿಗೆ, ಮನೋಹರ ಗ್ರಂಥಮಾಲಾ, ಧಾರವಾಡ, 1993, ಪು. 7.
6. ದ. ರಾ. ಬೇಂದ್ರೆ, ಗರಿ, ಶ್ರೀಮಾತಾ ಪ್ರಕಾಶನ, ಧಾರವಾಡ, 1989, ಪು. 7.
7. ದ. ರಾ. ಬೇಂದ್ರೆ, ಉಯ್ಯಾಲೆ, ಸಮಾಜ ಪುಸ್ತಕಾಲಯ, ಧಾರವಾಡ, 1980, ಪು. 6.
8. ವಿ.ಕೃ.ಗೋಕಾಕ, Bendre Poet and Seer, ಸೋಮಯ್ಯ ಪಬ್ಲಿಕೇಷನ್ಸ್ ಪ್ರೈ. ಲಿ., ಬಾಂಬೆ, 1970, ಪು. 32.
9. ದ. ರಾ. ಬೇಂದ್ರೆ, ಉಯ್ಯಾಲೆ, ಪೂರ್ವೋಕ್ತ, ಪು. 6.
10. ಎಸ್. ಅನಂತನಾರಾಯಣ, 'ಸಾನೆಟ್: ಮೂಲ, ಸ್ವರೂಪ, ಇತಿಹಾಸ', ಕನ್ನಡ ಛಂದಸ್ಸಿನ ಚರಿತ್ರೆ (ಎರಡನೆಯ ಸಂಪುಟ), ಹಾ. ಮಾ. ನಾಯಕ (ಸಂ.), ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ.ವಿ., ಮೈಸೂರು, ಪು. 507.
11. ಶಂಕರ ಮೊಕಾಶಿ ಪುಣೇಕರ, 'ಅಧ್ಯಕ್ಷ ಭಾಷಣ -2' ರಾಗೌ (ಸಂ.), ಬೇಂದ್ರೆ ಸಾಹಿತ್ಯ ಸಮಾಲೋಚನೆ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈ. ವಿ. ವಿ. ಮೈಸೂರು, 1996, ಪು. 141.

12. ದ. ರಾ. ಬೇಂದ್ರೆ, ಉಯ್ಯಾಲೆ, ಪೂರ್ವೋಕ್ತ, ಪು. 6.
13. ದ. ರಾ. ಬೇಂದ್ರೆ, ಸಖೀಗೀತ, ಶ್ರೀಮಾತಾ ಪ್ರಕಾಶನ, ಧಾರವಾಡ, 1990, ಪು. 90.
14. ದ. ರಾ. ಬೇಂದ್ರೆ, ಅರಳುಮರಳು, ಶ್ರೀಮಾತಾ ಪ್ರಕಾಶನ, ಧಾರವಾಡ, 1995 ಪು. 176.
15. ಅದೇ, (ಭಾವಸಂದರ್ಭದ ಜೊತೆಗೆ ಮುದ್ರಿತವಾಗಿದೆ), ಪು. 177.
16. ಫ್ಲೋರಿಡಾ ಮ್ಯಾಕ್ಸ್‌ವೆಲ್, Women and Sometimes Men, ಪೂರ್ವೋಕ್ತ, ಪು. 79.
17. ಜಿ.ಎಸ್. ಆಮೂರ, ಭುವನದ ಭಾಗ್ಯ, ಸ್ನೇಹ ಪ್ರಕಾಶನ, ಬೆಂಗಳೂರು, 1991, ಪು. 57.
18. ಕೀರ್ತಿನಾಥ ಕುರ್ತಕೋಟಿ, ಅಲೌಕಿಕ, ಪುಟಬಂಗಾರ, (ಸಂಪುಟ 5), ಶ್ರಾವಣ ಪ್ರತಿಭೆ, (ಸಂ.) ಜಿ.ಬಿ. ಜೋಶಿ, ಕೀರ್ತಿನಾಥ ಕುರ್ತಕೋಟಿ, ಮನೋಹರ ಗ್ರಂಥಮಾಲಾ, ಧಾರವಾಡ, 1987, ಪು. 48.
19. ಕೃಷ್ಣ ಕಟ್ಟಿ, ಬೇಂದ್ರೆ ಮತ್ತು ಕನ್ನಡ ಭಾವಗೀತದ ಸ್ವರೂಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1996, ಪು. 92.
20. ಜಿ. ಕೃಷ್ಣಪ್ಪ, ಹಾಡುಹಕ್ಕಿ ಅಂಬಿಕಾತನಯದತ್ತ, ಶ್ರೀರಂಗ ಪ್ರಕಾಶನ, ಮೈಸೂರು, 1995, ಪು. 44, 45.
21. ಫ್ಲೋರಿಡಾ ಸ್ಕಾಟ್‌ಮ್ಯಾಕ್ಸ್‌ವೆಲ್, Women and Sometimes Men, ಪೂರ್ವೋಕ್ತ, ಪು. 131.
22. ಎ.ಸಿ. ಬೋಸ್, The Call of the Vedas, ಭಾರತೀಯ ವಿದ್ಯಾಭವನ, ಬಾಂಬೆ, 1960, ಪು. 151.
23. ದ. ರಾ. ಬೇಂದ್ರೆ, ಉಯ್ಯಾಲೆ, ಪೂರ್ವೋಕ್ತ, ಪು. 10.
24. ಅದೇ, ಪು. 92.
25. ಬೃಹದಾರಣ್ಯಕೋಪನಿಷತ್ತು (ಎರಡನೆಯ ಭಾಗ), ಶ್ರೀ ಶಾಂಕರಭಾಷ್ಯ ಸಮೇತ ಛಾಂದೋಗ್ಯೋಪನಿಷತ್ತು, ಅಧ್ಯಾತ್ಮ ಪ್ರಕಾಶನಾಲಯ, ಹೊಳೆನರಸೀಪುರ, 1986, ಪು. 954.
26. ಎಚ್. ತಿಪ್ಪೇರುದ್ರಸ್ವಾಮಿ, ಕರ್ಣಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ, ಮೈಸೂರು, 1968, ಪು. 273.
27. ದ. ರಾ. ಬೇಂದ್ರೆ, ಉಯ್ಯಾಲೆ, ಪೂರ್ವೋಕ್ತ, ಪು. 93.
28. ಸಿ.ಪಿ.ಕೆ. 'ಬೇಂದ್ರೆಯವರ ಕೆಲವು ಕವನಗಳು', ಇಳಿದು ಬಾ ತಾಯಿ, (ಸಂ.)ಬುದ್ದಣ್ಣ ಹಿಂಗಮಿರೆ, ಸಮಾಜ ಪುಸ್ತಕಾಲಯ, ಧಾರವಾಡ, 1977, ಪು. 408.
29. ದ. ರಾ. ಬೇಂದ್ರೆ, ಉಯ್ಯಾಲೆ, ಪೂರ್ವೋಕ್ತ, ಪು. 95.
30. ದ. ರಾ. ಬೇಂದ್ರೆ, ನಾದಲೀಲೆ, ಪೂರ್ವೋಕ್ತ, ಪು. 77.
31. ದ. ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. 191.
32. ರಂ. ಶ್ರೀ. ಮುಗಳಿ, ಬೇಂದ್ರೆ ಕಾವ್ಯ, ಕನ್ನಡ ಕ್ರೈಸ್ಟ್ ಕಾಲೇಜ್, ಬೆಂಗಳೂರು, 1986, ಪು. 37.
33. ದ. ರಾ. ಬೇಂದ್ರೆ, ನಾದಲೀಲೆ, ಪೂರ್ವೋಕ್ತ, ಪು. 19
34. ಶ್ರೀ ಅರವಿಂದರು ಮತ್ತು ಶ್ರೀಮಾತೆ, ಸ್ತ್ರೀಶಕ್ತಿ, (ಅನು.) ಆರ್.ಜಿ. ಕುಲಕರ್ಣಿ, ಶ್ರೀ ದ. ರಾ. ಬೇಂದ್ರೆ ಸ್ನೇಹಮಂಡಲಿ, ಬೆಂಗಳೂರು, 1968, ಪು. 42.
35. ಶಂಕರ ಮೊಕಾಶಿ ಪುಣೇಕರ, ಬೇಂದ್ರೆ ಕಾವ್ಯಮೀಮಾಂಸೆ, ಸಾಹಿತ್ಯ ಭಂಡಾರ, ಬೆಂಗಳೂರು, 1989, ಪು. 65.
36. ರಂ. ಶ್ರೀ. ಮುಗಳಿ, ಬೇಂದ್ರೆ ಕಾವ್ಯ, ಪೂರ್ವೋಕ್ತ, ಪು. 36.
37. ಶ್ರೀ ಅರವಿಂದರು ಮತ್ತು ಶ್ರೀಮಾತೆ, ಸ್ತ್ರೀಶಕ್ತಿ, (ಅನು.) ಆರ್. ಜಿ. ಕುಲಕರ್ಣಿ, ಪೂರ್ವೋಕ್ತ, ಪು. 36.
38. ಅದೇ, ಪು. 39, 40.
39. ಅದೇ, ಪು. 38, 39.

40. ದ. ರಾ. ಬೇಂದ್ರೆ, ಮತ್ತೆ ಶ್ರಾವಣಾ ಬಂತು, ಸಮಾಜ ಪುಸ್ತಕಾಲಯ, ಧಾರವಾಡ, 1973, ಪು. 3, 4.
41. ದ. ರಾ. ಬೇಂದ್ರೆ, ಗಂಗಾವತರಣ, ಶ್ರೀಮಾತಾ ಪ್ರಕಾಶನ, ಧಾರವಾಡ, 1989, ಪು. 11.
42. ದ. ರಾ. ಬೇಂದ್ರೆ, ಉಯ್ಯಾಲೆ, ಪೂರ್ವೋಕ್ತ, ಪು. 89.
43. ದ. ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. 52.
44. ದ. ರಾ. ಬೇಂದ್ರೆ, ಸಖೀಗೀತ, ಪೂರ್ವೋಕ್ತ, ಪು. 4.
45. ಲೀಲಾ ಮಜುಂದಾರ, 'Position of Women in Modern India', Great Women of India (ಸಂ.) ಸ್ವಾಮಿ ಮಾಧವಾನಂದ, ರಮೇಶಚಂದ್ರ ಮಜುಂದಾರ್, ಅದ್ವೈತ ಆಶ್ರಮ, ಮಾಯಾವತಿ, ಆಲ್ಮೋರ, 1953, ಪು. 126.
46. ದ. ರಾ. ಬೇಂದ್ರೆ, ಗಂಗಾವತರಣ, ಪೂರ್ವೋಕ್ತ, ಪು. 14.
47. ಎಂ. ಶಿವರಾಂ, ಮನೋಮಂಥನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1989, ಪು. 242.
48. ಶಂಕರ ಮೊಕಾಶಿ ಪುಣೇಕರ. ಬೇಂದ್ರೆ ಕಾವ್ಯ ಮೀಮಾಂಸೆ, ಪೂರ್ವೋಕ್ತ ಪು. 68, 69.
49. ಎಚ್.ಸಿ. ಚಕ್ಲದಾರ್, (ಅನು.), ಆರ್.ಎಲ್. ಅನಂತರಾಮಯ್ಯ, 'ಪ್ರಾಚೀನ ಭಾರತದ ಸಾಮಾಜಿಕ ಜೀವನದ ಕೆಲವು ಮುಖಗಳು',ಯುಗಯಾತ್ರೀ ಭಾರತೀಯ ಸಂಸ್ಕೃತಿ (ಸಂಪುಟ 2), ಕೆ.ವಿ. ಪುಟ್ಟಪ್ಪ, (ಪ್ರ.ಸಂ.), ಪ್ರಸಾರಾಂಗ, ಮೈ. ವಿ. ವಿ., ಮೈಸೂರು, 1971, ಪು. 478.
50. ದ. ರಾ. ಬೇಂದ್ರೆ, ಅರಳುಮರಳು, ಪೂರ್ವೋಕ್ತ, ಪು. 342.
51. ದ. ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. 101.
52. ಅದೇ, ಪು. 45.
53. ಅದೇ, ಪು. 54.
54. ಅದೇ, ಪು. 41.
55. ಕೀರ್ತಿನಾಥ ಕುರ್ತಕೋಟಿ, ಬಾರೋ ಸಾಧನಕೇರಿಗೆ, ಮನೋಹರ ಗ್ರಂಥಮಾಲಾ, ಧಾರವಾಡ, 1993, ಪು. 8.
56. ಸ.ಪ. ಗಾಂವಕರ, 'ನಾ ಕಂಡ ದತ್ತು', ಚುಳಕಿ ಗೋವಿಂದರಾಯರು (ಸಂ.), ಕವಿವರ ಬೇಂದ್ರೆ, ಲಲಿತ ಸಾಹಿತ್ಯ ಮಾಲೆ, ಧಾರವಾಡ, 1946, ಪು. 23.
57. ನಾ. ಶ್ರೀ. ರಾಜಪುರೋಹಿತ, ಮುಮುಕ್ಷು ಬೇಂದ್ರೆ, ಅದೇ, ಪು. 91.
58. ದ. ರಾ. ಬೇಂದ್ರೆ, 'ನನ್ನ ನಾ ಕಂಡಂತೆ', ಬೇಂದ್ರೆ ಜೀವನ ಪರಿಚಯ, (ಸಂ. ) ವಾಮನ ಬೇಂದ್ರೆ, ಶ್ರೀಮಾತಾ ಪ್ರಕಾಶನ, ಧಾರವಾಡ 1998, ಪು. 79.
59. ದ. ರಾ. ಬೇಂದ್ರೆ, ಮತ್ತೆ ಶ್ರಾವಣಾ ಬಂತು, ಪೂರ್ವೋಕ್ತ, ಪು. 52.
60. ಅದೇ, ಪು. 52.

# ಮುಖ ಎರಡು : ಪ್ರೇಮಗೀತೆಗಳಲ್ಲಿನ ಪ್ರೇಯಸಿ

ಜೀವನದ ಅನೇಕ ಆದರ್ಶಗಳಲ್ಲಿ ಪ್ರೇಮ ಮತ್ತು ಶ್ರೇಯ ಪ್ರಮುಖವಾದವುಗಳು. ಪ್ರಿಯವಾದ ವಸ್ತುಗಳಿಂದ, ವ್ಯಕ್ತಿಗಳಿಂದ, ಘಟನೆಗಳಿಂದ ದೊರಕುವ ಆನಂದ ಪ್ರೇಮದ ಫಲಶ್ರುತಿ. ಬ್ರಹ್ಮಜ್ಞಾನ ಪ್ರಾಪ್ತಿ ಶ್ರೇಯದ ಗುರಿ. ಗಂಡು-ಹೆಣ್ಣು, ಪ್ರಿಯಕರ-ಪ್ರಿಯೆ; ನಾಯಕ-ನಾಯಿಕೆ ಒಂದೇ ಆಗಿದ್ದರೂ ಪರಿಸರದಿಂದ ಭಿನ್ನ. ನಿತ್ಯಜೀವನದಲ್ಲಿಯ ಗಂಡು-ಹೆಣ್ಣು ಪರಸ್ಪರರ ಗುಣಗಳನ್ನು ಮೆಚ್ಚಿ ಒಲಿದಾಗ ಪ್ರಿಯಕರ ಪ್ರಿಯೆ, ನೀರ-ನೀರೆ ಆಗಿ ಪತಿ-ಪತ್ನಿ ಆಗಲೂಬಹುದು; ಪತಿ-ಪತ್ನಿ ಆಗದೇ ಪ್ರಿಯಕರ ಪ್ರಿಯೆಯಾಗಿಯೂ ಉಳಿಯಬಹುದು. ಕೃಷ್ಣ-ರಾಧೆಯಂತೆ. ಇವರ ಜೀವನದಲ್ಲಿಯ ಆದರ್ಶವು ಅನುಕರಣೀಯವಾದಾಗ ಇವರೇ ನಾಯಕ-ನಾಯಕಿಯ ಪಾತ್ರ ವಹಿಸಲು ಸಮರ್ಥರಾಗುತ್ತಾರೆ.

ನಿಸರ್ಗದಲ್ಲಿ ಬ್ರಹ್ಮ, ವಿಷ್ಣು, ರುದ್ರ, ಇಂದ್ರ, ಅಗ್ನಿ, ವಾಯು, ಸೂರ್ಯ, ಚಂದ್ರ ವಿಭೂತಿಗಳಾಗಿ ಕಾರ್ಯ ಮಾಡುತ್ತಾರೆ. ಮಾನವರು ತಮ್ಮ ಜೀವನದಲ್ಲಿಯ ವಿಕೃತಕಾಮದ ಬೂದಿ ಮಾಡಿ; ಪ್ರೇಮದ, ಒಲುಮೆಯ ವಿಭೂತಿಯನ್ನು ಪಡೆಯಬೇಕಾಗಿದೆ. ಆಗ ಪ್ರೇಮ ಹಾಗೂ ಒಲುಮೆ ಕಿಚ್ಚಾಗಿ, ತಾಪ ಕೊಟ್ಟು, ತಪ ಮಾಡಲು ಹಚ್ಚಿ ಶ್ರೇಯ ಪ್ರಾಪ್ತಿಯತ್ತ ಹೊರಳುವಂತೆ ಮಾಡುತ್ತವೆ.

ಬೇಂದ್ರೆಯವರ ನಿಸರ್ಗ ಗೀತಗಳು ಮತ್ತು ಪ್ರೇಮಗೀತಗಳು ಬಿಂಬ-ಪ್ರತಿಬಿಂಬಗಳಾಗಿ; ಪ್ರಿಯಕರ ಮತ್ತು ಪ್ರೇಯಸಿ ತತ್ತ್ವದ ಮೌಲ್ಯವನ್ನು ತಿಳಿಸಿಕೊಡುತ್ತವೆ.

ಪ್ರೇಮದಲ್ಲಿ ಆಕಾಂಕ್ಷೆ ಮೊದಲ ಹೆಜ್ಜೆ. ಬಯಕೆ ಅದರ ಬೆಳವಣಿಗೆ. ಇವುಗಳ ಸಾತತ್ಯ ಕ್ಷಣಿಕವಾಗದೆ ಅನಂತದ ಸೀಮೆಗಳ ದರ್ಶನ ಮಾಡಿಸುತ್ತದೆ. ಬಯಸಿದ್ದು ಸಿಗದಾಗ ಅಗಲಿಕೆ, ವಿರಹದ ತಾಪವಾಗುತ್ತದೆ. ಒಲುಮೆಯ ಆದರ್ಶ ಇಟ್ಟುಕೊಂಡಾಗ ಸಾಮಾನ್ಯ ಜೀವನ ಅಧ್ಯಾತ್ಮ ಜೀವನದ ಪಥವನ್ನು ಅನುಸರಿಸುತ್ತದೆ. ಈ ಚೌಕಟ್ಟಿನಲ್ಲಿ ಬೇಂದ್ರೆ ಪ್ರೇಮಗೀತೆಗಳ ಹಾಗೂ ಪ್ರೇಯಸಿ ತತ್ತ್ವ-ರಾಧಾತತ್ತ್ವದ ಸಂಶೋಧನೆ ಈ ಅಧ್ಯಾಯದ ಗುರಿಯಾಗಿದೆ. ಒಲವೆ ಬದುಕಾದಾಗ ಪ್ರೇಮರೂಪಿ ಪರಮಾತ್ಮನ ಸಾಕ್ಷಾತ್ಕಾರವಾಗುವ ಸಾಧ್ಯತೆ ಇರುತ್ತದೆ. ಬೇಂದ್ರೆ ಪ್ರೇಮಗೀತೆಗಳಲ್ಲಿ ಬಲಾತ್ಕಾರದ, ಶೋಷಣೆಯ ವಿಷಯ ಬರುವುದಿಲ್ಲ. ಇವೆರಡೂ ವಿಕೃತ ರೂಪ. ಬೇಂದ್ರೆಯವರು ಪ್ರೇಮ ಮತ್ತು ಒಲವಿನ ಸಂಸ್ಕೃತಿಯ ಸಂದೇಶ ಸಾರುವವರಾಗಿದ್ದಾರೆ. ಆದುದರಿಂದ ಅವರಿಗೆ ಜೀವನದ ಪರಿಪಕ್ವತೆಯೆ ಅಂತಿಮ ಗುರಿಯಾಗಿದೆ. ಪರಿಪಕ್ವತೆಯ ಪ್ರಾಪ್ತಿ ಜೀವನಯೋಗದ ಸಿದ್ಧಿ.

ಪ್ರೀತಿ ಎಂಬುದು ಗಂಡು-ಹೆಣ್ಣಿನ ಯೌವನ ಸಹಜವಾದ ಬಯಕೆ. ಅದು ಪ್ರೇಮವಾಗುವುದು ಪ್ರಿಯಕರ-ಪ್ರೇಯಸಿಯು ಪ್ರೀತಿಯ ಸ್ವಾರ್ಥವನ್ನು ಮೀರಿ ಪ್ರೇಮಾರಾಧಕರಾದಾಗ. ಅಂತಹ ಪ್ರೇಮದಲ್ಲಿರುವ ಕಾಮುಕ್ಕೆ ಶುದ್ಧತೆ ಆವರಿಸುತ್ತದೆ. ಈ ಬಗೆಯ ಶುದ್ಧ ಒಲವಿನ ಕವನಗಳು

ಬೇಂದ್ರೆಯವರವು. ಪ್ರೇಯಸಿ ಎಂದರೆ ಪ್ರಿಯೆಯೂ ಹೌದು. ಅವರು ಪ್ರಿಯೆಯನ್ನು ಕುರಿತು ರಚಿಸಿರುವ ಕವನಗಳು ಕಾವ್ಯವಾಗಿವೆ. ಅವು ಪ್ರೇಮಾನುಭವವನ್ನುಂಟುಮಾಡುತ್ತ ಆಹ್ಲಾದವನ್ನುಂಟುಮಾಡಿ ಎಲ್ಲ ವಯೋಮಾನದ ಗಂಡು-ಹೆಣ್ಣನ್ನು ಒಲವಿನ ಸವಿ ಅನುಭವಿಸುವಂತೆ ಮಾಡುವ ಪ್ರೇಮಲಹರಿಗಳಾಗಿವೆ. ಬೇಂದ್ರೆಯವರು ರಚನಾಕಾರರಾದರೂ ಅವರು ಜಗದೆಲ್ಲ ರಸಿಕರಲ್ಲಿ ಒಬ್ಬರಾಗಿ ಆ ಪ್ರೇಯಸಿಯನ್ನು ನಿರ್ಮಲಾಂತಃಕರಣದಿಂದ ಆರಾಧಿಸುವ ಕಾರಣ ಅದು ದೇಶಕಾಲಾತೀತವಾದ ಸಾರ್ವಕಾಲಿಕ ಹಾಡಾಗಿ ಮಧುರ ಭಾವವನ್ನು ಹರಡುವ ಗುಣ ಹೊಂದಿದೆ. ಅವರ ಒಲುಮೆಯ ಕವನವನ್ನು ಕುರಿತು ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು 'ಒಲುಮೆಯನ್ನು ಕುರಿತ ಗೀತಗಳಲ್ಲಿ ಬೇಂದ್ರೆಯವರು ತರುವ ರಸ ವಿಲಕ್ಷಣವಾದುದು. ... ಇವರು ಜನದ ಬಾಳುವೆಯಲ್ಲಿ ಪ್ರೇಮ ಹರಿಯುವ ರೀತಿಯನ್ನು ಕಣ್ಣು ತೆರೆದು, ಮನಸ್ಸು ತೆರೆದು ನೋಡಿದ್ದಾರೆ. ಅದರಿಂದ ಇವರ ವಿವರಣದಲ್ಲಿ ಮಾತು ಮಾತು ನಿಜವನ್ನು ಹೇಳುತ್ತದೆ, ಮನಸ್ಸನ್ನು ಮುಟ್ಟುತ್ತದೆ, ಹೃದಯದಲ್ಲಿ ರಸದ ಊಟೆಯನ್ನು ಉಕ್ಕಿಸುತ್ತದೆ.'[1] ಎಂದು ಹೇಳಿದ್ದಾರೆ.

'ಒಲವು-ಪ್ರೀತಿ ಜೀವನದ ಬಹು ಮುಖ್ಯವಾದ ಸ್ಥಾಯಿಭಾವ' ಎಂದು ಹೇಳುತ್ತ ಬನ್ನಂಜೆ ಗೋವಿಂದಾಚಾರ್ಯರು ಪ್ರೀತಿಯ ವಿವರವನ್ನು ಹೀಗೆ ನೀಡಿದ್ದಾರೆ. 'ಇಬ್ಬರೂ ಒಂದೇ ನೆಲೆಯಲ್ಲಿ ನಿಂತು, ಒಬ್ಬರನ್ನೊಬ್ಬರು ಪೂರ್ಣವಾಗಿ ಅರಿತುಕೊಂಡು ಪರಸ್ಪರ ಪ್ರೀತಿಸುತ್ತೇವೆ. ಗೆಳೆತನದ ನಿರ್ವ್ಯಾಜ ಪ್ರೀತಿ ಇದು; ಇದನ್ನೇ ಸ್ನೇಹ ಎಂದು ಕರೆದರು. ಈ ಸ್ನೇಹದ ಎರಡು ಘಟಕಗಳಲ್ಲಿ ಒಂದು ಹೆಣ್ಣು ಇನ್ನೊಂದು ಗಂಡು ಆದಾಗ, ಬಂಗಾರಕ್ಕೆ ಕಂಪು ಮೂಡಿದಂತೆ, ಸ್ನೇಹಕ್ಕೆ ಹೊಸ ಸಿಂಗಾರ. ಸ್ನೇಹ ಶೃಂಗಾರಗೊಳ್ಳುತ್ತದೆ; ಶೃಂಗಾರವೇ ಆಗಿಬಿಡುತ್ತದೆ. ಹೀಗೆ ಒಮ್ಮೆ ವಾತ್ಸಲ್ಯವಾಗಿ, ಒಮ್ಮೆ ಸ್ನೇಹವಾಗಿ, ಒಮ್ಮೆ ಭಕ್ತಿಯಾಗಿ ಈ ಪ್ರೀತಿ ಮುಪ್ಪುರಿಗೊಂಡು ಜೀವನವನ್ನು ನಿಯಂತ್ರಿಸುತ್ತದೆ. ಶೃಂಗಾರ ಕೇಂದ್ರಬಿಂದು. ಅದರ ಆಚೆಯ ಮಗ್ಗುಲು ವಾತ್ಸಲ್ಯ, ಈಚೆಯ ಮಗ್ಗುಲು ಭಕ್ತಿ.

ಭಕ್ತಿಯಲ್ಲಿ ಗೌರವದ ಭಾರ. ವಾತ್ಸಲ್ಯದಲ್ಲಿ ಅನುಕಂಪೆಯ ಕಾವು. ಸ್ನೇಹವೊಂದೇ ನಿರುಪಾಧಿಕ. ಇದೂ ಭಿನ್ನಲಿಂಗಿಗಳ ಸ್ನೇಹವಾದಾಗ ಒಂದು ಅಜ್ಞೇಯವಾದ ಹೊಸತನದ ಆಕರ್ಷಣೆ ಬೆರೆತುಕೊಳ್ಳುತ್ತದೆ. ಅದಕ್ಕೆಂದೆ ಪ್ರಾಚೀನರು ಶೃಂಗಾರವೊಂದನ್ನೆ ರಸಗಳಲ್ಲಿ ಪರಿಗಣಿಸಿದರು. ಭಕ್ತಿರಸ, ವಾತ್ಸಲ್ಯರಸ ಇದಕ್ಕೆ ಪೂರಕವಾಗಿ ಆಚೆ ಈಚೆ ಇರತಕ್ಕಂಥ ಘಟಕಗಳು. ಇಂಥ ಸ್ನೇಹದ ಪರಾಕಾಷ್ಠೆಯೆ ಶಾಂತಿ. ಇದು ಪ್ರಾಚೀನರ ರಸಮೀಮಾಂಸೆಯ ರಹಸ್ಯ.'[2]

ವಾಮನ ಬೇಂದ್ರೆಯವರು 'ಬೇಂದ್ರೆಯವರಿಗೆ ಪ್ರೀತಿ, ಪ್ರಣಯ, ಪ್ರೇಮ ಮೊದಲಾದ ಶಬ್ದಗಳಿಗಿಂತ ಒಲವು ಎಂಬ ಶಬ್ದ ಹೆಚ್ಚು ಪ್ರಿಯ ಎಂದು ತೋರುತ್ತದೆ. ಒಲೆ, ಒಲೆದಾಡು, ಒಲ್ಮೆ, ಒಲವು ಶಬ್ದಗಳ ಚಿಂತನವನ್ನು ಅವರು ಆಳವಾಗಿ ಮಾಡಿದ್ದಾರೆ' ಎಂದು ಹೇಳುತ್ತ, 'ಒಲವಿಗೆ ಆಕರ್ಷಣ-ವಿಕರ್ಷಣ, ಧ್ವನಿ, ವಿದ್ಯುತ್ ಮತ್ತು ಪ್ರಕಾಶಶಕ್ತಿಗಳಿವೆ. ತರುಣ-ತರುಣಿಯರ ಪ್ರಣಯ, ಪ್ರೇಮಗಳಲ್ಲಿ ಪ್ರಮುಖವಾಗಿ ಆಕರ್ಷಣ-ವಿಕರ್ಷಣಶಕ್ತಿ ಕಾರ್ಯ ಮಾಡುತ್ತವೆ. ಇದೇ ಅನುರಾಗ-ವಿರಹ. ಇಲ್ಲಿಯೇ ಕಲಹ, ಅಸೂಯೆ, ಮತ್ಸರ, ದರ್ಪ, ಅಹಂಕಾರ ಮೊದಲಾದ ಸಂಚಾರಿಭಾವಗಳ ತಾಕಲಾಟ, ಮಿಂಚಾಟವಾಗುತ್ತವೆ.... ಒಲವು ಭಾವಾವೇಶ ಮತ್ತು ಬುದ್ಧಿಪೂರ್ವಕವಾಗಿರಬಾರದು. ಒಲವು ಕೇವಲ ಭಾವಾವೇಶದಿಂದ ಕೂಡಿದ್ದರೆ ಅಲ್ಲಿ ಭಾವೋದ್ರೇಕದ ಆಘಾತವಿದೆ. ಇದೇ ರೀತಿ ಒಲವು ಕೇವಲ ಬುದ್ಧಿಪೂರ್ವಕವಾಗಿದ್ದರೆ ಕೆಲವು ಸಲ ದುರ್ಬುದ್ಧಿ ಪ್ರಧಾನವಾಗುವ ಸಂಭವವಿರುತ್ತದೆ. ಆದುದರಿಂದ

ಒಲವುಯುಕ್ತ ಬುದ್ಧಿ ಮತ್ತು ಯುಕ್ತ ಭಾವನೆಯಿಂದ ಕೂಡಿರಬೇಕು ಎಂಬುದನ್ನು ಬೇಂದ್ರೆಯವರು ತಾರುಣ್ಯದಲ್ಲಿಯೆ ಕಂಡುಕೊಂಡರು'[3] ಎಂದು ನುಡಿದಿದ್ದಾರೆ.

ಬೇಂದ್ರೆಯವರು ಒಲವಿನ ಆರಾಧಕರಾಗಿದ್ದರು. ಅವರು "ಪ್ರಸಾದಿಯ ಶಿವಲಿಂಗಸ್ಥಲಕ್ಕೂ, ಪ್ರಾಣಲಿಂಗಿಯ ಜಂಗಮಸ್ಥಲಕ್ಕೂ ಮಧ್ಯೆ ಉದ್ಭವಿಸುವ ಒಲವುಲಿಂಗವು ನನಗೆ ತಕ್ಕಮಟ್ಟಿನ ವಿರಾಮಸ್ಥಾನವಾಗಿ ಎಂದಿನಿಂದಲೂ ತೋರಿದೆ. ಅದು ಜೀವಾತ್ಮ, ಅಂತರಾತ್ಮ, ಪರಮಾತ್ಮ ವಿವೇಕೋದಯಸ್ಥಲವಾಗಿದೆ"[4] ಎಂದು ನುಡಿದಿದ್ದಾರೆ. ಅವರು "ಪ್ರೇಮ ಎಲ್ಲಾ ಕಾಮ ಎಂದು ಅದಕ್ಕೆ ಹೆಸರಿಟ್ಟು ಕಾಮದ ಹಬ್ಬದ ನಿಂತರಕಿ ಕಾಮಣ್ಣನನ್ನು ಸುಟ್ಹಾಂಗ ಸುಡಬೇಕು ಎನ್ನುವ ಮಾತು ಸ್ವಾರಸ್ಯದ್ದಲ್ಲ. ಎಲ್ಲ ಬೂದಿ, ವಿಭೂತಿ ಎನಿಸಿಕೊಳ್ಳಲಾರದು. ಸಾಂಗಕಾಮ, ಆನಂದಕಾಮ, ಪುನರುದ್ಭವ ಕಾಮ, 'ಏಕೋಽಹಂ ಬಹುಸ್ಯಾಂ' ಎಂಬ ಕಾಮ, ಎಂಬುದರ ಚಿಂತನ ಮತ್ತು ಮಂಥನ ಆಗಲೇಬೇಕು. ಸಾಯುವದೆಲ್ಲ ಮುಕ್ತಿ ಅಲ್ಲ. ಹಾಗೆ ಹದಗೆಟ್ಟ ಪ್ರೀತಿ ಎಂದಿಗೂ ಶಮ-ಪ್ರಶಮ ಎನಿಸಿಕೊಳ್ಳಲಾರದು.

ಅನ್ನ ಪಚನ ಆಗಲಿಕ್ಕಿಲ್ಲ ಒಮ್ಮೊಮ್ಮೆ. ಇಷ್ಟರಿಂದ ಹಸಿವು, ಉಣ್ಣುವುದು ಅನಾರೋಗ್ಯದ ಲಕ್ಷಣ ಎಂದು ಎನಿಸಿಕೊಳ್ಳಲಾರದು"[5] ಎಂದು ಪ್ರೇಮದ ಸಹಜ ಮತ್ತು ಅವಶ್ಯ ಗುಣವನ್ನು ಸ್ಪಷ್ಟಪಡಿಸಿದ್ದಾರೆ. 'ಒಲವು ಚೆಲುವು ಸತ್ಯದ ಮುಖಗಳಾಗಬೇಕು. ಕಾಮುಕರ ಕಲೆಗಳಾಗಬಾರದು' ಎಂದು ಸಾರಿದ್ದಾರೆ. ಅವರು ತನ್ನನ್ನು, 'ನಾನು ಒಲವು-ಲಿಂಗದ ಉದ್ಭವವಾದಿ, ಅದು ನನ್ನ ಹಾದಿ; ಅದಕ್ಕೆ ತಕ್ಕ ಪದ, ಅರ್ಥ, ಭಾವ, ಲಯ, ಧ್ವನಿ, ಪ್ರಕೃತಿ ಪೌರುಷ ನನ್ನದು'[6] ಎಂದು ಹೇಳಿಕೊಂಡಿದ್ದಾರೆ.

ಬೇಂದ್ರೆಯವರು "ಕಾವ್ಯವು ಐಹಿಕ ರಾಜಕಾರಣವಲ್ಲ; ಪಾರಮಾರ್ಥಿಕ ಮುಕ್ತಿಮಾರ್ಗವಲ್ಲ. ಅದು ಧರ್ಮ-ಕಾಮವಾಗಲುನ್ನತಿಸುವ ಕಾಮ-ಧರ್ಮ"[7] ಎಂದು ಹೇಳಿದ್ದಾರೆ. ಅವರು ಮೇಘದೂತದ ಪ್ರಸ್ತಾವನೆಯಲ್ಲಿ "ಧರ್ಮವಿರುದ್ಧವಾದ ಕಾಮದಲ್ಲಿ ಹುಟ್ಟಿದ ಕಾವ್ಯ ಭಕ್ತಿಯ ಸಂಕೇತವಾಗುವದು"[8] ಅದರ ಸಾಧನೆಯಲ್ಲಿರುವವರು ಕಾಮಿ, ಕವಿ, ಭಕ್ತ ಎಂದಿದ್ದಾರೆ. ಅವರು ಮೇಘದೂತದ 'ಪೀಠಿಕೆ'ಯಲ್ಲಿ 'ಜೀವಲೋಕದಲ್ಲಿ ಕಾಮ' ಎಂಬ ವಿಭಾಗದಲ್ಲಿ ಕಾಮಿ ನೋವು, ಸ್ನೇಹ, ಬಾಗುವಿಕೆಯಲ್ಲಿ ಅದನ್ನು ಸಾಧಿಸಿದರೆ, ಕವಿ ಅನಂಗಭಾವಕ್ಕೆ ಮಾತು ತೊಡಿಸಿ ಅದನ್ನು ಗೆಲ್ಲುವನು; ಭಕ್ತ ಜೀವತಾದಾತ್ಮ್ಯ ಸಾಧನೆಯಲ್ಲಿ ತಲ್ಲೀನನಾಗುವನು ಎಂದು ಹೇಳಿದ್ದಾರೆ. ಅವರು "ಜನ್ಮ, ವೃದ್ಧಿ, ಮರಣ - ಇದೇ ಜೀವನವಲ್ಲ ಎಂಬ ಅರಿವು ಕಣ್ತೆರೆಯಬೇಕು. ಇಂಥ ಜ್ಞಾನಶಕ್ತಿಯ ಹದದಲ್ಲಿ ಭಕ್ತಿ ಕಾಮವು ಬಾಳನ್ನೇ ಕೃತಾರ್ಥತೆಯ ಪರಿಪಾಕದ ರಸಶಾಲೆಯನ್ನಾಗಿ ಮಾಡೀತು. ಕಾವ್ಯವೂ ಕರ್ಮ; ಅದು ಪುರುಷಾರ್ಥವಾಗಲಿ; ಬರಿ ಪ್ರಕೃತಿವಿಲಾಸವಾಗದಿರಲಿ ಎಂಬುದೇ ಕಾವ್ಯೋದ್ಯೋಗ"[9] ಎಂದು ನುಡಿದಿದ್ದಾರೆ. ಅವರು ಕಾಮ-ಪ್ರೇಮದ ಔನ್ನತ್ಯವನ್ನು ಪ್ರಿಯರಾದ ಸಖ-ಸಖಿಯರು ಅರಿತು ಆರಾಧಿಸಬೇಕು, ಅದು ಈ ಲೋಕದ ಸಹಜ ಆನಂದವೆಂದು ಅನುಭವಿಸಬೇಕು ಎಂದು ಸಾರಿದ್ದಾರೆ.

> 'ಅನ್ನ ಪ್ರಾಣಗಳ ಮಿಥುನದಂತೆ ಮೈ ಎರಡು ಕಲೆತು ಬೆರೆತು
> ಮನದ ಕಾವಿನಲಿ ಕಾಮವಾಗಿ ಮನದಾಚೆಗೇನೊ ಅರಿತು
> ಚಿತ್ತದಲ್ಲಿ ನಿಷ್ಕಾಮರತಿಯ ರಸಪಾಕವಾಗಿ ನಿಂತು
> ಧಾರೆಗೆಡದೆ ಭಗವಂತನಲ್ಲಿ ಚಿರಭಕ್ತಿಯಾಗಿ ಬಂತು.'

ಈ ಎಲ್ಲ ಹಿನ್ನೆಲೆಯಲ್ಲಿ ಒಲವಿನ ಕವಿ ಬೇಂದ್ರೆಯವರು ಪ್ರೇಯಸಿಯನ್ನು ಕುರಿತು ಬರೆದಿರುವ ಕವನಗಳನ್ನು ಈಗ ಪರಿಶೀಲಿಸೋಣ.

### ೧. ಆಕರ್ಷಣೆ

ಯೌವ್ವನದ ಗಂಡು-ಹೆಣ್ಣುಗಳಲ್ಲಿ ಆಕರ್ಷಣೆ ಸಹಜ. ಇದು ಪ್ರೇಮದ ಮೊದಲ ಹಂತ. ಆ ಆಕರ್ಷಣೆಯಲ್ಲಿ ಅವರು ಪರಸ್ಪರರನ್ನು ನೋಡಬೇಕು, ಮಾತಾಡಬೇಕು, ಕೂಡಬೇಕು ಎಂದು ಆಶಿಸುತ್ತಿರುತ್ತಾರೆ. ಬೇಂದ್ರೆಯವರು ಆ ಭಾವನೆಗಳನ್ನು 'ವಾರಿನೋಟ', 'ಬಡವರ ಮಗಳು', 'ಗಿಣಿಹೇಳ', 'ಪೋರಿ ಪೋರ', 'ಚಿತ್ತ', 'ಅವನು-ಅವಳು', 'ರಾಗರತಿ' ಮುಂತಾದ ಕವನಗಳಲ್ಲಿ ಹಿಡಿದಿಟ್ಟಿದ್ದಾರೆ. ಅವುಗಳನ್ನು ಈಗ ಪರಿಶೀಲಿಸೋಣ:

**ವಾರಿನೋಟ**[11]

ಬೇಂದ್ರೆಯವರು ಈ ಪ್ರಕೃತಿ ಸಹಜ ಆಕರ್ಷಣೆಯನ್ನು 'ವಾರಿನೋಟ' ಕವನದಲ್ಲಿ ವಿಜೃಂಭಿಸಿರುವ ರೀತಿ ಅನನ್ಯವಾಗಿದೆ. ಯೌವನದ ಹೆಣ್ಣು ತನ್ನೆಲ್ಲ ಬೆಡಗು ಬಿನ್ನಾಣದಿಂದ ಹೋಗುವಾಗ ನೆಲದ ಮೇಲೆ ನಡೆದಂತಿರುವುದಿಲ್ಲ, ಅದೂ ಹೊಳೆಯ ದಂಡೆಯ ಮೇಲೆ ನಡೆವಾಗ ಹಾರಿದಂತಿರುತ್ತದೆ. ಅವಳಿಗೆ ಗಂಡಿನ ಬಗ್ಗೆ ಸಹಜ ಆಕರ್ಷಣೆ ಇದ್ದು ಅದು ಅವಳ 'ವಾರಿನೋಟ'ವಾಗಿರುತ್ತದೆ. ಹೆಣ್ಣಿನಿಂದ ಸೆಳೆಯಲ್ಪಟ್ಟ ಗಂಡು ಏನೇ ಎಡರುತೊಡರಿದ್ದರೂ ಅದನ್ನು ಈಸಿ ಜೈಸಿ ಪಡೆಯುವೆನೆಂಬ ಸಾಹಸ ಮನದವನಾಗಿರುತ್ತಾನೆ. ಈ ಈರ್ವರ ಮಧ್ಯೆ ಹೊಳೆಯಿದೆ. ಅದು ಪ್ರಕೃತಿಸಹಜ ಸೃಷ್ಟಿಯಾದ ಚಲನಶೀಲತೆಯ ಪ್ರತೀಕವಾಗಿದೆ. ಅದು ಒಬ್ಬರಿನ್ನೊಬ್ಬರನ್ನು ಸೇರುವ ಬೆರೆಯುವ ಕಾತರದ ಸಂಕೇತವೂ ಆಗಿದೆ. ಹೀಗೆ ಇಲ್ಲಿ ಹೊಳೆಯ ಮೇಲೆ ಮತ್ತು ಹೊಳೆಯಲ್ಲಿರುವ ಪ್ರೇಮಾಕಾಂಕ್ಷಿ ಹೆಣ್ಣು-ಗಂಡಿನ ಯೌವನದ ಸೆಳೆತ ಮತ್ತು ಮಿಡಿತವು ಇಲ್ಲಿ ಕಾವ್ಯವಾಗಿದೆ.

'ವಾರಿನೋಟ ಹಾರುತಿತ್ತೋ ಹೊಳಿಮ್ಯಾಗ
ಹೊಸಾ ಹರೆ ಈಸತಿತ್ತೊ ಹೊಳಿಯಾಗ'

ಈ ಕವನವನ್ನು ವೈಜ್ಞಾನಿಕ ಹಿನ್ನೆಲೆಯಿಂದ ವಿಶ್ಲೇಷಿಸುತ್ತಾ ಜಿ.ಟಿ. ನಾರಾಯಣರಾಯರು - "ಬೆಂಕಿ-ಶಾಖ, ದ್ರವ್ಯರಾಶಿ-ಗುರುತ್ವಾಕರ್ಷಣೆ, ಅಯಸ್ಕಾಂತ-ಕಾಂತತ್ವ ಮುಂತಾದವು ನಿಸರ್ಗದಲ್ಲಿಯ ಅವಿನಾಸಂಬಂಧಗಳು. ಈ ಶುಷ್ಕ ವಿಜ್ಞಾನ ಪರಿಕಲ್ಪನೆಗಳನ್ನು ಸ್ಪಷ್ಟವಾಗಿಯೂ ಆಕರ್ಷಕವಾಗಿಯೂ ಬಿತ್ತರಿಸುವಾಗ ಬೇಂದ್ರೆ ಹೇಗೆ ಪ್ರಸ್ತುತರಾಗುತ್ತಾರೆ ನೋಡಿ:

'ಸೂಜಿಗಲ್ಲು ತಿರುಗತಿತ್ತೋ ಹೊಳಿಮ್ಯಾಗ
ಸೂಜಿಯೊಂದು ತೇಲತಿತ್ತೋ ಹೊಳಿಯಾಗ"[12]

ಎಂದು ಹೇಳಿದ್ದಾರೆ. ಈ ಕವನದಲ್ಲಿ ತರುಣಿಯ ಬಳ್ಳಿಯಂತಹ ದೇಹ, ಅದನ್ನು ತಬ್ಬಿ ಸುಳಿದಾಡಲು ಆಶಿಸುವ ತರುಣ ಗಾಳಿ, ಅಲೆದಾಡುವ ಸೆರಗಿಗೆ ಆಕರ್ಷಿತವಾಗಿ ನಲಿದಾಡುವ ಬೆರಳು, ಕೈಗೆ ಸಿಗದೆ ಹಾರಿಹೋಗುವ ಹೆಣ್ಣು ತುಂಬಿ, ಅದನ್ನು ತನ್ನತ್ತ ಸೆಳೆಯಲಾಗದೆ ಪರಿತಪಿಸಿ ತೇಲಾಡಿ ಬಾಯ್ಬಿಡುವ ಗಂಡು ತಾವರೆಯ ಪ್ರತಿಮೆಗಳು ಇದ್ದು, ಅವು ಒಂದು ಮಧುರ ಭಾವನಾಂಕುರದ ಚಿತ್ರವನ್ನು ನೀಡುತ್ತವೆ. ಈ ಕವಿತೆಯನ್ನು ಕುರಿತು ಜಿ. ಎಸ್. ಆಮೂರ ಅವರು : 'ಪರಸ್ಪರ ಆಕರ್ಷಣೆ ಈ ಕವಿತೆಯ ಭಾವ, ಕವಿತೆಯ ಶ್ರೇಷ್ಠತೆಯಿರುವುದು ಕವಿಯ ಮನಸ್ಸು ಈ ಭಾವವನ್ನು ಗ್ರಹಿಸುವ ಸೂಕ್ಷ್ಮತೆಯಲ್ಲಿ ಮತ್ತು ಅದನ್ನು ನವಿರಾಗಿ ಭಾಷೆಯಲ್ಲಿ ಪ್ರತಿಮಿಸುವ ಕೌಶಲದಲ್ಲಿ'[13] ಎಂದು ಹೇಳಿದ್ದಾರೆ. ಸೂಜಿಗಲ್ಲು-ಹೆಣ್ಣು, ಸೂಜಿ-ಗಂಡು ಆಕರ್ಷಣೆಯ ಶಕ್ತಿ ಹೆಣ್ಣಿನಲ್ಲಿ ಚುಂಬಕತತ್ತ್ವದ ಕಾರ್ಯ ಮಾಡುತ್ತದೆ. ಪ್ರಕಾಶ, ಧ್ವನಿ, ವಿದ್ಯುತ್ ಹಾಗೂ ಚುಂಬಕತ್ವ ಇವು ಭೌತಶಕ್ತಿಗಳು. ಚುಂಬಕತ್ವ ಎಂಬ ಭೌತಶಕ್ತಿ ಗಂಡು-ಹೆಣ್ಣಿನ

ಆಕರ್ಷಣ ಹಾಗೂ ಅಪಕರ್ಷಣಗಳ ಮೂಲವಾಗಿದೆ. ಆಕರ್ಷಣ ಹಾಗೂ ಅಪಕರ್ಷಣಗಳ ಸೆಳವಿಗೆ ಸಿಗದೇ ಈಸಬಲ್ಲವನು ಪ್ರೇಮದ ಬಂದರವನ್ನು ತಲುಪಬಲ್ಲನು ಎಂಬುದು ಕವಿಯ ಧೋರಣೆ.

**ಕಣ್ಮನಸೆತ್ತಿ ಒಮ್ಮೆ ನೋಡ**

ಹೆಣ್ಣನ್ನು ಒಲಿಸಿಕೊಳ್ಳುವುದು ಅಷ್ಟು ಸುಲಭವಲ್ಲ. ಅಲ್ಲಿ ಬಡತನ ಸಿರಿತನ ಮುಖ್ಯವಾಗುವುದಿಲ್ಲ, ಪ್ರೇಮ ಒಂದೇ ಪ್ರಮುಖ. 'ಬಡವರ ಮಗಳು'[14] ಕವನದಲ್ಲಿ ಆ ಹೆಣ್ಣನ್ನು ಒಲಿಸಿಕೊಳ್ಳಲು ಪ್ರಯತ್ನಿಸಿ ಸೋತ ಭಾವವಿದ್ದು, ಅವಳನ್ನು ಹಂಗಿಸಿ, ಅವಳ ಅಹಂ ಅನ್ನು ಅಲುಗಿಸಿ, ಅವಳ ಯೌವನಸಹಜ ಆಸೆಯನ್ನು ಕೆರಳಿಸಿ, ಕೊನೆಗೆ ತನ್ನ ಐಶ್ವರ್ಯದ ಸಿರಿಯಿಂದೊಲಿಸಿಕೊಳ್ಳಲು ಪ್ರಯತ್ನಿಸಿದ ಒಬ್ಬ ಪ್ರಣಯ ಯುವಕನ ಚಿತ್ರವಿದೆ. ಬಡವರ ಮಗಳನ್ನುದ್ದೇಶಿಸಿ ಅವನು:

'ಮಾವು ಚಿಗಿತು ಮಲ್ಲಿಗೆ ಹೂತು
ಸುಗ್ಗಿ ಬಂದು ಮಗ್ಗಿಯ ಇರುವಿ
ಕಣ್ಣು ಮುಚ್ಚಿ ನಿನ್ನ ನೆನೆದೇ
ಎದಿ ಮುಗುಳು ತೆರೆಯಲೊಲ್ಲಿ'

ಎಂದು ಕೇಳಿಕೊಳ್ಳುವಲ್ಲಿ, ಅವಳು ಯೌವನಸ್ಥಳಾದರೂ ಮಗ್ಗಿಯಾಗಿಯೇ ಇರುವುದು ಮತ್ತು ಅವನು-ಅವಳು ಅರಳಲು ಕಾಯುವುದು - ರೂಪಕ ಭಾಷೆಯಲ್ಲಿ ಬಣ್ಣಿಸಲಾಗಿದೆ. ಇದು ಹೆಣ್ಣು ಯಾವುದೇ ಆಕರ್ಷಣೆಯ ಮನಸ್ಸಿನ ಭಾವಾಭಿವ್ಯಕ್ತಿಯನ್ನು ತೋರ್ಪಡಿಸದಿದ್ದರೂ - ಅವಳನ್ನು ಒಲಿಸಿಕೊಳ್ಳಲು ಸಾಹಸಪಡುವ, ಅವಳ ಮೌನ, ಗಂಭೀರ ಚೆಲುವಿಗೆ ಆಸೆಪಡುವ ಯುವಕನ ಮನೋಭಾವವನ್ನು ಪ್ರಕಟಪಡಿಸುತ್ತದೆ.

ಈ ಕವನದಲ್ಲಿ 'ಉಗುರುದಿಟ್ಟಿ ಇಟ್ಟ ನಡೆ'ದ ಬಡವರ ಮಗಳ ದಿಟ್ಟತನ, ನಿಶ್ಚಲ ಮನಸ್ಸು ಮತ್ತು ನಡೆ ಹಾಗೂ ಸಿರಿವಂತನನ್ನು ಧಿಕ್ಕರಿಸಿದ ಮುಖ ಹೆಚ್ಚು ಆತ್ಮೀಯವಾಗುತ್ತದೆ. ಆ ಸಿರಿವಂತ ಯುವಕನಿಗೆ ಅವಳನ್ನು ಹೇಗಾದರೂ ಒಲಿಸಿಕೊಳ್ಳುವ ಮನಸ್ಸಾಗಿದೆ. ಅವನು ದೀನನಾಗಿ ಪ್ರಾರ್ಥಿಸುತ್ತಾನೆ:

'ಬಂಗಾರ ಮಾಡದಿಂದ
ಸಿಂಗಾರದ ಮಳೆಗರಸೇನ
ಹ್ಯಾಂಗಾರ ಕಣ್ಮನಸೆತ್ತಿ
ಒಮ್ಮೆ ನೋಡ ಒಮ್ಮೆ ನೋಡ'

ಈ ಬಗೆಯ ಪ್ರೇಮಯಾಚನೆಯನ್ನು ಕಂಡಾಗ ಅವನು ನಿಜವಾದ ಪ್ರಣಯಿ ಎನಿಸುತ್ತದೆ. ಹೀಗೆ ಸಮಾಜದ ಬಡವಬಲ್ಲಿದ ಯುವತಿ-ಯುವಕರ ಪ್ರೀತಿಯ ಒಂದು ಮುಖವನ್ನು ನಮ್ಮ ಸಮಾಜದ ವಾಸ್ತವ ನೆಲೆಯಲ್ಲಿ ಚಿತ್ರಿಸಿರುವ ಕವನ ಇದಾಗಿದೆ.

ಬೇಂದ್ರೆಯವರು 'ನಕ್ಷತ್ರ'[15] ಎಂಬ ಕವನದಲ್ಲಿ :

'ಗದ್ದವನೆತ್ತಿ ಮುದ್ದಿಸುವ ಕಣ್ಣು
ಇರದಿರೆ ಕತ್ತನು ಎತ್ತದು ಹೆಣ್ಣು'

ಎಂದಿರುವ ನುಡಿ ಹೆಣ್ಣು ನಿಜಪ್ರೀತಿಗಾಗಿ ಆಶಿಸುವುದನ್ನು ಧ್ವನಿಸುತ್ತದೆ. ಬಡತನ ಸಿರಿತನವನ್ನು ಮೀರಿದ ಒಲವು ಹೆಣ್ಣು-ಗಂಡಿನ ದೇಹದಲ್ಲಿ ಮೂಡಬೇಕು. ಅದಿಲ್ಲದಿದ್ದರೆ ಒಲವಿನ ದೀಪ ಬೆಳಗುವುದಿಲ್ಲ ಎಂದಿದ್ದಾರೆ.

'ದೇಹದಾಗs ಸ್ನೇಹ ಇರದಿದ್ದರs
ಮನದ ಮನಿಯೊಳಗ ದೀಪ ಎಲ್ಲೀದು?'[16]

'ಬಡವರ ಮಗಳು' ಪ್ರೇಮಭಿಕ್ಷೆಯ ಕವನ. ಈ ಕವನದಲ್ಲಿ ಸ್ತ್ರೀಯ ಕಣ್ಣು ಹಾಗೂ ಮನಸ್ಸಿಗೆ ಒತ್ತು ಕೊಡಲಾಗಿದೆ. ಸ್ತ್ರೀಯ ಕಣ್ಣಿನಲ್ಲಿ ವಾತ್ಸಲ್ಯ, ಅನುಕಂಪ, ಕರುಣೆ, ಕೃಪೆಗಳ ಶಕ್ತಿ ಸಂಚಯವಿರುತ್ತದೆ. ಕಣ್ಣೆತ್ತಿ ನೋಡುವುದು ಲಕ್ಷ್ಯಗ್ರಹಣ. ಕಣ್ಣು ತಪ್ಪಿಸುವುದು ಭಯದ ಸಂಕೇತ. ಹೆಣ್ಣು ಭಯದ ಭಾವದಲ್ಲಿ ಮುಳುಗಿದರೆ ಹಾನಿ. ಹೆಣ್ಣಿನ ಮನಸ್ಸು ಮುನಿದಾಗ ಅವಳು ಮಾರಿದೇವತೆ, ಚಂಡಿ. ಅವಳಿಗೆ ಬಲಿಯೇ ಬೇಕು. ಹೆಣ್ಣಿನ ಮನಸ್ಸು ಒಲಿದಾಗ ಅದು ಅಮೃತಕ್ಕೆ ಸಮ. ಹೆಣ್ಣಿನಲ್ಲಿ ಕರುಣೆ, ನಿರ್ಭಯತ್ವ, ಒಲವು ಮೂಡಿಸುವ ಅಪೇಕ್ಷೆ ಈ ಕವನದ ಗಂಡಿನದಾಗಿದೆ.

ನಿವಳ ನಿಂತಾಳ ನಿಲಿವಿಲಿ

'ಗಿಣಿಹೇಳ'[17] ಕವನದ ಭಾವಸಂದರ್ಭ 'ಗಿಣಿಯೂ ಒಂದುಶೃಂಗಾರ ಸಂಕೇತ. ಗಿಣಿಯೊಂದಿಗೆ ಮಾತನಾಡುವುದು ಒಂದು ಬಗೆಯ ಶೃಂಗಾರಚೇಷ್ಟೆ. ವಿರಹಿಣಿಯು ತನ್ನ ಮನವೆಂಬ ಗಿಣಿಯೊಂದಿಗೆ ಸಂಭಾಷಣೆಯಲ್ಲಿ ತೊಡಗಿದ್ದರ ಚಿತ್ರ ಇದು' ಎಂದಿದೆ. ಈ ಕವನದ ಮೊದಲ ನುಡಿ ಗಿಳಿ ಬೇರೆಯಲ್ಲ, ವಿರಹಿಣಿ ಬೇರೆಯಲ್ಲ ಎಂದು ಹೇಳುತ್ತ ಶೃಂಗಾರದ ಸ್ಪರ್ಶವನ್ನುಂಟುಮಾಡಿ ವೈಶಿಷ್ಟ್ಯಪೂರ್ಣವಾಗಿದೆ.

'ಕವಳ ಮೆಲ್ಲುವ ಬಾಯ ಹವಳು ತುಟಿ ಹಿಂಡುತ್ತ
ನಿವಳ ನಿಂತಾಳ ನಿಲಿವಿಲಿ, ಗಿಣಿಹೇಳ
ಇವಳ ಮನವೆಲ್ಲಿ ಇರಬಹುದು'

ವಿರಹಿಣಿಯು ಕವಳ (ತಂಬುಲ) ಮೆಲ್ಲುತ್ತ ಕೆಂಪಾದ ಹವಳದಂತಹ ತುಟಿಯನ್ನು ಹಿಂಡಿಕೊಳ್ಳುತ್ತ ತನ್ನ ನಲ್ಲನನ್ನು ನೆನೆದು, 'ನಿವಳ ನಿಂತಾಳ' ಅಂದರೆ ತೂಗಾಡುತ್ತಾ ನಿಂತಿದ್ದಾಳೆ. ಇಲ್ಲಿಯ 'ನಿವಳ' ಎಂಬ ಪದ ನಿಘಂಟಿನ ಪ್ರಕಾರ moved, waved ಎಂಬ ಅರ್ಥವನ್ನು ನೀಡಿದರೂ ಅದು ಈ ಕವನದಲ್ಲಿ ನಿವ್ವಳ ಎಂಬುದರ ಆಡುನುಡಿಯಾಗಿದೆ. ಅದು ಅಸಲು ಎಂಬ ಅರ್ಥವನ್ನು ಹೊಂದಿದೆ. ಕಾವ್ಯದ ನಾಯಕಿ ಪೂರ್ತಿ ತನ್ನ ನಾಯಕನನ್ನೇ ಧ್ಯಾನಿಸುತ್ತ ಅಸಲ್ ತಯಾರಾಗಿ ನಿಂತಿದ್ದಾಳೆ ಎಂಬ ಅರ್ಥವನ್ನೂ ಸ್ಫುರಿಸುತ್ತ, ಅದು ಒಂದು ಬಗೆಯ obscenityಯನ್ನು ಒಳಗೊಂಡಿದೆ ಎಂದು ಹೇಳಬಹುದು. ಅವಳ ಶೃಂಗಾರಭಾವ ಮಾತಾಗಿ ಹೊರಬರದೆ ನಿಲಿವಿಲಿಯಾಗಿದೆ. ಅಂದರೆ ನಾಲಿಗೆಗೆ ನಿಲುಕದ ನುಡಿಯಾಗಿದೆ. ಅವಳು ನಿಂತಿರುವ ರೀತಿ ಅವಳ ಮನವೆಂಬ ಗಿಣಿಯ ಜೊತೆ ಮಾತಿಗೆ ತೊಡಗಿ 'ಗಿಣಿ ಹೇಳ ಇವಳ ಮನವೆಲ್ಲಿ ಇರಬಹುದು' ಎಂದು ಪ್ರಶ್ನಿಸುತ್ತದೆ. ಗಿಣಿಯ ನುಡಿಯು ನಿಲಿವಿಲಿ, ಅವಳ ಭಾವವೂ ನಿಲಿವಿಲಿಯಾಗಿ ಈ ಪದ ಇಲ್ಲಿ ಧ್ವನ್ಯಾರ್ಥಕವಾಗಿ ಗಿಣಿಯ ನುಡಿಯಂತೆ ಅಡಗಿ ಕುಳಿತಿದೆ. ಆ ನಿಲಿವಿಲಿ ನುಡಿ ಗಿಣಿ ಒಲಿದಂತೆ, ಗಿಣಿ ನುಡಿದಂತೆ ತಾನೇ ಶೃಂಗಾರ ಸಂಕೇತವಾಗಿದೆ. ಹಾಗೆ ಅವಳು ತನ್ನ ಮನವೆಂಬ ಗಿಣಿಯ ಜೊತೆ ಆಡಿದ ಮಾತು ಸ್ವಗತ ಶೃಂಗಾರಲಹರಿಯಾಗಿದೆ. ಅವಳ ಅಚ್ಚವಳ ಹಲ್ಲು, ಸುಗ್ಗಿಯ ಶರೀರವನ್ನೂ, ಕಾಡಿಗೆಗಣ್ಣು ಕಾಂತನನ್ನು ಅರಸುತ್ತ ತಾನು ಪಾಡಿಗೆ (ಪಾಡು = ripeness and freshness to be gatheredನ ಸ್ಥಿತಿ ಉತ್ತರ ಕರ್ನಾಟಕದಲ್ಲಿ ಮಾವು ದೋರುಗಣ್ಣಿನ ಹಂತ ದಾಟಿ ಪಕ್ವತೆಯ ಹಂತ ತಲುಪಿದ ಸ್ಥಿತಿಯನ್ನು 'ಪಾಡು' ಎನ್ನುವರು) ಬಂದಿದ್ದು ಅದು ಸಫಲವಾಗದ ಸ್ಥಿತಿಯ ವ್ಯಥೆಯನ್ನು 'ಗಿಣಿ ಹೇಳ ಪಾಡಿಗೆ ಬಂದಳಿವಳೇನು' ಎಂದು ಪ್ರಶ್ನಿಸುತ್ತದೆ. 'ಕಾಂತೆ ಏಕಾಂತ ಬಯಸಿದ' ಶರೀರದ ತೀವ್ರತೆಯನ್ನು ಮನದ

ಗಿಣಿಯೊಂದಿಗಿನ ಸಂಭಾಷಣೆಯಾಗಿಸಿ ಅವಳು ಅವನ ಧ್ಯಾನದಲ್ಲಿಯೇ ಲೀನವಾಗಿ ರೋಮಾಂಚಿತಳಾಗುತ್ತಾಳೆ.

'ಪರುಷ ಕಬ್ಬಿಣಕ್ಕೆ ಸ್ಪರುಷ ಮಾಡಿಧಾಂಗ
ಪುರುಷನ ಧ್ಯಾನ ಸರಸಿಗೆ, ಗಿಣಿ ಹೇಳ
ಹರುಷ ರೋಮಾಂಚ ತಳೆದಾಳ'

**ನೆಚ್ಚಿ ಮೆಚ್ಚಿ ಕೂಡಿದ್ದೇವೆ**

ಅನುಭವವಿಲ್ಲದ ಹುಡುಗ ಹುಡುಗಿಯನ್ನು ಪೋರಿ ಪೋರ ಎನ್ನುವರು. ಅವರು ದೈಹಿಕ ಕುತೂಹಲದಿಂದ ಆಕರ್ಷಿತರಾಗಿ ಕೂಡಿ ಧೈರ್ಯದಿಂದ ಬಾಳು ಮಾಡಲು ತೊಡಗುವ ಸಾಹಸದ ನಾಯಕ ನಾಯಕಿಯರಾಗುವ ಚಿತ್ರ 'ಪೋರಿ ಪೋರ'[18] ಕವನದಲ್ಲಿದೆ. ಅವರು ಪೋರಿ ಪೋರರಾದುದರಿಂದ ತಮ್ಮ ಮುಂದಿನ ಜೀವನದ ಜವಾಬ್ದಾರಿಯನ್ನು ಶಿವನ ಮೇಲೆ ಹಾಕುತ್ತ ಸಂತಸದಿಂದಿದ್ದಾರೆ. ಅವರು ಜೊತೆಗೂಡಿ ಹಾಡುತ್ತಾರೆ:

'ಪೋರಿ ನೀನು, ನಾನು ಪೋರಾ
ಮಾರಿ ಕಣ್ಣಿಗೆ ಮರುಳರಾಗಿ
ನೆಚ್ಚಿ ಮೆಚ್ಚಿ ಕೂಡಿದ್ದೇವಽ
ಬೇರೆ ಇಲ್ಲಾ | ಇದ್ದರೆ
ಶಿವನೆ ಬಲ್ಲಾ'

ಇದೇ ಬಗೆಯ ಭಾವಲಹರಿಯನ್ನು 'ವದತೋ ವ್ಯಾಘ್ರಾತ'[19] ಎಂಬ ಕವನದಲ್ಲಿ 'ಬದುಕುಳ್ಳ ತರುಣ, ಬಾಳುಳ್ಳ ತರುಣಿ, ನಾಡಿದ್ದು ಆಚೆಗುಂಟು ಎದೆಗಂಟು ಬಿಚ್ಚು, ನಾಂದೆದೆಗೆ ಉಂಟು ಮುಟ್ಟಿದ್ದೆ ನಂಟು-ನಂಟು' ಎಂದಿದ್ದಾರೆ.

ಪೋರಿ-ಪೋರ ಒಬ್ಬರಿಗೊಬ್ಬರು ಮೆಚ್ಚಿ ಕೂಡಿರುವುದರಿಂದ ಲೋಕಾರೂಢಿಯ ಮಾತಾದ - ಹೆಣ್ಣು ಮಣ್ಣು ಹಾಳಾದುದು, ಯೌವನದ ಬಣ್ಣ ಈ ಹುರುಪು ಸದಾ ಇರುವುದಿಲ್ಲ, ಈ ಬಾಳು ಸುಳ್ಳಾಟ- ಎಂಬುದನ್ನು ಕೇಳಿದ್ದರೂ ಅವರು ಆ ನುಡಿಗಳಿಗೆ ಹೆದರಿಲ್ಲ. ತಾವು ಕೂಡುವಾಗ ಇಂತಹ ನುಡಿ ಹೇಳಿ ತಮ್ಮನ್ನು ಯಾರೂ ಹೆದರಿಸಲಿಲ್ಲ ಎಂದು ಅವರು ಹೇಳುವಲ್ಲಿ ಅವರ ನಿಜಪ್ರೀತಿ ವ್ಯಕ್ತವಾಗಿದೆ. ಈ ಮುಕ್ತ ಮನಸ್ಸಿರುವುದರಿಂದ ಅವರಿಗೆ ತಾವು ಕೂಡಿರುವುದು ಆಟದಂತಿದೆ. ನಿಸರ್ಗಸಹಜ ಸೆಳೆತಕ್ಕೆ ಒಳಗಾದ ಪ್ರೇಮಿಗಳ ಕೂಟ ಮತ್ತು ಬಾಳಿನ ಮಾಟ ಈ ಕವನದ ಜೀವಾಳವಾಗಿದೆ. ಹೀಗೆ ಗಂಡು-ಹೆಣ್ಣುಗಳು ಧೈರ್ಯದಿಂದ ಕೂಡಿ ಬಾಳ್ವೆ ಮಾಡಬೇಕು ಎಂಬ ತತ್ವವನ್ನು ಬೇಂದ್ರೆಯವರು ಇಲ್ಲಿ ಸಾರಿರುವುದು ಕಂಡುಬರುತ್ತದೆ. ಪೋರಿ-ಪೋರ ಹಾಡುತ್ತಾರೆ:

'ಆಡಿದ್ದೊಂದ ನೋಡಿದ್ದೊಂದ
ಹೂಡಿದ್ದೊಂದ ಕೂಡಿದ್ದೊಂದ
ಬೇರೆ ಮಾತು ನನಗ ನಿನಗಽ
ಗೊತ್ತ ಇಲ್ಲಾ | ಗುಟ್ಟು
ಶಿವನೆ ಬಲ್ಲ'

**ಒಲುಮೆಯಲಿ ಹಾಸುಹೊಕ್ಕು**

ಗಂಡು-ಹೆಣ್ಣಿನ ಪ್ರಣಯದ ಗುಟ್ಟಿರುವುದು ಮೌನ ಸಂಜ್ಞೆಗಳಲ್ಲಿ. ಅಲ್ಲಿ ಮೌನವೇ ಮಾತಾಗಿರುತ್ತದೆ. ಪ್ರಣಯಕ್ಕೆ ಒಲಿದ ಹೆಣ್ಣು ಕಣ್ಣಿನಲ್ಲಿಯೇ ಮಾತಾಡುವುದೊಂದು ವಿಶೇಷ. ಅಲ್ಲಿ ಮಾತಿಗೆ ಬೆಲೆಯಿಲ್ಲ, ಸಂಕೇತಗಳಿಗೆ ಬೆಲೆ. ಬೇಂದ್ರೆಯವರು 'ಅವನು-ಅವಳು'[20] ಕವನವನ್ನು ಶೃಂಗಾರ ಸಂಜ್ಞೆ ಸಂಕೇತಗಳಿಂದ ಸೃಷ್ಟಿಸಿದ್ದಾರೆ.

'ಅವನು-ಅವಳು', ಕವನ ಪ್ರೀತಿಯ ಪ್ರಾರಂಭದ ಆಕರ್ಷಣೆಗೆ ಒಳಗಾದ ತರುಣ ತರುಣಿಯ ಮಾತು ಮತ್ತು ಸನ್ನೆಯನ್ನು ಹೊಂದಿದೆ. ಅವರು ಒಬ್ಬರನ್ನೊಬ್ಬರು ಒಪ್ಪಿದ ಸೂಚನೆ ಕವನದಲ್ಲಿದೆ. ಸಂಕೇತವನ್ನು ನೋಡಿ ಕಲಿಯಬೇಕು, ಅಥವಾ ಓದಿ ತಿಳಿಯಬೇಕು. ಆದಕಾರಣ ಈ ಕವನದ ಮೊದಲ ಮತ್ತು ಕೊನೆಯ ಸಂಭಾಷಣೆ ಬೆರೆತ ಸನ್ನೆಯನ್ನು ಇಲ್ಲಿ ನೀಡಿದೆ:

'ಅವಳು : ನೀನು ಹೊರಟಿರುವದೆತ್ತ?
ಅವನು : (ಬರಿ ಸನ್ನೆಯಿಂದ)ಇತ್ತ -
* * *
ನು : ನನಗೆ ಬೇಕಾದುದೇನೇ?
ಳು : (ಬರಿ ಸನ್ನೆ) ನೀನೇ!'

**ಚಿತ್ರ**[21]

ಕಾವ್ಯದಲ್ಲಿ ಸಂಕೇತಗಳ ರೇಖಾಚಿತ್ರವಾಗಿ ಮೂಡಿರುವ ವಿಶಿಷ್ಟ ಕವನ 'ಚಿತ್ರ'. ಕೈಗಲ್ಲದಿಂದ ಪ್ರಾರಂಭವಾಗಿ ನಗುವು ಬಿಕ್ಕುವಿನಲ್ಲಿ ಮುಕ್ತಾಯವಾಗುವ ಪ್ರಣಯಿನಿಯ ಚಿತ್ರ ತನ್ನ ಎಲ್ಲ ಒಳಭಾವವನ್ನು ಬಿಂಬಿಸುವಲ್ಲಿ ಯಶಸ್ವಿಯಾಗಿದೆ. ಅದರ ಪೂರ್ಣಪಾಠ ಹೀಗಿದೆ :

'ಕೈಗಲ್ಲ ..........................
(ಬಳಿಯಲ್ಲಿ ನಲ್ಲನಿಲ್ಲ!)
ಹುಬ್ಬುಗೆಯ್ಯು ..........................
(ಕಾಣುವುದೆ ದೂರ ಮೈಯು!)
ಗದ್ದ ಬೆರಳು .....................
(ಕಂಡಳೇ ನಲುಮೆದಿರುಳು!)
ತೆರೆದ ತೋಳು ...........................
(ಒಂದಾದವೆರಡು ಹೋಳು!)
ನಗುವು ಬಿಕ್ಕು
(ಒಲುಮೆಯಲಿ ಹಾಸುಹೊಕ್ಕು!)

**ರಾಗರತಿ**[22]

'ರಾಗರತಿ' ಕವನವು - ಪ್ರಕೃತಿಯನ್ನು, ಗಂಡು ಹೆಣ್ಣನ್ನು, ಕವಿಯನ್ನು ತನ್ನ ತೆಕ್ಕೆಗೆ ತೆಗೆದುಕೊಂಡು; ಸಹೃದಯನ ಹೃದಯಕ್ಕೂ ಲಗ್ಗೆ ಇಡುವಷ್ಟು ಭಾವತೀವ್ರತೆಯನ್ನು ಹೊಂದಿದೆ. ಕವಿಯು ನೇರವಾಗಿ 'ರಾಗರತಿ'ಯನ್ನು ಬಣ್ಣಿಸುವುದರಲ್ಲಿಯೇ ಅದರ ತೀವ್ರ ಭಾವಾಭಿವ್ಯಕ್ತಿ ಕಾಣುತ್ತದೆ. ಕವಿ 'ಮುಗಿಲ ಮಾರಿಗೆ ರಾಗರತಿಯ ನಂಜ ಏರಿತ್ತ', ಎಂದು ಪ್ರಾರಂಭಿಸುವಾಗಲೇ ಪ್ರಕೃತಿಯನ್ನು ಹೆಣ್ಣಿನ ರೂಪದಲ್ಲಿ

ಬಣ್ಣಿಸಿದ್ದಾರೆ. ಕವನ ಪ್ರಾರಂಭದಿಂದಲೇ ಓದುಗನನ್ನು ತನ್ನತ್ತ ಸೆಳೆದುಕೊಂಡು ಆಕರ್ಷಣೆಯನ್ನು ಅವನಲ್ಲುಂಟುಮಾಡುವುದು ಈ ಕವನದ ಶ್ರೇಷ್ಠ ಗುಣವಾಗಿದೆ. ಪ್ರಕೃತಿಯಲ್ಲಿ 'ಇರುಳು ಮಬ್ಬಿನ್ಯಾಗ ಹಗಲಿನ ಬೆಳಕು ಕರಗು'[23] ತ್ತಿದ್ದಂತೆ ಆಗಸದಲ್ಲಿ 'ಬಿದಿಗಿ ಚಂದ್ರ'ನು 'ಬೆಳ್ಳಿನ' ಕೂಡಿದ ಚಿತ್ರವಿದೆ.

ಮುಗಿಲ ನಂತರದ ಚಿತ್ರಣ ನೆಲದ ರಾಗರತಿಯದಾಗಿದ್ದು, 'ಬೊಗಸಿಗಣ್ಣಿನಾ ಬಯಕೆಯ ಹೆಣ್ಣು ನೀರಿಗೆ ಹೋಗಿತ್ತs ತಿರುಗಿ ಮನೀಗೆ ಸಾಗಿತ್ತs' ಎಂದಿದೆ. ಅಲ್ಲಿ ಕಾಮಿ ಬೆಕ್ಕಿನ ರೀತಿ ಅವಳನ್ನು ಹಿಂಬಾಲಿಸುವ ಬಯಕೆಯ ಗಂಡಿನ ಚಿತ್ರವಿದೆ. ಅವನ ರಾಗ ಭಾವವು ಹೆಚ್ಚುವಂತೆ ಪ್ರಕೃತಿಯು ಹೆಣ್ಣನ್ನು ಆಡಿಸುವ ಚಿತ್ರ ಅತಿ ಸಹಜವಾಗಿ ಮೂಡಿಬಂದು ಕಚಗುಳಿಯ ಭಾವವನ್ನುಂಟು ಮಾಡುತ್ತದೆ.

'ಮಳ್ಳಗಾಳಿ - ಸುಳಿ ಕಳ್ಳಕೈಲೆ ಸೆರಗನು ಹಿಡಿತಿತ್ತs
ಮತಮತ ಬೆರಗಿಲೆ ಬಿಡತಿತ್ತ'

ಹೀಗೆ ಹೆಣ್ಣು ಆ ಸಂಜೆಯ ಪ್ರಕೃತಿಯ ಕಾರಣದಿಂದ ಆಕರ್ಷಣೀಯವಾಗಿ ಕಾಣುತ್ತ ಸಾಗುತ್ತಿರುವಾಗ ಅವಳನ್ನು ಹಿಂಬಾಲಿಸುವ ಗಂಡು 'ತನ್ನ ಮೈಮರ ಮರತಿತ್ತ' ಎಂದು ರಾಗರತಿಯ ಉನ್ಮತ್ತತೆಯನ್ನು ದರ್ಶಿಸಿದೆ. ಸಂಜೆಯ ರಾಗರತಿಯ ಹೊತ್ತು ಬೆಳಕು ಕತ್ತಲ ಮಿಲನದ ಸಮಯ. ಅದು ಗಂಡು ಹೆಣ್ಣಿನ ಆಕರ್ಷಣೆಯ ಸಮಯವಾಗಿದೆ. ಪ್ರೇಮಿಯನ್ನು ಹಿಂಬಾಲಿಸುವ ಪ್ರಿಯಕರನು ಆ ರಾಗರತಿಗೆ ಒಳಗಾಗಿ ಅಳುಕು, ನಡುಕು, ಅಸ್ಪಷ್ಟತೆಯಲ್ಲಿಯೇ ಕಂಡರೂ ಕಾಣದಂತೆ ಹಿಂಬಾಲಿಸುತ್ತಿರುವ ಭಾವ ಹೆಣ್ಣಿನ ಮನಸ್ಸಿನಲ್ಲಿ ಮೂಡಿದೆ ಎಂಬುದು ಇಲ್ಲಿಯ ಚಿತ್ರಣದಲ್ಲಿದೆ. ಆದರೆ ಕೀರ್ತಿನಾಥ ಕುರ್ತಕೋಟಿಯವರು "'ರಾಗರತಿ'ಯ ನಾಯಕ ನಾಯಿಕೆಯರು ಅಸ್ಪಷ್ಟ ಚಿತ್ರಗಳಾಗುವದರಿಂದ ನಿಸರ್ಗ ಚಿತ್ರಗಳಲ್ಲಿ ಧ್ವನಿತವಾಗುವ ಪ್ರಣಯ ಭಾವನೆ ಬೆಳವಣಿಗೆಯನ್ನು ಪಡೆಯುವುದಿಲ್ಲ" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಈ ಕವನದಲ್ಲಿ ನಾಯಕ ಮತ್ತು ನಾಯಿಕೆ ಇಬ್ಬರು ಅದೃಶ್ಯ. ಅವರ ಆಭಾಸದ ಹಾಗೂ ಭ್ರಮೆಯ ಚಿತ್ರಣ ಇಲ್ಲಿದೆ. ಓದುಗನಿಗೆ ನಾಯಕ, ನಾಯಿಕೆಯರ ಚಿತ್ರಗಳು ನೆನಪಿಗೆ ಬರುವುದು ಈ ಕವನದ ಲಾವಣ್ಯ.

ಈ ಕವನದ ಮುಖ್ಯ ವಿಷಯ ಸಂಧ್ಯಾಸಮಯ. ಅನಂತರ ಅದರ ಬೆಳವಣಿಗೆಯಾದ ಚಂದ್ರ ನಕ್ಷತ್ರಗಳ ರಮಣೀಯ ಸಮಯ. ಈ ಸಮಯ ವರ್ಣನೆ ಶೃಂಗಾರಕ್ಕೆ ಉದ್ದೀಪಕಭಾವವಾಗಿ ಇಲ್ಲಿ ವರ್ಣಿತವಾಗಿರುವುದರಿಂದ ಇದು ಉನ್ನತಮಟ್ಟದ ಭಾವಗೀತವಾಗಿದೆ.

ಕಾಮಿಬೆಕ್ಕಿನ ಹೋಲಿಕೆಯನ್ನು ಭಾವಿಯ ಹಾದಿಗೆ ಕೊಡಲಾಗಿದೆ. ಹೆಣ್ಣು ಬೆಕ್ಕು ಕಾಲಕಾಲಲ್ಲಿ ಸುಳಿದಾಡಿ ಅಡ್ಡಾಟಕ್ಕೆ ತೊಂದರೆ ಮಾಡುವಂತೆ ಬಯಕೆಯ ಹೆಣ್ಣಿನ ವಿಚಾರ ಅಡ್ಡಾಟದ ಗತಿಗೆ ಭಂಗವನ್ನು, ಆತಂಕವನ್ನು ಸೃಷ್ಟಿಸುತ್ತದೆ. ಸಾಮಾನ್ಯವಾಗಿ ಮುಗಿಲನ್ನು - ಆಕಾಶವನ್ನು ಪುರುಷನಿಗೆ; ನೆಲವನ್ನು- ಪೃಥ್ವಿಯನ್ನು ಸ್ತ್ರೀಗೆ ಹೋಲಿಸಲಾಗುತ್ತದೆ. ಇಲ್ಲಿ ಸಂಧ್ಯಾಸಮಯದ ಮೂಲಕ ಮುಗಿಲು ಸ್ತ್ರೀರೂಪ ತಾಳಿದೆ. ಸಂಧ್ಯಾಕಾಲ ಶೃಂಗಾರಿಕ ವಿಚಾರಗಳ ಹುತ್ತ ಎಂಬುದನ್ನು ಕವಿ ಸೂಚಿಸಿದ್ದಾರೆ. ನಿಸರ್ಗ ಚಿತ್ರಣ ವಾಚ್ಯ, ನಾಯಕ ನಾಯಿಕೆ ವಿಚಾರ ಧ್ವನಿತ ಎಂಬುದಾಗಿ ಗ್ರಹಿಸಬೇಕಾಗುತ್ತದೆ. ಪರಿಣಾಮಕಾರಿಯಾದ ಪರಿಸರದ ಚಿತ್ರಣ ಅನನ್ಯವಾಗಿದೆ ಎಂಬುದು ಎಲ್ಲರೂ ಒಪ್ಪುವ ಮಾತಾಗಿದೆ.

**೨. ಬಯಕೆ**

ಗಂಡು - ಹೆಣ್ಣು ಆಕರ್ಷಣೆಗೆ ಒಳಗಾಗಿ ಜೊತೆಗೂಡಿ ಆನಂದವನ್ನು ಹಂಚಿಕೊಂಡ ನಂತರ,

ಅವರಲ್ಲಿ ಸ್ನೇಹಕ್ಕೆ ಸದಾ ಆಶಿಸುವ ಬಯಕೆ ಮೂಡುತ್ತದೆ. ಅದು ಪರಸ್ಪರರ ನಿರೀಕ್ಷಣೆಯಲ್ಲಿ ಅರ್ಪಣಾಭಾವದಲ್ಲಿ ಉಲ್ಲಾಸವನ್ನು ಕಾಣುತ್ತದೆ. 'ಪ್ರೀತಿ ಶರಣು ಹೋಗುವ ರೀತಿ'[24] ಎಂದಿದ್ದಾರೆ ಬೇಂದ್ರೆಯವರು. ಈ ಭಾವವು ಬೇಂದ್ರೆಯವರ 'ಕಾಮಕಸ್ತೂರಿ', 'ಇಂದ್ರಹೂ-ಚಂದ್ರಹೂ', 'ನನ್ನವಳು' ಕವನಗಳಲ್ಲಿ ಮೂಡಿಬಂದಿದೆ.

**ಕಾಮಕಸ್ತೂರಿ[25]**

ಕಾಮಕಸ್ತೂರಿ ತುಳಸಿ ಜಾತಿಗೆ ಸೇರಿದ ಸುವಾಸನೆಯ ಸಸ್ಯ. ಪ್ರಣಯಿ ಹೊಲದ ಹತ್ತಿರ ತಾನೇ ತಾನಾಗಿ ಬೆಳೆದ ಕಾಮಕಸ್ತೂರಿಯನ್ನು ಕಿತ್ತು 'ತುಂಬಿ ತುರುಬಿನವಳಾ'ದ ಪ್ರಿಯತಮೆಗೆ ಒಲವಿನಿಂದ ಮುಡಿಸಲು ಕಾತರಗೊಳ್ಳುತ್ತಿರುವ ಭಾವ ಇಲ್ಲಿದೆ. ಅಲ್ಲಿಯ ಪ್ರೇಯಸಿಯನ್ನು ತುಂಬಿ ತುರುಬಿನವಳೆಂದು ಕರೆದಿರುವಲ್ಲಿ ಅವಳ ಕೇಶಸೌಂದರ್ಯ ವರ್ಣಿತವಾಗಿದೆ.

'ಅದನಽ ನೀ ಮುಡಿದಂದ
ಮುಡಿದಂಥ ಮುಡಿಯಿಂದ
ಗಾಳಿಯ ಸುಳಿಯೊಂದ
ಬಂದೆನಗ ತಗಲಿದಂದ
ತಣಿತಣಿವಂದ
ಈ ಮನಕ'

ಎಂಬ ಮನದ ಭಾವದಲ್ಲಿ ಸರಳ, ಸಹಜ ತೃಪ್ತಿಯಿದೆ. ತನ್ನ ಪ್ರಣಯಿನಿ ಅಲ್ಲಿಲ್ಲದಿದ್ದರೂ ಅವನು ಕಲ್ಪಿಸಿಕೊಂಡು ಹಾಗೆ ತಾನು ಒಲ್ಮೆಯಿಂದ ಕಾಮಕಸ್ತೂರಿಯನ್ನು ಮುಡಿಸುವುದನ್ನು ಕಂಡು - ಅವರನ್ನು ಕುರಿತು ಜನ ಏನೇ ಮಾತಾಡಿಕೊಂಡರು, - ಅವರು ಒಬ್ಬರನ್ನೊಬ್ಬರು ಒಲಿದಿರುವುದರಿಂದ ಅದರ ಪರಿವೆ ಅವನಿಗಿಲ್ಲವಾಗಿದೆ. 'ಅನ್ನೋ ಜನರು ಏನು | ಅಂತಽನ ಇರತಾರ | ಹೊರತಾದೆ ನೀ ಜನಕ' ಎಂಬ ನುಡಿಯಲ್ಲಿ ಅವನ ಪ್ರೀತಿಯ ಉನ್ಮತ್ತತೆಯಿದ್ದು ಈ ಕವನ ಕಾಮುವನ್ನು ಕಸ್ತೂರಿಯಾಗಿ ಪರಿವರ್ತಿಸಿಕೊಳ್ಳಬೇಕೆಂಬ ಸಂದೇಶವನ್ನು ಸಾರುತ್ತಿದೆ.

**ಗಾಳಿ ಸಂಗಾತ ಮಾತು ಕಳಿಸ**

'ಕಾಮಕಸ್ತೂರಿ'ಯ ರೀತಿಯೇ ಇರುವ ಇನ್ನೊಂದು ಕವನ 'ಇಂದ್ರ ಹೂ-ಚಂದ್ರ ಹೂ'.[26] ಈ ಕವನದ ನಾಯಕ ಪ್ರೇಯಸಿಯನ್ನು ನೆನೆದು ಅವಳಿಗಾಗಿ 'ಇಂದರ ಹೂ ಚಂದರ ಹೂ | ಚೆಂದ ಚೆಂದದ ಹೂ'ಗಳನ್ನಾಯ್ದು ತಂದು ಅವಳ ನಿರೀಕ್ಷೆಯಲ್ಲಿದ್ದಾನೆ. "ಈ ಕವಿತೆಯಲ್ಲಿ ಕೇಳಿಬರುವ ನಲ್ಲನ ಯಾಚನೆಯ ಧ್ವನಿಯಲ್ಲಿ ಅರ್ಪಣಭಾವ, ದೈನ್ಯ, ಆರ್ತತೆಗಳು ತೆರೆತೆರೆಯಾಗಿ ಬಂದು ಮನಸ್ಸನ್ನು ಕಲಕುತ್ತವೆ"[27] ಎಂದು ಜಿ. ಎಸ್. ಆಮೂರ ಅವರು ನುಡಿದಿದ್ದಾರೆ. ಈ ಕವನದ ನಾಯಕ ತುಂಬಾ ಹೊತ್ತಿನಿಂದ ಪ್ರಿಯೆಯ ನಿರೀಕ್ಷೆಯಲ್ಲಿರುವಂತೆ ಇಲ್ಲಿಯ ಭಾವವಿದ್ದು ಅವನು ಕಾದು ಸೋತಂತಿದ್ದರೂ, ಅವನು ರಸಿಕ ಹಾಡುಗಾರನಾದುದರಿಂದ ಉಲ್ಲಾಸವನ್ನು ಮರಳಿ ಗಳಿಸಲು, ಹೀಗೆ ಹಾಡಿದ್ದಾನೆ:

'ಕಣ್ಣು ಸೋತ್ಯು ಹಾದೀ ನೋಡಿ,
ಮನ ಸೋತ್ಯು ಚಿಂತೀ ಮಾಡಿ,
ನಾಲ್ಗಿ ಸೋತ್ಯು ಹಾಡಿ ಹಾಡಿ
ನಿನ ಹಾಡು ಸುಂದರಿ'

ಅವನು ಮನಸ್ಸಿನಲ್ಲಿಯೇ ಅವಳು ತಡವಾದುದಕ್ಕೆ ಕಾರಣವನ್ನು ಊಹಿಸಿಕೊಳ್ಳುತ್ತಾನೆ. ಅವಳ ಮುಗ್ಧತೆಯಿಂದ ಹುಡುಗತನದಿಂದ ತಡವಾಗಿದೆ ಎಂದುಕೊಳ್ಳುತ್ತಾನೆ. 'ಚಿಗರಿ ಸಂಗಾತ ಆಟ || ಎಡಬಲಕ ನೋಟ' ನೋಡುತ್ತ ಆಡಿಕೊಳ್ಳುತ್ತ ಬರುವವಳು ಎಂದು ರಮ್ಯಭಾವದಲ್ಲಿ ಲೀನವಾಗುತ್ತಾನೆ. ಹಾಡುಗಾರನಾದ ಅವನನ್ನು ಕಲ್ಪನೆ ಕೈಬೀಸಿ ಕರೆಯುತ್ತದೆ. ಒಂಟಿಯಾದ ಅವನು ತನ್ನ ಜೊತೆಯಲ್ಲಿರುವ ಗಾಳಿಯನ್ನು ಸಂವಹನ ವಾಹಕವಾಗಿ ಕಲ್ಪಿಸಿಕೊಳ್ಳುತ್ತಾನೆ. ಗಾಳಿಯು ಸಂವಹನವಾಹಕ ಎಂಬುದು ವೈಜ್ಞಾನಿಕವಾಗಿಯೂ ಸತ್ಯ. ಆ ಸತ್ಯದೊಡನೆ ಸುಮಧುರ ಭಾವದೊಡಗೂಡಿ ಆಹ್ಲಾದಮಯವಾಗಿ ಹಾಡುತ್ತಾನೆ:

'ಗಾಳಿ ಸಂಗಾತ ಮಾತು
ಕಳಿಸ ಕೇಳೇನಿ ಕೂತು'

ಈ ನುಡಿ-ಮಾತು ಸಂವಹನವಾದಂತೆ ಪ್ರಾಸ ಒಳಪ್ರಾಸಗಳು ಮಿಳಿತವಾಗಿ communicate ಆದ ಭಾವವನ್ನು ಹೊಮ್ಮಿಸುವಂತಿವೆ. ಗಾಳಿಯೊಡನೆ ತೇಲಿಬರುವ ನುಡಿಗಾಗಿ ಕಾದಿರುವವನಿಗೆ; ಅವಳಿಗಾಗಿ ಪರಿತಪಿಸುತ್ತಿರುವವನಿಗೆ ಅವಳಿಲ್ಲದೆ ಇನ್ನೇನೂ ಮೂಡುವ ಬೆಳದಿಂಗಳನ್ನು ಕಳೆಯುವುದು ಹಿಂಸೆಯಾದಂತಿದೆ. ಅವನ ಕಾತರತೆ ಅವಳು ತಡವಾದಷ್ಟೂ ಹೆಚ್ಚುತ್ತದೆ. ಅವನು ಸುಮಧುರ ಭಾವದಲ್ಲಿ ಕನವರಿಸುತ್ತಾನೆ:

'ಬಂತು ಸಂಜಿಯ ಹೊತ್ತು
ಬೆಳದಿಂಗಳು ಜೀವದ ಕುತ್ತು
ಮಾಡಬ್ಯಾಡ ಸಾವಿನ ತುತ್ತು
ನನಗಿಂದ ಸುಂದರಿ'

ವಿರಹ ತಾಪದ ಹತ್ತನೆಯ ಅವಸ್ಥೆ ಮರಣ. ಬೆಳುದಿಂಗಳು ವಿರಹ ತಾಪದ ಪ್ರಮುಖ ಕಾರಣ. ಈ ವರ್ಣನೆಯ ಮೂಲಕ ಈ ಕವನದ ನಾಯಕ ಪ್ರಾಮಾಣಿಕನಾಗಿರುವನು ಎಂಬುದು ಸ್ಪಷ್ಟ.

ಈ ಕವನದಲ್ಲಿ ಇಂದ್ರ-ಹೂ ಎಂಬುದು ಒಂದು ರೂಪಕವಾಗಿಯೂ, ಚಂದ್ರ-ಹೂ ಎಂಬುದು ಇನ್ನೊಂದು ರೂಪಕವಾಗಿಯೂ ಇದೆ. ದೇವೇಂದ್ರನಿಗೆ ಸಹಸ್ರಾಕ್ಷನಾಗುವ ಶಾಪ ಗೌತಮ ಋಷಿ ಕೊಟ್ಟಿದ್ದ. ಬೇಂದ್ರೆಯವರು ಇಂದ್ರನನ್ನು ಹೂವಾಗಿ ಅರಳಿಸಿ ಶಾಪದಿಂದ ಮುಕ್ತಗೊಳಿಸಿದ್ದಾರೆ. ವಿಶ್ವಾಮಿತ್ರನ ತಪಸ್ಸನ್ನು ಮೇನಕೆಯ ಮೂಲಕ ಭಂಗಗೊಳಿಸಿದವನು ಇಂದ್ರ. ಇಂದ್ರನ ಅಹಂಕಾರವನ್ನೂ ಬೇಂದ್ರೆಯವರು ಹೊಡೆದು ಹಾಕಿದ್ದಾರೆ. ಇಂದ್ರ ಹೂವಾದಾಗ ಈ ಕವನದ ನಾಯಕನು ಸುವಾಸನೆಯಿಂದ ಆನಂದ ಹೊಂದುತ್ತಾನೆ. ಇಲ್ಲಿಯ ನಾಯಕ-ನಾಯಿಕೆಯರು ಕಾಳಿದಾಸನ ದುಶ್ಯಂತ ಶಕುಂತಲೆ ಇವರನ್ನು ನಮ್ಮ ಕಣ್ಣಮುಂದೆ ನಿಲ್ಲಿಸುತ್ತಾರೆ. ಶಕುಂತಲೆ ಹಾಗೂ ಚಿಗರಿ ಆಶ್ರಮವಾಸಿಗಳು, ಸಹವಾಸಿಗಳು. ದುಶ್ಯಂತ -ಶಕುಂತಲೆಯರ ಪ್ರಣಯ ಪಂಚಮಹಾಭೂತ ಹಾಗೂ ಚಿಗರಿಗೆ ಗೊತ್ತು. ಚಿಗರಿ ಸಹಿತ ಶಕುಂತಲೆಯ ಚಿತ್ರ, ದೂರ್ವಾಸ ಶಾಪಮುಕ್ತ ದುಶ್ಯಂತನ ಕಣ್ಣೆದುರು ಕಂಡು ಅವನು ತಾಪ ಹೊಂದುವಂತೆ ಆಗುತ್ತದೆ. ಚಂದ್ರನೂ ಹುಣ್ಣಿಮೆಯ ಹೂವಾದಾಗ ವಿರಹತಾಪ ಉಕ್ಕೇರುತ್ತದೆ. ವಿರಹಿಯಾದ ದುಶ್ಯಂತ ಹಾಡಬಹುದಾದ ವಿರಹಗೀತಕ್ಕೆ ಮಾದರಿಯಾಗಿ ಇಂದ್ರ-ಹೂ, ಚಂದ್ರ-ಹೂ ಕವನ ರೂಪ ತಾಳಿದಂತಿದೆ.

**ಹಲವಾದಿ ಒಬ್ಬಾಕೆಯಾಗಿ**

'ನನ್ನವಳು'[28] ಕವನದ ಭಾವಸಂದರ್ಭ 'ಸಂಜೆ, ರಾತ್ರಿ ಮತ್ತು ನಸುಕು ಇವು ಶೃಂಗಾರರಸದ

ಉದ್ದೀಪನ ವಿಭಾವಗಳು. ಈ ವಿಭಾವಗಳ ಮೂಲಕ ವಿರಹಿಯಾದ ನಾಯಕನಿಗೆ ನಾಯಿಕೆಯ ನೆನಪಾಗಿದೆ'[29] ಎಂದಿದೆ. ಕವನದ ಹೆಸರಿನ ಕೆಳಗೆ ಆವರಣದಲ್ಲಿ 'ನಸುಕಿನ ಝಳುಕು' ಎಂದು ಮುದ್ರಿಸಿದೆ. ನಸುಕಿನಲ್ಲಿ ಬಿದ್ದ ಸುಂದರ ಶೃಂಗಾರಮಯ ಕನಸು ಇದಾಗಿರಬಹುದೇ ಎಂದು ಅನಿಸುತ್ತದೆ. ಈ ಕವನವು ಹುಟ್ಟಿದ್ದು ನಸುಕಿನ ಝಳಕಿನಲ್ಲಾದರೂ ಕವನದ ಪ್ರಾರಂಭ ರಂಗುರಂಗಿನ ಸಂಜೆಯಲ್ಲಿ ಆಗಿದೆ ; ಅವನಿಗೆ ಪ್ರೇಯಸಿ ಆಕರ್ಷಕ ಸಂಜೆಯಾಗಿದ್ದಾಳೆ.

'ತಂಬುಲದ ತುಟಿಯ ತೋರಿ
ಮಲ್ಲಿಗೆಯ ಮುಡಿದುಕೊಂಡು
ಮೆಲ್ಲಗಾಗಿ ಬರುವವಳ್ಯಾರs?
ಸಂಜಿ ಏನs?'

ಈ ಕವನವನ್ನು ವಿಮರ್ಶಿಸುತ್ತ ಕೀರ್ತಿನಾಥ ಕುರ್ತಕೋಟಿಯವರು : 'ಒಲಿದು ಬಂದ ಹೆಣ್ಣಿನ ಈ ಸಹಜ ಮುಗ್ಧತೆಯ ಚಿತ್ರ ಮನಸೆಳೆಯುವಂತಿದೆ ನಿಜ. ಆದರೆ ಈ ಮುಗ್ಧ ಚಿತ್ರ ಮೂಡಿಬರಲು ಕಾವ್ಯ ಎಷ್ಟು ಚಾತುರ್ಯದಿಂದ ದುಡಿದಿದೆಯೆಂಬುದು ಕಾವ್ಯಾಭ್ಯಾಸಿಗಳಿಗೆ ಅರಿಯದ ವಿಷಯವೇನಲ್ಲ. ಕವಿಯ ವರ್ಣಪ್ರಜ್ಞೆ ಮತ್ತು ನಾದಪ್ರಜ್ಞೆ ಶ್ಲಾಘನೀಯವಾದ ರೀತಿಯಲ್ಲಿ ಉಪಯುಕ್ತವಾಗಿವೆ. ನಾಯಕ ನಾಯಕಿಯರ ಸಲಿಗೆಗಾಗಿಯೇ ಆಡುನುಡಿಯನ್ನು ಬಳಸಲಾಗಿದೆ. ಕವಿತೆಯ ಹಗುರಾದ ಲಯ ಚಿತ್ರದ ಸೌಂದರ್ಯವನ್ನು ಹೆಚ್ಚು ಮಾಡಿದೆ. ಅಲಂಕಾರದ ಅರಿವೇ ಇಲ್ಲದವರಂತೆ ಉತ್ಪ್ರೇಕ್ಷೆ ಭ್ರಮೆ ಹುಟ್ಟಿಸುತ್ತದೆ'[30] ಎಂದು ಹೇಳಿದ್ದಾರೆ.

ಈ ಕವನದಲ್ಲಿ ನಾಯಕನು ತನ್ನ ನಾಯಕಿಯ ಸಂಜಿ, ರಾತ್ರಿ, ನಸುಕು ಎಂಬ ಮೂರು ಚಿತ್ರಗಳನ್ನು ಕಂಡಿದ್ದಾನೆ. ಅವಳು ಅವನಿಗೆ ಪ್ರಕೃತಿಯ ಪ್ರತಿರೂಪ. ಆದುದರಿಂದ ಅವಳನ್ನು:

'ಹೊತ್ತೊತ್ತಿಗೆ ಹೊಂದಿಕೆಯಾಗಿ
ಹಲವಾದಿ ಒಬ್ಬಾಕೆಯಾಗಿ
ಹೌದ ಚೆನ್ನಿ ಹೌದs ಚೆಲುವೀ
ನನ್ನವಳೇನs?'

ಎಂದು ಪ್ರಶ್ನಿಸಿ, ಆ ಪ್ರಶ್ನೆಯಲ್ಲಿಯೇ ತಾನು ಹೌದೆಂದುಕೊಂಡು ಉತ್ತರ ಪಡೆದಂಥ ಭಾವನೆಯಲ್ಲಿ ತಲ್ಲೀನನಾಗುವ ಆನಂದವಿದೆ. ಸಂಜೆಯ ನಂತರದ -

'ಮೇಲ ಸೆರಗು ಮೆಲ್ಲಗ ಸರಿಸಿ
ವಾರಿನೋಟ ಮೇಲಕ್ಕೆತ್ತಿ
ಮಳ್ಳಿಯಂತೆ ಮುರುಕುವಳ್ಯಾರ?
ಇರುಳು ಏನ?'

ಎಂಬಲ್ಲಿ ಮೇಲಸೆರಗು, ವಾರಿನೋಟ, ಮಳ್ಳ ನುಡಿಗಳು ಶೃಂಗಾರ ಸಂಕೇತವಾಗಿ ಇರುಳಿನ ವೈಭವವನ್ನು ಅನಾವರಣಗೊಳಿಸುತ್ತವೆ. ಕೊನೆಯ ಮುಖ ನಸುಕು. ಮಿಲನದ ಅನಂತರದ ಭಾವಶಾಂತಿ ಅದಾಗಿರಲು ಸಾಕು. ನಸುಕು-ಬ್ರಾಹ್ಮೀ ಮುಹೂರ್ತ. ಒಳ್ಳೆಯ ವಿಚಾರಗಳ ಸ್ಫುರಣಕ್ಕೆ ತಕ್ಕ ಸಮಯ. ಸಂಜೆ - ಕಾಮಪ್ರಚೋದಕ, ರಾತ್ರಿ - ಕಾಮೋದ್ದೀಪಕ ಹಾಗೂ ನಸುಕು ಕರ್ತವ್ಯಪ್ರಜ್ಞೆಯ ಉದಯ. ಈ ಮೂರಕ್ಕೂ 'ನನ್ನವಳಾದ' ನಾಯಿಕೆಯೇ ಕಾರಣ. ಮನೆ ಇರುವುದೇ ಮಡದಿಗಾಗಿ. ಗೃಹಸ್ಥಾಶ್ರಮದ

ಯಜ್ಞಶಾಲೆ ಮನೆ. ಕಾಮಯಜ್ಞ, ಧರ್ಮ ಕಾಮಕ್ಕೆ ಸಮ. ಇದು ಕಾಮುಕ ವ್ಯಸನವಾಗಬಾರದು ಎಂಬ ಸಂದೇಶ ಈ ಕವನದಲ್ಲಡಗಿದೆ. ಸಂಜೆ, ರಾತ್ರಿ, ನಸುಕಾದ ನನ್ನವಳು ಧರ್ಮವನ್ನು ಪರಿಪಾಲಿಸಿ, ದುಷ್ಟ ವಿಚಾರಗಳನ್ನು ಸಂಹರಿಸಲಿ ಎಂಬ ಪ್ರಾರ್ಥನೆಯ ಧ್ವನಿ ಇಲ್ಲಿದೆ. ಯಾವ ಸಮಯದಲ್ಲಿ ಏನಾಗಬೇಕು ಎಂಬುದನ್ನು ಅರಿತವಳು - ನನ್ನವಳು. ಆ ಆ ಕಾಲಕ್ಕೆ ಹೊಂದಿಕೆಯಾಗುವ ಚೆನ್ನಿ - ಗೃಹಿಣಿ ಧರ್ಮ ಅರಿತವಳಾಗಿರುತ್ತಾಳೆ. ಈ ಕವನದ ನಾಯಕನಿಗೆ ತನ್ನ ನಾಯಿಕೆಯಲ್ಲಿ ಇರುವ ಸಂಪೂರ್ಣ ವಿಶ್ವಾಸ ಇಲ್ಲಿ ವ್ಯಕ್ತವಾಗಿದೆ.

**೩. ಅನಂತ ಪ್ರಣಯ**

ಚಂದ್ರ ಸೂರ್ಯರಲ್ಲಿರುವ ಆಕರ್ಷಣೆಯನ್ನು ಆಧರಿಸಿ ಅದನ್ನು ಹೆಣ್ಣು ಗಂಡಿನ ಪ್ರೀತಿಯಾಗಿಸಿ ಒಂದು ನಿರಂತರ ರೂಪಕವಾಗಿ ಬೇಂದ್ರೆ ಬಣ್ಣಿಸಿದ್ದಾರೆ. ಇದೊಂದು ನವೀನ ಕಲ್ಪನೆಯಾಗಿ ಅವರ ಉಜ್ವಲ ಪ್ರತಿಭೆಗೆ ಸಾಕ್ಷಿಯಾಗಿದೆ. ಅವರು ಅದನ್ನು 'ಅನಂತ ಪ್ರಣಯ' ಎಂದು ಕರೆದಿದ್ದಾರೆ. ಇದೇ ಬಗೆಯ ಇನ್ನೊಂದು ಕವನ 'ಮುಗ್ಧೆ'. ಇಲ್ಲಿ ಸೂರ್ಯ ಮತ್ತು ಸೂರ್ಯಕಾಂತಿಯ ರೂಪಕದಲ್ಲಿ ಅನಂತ ಪ್ರಣಯ ಅಡಗಿದ್ದು, ಈ ನೆಲ ಮತ್ತು ಮುಗಿಲಿನ ಆಕರ್ಷಣೆಯನ್ನು ಧ್ವನಿಸುವ ಕಾವ್ಯ ಇದಾಗಿದೆ. ಆ ರೂಪಕದ ಹಿನ್ನೆಲೆಯಲ್ಲಿ ಪರಿತಪಿಸುವ ಮುಗ್ಧೆಯ ಚಿತ್ರವನ್ನೂ ನೀಡಿ ಗಂಡು-ಹೆಣ್ಣಿನ ಆಕರ್ಷಣೆಯ ಒಂದು ವಿಭಿನ್ನ ದೃಷ್ಟಿಕೋನವನ್ನು ಕಾವ್ಯವಾಗಿಸಿದ್ದಾರೆ.

**ಚುಂಬಕ ಗಾಳಿಯು ಬೀಸುತಿದೆ**

ಪ್ರಕೃತಿಯಲ್ಲಿರುವ ಸಹಜ ಆಕರ್ಷಣೆ, ಪ್ರೇಮದ ಬಂಧ, ಮಿಲನದ ತೀವ್ರತೆ ಇಲ್ಲಿ ಚಂದ್ರ ಮತ್ತು ಸೂರ್ಯರ 'ಅನಂತ ಪ್ರಣಯ'[31]ವಾಗಿದೆ. ಕಾವ್ಯದ ಹೆಸರೇ ವಾಚ್ಯಾರ್ಥವನ್ನು ಹೊಂದಿ ಅದರ ಅನಂತತೆಯನ್ನು ಸಾರುತ್ತದೆ. ಕವಿಯ ಕಲ್ಪನೆಯಲ್ಲಿ ಚಂದ್ರ ಪ್ರಿಯೆಯಾಗಿ ಸೂರ್ಯ ಪ್ರಿಯಕರನಾಗಿದ್ದಾನೆ. ನಿಸರ್ಗಸಹಜ ಗತಿಯಲ್ಲಿ ಬೀಸುವ ಗಾಳಿ, ಅವರಲ್ಲಿ ಪ್ರೀತಿಯ ಪ್ರವಾಹ ಹರಿಸಲು ಕಾರಣವಾಗಿದೆ. ಸೂರ್ಯ-ಚಂದ್ರರ ಮಧ್ಯೆಯಿರುವ ಭೂಮಿಯನ್ನು ಕವಿಯು ಪ್ರಿಯರ ಭೇಟಿಯ ಸಂಕೇತಸ್ಥಾನ ಅಭಿಸಾರವಾಗಿಸಿದ್ದಾರೆ. ಪ್ರಣಯಿಗಳು ಒಟ್ಟುಗೂಡಲು ನಿಶ್ಚಯಿಸುವ ಸ್ಥಳ - ಅಭಿಸಾರ - ಸುಂದರ ಕಲ್ಪನೆ! ಇಲ್ಲಿ ಅರಳಿದ ಕಾವ್ಯಪ್ರೇಮಿಗಳ ಹೃದಯವನ್ನು ತಲ್ಲಣಗೊಳಿಸುವ ಚುಂಬಕ ಶಕ್ತಿಯನ್ನು ಹೊಂದಿದೆ. ಕವನದ ಪೂರ್ಣಪಾಠ ಈ ಕೆಳಕಂಡಂತಿದೆ:

೧

'ಉತ್ತರಧ್ರುವದಿಂ ದಕ್ಷಿಣ ಧ್ರುವಕೂ
ಚುಂಬಕ ಗಾಳಿಯು ಬೀಸುತಿದೆ.
ಸೂರ್ಯನ ಬಿಂಬಕೆ ಚಂದ್ರನ ಬಿಂಬವು
ರಂಬಿಸಿ ನಗೆಯಲಿ ಮೀಸುತಿದೆ.

೨

ಭೂರಂಗಕೆ ಅಭಿಸಾರಕೆ ಕರೆಯುತ
ತಿಂಗಳು ತಿಂಗಳು ನವೆಯುತಿದೆ.
ತುಂಬುತ ತುಳುಕುತ ತೀರುತ ತನ್ನೊಳು
ತಾನೇ ಸವಿಯನು ಸವಿಯುತಿದೆ.

೩

ಭೂವನ ಕುಸುಮಿಸಿ ಪುಲಕಿಸಿ ಮರಳಿಸಿ
ಕೋಟಿ ಕೋಟಿ ಸಲ ಹೊಸಯಿಸಿತು.
ಮಿತ್ರನ ಮೈತ್ರಿಯ ಒಸಗೆ ಮಸಗದಿದೆ
ಮರುಕದ ಧಾರೆಯ ಮಸೆಯಿಸಿತು.

4

ಅಕ್ಷಿನಿಮೀಲನ ಮಾಡದೆ ನಕ್ಷ
ತ್ರದ ಗಣ ಗಗನದಿ ಹಾರದಿದೆ.
ಬಿದಿಗೆಯ ಬಿಂಬಾಧರದಲಿ ಇಂದಿಗು
ಮಿಲನದ ಚಿಹ್ನವು ತೋರದಿದೆ.

ಪ್ರಕೃತಿಸಹಜವಾಗಿ ಉತ್ತರ ಧ್ರುವದಿಂದ ದಕ್ಷಿಣ ಧ್ರುವಕ್ಕೆ ಮುದ್ದಿಡುವ ಲೋಹಚುಂಬಕದ ಗಾಳಿ ಬೀಸುತ್ತಿದೆ. ಅದರ ಬೀಸಿಗೆ ಅದರೊಡನೆ ಬರುವ ಸೂರ್ಯಮಂಡಲದ ಪ್ರಕಾಶದಲ್ಲಿ ಚಂದ್ರನ ಪ್ರತಿರೂಪ ಹೊಳೆದು ಅದನ್ನು ಪಡೆಯುವ ಆಸೆಯಿಂದ 'ನಗೆಯಲಿ ಮೀಸುತಿದೆ'. ಇದು ಹೆಣ್ಣಾದ ಚಂದ್ರ ಸೂರ್ಯನಿಗೆ ಆಕರ್ಷಿತವಾದ ಮೈ ಪುಲಕಗೊಂಡು ಅವನನ್ನು ಕೂಡಬೇಕೆಂಬ ಅಭಿಲಾಷೆಯನ್ನು ಹೊಂದಿರುವುದಾಗಿದೆ.

ಸೂರ್ಯನ ಆಕರ್ಷಣೆಗೆ ಒಳಗಾದ ಪ್ರಿಯೆ ಚಂದ್ರಳಿಗೆ ಮಿಲನದ ತೀವ್ರತೆಯುಂಟಾಗಿ ತನ್ನ ಮತ್ತು ಅವನ ಮಧ್ಯೆ ಇರುವ ಭೂಮಿಯನ್ನೆ ಪ್ರಿಯನನ್ನು ಕೂಡಲು ಸಂಕೇತಸಾಧನವಾಗಿಸಿ 'ಭೂರಂಗಕೆ ಅಭಿಸಾರಕೆ ಕರೆಯುತ್ತ' ಅವನಿಗಾಗಿ ಕಾಯುತ್ತಾಳೆ. ಆದರೆ ಅವನು ಅಭಿಸಾರಕ್ಕೆ ಬರುವುದಿಲ್ಲ. ಅದರ ಫಲವಾಗಿ ಚಂದ್ರ 'ತಿಂಗಳು ತಿಂಗಳು ನವೆಯುತಿದೆ', ಆದರೆ ಈ ಸಾಲು ಹೆಣ್ಣಿನ ಹಾಗೂ ಚಂದ್ರನ ಪ್ರತಿ ತಿಂಗಳ ಬವಣೆಯನ್ನು; ರಜಸ್ವಲೆಯಾದ ನಂತರದ ಪ್ರಿಯನ ಮಿಲನದ ಆಕಾಂಕ್ಷೆ ಫಲಗೂಡದೆ ನವೆಯುವುದನ್ನು; ಅದರ ಫಲವೆಂಬಂತೆ ತಿಂಗಳಾದ ಚಂದ್ರ ನವೆಯುತ್ತ ಸಣ್ಣಗಾಗುವುದನ್ನು ಧ್ವನ್ಯಾರ್ಥದಲ್ಲಿ ನಿರೂಪಿಸಿದೆ.

ಮತ್ತೆ ಪ್ರಿಯೆ-ಚಂದ್ರಳು ಶರೀರ ಪ್ರಕೃತಿಯಂತೆ ತುಂಬಿ ಬರುತ್ತಾಳೆ. ಆ ರೀತಿ ಚಂದ್ರ ಮತ್ತೆ ಆಸೆ, ಹುರುಪು, ಚೇತನ, ನವಸುಗಂಧದೊಡನೆ ಅರಳಿ ನಿಲ್ಲುವುದಕ್ಕೆ 'ಭೂವನ ಕುಸುಮಿಸಿ' ಎಂಬ ಪ್ರತಿಮೆಯನ್ನು ನೀಡಿದ್ದಾರೆ. ಆ ಭೂಮಿ ಚಂದ್ರಳ ಅಭಿಸಾರವೂ ಆಗಿ ಅದು ಕುಸುಮಿಸಿ ಪುಲಕಗೊಂಡಂತೆ ತಾನೂ ಆಗಿ (ಮಿತ್ರನ ಅಂದರೆ ಸೂರ್ಯನ ಸಖನ ಮೈತ್ರಿಗಾಗಿ) ಪ್ರಣಯದ ಆಸೆಯಿಂದ ವಿಕಾಸಗೊಂಡು ಅದು 'ಕೋಟಿ ಕೋಟಿ ಸಲ ಹೊಸಯಿಸಿತು'. ಆ ಪ್ರಣಯದ ಆಕಾಂಕ್ಷೆ ಹೊಸೆದುಕೊಂಡು ಬಯಕೆ ಗಟ್ಟಿಯಾಗುತ್ತ ಇನ್ನೂ ಹೊಸದಾಗುತ್ತ ಸಾಗಿ ಬೇಂದ್ರೆ ಸೃಷ್ಟಿಯಲ್ಲಿ ಹೊಸಯಿಸುವ ಎಂಬ ಪದ ಹೊಸ ರೂಪ ತಾಳಿದೆ. ಅದು ಸದಾ ಹೊಸದಾಗಿರುವ ಗುಣವನ್ನು ಹೇಳುವ ಪದವಾಗಿದೆ. ಜೊತೆಗೆ ಕೋಟ್ಯಂತರ ವರ್ಷಗಳಿಂದ ಅದು ಹೀಗೆ ಹೊಸದಾಗುತ್ತ ಸಾಗುತ್ತಿರುವುದನ್ನು ಅನಂತ ಪ್ರಣಯವಾಗಿರುವುದನ್ನು ಧ್ವನಿಸುತ್ತದೆ.

ಇಷ್ಟು ತಾಜಾತನದಲ್ಲಿ ಹೊಮ್ಮಿ ನಿಂತರೂ (ಸೂರ್ಯನ ಸ್ನೇಹದ ಕೈ ಸೇರದೆ) 'ಮಿತ್ರನ ಮೈತ್ರಿಯ ಒಸಗೆ ಮಸಗದಿದೆ'. ಇಲ್ಲಿ ಪ್ರತಿಯೊಂದು ಪದವು ಅಂದರೆ ಮಿತ್ರನಾದ ಸೂರ್ಯ (ಸೂರ್ಯನಿಗೆ ಇನ್ನೊಂದು ಹೆಸರು ಮಿತ್ರ) ಮೈತ್ರಿಯನ್ನು ಯಶಸ್ವಿಯಾಗಿಸದೆ, ಪ್ರದರ್ಶಿಸಿ ಮಿಲನಕ್ಕೆ ಬಂದು ಸೇರಿಲ್ಲ. ಅದು ನೋವಿನ ಸಂಗತಿಯಾಗಿ ಪ್ರೀತಿಯ, ದುಃಖದ ಧಾರೆ ತೀವ್ರವಾಗಿ ಕೂಡಿ ಬಂದು - 'ಮರುಕದ ಧಾರೆಯ ಮಸೆಯಿಸಿತು.'

ಇಷ್ಟೆಲ್ಲಾ ಕೋಟ್ಯನುಕೋಟಿ ವರ್ಷದಿಂದ ನಡೆಯುತ್ತಿದ್ದರೂ ಪ್ರಿಯೆ- ಚಂದ್ರಳಿಗೆ ಸೂರ್ಯನ ಆಕರ್ಷಣೆ ಬಿಟ್ಟಿಲ್ಲ. ಅವಳು ವಿರಹದಿಂದ ನಕ್ಷತ್ರಗಳ ಜೊತೆ ಓಡಿಹೋಗಲು ಮನಸ್ಸು ಮಾಡಿಲ್ಲ. ನವೆಯುತ್ತ ಅಮಾವಾಸ್ಯೆಯ ದಿನಗಳಲ್ಲಿ ಮರೆಯಾದ ಅವಳು ಪ್ರಿಯಕರನೊಡನೆ ಮಿಲನಗೊಂಡಿದ್ದಾಳೇನೊ ಎನಿಸಿ ಅವಳನ್ನು ಬಿದಿಗೆಯ ದಿನ ಕಂಡಾಗ ಅವಳು ಮಿತ್ರನ ಜೊತೆ ಸೇರಿದ ಗುರುತು ಅಲ್ಲಿ ಕಾಣಿಸುತ್ತಿಲ್ಲ.

'ಬಿದಿಗೆಯ ಬಿಂಬಾಧರದಲಿ ಇಂದಿಗು
ಮಿಲನದ ಚಿಹ್ನವು ತೋರದಿದೆ'

ಈ ಕವನವನ್ನು ಅಭ್ಯಾಸ ಮಾಡುತ್ತ ಹೋದಂತೆ ಬೇಂದ್ರೆಯವರು ಕವನಸೃಷ್ಟಿಯೂ ಒಂದು ಬಗೆಯ ಅನಂತ ಪ್ರಣಯಲೀಲೆ ಎಂಬುದಾಗಿ ಸೂಚಿಸಿರುವುದು ಕಂಡುಬರುತ್ತದೆ. ಮೂಗಿನ ಎರಡು ಹೊಳ್ಳೆಗಳಲ್ಲಿ ಪ್ರತ್ಯೇಕವಾಗಿ ಸೂರ್ಯನಾಡಿ ಹಾಗೂ ಚಂದ್ರನಾಡಿ ಕಾರ್ಯ ಮಾಡುತ್ತವೆ. ಸೂರ್ಯನಾಡಿಯ ಉಸಿರಾಟ ದೇಹದ ಕಾವನ್ನು ಮತ್ತು ಚಂದ್ರನಾಡಿಯ ಉಸಿರಾಟ ದೇಹದ ತಂಪನ್ನು ಕಾಪಾಡುತ್ತದೆ. ಆದುದರಿಂದ ದೇಹದ ಸಮಶೀತೋಷ್ಣ ಗುಣಧರ್ಮ ಕಾಪಾಡಲ್ಪಟ್ಟು ಆರೋಗ್ಯ ಸರಿಯಾಗಿರಲು ಸಾಧ್ಯವಾಗುತ್ತದೆ. ಪುರುಷ-ಸ್ತ್ರೀ ಸಂಭೋಗದಲ್ಲಿ ಈ ನಾಡಿಗಳ ಮಿಡಿತ ಬೆಳೆಯುತ್ತದೆ ಎಂಬುದಾಗಿ ಶರೀರಶಾಸ್ತ್ರ ವಿವರಿಸುತ್ತದೆ. ಸೂರ್ಯ ಮತ್ತು ಚಂದ್ರರ ಮಿಲನವಾಗದಿರುವುದು ಸೃಷ್ಟಿಯಲ್ಲಿ ಸಾಗಿರುವ ಅನಂತ ಪ್ರಣಯದ ಲಕ್ಷಣ. ಅವು ಒಂದಾಗಿಬಿಟ್ಟರೆ ಸಮಶೀತೋಷ್ಣತೆ ಕಾಪಾಡುವವರು ಯಾರು? ಅವರು ಆಕಾಶದಲ್ಲಿ ಮಿಲನವಾಗದೇ ನೆಲದ ಪ್ರಿಯಕರರ ಮಿಲನಕ್ಕೆ ಪ್ರಚೋದಿಸುವುದು ಅನಂತವಾಗಿ ಸಾಗಿ ಬಂದಿದೆ. ಸೂರ್ಯ-ಚಂದ್ರರ ನಡುವೆ ಬೀಸುವ ಚುಂಬಕ ಗಾಳಿ - ಚುಂಬಕ ತತ್ತ್ವ. ಈ ತತ್ತ್ವ ಮಾನವರಲ್ಲಿ ಚುಂಬನ ಕ್ರಿಯೆಗೆ ಪ್ರೇರೇಪಿಸುವುದು ಅನಂತ ಕಾಲದಿಂದ ನಡೆದುಬಂದಿದೆ.

**ಮುಗ್ಧೆ**[32]

ಇದೂ ಒಂದು ಅನಂತ ಪ್ರಣಯದ ಕವನ. 'ಅನಂತ ಪ್ರಣಯ' ಕವನದ ನಾಯಕ ಸೂರ್ಯ. ಈ ಕವನದ ನಾಯಕನೂ ಸೂರ್ಯ-ಪ್ರಿಯಕರ. ಅನಂತ ಪ್ರಣಯದ ನಾಯಕಿ ಚಂದ್ರ. ಈ ಕವನದ ನಾಯಕಿ ಒಂದು ಸೂರ್ಯಕಾಂತಿ ಸಸ್ಯ. ಮುಗ್ಧ ಹೆಣ್ಣಿಗೆ ಸುರೇಪಾನ ಸಸ್ಯದ ಹೋಲಿಕೆಯನ್ನು ಕೊಡಲಾಗಿದೆ.

ಈ ಮುಗ್ಧೆಯನ್ನು ಪ್ರಾರಂಭದಲ್ಲಿಯೇ 'ನೀ ಮಳ್ಳ ಜಾತಿ ಹೆಣ್ಣು | ಬಿಟ್ಟ ಏನು ಮಣ್ಣು | ಇರತಿ ನಲ್ಲನ್ನ' ಎಂದು ಪ್ರಶ್ನಿಸಿರುವುದರಿಂದ 'ಮಳ್ಳಜಾತಿ' ಪದದಲ್ಲಿ ಶೃಂಗಾರಕ್ಕೆ ಆಶಿಸುವ ಹೆಣ್ಣಿನ ಸಹಜ ಆಕಾಂಕ್ಷೆ ಇರುವ ಮುಗ್ಧ ಹೆಣ್ಣಿನ ಪರಿಚಯವಾಗುತ್ತದೆ. ಆ ಹೆಣ್ಣು ಸುರೇಪಾನದ ಹಾಗೆ 'ದೊರಕದಕ್ಕ ಬಾಡತಿತ್ತ' ಎಂಬ ರೀತಿಯಲ್ಲಿದೆ. ಅದಕ್ಕೆ ಸೂರ್ಯನ ಹುಟ್ಟಿನಲ್ಲಿಯೇ ಹೊಳಪು, ಅರಳುವಿಕೆ, ಸುಗಂಧ. ಅವನ ಜೊತೆ ವಿಕಾಸ ಅವನನ್ನೆ ಅವಲಂಬಿಸಿ ಅವನ ಕೂಡೆ ಹೊರಳುವುದಾಗಿದೆ.

'ಸೂರ್ಯನ ಕೂಡ ಹೊತ್ತೇರಿ-
ಧಾಂಗ ನಿನ ಮಾರಿ
ನೀ ಸುರೇಪಾನಧಾಂಗ ತಿರುವತೀದಿ'

ಸುರೇಪಾನವು ತಾನು ತಿರುವಿದರೂ ಜೊತೆಗೆ ಜೊತೆಯಾಗುವ ನಲ್ಲ ದೂರದಲ್ಲಿಯೇ ಉಳಿಯುತ್ತಾನೆ, ತನ್ನ ಜೊತೆಗೂಡುವುದಿಲ್ಲ. ನಲ್ಲನಿಲ್ಲದ ರಾತ್ರಿ ಅದಕ್ಕೆ ಕಡುಕತ್ತಲೆಯ ರಾತ್ರಿ. ಅಲ್ಲಿ ವಿರಹದ ಹೊರಳಾಟ. ಆ ವಿರಹದ ತೀವ್ರತೆಯು ಘನೀಭವಿಸಿದಂತೆ ಕವಿ 'ಹೊರಳಿ ಬೆಳ್ಳೆಳಗ | ಬಿಡತ

ತಣ್ಣುಸಿರು' ಎಂದಿದ್ದಾರೆ. ಅವಳ ವಿರಹದ ಕಂಬನಿಗೆ ಪ್ರಕೃತಿಯೂ ಕಂಬನಿಗರೆಯುತ್ತಿರುವಂತಿದೆ, ತಂಗಾಳಿಗೆ ಉರುಳುವ ಇಬ್ಬನಿ. ಈ ಇಬ್ಬನಿಯೂ ನೀರಿನಿಂದ ಕೂಡಿದೆ, ಕಂಬನಿಯೂ ಅದೇ ದ್ರವರೂಪಿಯಾಗಿ ವಿರಹದ ಕಾವಿನಿಂದ ಅದು ಮುತ್ತಾದ ಭಾವವನ್ನು ಪ್ರತಿಮಿಸುತ್ತಿದೆ.

ಮುಗ್ಧೆಗೂ ಸಸ್ಯವಾದ ಸುರೇಪಾನಕ್ಕೂ ವಿರಹದ ತಾಪ ಸಮನಾದುದು. ಅವರು ನಲ್ಲನಿಗಾಗಿ ಆಶಿಸಿ ಅವನ ಮಿಲನದ ತಣಿವಿಗಾಗಿ ಕಾದುಕುಳಿತ ಭಾವ ಮೂರನೇ ನುಡಿಯಲ್ಲಿದೆ. ಮುಗ್ಧೆ ಮತ್ತು ಸುರೇಪಾನ ಬೇರೆ ಬೇರೆಯಲ್ಲದೆ ಒಂದೇ ಆಗಿದ್ದಾರೆ. ಮುಗ್ಧೆಯ ನಲ್ಲ, ಸುರೇಪಾನದ ಸೂರ್ಯ - 'ಅನಂತ ಪ್ರಣಯ'ದ ಸೂರ್ಯ ಎಂದು ಸ್ಪಷ್ಟವಾಗುತ್ತದೆ.

> ನೀ ನೀರು ಬೇಡುವಾ ಬಳ್ಳಿ
> ನೀರನಿಲ್ಲದಲ್ಲಿ
> ಬದುಕು ಎಂತೇನಃ
> ಹಿತ್ತಲಗಿಡವು ಮದ್ದಲ್ಲ
> ನಿನ್ನ ಸದ್ದಿಲ್ಲ
> ನೀ ಸುರೇಪಾನಧಾಂಗ ಸೊರಗತೀದಿ'

ಇದನ್ನು ವಿಮರ್ಶಿಸುತ್ತ ಕೃಷ್ಣ ಕಟ್ಟಿ ಅವರು, "ನೀರು ಬೇಡುವ ಬಳ್ಳಿ ಮತ್ತು ಹಿತ್ತಲಗಿಡ ಇವೆರಡು ಹೊಸ ಉಪಮಾನಗಳು. ನೀರು ಬೇಡುವ ಬಳ್ಳಿ ಮತ್ತೆ ಅವಳ ಪರಾವಲಂಬಿತ್ವವನ್ನು ಸೂಚಿಸುವುದರಿಂದ ಸೂರ್ಯಪಾನದಂತೆಯೇ ಇರುವ ಇನ್ನೊಂದು ಉಪಮಾನವಾಗಿದೆ. ಆದರೆ ಹಿತ್ತಲಗಿಡ ಉಪಮಾನ ಸ್ವಲ್ಪ ಬೇರೆಯೇ ಆಗಿದೆ. ಹಿತ್ತಲಗಿಡವನ್ನು ಯಾರೂ ಲಕ್ಷಿಸುವುದಿಲ್ಲ. ಅದು ಮದ್ದಾಗಿದ್ದರೂ ಅಲಕ್ಷ್ಯಕ್ಕೀಡಾಗಿ ಸತ್ತುಹೋಗುತ್ತದೆ. ವಿರಹಿಣಿಯಾದ ಮುಗ್ಧೆಯ ಮನಸ್ಸಿನೊಳಗಿನ ವ್ಯಥೆ ಯಾರ ಕಣ್ಣಿಗೂ ಬೀಳದೆ ತನ್ನ ದುಃಖದಿಂದ ಮರಣಹೊಂದಬಹುದು ಎಂಬ ಧ್ವನಿ ಇಲ್ಲಿದೆ. ಅದಕ್ಕೆ ಪೂರಕವಾಗಿ 'ನೀ ಸುರೇಪಾನದ್ಹಾಂಗ ಸೊರಗತೀದಿ' ಎಂಬ ಮಾತು ಬರುತ್ತದೆ"[33] ಎಂದು ಹೇಳಿದ್ದಾರೆ.

ನೀರ-ಪ್ರಿಯಕರ, ನೀರು-ಪ್ರೇಮಪ್ರವಾಹ, ನೀರೆ-ಪ್ರೇಯಸಿ. ಪ್ರಿಯಕರ ಮತ್ತು ಪ್ರೇಯಸಿ ಹಿತ್ತಲಗಿಡದಷ್ಟು ಪರಸ್ಪರರು ಸಮೀಪರಾಗಿ ಅವರು ಪರಸ್ಪರರ ದುಃಖದಲ್ಲಿ ಮದ್ದಾಗಬೇಕು - ಔಷಧಿಯಾಗಬೇಕು, ಆಶ್ರಯವಾಗಬೇಕು. ಅದು ಆಗದಾಗ ಸೊರಗುವಿಕೆಯ ಸ್ಥಿತಿ ಬರುತ್ತದೆ. ಪಂಡಿತ, ವನಿತಾ-ಪ್ರಿಯೆ ಹಾಗೂ ಬಳ್ಳಿಗಳಿಗೆ ಆಶ್ರಯ ಬೇಕೇ ಬೇಕು ಎಂಬುದಾಗಿ ಪ್ರಖ್ಯಾತ ಸಂಸ್ಕೃತ ಸುಭಾಷಿತವಿದೆ. ಬೇಂದ್ರೆಯವರ ಈ ಕವನದಲ್ಲಿ ವನಿತಾ ಹಾಗೂ ಬಳ್ಳಿ ಒಂದೇ ಆಗಿ ಪ್ರಿಯಕರನ ಅಂತಃಕರಣದ ಮದ್ದನ್ನು ಬಯಸುತ್ತಿದೆ. ಅದು ಲಭಿಸದಿದ್ದರೆ ಸೊರಗುವಿಕೆ, ನರಳುವಿಕೆ ಪ್ರಾರಂಭ. ಈ ಕವನದಲ್ಲಿ ಸೂರ್ಯ-ಪ್ರಿಯಕರ, ಸೂರ್ಯಪಾನ ಸಸ್ಯ - ಪ್ರಿಯೆ, ಸೂರ್ಯನ ಕಿರಣಗಳತ್ತ ಮುಖ ಮಾಡಿ ಅರಳುವುದು ಸೂರ್ಯಪಾನದ ಸ್ವಭಾವ. ಸೂರ್ಯನ ಬೆಳಕೇ ಸಿಗದಿದ್ದರೆ ಸೂರ್ಯಪಾನ ಬಾಡುವುದು ನಿಶ್ಚಿತ. ನಿಸರ್ಗದ ಈ ಗುಣಧರ್ಮವನ್ನು ಪ್ರಿಯಕರ-ಪ್ರೇಯಸಿಗೆ ಅನ್ವಯಿಸಿದ್ದು ಈ ಕವನದ ವಿಶೇಷ.

### ೪. ವಿರಹ

**ಒಲುಮೆಯ ಕಿಚ್ಚು**

ತೀನಂಶ್ರೀಯವರು ಭರತನ ರಸಪ್ರಭೇದಗಳ ವಿವರ ನೀಡುತ್ತ ಶೃಂಗಾರರಸದ ಬಗ್ಗೆ "ಈ ರಸಗಳಲ್ಲಿ ಮೊದಲನೆಯದು ಶೃಂಗಾರ, ಪಟ್ಟಿಯಲ್ಲಿ ಮಾತ್ರವಲ್ಲ, ಜನಪ್ರಿಯತೆಯಲ್ಲಿ ಕೂಡ.

ಸ್ತ್ರೀಪುರುಷರಿಗಿರುವ ಪರಸ್ಪರ ಪ್ರೇಮವೇ ರತಿ. ಇದನ್ನು ಅರಿಯದ ಮಾನವರಿಲ್ಲ; ಪಶು-ಪಕ್ಷಿಗಳಲ್ಲೂ ಈ ಆಕರ್ಷಣೆಯುಂಟೇ ಉಂಟು. ರತಿಭಾವ ಹೀಗೆ ಸಕಲ ಹೃದಯಸಂವಾದಿಯಾಗಿರುವುದರಿಂದ ರಸಗಳಲ್ಲಿ ಶೃಂಗಾರಕ್ಕೆ ಪ್ರಮುಖ ಸ್ಥಾನ ದೊರೆತಿದೆ. ಸಂಭೋಗ ಶೃಂಗಾರ, ವಿಪ್ರಲಂಭ ಶೃಂಗಾರ ಎಂದು ಇದರಲ್ಲಿ ಎರಡು ಬಗೆ. ಒಂದರ ವಸ್ತು ಪ್ರಿಯರ ಸೇರಿಕೆ, ಇನ್ನೊಂದರದು ಅಗಲಿಕೆ"[34] ಎಂದು ತಿಳಿಸಿದ್ದಾರೆ.

ಈ ಎರಡು ಬಗೆಯ ಶೃಂಗಾರದಲ್ಲಿ ವಿಪ್ರಲಂಭ ಶೃಂಗಾರದಲ್ಲಿಯ ಕಿಚ್ಚು ಬೇಂದ್ರೆಯವರ ಕವನದಲ್ಲಿ 'ಒಲುಮೆಯ ಕಿಚ್ಚಾಗಿದೆ'. ಬೇಂದ್ರೆಯವರು ಈ ಭೂಮಿಯ ಮಣ್ಣ ಕಣಕಣದಲ್ಲಿಯೂ ಸುಪ್ರೇಮವನ್ನು ಕಾಣಲು ಕಾತರಿಸಿದ ಮಂಗಲಭಾವದವರು. ಅವರು ಹೆಣ್ಣಾದ ಪೃಥ್ವಿ ಅವಳ ಒಡೆಯನಾದ ಬಾನಿನಿಂದ ಅಗಲಿ ವಿರಹ ಬವಣೆಯಲ್ಲಿ ಸುತ್ತುತ್ತಿದ್ದಾಳೆ. ಅವಳು ವಿರಹದಲ್ಲಿ ಸುರಿಸಿದ ಕಣ್ಣೀರು ಕಡಲಾಗಿ, ಅದು ಕಾದು ಮೋಡವಾಗಿ ಬಾನಿನ ಒಡೆಯನನ್ನು ಕೂಡಿದಾಗ, ಅವನು ಅದನ್ನು ಮಳೆಯಾಗಿ ಸುರಿಸುವನು. ಅವಳ ಕಣ್ಣೀರೆ ಮಳೆಯಾಗಿ ಉದುರಲು ಮೈಯೆಲ್ಲ ಪುಳಕಗೊಂಡಂತೆ ಹೃದಯ ಹಚ್ಚನಾದಂತೆ ಅವಳು ಹಸಿರು ಬೆಳೆ ಪಡೆಯುತ್ತಾಳೆ ಎಂದು ಕಲ್ಪಿಸಿದ್ದಾರೆ. ಇಂತಹ ಭೂಮಿ ಮತ್ತು ಬಾನಿನ ನಲ್ಲೆ ನಲ್ಲರ ಪ್ರೀತಿ, ಅವರ ವಿರಹ, ಸ್ನೇಹದಾಸೆ ಅದರ ಫಲರೂಪಿಯಾದ ಹಚ್ಚಹಸಿರು ಬೇಂದ್ರೆಯವರ 'ಒಲುಮೆಯ ಕಿಚ್ಚಿನ' ಸುಂದರ ರೂಪಕವಾಗಿದೆ. ಅದನ್ನು ಮೇಘದೂತದ ಪೀಠಿಕೆಯಲ್ಲಿ 'ಭೂಮಿಯ ಕಾಮ' ಎಂದು ಕರೆದಿದ್ದಾರೆ.

'ಮಣ್ಣು ಹೆಣ್ಣು ಬಾನೊಡೆಯನಿಂದ ಅಗಲಿಹಳನಾದಿಯಿಂದ
ವಿರಹ ಬವಣೆಯಲ್ಲಿ ತಿರುಗೆ ತಿರುಗುವಳು ಹೊತ್ತು ಸುತ್ತಿನಿಂದ
ಕಣ್ಣನೀರು ಕಡಲಾಗಿ ಕಾದು ಉಗಿಯಾಗಿ ಮೋಡವಾಗಿ
ಎದೆಗೆ ಉದುರೆ ಬಾನಿಂದ, ನವಿರುವಳು ಹೃದಯ ಹಚ್ಚನಾಗಿ'[35]

ಈ ಮಣ್ಣು ಹೆಣ್ಣಿನ ಮಕ್ಕಳಾದ ಹೆಣ್ಣು ಗಂಡಿನ ಮೃಣ್ಮಯ ದೇಹದ ಹೃನ್ಮಯಮನದ ಪ್ರೇಮದ ಹಾಡನ್ನು ಬೇಂದ್ರೆಯವರು ನೀಡುತ್ತ; ಅವರ ಒಲ್ಮೆಯ ದೇವಕಾಮನನ್ನು - ಕಾಮದೇವ (ಮಗು)ನಾಗಿ ಪಡೆಯುವುದನ್ನು ಕಾವ್ಯವಾಗಿಸಿದ್ದಾರೆ. ಅವರು ಪುರಾಣದ ದೇವ ದೇವಿಯರ ಮತ್ತು ಐತಿಹಾಸಿಕ ರಾಜರಾಣಿಯರ ಸಂಭೋಗ ಶೃಂಗಾರ, ವಿಪ್ರಲಂಭ ಶೃಂಗಾರದ ಕಾವ್ಯ ರಚಿಸಿಲ್ಲ. ಅದಕ್ಕೆ ಬದಲಾಗಿ ಜನಸಾಮಾನ್ಯರ ಒಲುಮೆಯು ಹೂವಾಗಿ ಅರಳಿದ, ಶ್ರೀಸಾಮಾನ್ಯನ ಮಂಗಲಭಾವದ ದ್ಯೋತಕವಾದ, ಜನಪದರ ವಿರಹ ಮಿಲನಗಳನ್ನು, ಜನಪರವಾಗಿ ನೀಡಿರುವುದು ನಮ್ಮ ಶಿಷ್ಟಕಾವ್ಯ ಪರಂಪರೆಯಲ್ಲಿ ಮಹತ್ವದ ಸಂಗತಿಯಾಗಿದೆ.

ಪ್ರೇಮಿಗಳು ಹತ್ತಿರವಿದ್ದಾಗ ಮೈಮರೆವು ಉಂಟುಮಾಡುವ ಶೃಂಗಾರ, ಅವರು ಅಗಲಿದಾಗ ಅನಂಗರೂಪ ತಾಳಿ ಅವರ ಮನಸ್ಸು ಪರಿಪಾಕಗೊಳ್ಳುವಂತೆ ಮಾಡುತ್ತದೆ. ಆ ಅಗಲಿಕೆಯ ವಿಪ್ರಲಂಭ ಶೃಂಗಾರವು ಬೇಂದ್ರೆ ಕಾವ್ಯದ ಮೂಸೆಯಲ್ಲಿ 'ಒಲವಿನ ಕಿಚ್ಚಾಗಿ' ಹಲವು ಭಾವಲಹರಿಯನ್ನು ತನ್ನ ಸಹೃದಯರಿಗೆ ನೀಡಿದೆ. ಒಂದಾಗಿದ್ದಾಗಿನ ರಸಭೋಗಕ್ಕಿಂತ, ಬೇರೆಯಾಗಿರುವಾಗಿನ ರಸೈಕ್ಯದಾಸೆ ರಸರೂಪಿ ಸ್ಥಿತಿಯಾಗಿರುತ್ತದೆ. ಅಂತಹ ಸ್ಥಿತಿಯಲ್ಲಿನ ವಿರಹಿಗಳ ದಗ್ಧ ಹೃದಯದ ರಸಿಕ ಮನದ ಹಾಡು ಅವರ ಅನುಭವದ ಪಾಡಾಗಿ ರಸಿಕರು ನುರಿಸಿ ಆನಂದಪಡುವ ಹಾಡಾಗಿವೆ.

"ವಿರಹದ ಕಾವಿನಲ್ಲಿ ಪುಟಗೊಳ್ಳುವ ಸ್ನೇಹವೇ ಶುದ್ಧವಾದುದು"[36] ಎಂದು ಬೇಂದ್ರೆ ನುಡಿದಿದ್ದಾರೆ. ಅವರು ಪ್ರೇಮಿಗಳ ವಿರಹದಲ್ಲಿ ಪ್ರೇಮದ ಅನುಭವ ಸತ್ಯವಾಗಿ ಆ ಸತ್ಯ ಜೀವದ ಶಕ್ತಿಯಾಗಿ, ಆ ಪ್ರೇಮದ ನಿಷ್ಠೆ ಮಂಗಲಕರವಾಗಿ ಲೋಕಕಲ್ಯಾಣವಾಗುವಂತೆ - ವಿರಹ ಕಾವ್ಯಗಳನ್ನು

ರಚಿಸಿದ್ದಾರೆ. ವಿರಹದಲ್ಲಿ ವಿಕೃತ ಭಾವೋದ್ರೇಕ ಸಾಧ್ಯವಿದೆ. ಆದರೆ ಆ ವಿಕೃತ ಭಾವೋದ್ರೇಕ ವ್ಯಕ್ತಿಯ ಜೀವನವನ್ನೇ ಹಾಳುಮಾಡುವುದಲ್ಲದೆ, ಸಮಾಜ ಹಾಗೂ ರಾಷ್ಟ್ರವನ್ನು ವ್ಯಾಪಿಸಿ ರಾಷ್ಟ್ರದ ಬೌದ್ಧಿಕ ಜೀವನವನ್ನೇ ಹಾಳು ಮಾಡುತ್ತದೆ. ಅಂತಹ ವಿಕೃತತನಕ್ಕೆ ಒಳಗಾಗದ ವಿರಹಿಣಿ, ಬೌದ್ಧಿಕ ಸ್ವಾಸ್ಥ್ಯ ಕಾಪಾಡಿಕೊಳ್ಳುವಂತೆ ಬೇಂದ್ರೆಯವರು ತಮ್ಮ ಕಾವ್ಯದಲ್ಲಿನ ವಿರಹಿಣಿಯನ್ನು ಸುಸಂಸ್ಕೃತ ಸಂಪನ್ನಳನ್ನಾಗಿ, ಸಾಮಾಜಿಕ ಮೌಲ್ಯಗಳನ್ನು ಕಾಪಾಡುವ ಜವಾಬ್ದಾರಿಯುಳ್ಳ ವ್ಯಕ್ತಿಯನ್ನಾಗಿ, ತನ್ನ ಮನಸ್ಸು ವಿರಹದಲ್ಲಿ ಕಾದು ಬೆಳಕಾಗುವ 'ಒಲುಮೆಯ ಕಿಚ್ಚ'ನ ಕಾವ್ಯಕಲಾರಸಿಕಳನ್ನಾಗಿಸಿದ್ದಾರೆ. ಅವರ ವಿರಹಭಾವದ ಕವನಗಳು 'ಒಲುಮೆಯ ಕಿಚ್ಚು', 'ನಗೀನವಿಲು', 'ಹೂಂ-ಊಂಹೂ', 'ಚಿತ್ರ', 'ನೀರಿಗೆ ನಡೆದಾಗ', 'ಹರಕೆ', 'ನಾನೊಂದ ನೆನದರೆ', 'ರಾಧೆಯ ಪಾಡು' ಮುಂತಾದವುಗಳಾಗಿವೆ. ಅವುಗಳಲ್ಲಿ ಕೆಲವನ್ನು ಈಗ ಪರಿಶೀಲಿಸೋಣ.

**ಸಖಿ! ಬಾರೆ ಬಾ!**

ಅನಾದಿ ಕಾಮದ ಕ್ರಮ ಜೀವಲೋಕದಲ್ಲಿ, ಮಾನವರಲ್ಲಿ ಪ್ರವಹಿಸುತ್ತಿರುವುದು ಒಂದು ಸಹಜ ಆಕರ್ಷಣೆಯಾಗಿದೆ. ಅದಕ್ಕೆ ಈಡಾದ ಗಂಡು ಹೆಣ್ಣಿಗಾಗಿ ಬಯಸಿ ಕೂಗುವ ಕೂಗು - ಒಳಗಿನ ಸಖ ಜೀವದ ಕೂಗೆಂದು ಬೇಂದ್ರೆ 'ಸಖೀಗೀತ'ದಲ್ಲಿ ನುಡಿದಿದ್ದಾರೆ.

'ಎಂದಿನಿಂದಲೋ ಏನೋ ಒಳಗೊಂದು ಸಖ ಜೀವ
ಸಖಿ! ಬಾರೆ ಬಾ! ಎಂದು ಕೂಗುತಿದೆ
'ಮುಂದಿನ ಪಥದಲಿ ಸಖಿಯಾಗು ಬಾ' ಎಂದು
ನನ್ನ ಮನೋರಥ ಕೂಗುತಿದೆ'[37]

**ಕೂಗಿ ಕರೆತಾರs ಸುಗ್ಗಿಯಾ**

ಹೀಗೆ ಪೂರ್ವದ ಅಗಲಿಕೆಯ ಗಂಡು ಹೆಣ್ಣು ಸೇರಿ ಸಂಸಾರ ಮಾಡುವಾಗ ಹಲವಾರು ಕಾರಣದಿಂದ ಅಗಲಿಕೆಯಾಗುತ್ತದೆ. ಆ ಯೌವನದ ಅಗಲಿಕೆ ಮಾಗಿಕಾಲದ ಬನದ ರೀತಿಯಿದೆ ಎಂಬ ರೂಪಕವನ್ನು 'ಒಲುಮೆಯ ಕಿಚ್ಚು'[38] ಕವನದಲ್ಲಿ ನೀಡುತ್ತ ಬೇಂದ್ರೆಯವರು ಆ ವಿರಹಿಣಿ ತನ್ನ ಮನದ ಕೋಗಿಲೆಗೆ ಸುಗ್ಗಿಯನ್ನು ಕರೆದು ತಾ ಎಂದು ಕೋರುತ್ತಿರುವುದನ್ನು ಚಿತ್ರಿಸಿದ್ದಾರೆ.

'ಮಾಗಿಯ ಮೂಡಲಗಾಳಿ ತಾಗಿದ ಬನಧಾಂಗ
ಸಾಗ್ಯದ ನನ್ನ ಹರೆಯವು ಕೋಗಿಲಾ
ಕೂಗಿ ಕರೆತಾರs ಸುಗ್ಗಿಯಾ'

ಹೀಗೆ "ಈ ಕವಿತೆಯಲ್ಲಿ ಕೇಳಿಬರುವುದು ಒಂದು ಹೆಣ್ಣಿನ ದನಿ. ಈ ದನಿಯ ಅಭಿವ್ಯಕ್ತಿಗಾಗಿ ತ್ರಿಪದಿಯಂಥ ಜಾನಪದ ಛಂದಸ್ಸು ಆಯ್ದುಕೊಂಡುದು ಅನುಭವದ ಸಾಧಾರಣೀಕರಣಕ್ಕೆ ತುಂಬಾ ಸಹಾಯಕಾರಿಯಾಗಿದೆ ಎಂದೆನಿಸುತ್ತದೆ. ತ್ರಿಪದಿಯಲ್ಲಿಯೂ ಗತಿಶೀಲತೆಯನ್ನು ಸಾಧಿಸಿರುವುದು ಈ ಕವಿತೆಯ ವೈಶಿಷ್ಟ್ಯ."[38] ಎಂದು ಕೃಷ್ಣಾ ಕಟ್ಟಿ ನುಡಿದಿದ್ದಾರೆ. ಅಗಲಿಕೆಯಲ್ಲಿ ಕಾಮ ತನ್ನ ಚಿರಂತನತೆಗೆ ಕಾವು ಕೊಟ್ಟು; ಒಲವನ್ನು ಕಿಚ್ಚಾಗಿಸಿ, ಸುಪ್ರೇಮದ ಉದಾತ್ತತೆಯ ಆನಂದದ ಫಲ ನೀಡುತ್ತದೆ. ಆ ಸಂಕ್ರಮಣ ಸ್ಥಿತಿಯ ಪ್ರಿಯೆ ತನ್ನ ನಲ್ಲನಿಗಾಗಿಯೇ ಜೀವ ಹಿಡಿದುಕೊಂಡು ಅವನ ಜೊತೆ ಮೀಸಲಳಿಯದ ಮಳೆಯಲ್ಲಿ ಸವಿ ಉಣ್ಣುವುದು - ಆ ಅಗಲಿಕೆ, ತಡೆದುಕೊಂಡ ಪ್ರೇಮ ಸಾಮರ್ಥ್ಯದ ದ್ಯೋತಕವಾಗುತ್ತದೆ. ಅದು

ಬಾತುಕೋಳಿಯ ಹಾಗೆ ನಾತ ನೀರಲ್ಲಿ ಆಡುವುದಿಲ್ಲ. ನಿಜಪ್ರೇಮದ ಮೀಸಲಳಿಯದ ಮಳೆಗಾಗಿ ಕಾಯುವ ವ್ರತರೂಪಿಯಾದುದು.

'ಬಾತುಕೋಳಿ ಹಾಂಗ ಚಾತಕದ ಜಾತ್ಯಲ್ಲ
ನಾತ ನೀರಾಗ ಅದರಾಟ, ಇದರೂಟ
ಮೀಸಲಳಿಯದ ಮಳಿಯಾಗ'

ಒಲುಮೆ ಎಂಬುದು ಕುಲುಮೆಯ ಕಿಚ್ಚಿನಂತೆ, ಅದರಲ್ಲಿ ಪ್ರಿಯೆಯ ಹುಲುಜೀವ ಕಾದು ಕಮರಿದರೂ, ಅವಳ ಒಳಜೀವ ನಿಜಪ್ರೀತಿಗಾಗಿ ಕಾದು ಬಾಳುತ್ತಿರುತ್ತದೆ.

'ಒಲುಮೆಯ ನಚ್ಚೊಂದು ಕುಲುಮೆಯ ಕಿಚ್ಚವ್ವ
ಹುಲುಜೀವ ಕಾದು ಕಮರೀತು ಒಳಜೀವ
ಒಲುಮಿಗೆ ಹ್ಯಾಂಗೊ ಬಾಳೀತು'

ಪ್ರತಿಯೊಬ್ಬರಿಗೆ ಒಳಜೀವನ ಮತ್ತು ಹೊರಜೀವನ ಇರುತ್ತದೆ. ಪ್ರೇಮ ಹೊರಜೀವನ; ಒಲವು ಅಂತರಂಗದ ಧ್ವನಿ. ಒಲುಮೆಯನ್ನು ನಂಬಬೇಕಾಗುತ್ತದೆ. ನಂಬಿ ಕರೆದರೆ ಓ ಎನ್ನುವ ತತ್ತ್ವ ಪ್ರಿಯಕರ ಮತ್ತು ಪ್ರೇಯಸಿಯ ಜೀವಧ್ವನಿಯಾಗಬೇಕು. ಒಲುಮೆ ಎಂಬುದು ತಪಸ್ಸಿನ ತಾಪಕ್ಕೆ ಸಮ. ಇದು ಪ್ರತೀಕ್ಷಾ ಮಾರ್ಗ. ದರ್ಶನವಾದರೆ - ಅರಳುವಿಕೆ; ದರ್ಶನವಾಗದಿದ್ದರೆ ಕಮರುವಿಕೆ, ಸುಟ್ಟ ವಾಸನೆಯ ಸ್ಥಿತಿ. ದರ್ಶನವಾಗದಿದ್ದರೂ ಒಲುಮೆಯ ಬಾಳನ್ನು ಸಾಗಿಸುವಲ್ಲಿ ಹಾನಿ ಇಲ್ಲ ಎಂಬ ಎಚ್ಚರಿಕೆಯನ್ನು ಇಲ್ಲಿ ಕೊಡಲಾಗಿದೆ.

**ನಗೀನವಿಲು**[39]

ಈ ಕವನ "ಜೀವನದೊಳಗಿನ ಜೀವಂತ ವಿರಹದ ಒಂದು ಪ್ರೇಮಗೀತ. ವಿರಹಿ ಕೋಕಿಲ; ಉಲ್ಲಾಸಿ ನವಿಲು" ಎಂಬ ಸಂದರ್ಭವನ್ನು ಹೊಂದಿದೆ. ವಿರಹ ಕೆಲವು ಕಾಲ ಉಳಿದು, ಮತ್ತೆ ಪ್ರೇಮ ಪಲ್ಲವಿಸಿದಾಗ, ಆ ವಿರಹಕ್ಕೆ ಅರ್ಥವಿದೆ. ಆದರೆ ವಿರಹ ಜೀವಂತ ವಿರಹವಾದಾಗ ಅಂತಹ ವಿರಹವನ್ನು ಜನಪ್ರಿಯ ಪ್ರೇಮಗೀತೆಯಾಗುವಂತೆ ರಚಿಸುವುದು ಸಮರ್ಥ ಕವಿಗೆ ಮಾತ್ರ ಸಾಧ್ಯ. ಅಂತಹ ಅಪರೂಪದ ಕವನ ಇದಾಗಿದೆ. ಬೇಂದ್ರೆಯವರು ಅವಳ ದೇಹವನ್ನು ಉಲ್ಲಾಸದ ಕುಣಿತದ ನಗೆಯ ಸಂಕೇತವಾದ ನವಿಲಿಗೆ ಹೋಲಿಸಿರುವುದರಿಂದ ಮತ್ತು ಅದು :

'ಮಿನಮಿನಮಿನ ಮಿಂಚತಿತ್ತ
ಮೂಡತಿತ್ತ ಮುಳಗತಿತ್ತ
ಮುಳುಗತಿತ್ತ ತೊಳಗತಿತ್ತ
ನೆಲಾ ಜಲಾ ಬೆಳಗತಿತ್ತ'

ಎಂದು ಮಿನುಗುಟ್ಟಿ ಪ್ರಕಾಶಮಾನವಾಗಿರುವುದರಿಂದ ಈ ವಿರಹ ಪ್ರೇಮ ಅಂಕುರಿಸಿದ ನಂತರದ ಪ್ರಾರಂಭದ ವಿರಹಾವಸ್ಥೆ ಎಂದು ಹೇಳಬಹುದು. ಅವಳ ತುಂಬು ಶರೀರವನ್ನು ಹೀಗೆ ನವಿಲಿನಂತೆ ಬಣ್ಣಿಸಿ ಅವಳ ಮನಸ್ಸನ್ನು ಮೌನದ ಸಂಕೇತವಾದ ಕೋಗಿಲೆಯಾಗಿಸಿದ್ದಾರೆ. ಹೀಗೆ ಮೌನದ ಸಂಕೇತವಾಗಿ ಕೋಗಿಲೆಯನ್ನು ಬಣ್ಣಿಸಿ- ಹಾಡಿ ತನ್ನ ಮಧುರ ಕಂಠದಿಂದ ಪ್ರೇಮರಸ ಹರ್ಷ ಹರಿಸುವ ಕೋಗಿಲೆಯನ್ನು - ಮೌನವಾಗಿರಿಸಿರುವಲ್ಲಿಯೇ ಅವಳ ಎಲ್ಲ ವಿರಹ ಭಾವವನ್ನು ಕಾವ್ಯಕಲೆಯಲ್ಲಿ ಸಮರ್ಥವಾಗಿ ಧ್ವನಿಸಿದಂತಾಗಿದೆ.

ಬೇಂದ್ರೆಯವರು ಹೀಗೆ ಅವಳ ಯೌವನ, ಶರೀರ ಮತ್ತು ಮುದುಡಿದ ಮನಸ್ಸನ್ನು ನವಿಲು ಮತ್ತು ಕೋಕಿಲವಾಗಿಸಿ ಇಡೀ ಕವನವನ್ನು ಒಂದು ರೂಪಕ ಕಾವ್ಯವಾಗಿಸಿದ್ದಾರೆ. ಅವಳ ಮುಖದಲ್ಲಿ ನಗೆಯ ನವಿಲಿನ ಆಟವಿದೆ, ಕುಣಿತವಿದೆ. ಅದು ಮುಗಿಲಕಡೆಗೆ ದೃಷ್ಟಿಯನ್ನು ಬೀರಿ ಮಳೆಗೆ ಅಂದರೆ ನಲ್ಲನ ಬರುವಿಕೆಗೆ ಆಶಿಸುತ್ತ ಭರವಸೆಯ ನೋಟವನ್ನು ಹರಿಸಿದೆ:

'ನಾರೀ ನಿನ್ನ ಮಾರಿಮ್ಯಾಗ
ನಗೀ ನವಿಲು ಆಡತಿತ್ತ
ಆಡತಿತ್ತ ಓಡತಿತ್ತ
ಮುಗಿಲ ಕಡೆಗೆ ನೋಡತಿತ್ತ'

ಅವಳು ಉಲ್ಲಾಸಮಯ ರೂಪ ಹೊಂದಿದ್ದರೂ, ಆ ಉಲ್ಲಾಸದಲ್ಲಿ ಯಾತನೆಯಿದೆ. ಅದು ಪ್ರಿಯನಿಲ್ಲದ ಯಾತನೆ. ಆ ಪ್ರಿಯ ಅವಳಲ್ಲಿ ರತಿಭಾವ ಉಂಟುಮಾಡಿ ಶೃಂಗಾರ ಪ್ರಭೆ ನೀಡಿ ಹೋದವನು. ಅವಳ ಕಣ್ಣು ಮತ್ತು ಶರೀರ ಅವನನ್ನು ನೆನೆದು ಮೌನವಾಗಿ ವಿರಹ ಭಾವವನ್ನು ಸ್ಪಂದಿಸುತ್ತಿದೆ:

'ಕಣ್ಣಿನ್ಯಾಗ ಬಣ್ಣದ ನೋಟ
ತಕತಕ ಕುಣಿದಾಡತಿತ್ತ
ಕುಣೀತಿತ್ತ ಮಣೀತಿತ್ತ
ಒನಪಿಲೆ ಒನದಾಡತಿತ್ತ'

ಪ್ರಿಯನು ತನ್ನ ಮನದಾಸೆ ಪೂರೈಸಲು ಬಾರದಿರುವುದು ಅವಳಿಗೆ ಯಾತನೆಯಾಗಿ ಅವಳ ಮನಸ್ಸು ಹಾಡದ ಕೋಗಿಲೆಯಾಗಿದೆ. ಆ ಕೋಗಿಲೆ ಅವಳ ಶರೀರವೆಂಬ ಮಾಮರದ ಕೊನೆಗೆ ಕೂತು ಹಾಡಲಾಗದ ಯಾತನೆಯಿಂದಿದೆ. ಭರವಸೆಯನ್ನೇ ಮೈಯಾಗಿ ಹೊತ್ತ ಅವಳು ಮುಗಿಲ ಕಡೆಗೆ ನೋಡುತ್ತಿದ್ದರೆ, ಅವಳ ಮನಸ್ಸೆಂಬ ಕೋಗಿಲೆ ಅವಳನ್ನೇ ನೋಡುತ್ತಿದೆ.

'ಮರದ ಮಾಮರದ ಕೊನಿಗೆ
ಕೋಕಿಲೊಂದು ಕೂಡತಿತ್ತ
ಕೂಡತಿತ್ತ ಹಾಡಬಿಟ್ಟು
ಬರೇ ನಿನ್ನ ನೋಡತಿತ್ತ'

ಕೋಗಿಲೆ ಎಂಬ ಅವಳ ಮನಸ್ಸು ನೊಂದುಕೊಂಡು ಹಗಲಿರುಳು ಆ ಪ್ರಿಯಕರನ ಬರವನ್ನೇ ಬಯಸಿ ಹುಡುಕುತ್ತಿದೆ. ಅದು 'ಏನೋ ಒಂದ ಹುಡುಕತಿತ್ತ' ಎಂಬ ನುಡಿಯಲ್ಲಿ ನೋವಿನ ರಸವೇ ಹರಿದಿದೆ. ಹುಡುಕುವ ಮೌನ ಕೋಗಿಲೆಯು ದುಃಖಿಸಿ ಅದು ತನಗೆ ಸಿಗಲಾರದು ಎಂದಾದಾಗ ನಗೆಯ ನವಿಲಿನ ಶರೀರ ಬಾಡುತ್ತದೆ.

'ಕಣ್ಣೀರಿನ ಮಳೆಯ ಕೂಡ
ತನ್ನ ದುಃಖ ತೋಡತಿತ್ತ
ತೋಡತಿತ್ತ ಬೇಡತಿತ್ತ
ದೊರಕದಕ್ಕ ಬಾಡತಿತ್ತ'

"ಕ್ರೌಂಚ ಮಿಥುನದ ವಿರಹವನ್ನು ಕಂಡು ದುಃಖಿತನಾದ ವಾಲ್ಮೀಕಿ ಸೀತಾ-ರಾಮರ ವಿರಹದ ರಾಮಾಯಣವನ್ನು ರಚಿಸಿದಂತೆ ಬೇಂದ್ರೆಯವರು ನಗೀನವಿಲು ಕವನ ರಚಿಸಿದ್ದಾರೆ. ಧಾರವಾಡ

ಜಿಲ್ಲೆಯೊಳಗಿನ ಕಲಘಟಗಿ ಫಲವತ್ತಾದ ಬೆಳೆಯನ್ನು ಕೊಡುವ ನಾಡು. ಬೆಳೆ ತೂಗಿ ತೊನೆದಾಡುವುದನ್ನು ಕಂಡು ಬೇಂದ್ರೆಯವರು ನವಿಲಿನಂತೆ ಕುಣಿದಾಡಿದ್ದರು. ಅನಂತರ ಒಮ್ಮೆ ಕಲಘಟಗಿ ಪ್ರದೇಶದಲ್ಲಿ ಅನಾವೃಷ್ಟಿಯ ಬರಗಾಲ ಬೀಳುತ್ತದೆ. ಆಗ ಸೀಳುಸೀಳಾದ ಭೂಮಿಯನ್ನು ಕಂಡ ಬೇಂದ್ರೆ ಮೌನಿ ಕೋಗಿಲವಾದರು. ನಗೀನವಿಲು-ಕವಿಕೋಗಿಲೆಯ ಹಾಡಾಗಿದೆ. ಕಲಘಟಗಿಯ ಭೂಮಿತಾಯಿ ಮಳೆಯ ಕೃಪೆಗಾಗಿ ಮುಗಿಲಕಡೆಗೆ ನೋಡುತ್ತಿದೆ ಎನ್ನುತ್ತಾರೆ ಕವಿ. "ನಾರೀ ನಿನ್ನ ಮಾರಿ ಮ್ಯಾಗ" ಎಂಬ ಸಂಬೋಧನೆ ಫಲಭರಿತ ಭೂಮಿನಾರಿಗೆ ಅನ್ವಯಿಸುವ ಮಾತು. ಬೆಳೆ ಕಾಣದ ಭೂಮಿಯ ವಿರಹಗೀತವನ್ನು ಕಂಡು-ಹೆಣ್ಣಿನ ಜೀವಂತ ವಿರಹಕ್ಕೆ ರೂಪಕಗೊಳಿಸಿ, ಭೂಮಿಯ ಪಾಡನ್ನು ಹಾಡು ಮಾಡಿ ಹಾಡಿಕೊಂಡಿದ್ದಾರೆ ಕವಿ. ಭೂಮಿಯ ಮೇಲಿದ್ದ ಎಲ್ಲರ ಜೀವನಕ್ಕೆ ಕಾರಣಳಾದ ಫಲಕೊಡುವ ಭೂಮಿಯ ವಿರಹಗೀತ ಮಾನವೀಯ ವಿರಹಗೀತಕ್ಕಿಂತ ಜೀವಂತ ಎಂಬುದು ಬೇಂದ್ರೆಯವರ ಭಾವ" ಎಂಬುದಾಗಿ ವಿಭಿನ್ನ ದೃಷ್ಟಿಯಲ್ಲಿ ಈ ಕವನವನ್ನು ವಾಮನ ಬೇಂದ್ರೆಯವರು ವಿಶ್ಲೇಷಿಸಿದ್ದಾರೆ.

**ಹೂ-ಊಂಹೂ**[40]

ಈ ಕವನ ದಾಂಪತ್ಯದ ಸುಖಸವಿದ ಅನಂತರದ ಒಂದು ವಿರಹಮನದ ಭಾವಲಹರಿಯಾಗಿದೆ. ಪ್ರಾರಂಭದ ಉಲ್ಲಾಸದಲ್ಲಿ ಸುಖವಿದ್ದು ಅದು:

'ಕೂ ಹೂಽ ಕೂಹೂಽ ಕೂಹೂಽ
ಮೈತುಂಬ ಮಾವು ಹೂಽ ಹೂಽ
ಒಳಹೊರಗೂ ಹೂತೆವೇ ನಾವೂ
ನೀವೂಽ ಕೂಹೂಽ'

ಎಂದು ಕೇಳುವ ಕೋಗಿಲೆಯ ಇಂಚರ ಮತ್ತು ಅದು ಕುಳಿತು ಹಾಡುತ್ತಿರುವ ಮಾವಿನಮರ ಸುಖದ ಸಂಕೇತವಾಗಿದೆ. ಅವರ ಉಲ್ಲಾಸದ ಪ್ರತಿಮೆಯಾಗಿ ಮೈತುಂಬ ಮಾವು ಹೂಽ ಹೂಽ ಇದೆ. ಅದು ಇನ್ನೂ ಸ್ಪಷ್ಟಗೊಳ್ಳುವಂತೆ ಐಂದ್ರಿಯಿಕ ಸುಖವನ್ನು ಚಿತ್ರಿಸುವ ಚಿತ್ರಣವಿದೆ. ಅದು ಯೌವನದ ಪ್ರತಿ ತುತ್ತೂ ಮುತ್ತಾಗಿ ಮತ್ತು ಬರಿಸುತ್ತಿತ್ತು ಎಂದಿದೆ.

'ತುಟಿ ತುಟಿಗೆ ಮುತ್ತನೊತ್ತಿಽಽ
ಜೇನ್ನುಡಿಯ ಬೀಜ ಬಿತ್ತಿಽಽ
ಮಧುಚಂದ್ರನ ಸ್ವಪ್ನವನೆತ್ತಿಽ
ಸುಳಿದಾಡುತ್ತಿತ್ತು ಸುತ್ತೂಽ
ತುತ್ತೂ ತುತ್ತೂ ತುತ್ತೂ
ಬರಿ ಮುತ್ತೇ ಮುತ್ತೇ ಮತ್ತೂ.'

ಕಾಲದ ಚಕ್ರಗತಿಗೆ ಸಿಕ್ಕು ದಾಂಪತ್ಯದಲ್ಲಿ ಕಷ್ಟ ಸುಳಿದಿದೆ, ವಿರಹ ಮೂಡಿದೆ. ಅದೇ ಗಂಡ-ಹೆಂಡತಿಯಿದ್ದರೂ ಅವರ ಬದುಕು ಕಹಿಯಾಗಿದೆ. ಅದರ ಅರಿವು ಅವರಿಗಿದೆ. ಅದು ಗೊತ್ತಿದ್ದೇ ಅವರು ನುಡಿಯುತ್ತಾರೆ:

'ಮಾವಾಯಿತು ಯಾವುದೊ ಬೇವು.
ಅದೆ ಇದ್ದರು ನಾವೂ ನೀವೂ
ಬಾಳಾಗಿದೆ ಬದುಕಿನ ಸಾವು.'

ಮಾತನ್ನು ಅಸಹನೀಯವಾಗಿ ಕಾಣುವುದರಲ್ಲಿ ವಿರಹದ ತೀವ್ರತೆ ಇರುತ್ತದೆ. ಆದಕಾರಣ ಇಲ್ಲಿ ಮಾತು 'ಹುಳುಹುಳುಕು ತೂತು ಮಾತೂ' ಮತ್ತು ಆ ನುಡಿಯೆ ನೋವಿಗೆ ಕಾರಣವಾಗುತ್ತದೆ, ಮಾತು ಬೇಡವಾಗಿದೆ. ಮಾತಿನಲ್ಲಿ ದ್ವೇಷ ಪ್ರವೇಶಿಸಿದೆ:

'ಬುಸುಗುಡುತಿವೆ ಸುತ್ತೂಮುತ್ತೂ| ಹಾವೂ
ಅಣಗಿಸುತಿವೆ ಒಣಗಿದ ಹೂವು'

ಈ ಎರಡು ಪ್ರತಿಮೆಗಳು ದ್ವೇಷದ ಮತ್ತು ಮಧುರಭಾವವು ಸತ್ತದ್ದರ ಸಂಕೇತವಾಗಿವೆ. ಶೂನ್ಯಭಾವ ಆವರಿಸಿದ ವಿರಹ ನಿಷೇಧವನ್ನೇ ನುಡಿಯುತ್ತದೆ:

'ಅಣಗಿಸುತಿವೆ ಒಣಗಿದ ಹೂವು | ಎಲ್ಲಿರುವುದು ಆಗಿನ ಹೂಹೂ
ಊಂಹೂಃ ಊಂಹೂ'

**ನಾನೆಲ್ಲಿ ಹೋಗಿದ್ದೆ ನಿನ್ನ ಎದೆಯೊಳಗಿದ್ದೆ**

ಈ ಅಧ್ಯಾಯದ ಪ್ರಾರಂಭದಲ್ಲಿ ಒಲವೆ ಬದುಕಾದಾಗ ಪ್ರೇಮರೂಪಿ ಪರಮಾತ್ಮನ ಸಾಕ್ಷಾತ್ಕಾರವಾಗುವ ಸಾಧ್ಯತೆ ಇರುತ್ತದೆ ಎಂದು ಹೇಳಿದ್ದೇನೆ. ಅದು 'ರಾಧೆಯ ಪಾಡು'[41] ಕವನದಲ್ಲಿ ನಿಜವಾಗಿದೆ. ಬೇಂದ್ರೆಯವರ ಪ್ರೇಮಗೀತೆಗಳ ಹಾಗೂ ಪ್ರೇಯಸಿತತ್ತ್ವ-ರಾಧಾ ತತ್ತ್ವವಾಗಿದೆ. ಈ ಕವನದಲ್ಲಿ ಎದುರಲ್ಲಿಲ್ಲದ ಕೃಷ್ಣನನ್ನು ನೆನೆಸಿದ ರಾಧೆಯು ತನ್ನ ಸಖಿಯ ಜೊತೆ ಸಂವಾದ ನಡೆಸುತ್ತಿದ್ದಾಳೆ. ಅವರ ಸಂವಾದ ನಾಟಕೀಯ ಶೈಲಿಯಲ್ಲಿದ್ದು, ವಿರಹದ ಭಾವಾಭಿವ್ಯಕ್ತಿಯನ್ನು ಸಮರ್ಥವಾಗಿ ಧ್ವನಿಸುತ್ತಿದೆ. ನಾಟಕದ ಅಂತಿಮ ತಿರುವಿನಲ್ಲಿ ಪ್ರೇಮರೂಪಿ ಪರಮಾತ್ಮನು ಪ್ರತ್ಯಕ್ಷನಾಗಿ ನುಡಿವ ನುಡಿಯಿದ್ದು ಅದು ವಿರಹ ವಾತಾವರಣಕ್ಕೆ ಆಹ್ಲಾದಮಯ ಪರಿಣಾಮವನ್ನು ನೀಡಿದೆ.

ರಾಧೆಯ ವಿರಹದ ನೋವನ್ನು ಅರಿತು ಅವಳನ್ನು ಆ ವಿರಹ ವೇದನೆಯಿಂದ ಹೊರಬರುವಂತೆ ಮಾಡಲು ಸಖಿ ಸಂವಾದ ಪ್ರಾರಂಭಿಸುತ್ತಾಳೆ.

ಸಖಿ : 'ಮುಂದೇನೆ? | ಸಖಿ | ಮುಂದೇನೆ?' ||ಪ||
ರಾಧೆ : ರೂಪ ಗುಣಕೆ ಮೆಚ್ಚಿ
ಬಂದನೆಂದೆನು ಹುಚ್ಚಿ
ಅಂದೆನೇ | ಮನದಿ ಅಂದೆನೇ

ರಾಧೆಯು ಅವನ ರೂಪನ್ನು ಮೆಚ್ಚಿ, ಅವನ ಕಂಡುಕಾಣದಂತಾಗುವ ಮಾಯಾವಿತನವನ್ನು ತಿಳಿದಿದ್ದು, ತನ್ನ ಸಂಬಂಧಿಕರನ್ನೆಲ್ಲ ಬಿಟ್ಟು ಅವನ 'ಪಂಥವ ತೊಟ್ಟು' ಬಂದಿದ್ದಾಳೆ. ಹೀಗಿದ್ದೂ ಅವನು ತನ್ನಿಂದ ದೂರವಾಗಲು,

'ಒರೆದೆನಂಗಃಲಾಚಿ
ಕರೆದೆ ಜೀವವ ಚಾಚಿ
ನೊಂದೆನೇ | ಬಹಳ ನೊಂದೆನೇ'

ಎಂದು ನೋವಿನಿಂದ ನುಡಿದು, ಅತಿ ದುಃಖವಾಗಿ ನುಡಿಯಲಾಗದೆ, ಕಂಬನಿದುಂಬಿ, ಜೀವ ಭಾವದಲ್ಲಿ ಅವನನ್ನು ನೆನೆಸಿ ಅವನನ್ನು ಕಾಣುವ ಒಂದೇ ಮನಸ್ಥಿತಿಯವಳಾಗಿ; ವಿರಹವೇದನೆಯಿಂದ ಮುಡಿದಿದ್ದ ಹೂವನ್ನು ಕಿತ್ತೆಸೆದು:

'ಒಗೆದು ಹೂದಂಡಿಗೆ
ಯಮುನೆಯ ದಂಡಿಗೆ
ನಿಂದೆನೇ | ದುಃಖಿನಿಂದೆನೇ'

ಎನ್ನುವಳು. ಆ ಮಾತಿಗೆ ಸಖಿ: 'ಮುಂದೇನೇ? ಸಖಿ | ಮುಂದೇನೇ?' ಎಂದೇ ಪಲ್ಲವಿ ನುಡಿಯುತ್ತಿರುತ್ತಾಳೆ. ಹೀಗೆ ಸಖಿ ನುಡಿಯಲ್ಲಿ ರಾಧೆಯ ವಿರಹದ ಏಕತಾನತೆ ಇರುವುದು ಈ ಸಂವಾದದ ವೈಶಿಷ್ಟ್ಯವಾಗಿದೆ.

ಆ ವಿರಹದ ತೀವ್ರತೆ 'ಹೊಳೆಯೊಳು ಹೊತ್ತಾರೆ| ಧುಮುಕಿ ನಾ ಸತ್ತಾರೆ | ಹೊಂದೇನೆ? ಅವನ ಹೊಂದೇನೇ?' ಎಂದು ರಾಧೆಯ ಪ್ರಶ್ನೆಯಾಗಿ ಹೊರಹೊಮ್ಮಿದೆ. ಮತ್ತೆ ಸಖಿ ಅದೇ ಏಕತಾನತೆಯಲ್ಲಿ ನುಡಿಯುತ್ತ ಸಂವಾದ ಮುಂದುವರಿದಾಗ ಧುತ್ತೆಂದು ಬಂದ ಕೃಷ್ಣ ನುಡಿಯುತ್ತಾನೆ:

'ನಾನೆಲ್ಲಿ ಹೋಗಿದ್ದೆ
ನಿನ್ನ ಎದೆಯೊಳಗಿದ್ದೆ
ನಿಂದೆನೇ, ಹೊರಗೆ ಬಂದೇನೇ
ಸಖಿ, ಮುಂದೇನೇ | ನಿನ್ನ ಮುಂದೇನೇ!'

ಇದುವರೆಗೂ ಏಕತಾನವಾಗಿದ್ದ 'ಮುಂದೇನೆ?' ಎಂಬ ಸಖಿಯ ಪ್ರಶ್ನೆಯೇ ಕೃಷ್ಣನ ಉತ್ತರವಾಗಿ ಸಖಿ ರಾಧೆಯ 'ಮುಂದೇನೇ' ಕೃಷ್ಣ ನಿಲ್ಲುವನು. ರಾಧೆಗೆ ಕೃಷ್ಣನ ಅನುಭವ 'ಮಾತು ಮಾತು ಮಥಿಸಿ ಬಂದ ನಾದದ ನವನೀತ'ದಂತೆ ಆನಂದದಾಯಕವಾಗುತ್ತದೆ. ಹೀಗಾಗಿ ಬೇಂದ್ರೆಯ ಮಾತಿನ ವ್ಯಂಗ್ಯಾರ್ಥ ಇಲ್ಲಿ ವಿರಹಕ್ಕೆ ಉತ್ತರವಾಗಿ ಕೃಷ್ಣನಂತೆ ಗೋಚರಿಸಿ ಪ್ರೇಮರೂಪಿ ಪರಮಾತ್ಮನ ಸಾಕ್ಷಾತ್ಕಾರವನ್ನು ದರ್ಶಿಸುತ್ತದೆ.

ಈ ಕವನದ ವಿರಹಿಣಿ ರಾಧೆಯ ಎದೆಯಲ್ಲಿಯೇ ತಾನಿರುವುದಾಗಿ ಕೃಷ್ಣ ನುಡಿಯುವಲ್ಲಿ ಅವರ ಐಕ್ಯ ಸಾಧಿಸಿದೆ. ವಿರಹ ದೂರವಾಗಿ ಮಧುರಭಾವ ಮೂಡಿದೆ. ಅಂದರೆ ಕೃಷ್ಣ -ರಾಧೆಯ ಹೃದಯದಲ್ಲಿಯೇ ಇದ್ದಾನೆ. ಆ ಪ್ರೇಮ ಅವರಲ್ಲಿಯೇ ಇದೆ.

'ಅದು ಇದೆ ಎದೆಯಲ್ಲಿ, ಬೆಳಕಿನ ಬದಿಯಲ್ಲಿ
ರಸಗಂಗಾನದಿಯಲ್ಲಿ ಅದರುಗಮ
ಹೆಸರದಕೆ ಪ್ರೀತಿಯು ಹಿಗ್ಗಿನ ರೀತಿಯು
ಆತ್ಮದ ನೀತಿಯು ಮಧುಸಂಗಮ'.[42]

### ೫. ಒಲವೆ ನಮ್ಮ ಬದುಕು

ಬೇಂದ್ರೆಯವರ ಕಾವ್ಯ ಪ್ರೇಮಜೀವನದಲ್ಲಿಯ ಆಕರ್ಷಣೆ, ಬಯಕೆ, ವಿರಹ, ವಿರಸಗಳನ್ನು ಚಿತ್ರಿಸುತ್ತ ಅದರೆಲ್ಲ ಅನುಭವದಲ್ಲಿ ಗಂಡು-ಹೆಣ್ಣು ಪಾಡಾಗಬೇಕು, ಮಾಗಬೇಕು ಎಂದಿದ್ದಾರೆ. ಬೇಂದ್ರೆಯವರ ದಾಂಪತ್ಯದ ಗಂಡು ಹೆಣ್ಣು ಸಮಭಾವದ ಸಖ-ಸಖಿಯರು. ಗಂಡ ಭೋಗಿ ಹೆಣ್ಣು ಭೋಗದ ವಸ್ತು ಎಂಬುದು ಅವರ ದೃಷ್ಟಿಯಲ್ಲ. ಆ ದಾಂಪತ್ಯದ ಚೌಕಟ್ಟಿನಲ್ಲಿ ಕಾಮ ಪ್ರೇಮವಾಗುವ process ಇದೆ. ಬೇಂದ್ರೆ ಕಾವ್ಯದ ಹೆಣ್ಣು ಕಾಮದಲ್ಲಿ ಪುಟಗೊಂಡು ತಾಯಿತನದ ದೀಕ್ಷೆ ಪಡೆಯುತ್ತಾಳೆ. ಬೇಂದ್ರೆಯವರ ಪ್ರಣಯಗೀತೆಗಳನ್ನು ಕುರಿತು ಮುರಳೀಧರ ಉಪಾಧ್ಯ ಹಿರಿಯಡಕ ಅವರು "ಬೇಂದ್ರೆಯವರ ಪ್ರಣಯಗೀತೆಗಳು, ನವೋದಯ ಕನ್ನಡ ಸಾಹಿತ್ಯದ ಸ್ವತಂತ್ರ ಸಾರ್ಥಕ ಘಟಕಗಳಾಗಿ (Units of meaning) ಉಳಿಯುತ್ತವೆ. ಬೇಂದ್ರೆಯವರ ಆಧ್ಯಾತ್ಮಿಕ ಗೀತಗಳು ತಮ್ಮ ಮಹತ್ವವನ್ನು

ಕಳೆದುಕೊಳ್ಳಬಹುದು. ಅವರ ಅನುಭಾವ ಗೀತಗಳು ಸಹೃದಯರಿಗೆ ನಿಲುಕದೆ ಹೋಗಬಹುದು. ಆದರೆ ಈ ಚಿಂತನಕವಿಯ ಪ್ರಣಯಗೀತಗಳು ನಮ್ಮ ನಾಡಿನಲ್ಲಿ ಪ್ರಣಯಿ-ಪ್ರಣಯಿನಿಯರು ಇರುವವರೆಗೆ ಉಳಿಯಬಲ್ಲವು"[43] ಎಂದು ಹೇಳಿದ್ದಾರೆ. ಡಿ. ಆರ್. ನಾಗರಾಜ್ ಅವರು 'ಪ್ರಣಯವೆನ್ನುವುದು ಬೇಂದ್ರೆಯವರ ಜೀವನದರ್ಶನದ ಕೇಂದ್ರ ತತ್ವ'[44] ಎಂದು ನುಡಿದಿದ್ದಾರೆ.

ಸಂತೋಷ-ದುಃಖ, ಮಿಲನ-ವಿರಹ, ರಸ-ವಿರಸಗಳ ಜೀವನಾನುಭವದಲ್ಲಿ ಗಟ್ಟಿಗೊಂಡ ದಂಪತಿಗಳು ಸಮರಸ ತತ್ವದ ರೂಪಕಗಳಾಗುತ್ತಾರೆ ಎಂಬುದು ಬೇಂದ್ರೆಕಾವ್ಯದ ತಾತ್ವಿಕ ಚಿಂತನೆ. ಅದರ ಫಲರೂಪಿಯಾಗಿ 'ಕುಣಿಯೋಣು ಬಾರs', 'ನಲ್ಲನಲ್ಲೆಯರ ಲಲ್ಲೆ', 'ಜನುಮದ ಜಾತ್ರಿ', 'ನಾನು ಬಡವಿ ಆತ ಬಡವ', 'ಸಖೀಗೀತ', 'ಸಂಸಾರ' ಮುಂತಾದ ಕವನಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ಜನುಮದ ಜಾತ್ರಿ' ಮತ್ತು 'ನಾನು ಬಡವಿ ಆತ ಬಡವ' ಕವನಗಳ ಅಂತರಂಗವನ್ನರಿಯೋಣ:

**ಜನುಮದ ಜಾತ್ರಿ[45]**

'ಜನುಮದ ಜಾತ್ರಿ' ಎಂಬ ಜನಪದ ನುಡಿಯೆ ಕುತೂಹಲಕಾರಿಯಾಗಿದ್ದು, ನಲ್ಲ ನಲ್ಲೆಯರ ಬದುಕು ಸಂತಸ ಸಂಭ್ರಮದಿಂದ ಕೂಡಿರುವುದನ್ನು ಸಂಕೇತಿಸುತ್ತದೆ. ನಲ್ಲೆಯು ತನ್ನ ನಲ್ಲನ ಒಲುಮೆಯ ಕಣ್ಣಿನ ಸೂತ್ರಕ್ಕೆ ಕುಣಿಯುವ ಗೊಂಬೆ ತಾನು ಎಂದು ಹೇಳಿಕೊಂಡಿರುವುದರಲ್ಲಿ ಅವಳು ಪ್ರೀತಿಯ ಸೂತ್ರದಲ್ಲಿ ಬಂಧಿತಳಾಗಿ ಸುಖಿಯಾಗಿರುವುದು ಕಂಡುಬರುತ್ತದೆ. ಆದಕಾರಣ ಅವಳಿಗೆ 'ದಿನ ದಿನ ಜಾತ್ರಿಯೆನಿಸಿತ್ತ ಜನುಮವು' ಆಗಿದೆ. ಗೆಳತಿಗೆ ಜಾತ್ರೆಯ ವೈಭವದಂತೆ ತನ್ನ ನಲ್ಲನನ್ನು ಬಣ್ಣಿಸಿ ಹೇಳುವ ರೀತಿ ಅವಳ ಒಲವಿನ ಪ್ರದರ್ಶನವಾಗಿದೆ. ಅವಳಿಗೆ ನಲ್ಲನ ಜೊತೆಯ ಬದುಕು ಸಫಲತೆಯನ್ನು ತಂದಿದೆ. ಆದಕಾರಣ ನುಡಿಯುತ್ತಾಳೆ:

> 'ಹುಬ್ಬು ಹಾರಸಿದಾಗ ಹಬ್ಬ ಎನಿಸಿತು ನನಗ
> 'ಅಬ್ಬ' ಎನಬೇಡs ನನಗೆಣತಿ ಸಾವಿರಕ
> ಒಬ್ಬ ನೋಡವ್ವ ನನ ನಲ್ಲ'

ಅವಳು ಅವನ ಕಣ್ಣು, ಮೀಸೆ, ತಂಬುಲತುಟಿ ಬಣ್ಣಿಸಿ ಹೆಮ್ಮೆಪಡುತ್ತಾಳೆ. ನಲ್ಲನು ನಲ್ಲೆಯ ಮನದಲ್ಲಿ ಸದಾ ಇರುವುದನ್ನು ಕವಿಯು ಜಾನಪದ ಶೈಲಿಯಲ್ಲಿ ಬಣ್ಣಿಸಿ, ತುಂಬಿ ಬಂದ ಅವಳ ಭಾವವು ತಂಬುಲ, ಹೊಂಬಿಸಿಲು, ಬಿಂಬ, ನಂಬಿ, ರಂಬಿ ಎಂಬಲ್ಲಿ ಅವು ಆದಿಪ್ರಾಸ, ಒಳಪ್ರಾಸಗಳೊಡನೆ ಒಂದಾಗಿ ಆ ದಂಪತಿಗಳ ಐಕ್ಯವನ್ನು ಪ್ರತಿಬಿಂಬಿಸಿರುವ ರೀತಿ ಅಪೂರ್ವವಾಗಿದೆ.

> 'ತಂಬುಲ ತುಟಿ ನಗಿ ಹೊಂಬಿಸಿಲೆಂಬಂತೆ
> ಬಿಂಬಿಸಿತವ್ವಾ ಎದಿಯಾಗ ನಂಬೀಸಿ
> ರಂಬೀಸಿತವ್ವಾ ಜೀವವ'

**ನಾನು ಬಡವಿ ಆತ ಬಡವ[46]**

ಬೇಂದ್ರೆಯವರ ಬಡತನದ ನೋವು ಮತ್ತು ದಾಂಪತ್ಯದ ಎದೆಯಾಳದ ಪ್ರೀತಿ 'ನಾನು ಬಡವಿ ಆತ ಬಡವ' ಕವನದಲ್ಲಿ ಅಮರತ್ವವನ್ನು ಪಡೆದಿದೆ. ಇದು ಪತ್ನಿಯ ಮನದ ಭಾವಲಹರಿಯನ್ನು ಸೂಚಿಸುವ ಕವನವಾಗಿ ರಸಿಕರ ಮನಸ್ಸನ್ನು ಆರ್ದ್ರಗೊಳಿಸುವ ಮಧುರಭಾವದಿಂದ ಕೂಡಿದೆ. ಇಲ್ಲಿ ಪ್ರೀತಿಯ ಸಿರಿತನ ತನ್ನೆಲ್ಲ ಭಾವ ವೈಭವದೊಡನೆ ಮೆರೆದು ಸಹೃದಯರ ಹೃದಯಕ್ಕೆ ಲಗ್ಗೆಯಿಟ್ಟು ಅಲ್ಲಿ ಗೂಡುಕಟ್ಟುವ ಸತ್ತ್ವವನ್ನು ಹೊಂದಿದೆ. ಬೇಂದ್ರೆಯವರು ಬಡವರ ಹಾಡನ್ನು ಹಾಡುತ್ತ ಅವರ ಸರಳ

ಸಹಜ ನುಡಿಯನ್ನು ಬಳಸಿ ಅದು ಜನರ ಮನಸ್ಸನ್ನು ಹೊಗುವಂತೆ ಮಾಡಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಈ ಕವನವನ್ನು ಕುರಿತು ಎನ್. ಗಾಯತ್ರಿ ಅವರು "ಈ 'ನಾನು ಬಡವಿ' ಕವನ ಗಂಡಹೆಂಡಿರ ನಡುವಿನ ದೈನಂದಿನ ಎಲ್ಲ ಘಟನೆಗಳಲ್ಲೂ ಸಹಭಾಗಿತ್ವವನ್ನು ಚಿತ್ರಕ ಶೈಲಿಯಲ್ಲಿ ಹಿಡಿದಿಡುವ ಪ್ರಯತ್ನದಲ್ಲಿ ಯಶಸ್ವಿಯಾಗಿದೆ"[47] ಎಂದು ಹೇಳಿದ್ದಾರೆ. ಈ ಕವನದ ನಾಯಕಿ ನುಡಿಯುತ್ತಾಳೆ:

'ನಾನು ಬಡವಿ ಆತ ಬಡವ
ಒಲವೆ ನಮ್ಮ ಬದುಕು.
ಬಳಸಿಕೊಂಡೆವದನೆ ನಾವು
ಅದಕು ಇದಕು ಎದಕು.'

ಈ ನಾಡಿನ ಬಡವರು ಆರ್ಥಿಕ ಸಿರಿತನದಿಂದ ವಂಚಿತರಾದರೂ, ಮಾನಮರ್ಯಾದೆಗಳಿಗೆ ಅಂಜಿ ನ್ಯಾಯ, ಧರ್ಮ, ನೀತಿಯಿಂದ ಬದುಕುವ ಜನರಾಗಿದ್ದಾರೆ. ಅವರೆಲ್ಲರ ಧ್ವನಿಯಂತೆ ಈ ಹಾಡಿದೆ. ಇಲ್ಲಿ ಬಡವಿಯು ತನ್ನ ಅಂತರ್ಯದ ಸವಿಯನ್ನು ಹಾಡಾಗಿ ಹಾಡಿದ್ದಾಳೆ. ಅವಳು ಹೇಳುವ ದಾಂಪತ್ಯದ ಸಿರಿತನ ದಂಪತಿಗಳಿಗೆ ತುಂಬಾ ಪ್ರಮುಖವಾದುದು. ತಾತ್ವಿಕವಾಗಿ ಚಿಂತನೆ ನಡೆಸಿದರೂ ಹಣ ಒಡವೆ ದಾಂಪತ್ಯದ ಬಾಂಧವ್ಯವನ್ನು ಬಿಗಿಗೊಳಿಸದೆ ಪ್ರೀತಿಯೊಂದೆ ಬಂಧನದ ತಂತುವಾಗಿರುವುದು ಸತ್ಯ ಸಂಗತಿಯಾಗಿದ್ದು, ಅದು ಇಲ್ಲಿ ಕಾವ್ಯವಾಗಿದೆ. ಈ ಕಾವ್ಯದ ಬಡವಿ ಜಗದೆಲ್ಲ ಜನರ ಬದುಕಿನ ಅರ್ಥವನ್ನು 'ಒಲವೆ ನಮ್ಮ ಬದುಕು' ಎಂದು ಹಾಡಿದ್ದಾಳೆ. ಅವಳಿಗೆ ಗಂಡನೇ ಸರ್ವಸ್ವ. ನಮ್ಮ ಧಾರ್ಮಿಕ ನಂಬಿಕೆಯ ಪ್ರಕಾರ ಸುಮಂಗಲಿಗೆ ಓಲೆ ಪವಿತ್ರ. ಅವಳು ಬಡವಳು. ಅವಳಿಗೆ ಚಿನ್ನದ ಓಲೆ ಇಲ್ಲದಿದ್ದರೂ ಅವಳಿಗೆ 'ಕಣ್ಣು ಕಟ್ಟು'ವಂಥ ಮೂರ್ತಿಯಾದ ಗಂಡನೇ 'ಕಿವಿಗೆ ಮೆಚ್ಚಿನೋಲೆ'ಯಾಗಿದ್ದಾನೆ. ಹೀಗೆ ನುಡಿಯುವಲ್ಲಿ ಗಂಡನ ಪಾವಿತ್ರ್ಯವನ್ನು, ಅವಳ ಆಭರಣವೇ ಅವನಾಗಿರುವುದನ್ನು ಕವನ ಧ್ವನಿಸುತ್ತದೆ. ಅವಳಿಗೆ ಗಂಡ ಯಾವಾಗಲೂ ಒಂದೇ ಬಗೆಯ ಪ್ರೀತಿಯನ್ನು ನೀಡುವವನು. ಅವನ ಪ್ರೀತಿಯಲ್ಲಿ ಒಂದೇ ಹದವಿದೆ. ಆದರೆ ಹೆಣ್ಣಾದ ಅವಳಿಗೆ ಗಂಡನ ಮೈ ಮುಟ್ಟುವುದು ಎಂದರೆ ಮೈ ಮುಳ್ಳು ಏಳುವ ರೋಮಾಂಚನದ ಅನುಭವ. ಅದನ್ನು ಕವಿ ರೂಪಕಾತ್ಮಕವಾಗಿ:

'ಚಳಿಗೆ ಬಿಸಿಲಿಗೊಂದೆ ಹದನ
ಅವನ ಮೈಯ ಮುಟ್ಟೆ
ಅದೇ ಗಳಿಗೆ ಮೈಯ ತುಂಬ
ನನಗೆ ನವಿರು ಬಟ್ಟೆ'.

ಎಂದು ಬಣ್ಣಿಸಿದ್ದಾರೆ. ಬಡವರಾದ ಆ ದಂಪತಿಗಳಲ್ಲಿ ಒಡವೆ ಇಲ್ಲ. ಅವರಿಗೆ ಒಡವೆ ಬೇಕೆಂದೆನಿಸಿಲ್ಲ. ಅವರು ತಮ್ಮನ್ನೇ ಒಡವೆ ಎಂದು ತಿಳಿದಿದ್ದಾರೆ. ಇದು ಕಠೋರ ಸತ್ಯವೂ ಹೌದು. ಹಣ ಒಡವೆಯನ್ನು ಸಂಪಾದಿಸುವುದು ಈ ಒಡಲು. ಅದೇ ನಿಜವಾದ ಆಸ್ತಿ. ಅದರಲ್ಲಿರುವ ಪ್ರೀತಿಯೇ ಅದರ ಮೌಲ್ಯ. ಈ ಬಗೆಯ ಸತ್ಯವನ್ನು ನೇರವಾಗಿ ನುಡಿದಿರುವುದರಿಂದ ಆ ಸತ್ಯದ ಹೊಳಪು ಸಹೃದಯರಿಗೆ ಪ್ರಕಾಶಿಸಿ ಅದು ಅವರ ಮನದ ಹಾಡಾಗಿದೆ. ಆಕೆ ನುಡಿಯುತ್ತಾಳೆ:

'ಆತ ಕೊಟ್ಟ ವಸ್ತು ಒಡವೆ
ನನಗೆ ಅವಗೆ ಗೊತ್ತು

ತೋಳುಗಳಿಗೆ ತೋಳಬಂದಿ
ಕೆನ್ನೆ ತುಂಬ ಮುತ್ತು'.

ಪ್ರೀತಿಯನ್ನು ಗಂಡ ಹೀಗೆ ತೋರಿಸಿದ್ದರಿಂದ ಅವಳ ಬಾಳು ಸಾರ್ಥಕವಾಗಿದೆ. ಆ ಪ್ರೀತಿ ಪ್ರೇಮರೂಪಿಯಾಗಿ ತನ್ನ ಗಂಡ, ಮಕ್ಕಳ ಫಲವನ್ನು ನೀಡಿದ್ದಾನೆ. ತುಟಿಗೆ ಹಾಲು ಜೇನಿನ ಸವಿ ನೀಡಿದ್ದಾನೆ. ಇಷ್ಟೇ ಸಾಕು ಎಂಬ ತೃಪ್ತಿಯ ಭಾವ ಕವನದ ನಾಯಕಿಗಿದೆ. ಇದು ಸಂಸಾರಿಗೆ ಬೇಕಾದ ತೃಪ್ತಭಾವ. ಅಷ್ಟಕ್ಕೇ ಎಲ್ಲರೂ ಕೂಡಿ ಬಾಳ್ವೆ ಮಾಡುವುದು. ಆದುದರಿಂದ ಆಕೆ ಸಮಾಧಾನಚಿತ್ತದಿಂದ ತನ್ಮಯಳಾಗಿ ನುಡಿಯುತ್ತಾಳೆ:

'ಕುಂದುಕೊರತೆ ತೋರಲಿಲ್ಲ
ಬೇಕು ಹೆಚ್ಚಿಗೇನು?
ಹೊಟ್ಟೆಗಿತ್ತ ಜೀವಫಲವ
ತುಟಿಗೆ ಹಾಲುಜೇನು'.

ಈ ನುಡಿ ಜೀವನದ ಜಂಜಾಟದಲ್ಲಿರುವ ಕಾವ್ಯರಸಿಕರಿಗೆ ಸಾಂತ್ವನವನ್ನು ನೀಡುವ ನುಡಿಯಾಗಿ, ಇದು ಅವರ ಮನದ ಹಾಡಾಗಿದೆ. ಇಂತಹ ಸುಮಧುರ ಭಾವದ ಪ್ರೇಮಗೀತೆ ರಚಿಸಿರುವುದೇ ಬೇಂದ್ರೆಯವರನ್ನು ಒಲವಿನ ಕವಿಯಾಗಿಸಲು ಕಾರಣವಾಗಿದೆ. ಈ ಕವನ ವೈಯಕ್ತಿಕ ನೆಲೆಯನ್ನು ಬಿಟ್ಟು ಸಹೃದಯರನ್ನು ವ್ಯಾಪಿಸಿ ದೇಶಕಾಲಾತೀತವಾದ ಸಾರ್ವಕಾಲಿಕ ಸತ್ಯದ ದಾಂಪತ್ಯದ ಸಂದೇಶವನ್ನು ಬೀರುವ ಗೀತವಾಗಿದೆ.

**ಜೀವೈಕ್ಯದೊಳು ಸಂಗಮಿತ ಹೊಳೆಗಳಂತೆ**

'ಜೀವದ ಗೆಳತಿ'[48] ಕವನದ ನಾಯಕ-ನಾಯಕಿಯರು ಜೀವದ ಗೆಳೆಯ-ಗೆಳತಿಯರಾದುದರಿಂದ ಅವರ ಗಾಢ ಬಾಂಧವ್ಯ ಪ್ರೇಮ ಸಾಕ್ಷಾತ್ಕಾರದ ನೆಲೆಯಲ್ಲಿದೆ. ಕವಿಯು ಅವರ ಗೆಳೆತನವನ್ನು ಸಸ್ಯದ ಪ್ರತಿಮೆಯಿಂದ ಹೀಗೆ ಬಣ್ಣಿಸಿದ್ದಾನೆ:

'ಬೆರಳು ಬೆರಳುಗಳಲ್ಲಿ, ಕೊರಳು ಕೊರಳಿನಲಿರಿಸಿ,
ಸುರುಳುರುಳಿ, ಸುತ್ತಿರುವ ಬಳ್ಳಿಗಳ ಹಾಗಾಗಿ,
ಅರಳಿಸುತಲೊಂದೊಂದೆ ಅವಳಿ ಹೂ, ದಿವ್ಯತರ
ದೃಷ್ಟಿಯನು ಪಡೆಯುವಂತೆ'.

ಆ ಪ್ರೇಮ ಬೆಳೆಯುತ್ತ ಮುಗಿಲು ಮುಟ್ಟುವ ಆಸೆಯಲ್ಲಿ ಬೆಳಕನ್ನು ಕಾಣುವ 'ಹುಡುಕಿ ಕಂಡಂತೆ ನಮ್ಮಂತಿರುವ ನಕ್ಷತ್ರ ದ್ವಂದ್ವಗಳನು' ಎಂಬಲ್ಲಿ ಸೃಷ್ಟಿಶೀಲತೆಯ ಜೊತೆಗೆ ಜ್ಞಾನವನ್ನು ಅರಸುವ ಭಾವವೂ ಇದೆ. ಜೊತೆಗೆ ಕವನದ ಭಾವಕ್ಕೆ ಸಮರಸದಿಂದ ಬಾಳುವ ಹಾಗೂ ಅದೇ ಬೆಳಕೆಂಬ ದೃಷ್ಟಿಯಿದೆ. ಆ ಭಾವದಲ್ಲಿ ಗೆಳೆಯ ಗೆಳತಿಯರು ಒಂದಾಗಿ ರಸೈಕ್ಯವನ್ನು ಪಡೆಯುವ ರೀತಿಯನ್ನು ಬೇಂದ್ರೆಯವರು:

'ಕೈಗೆ ಕೈ, ಮೈಗೆ ಮೈ, ಬಾಯ್ಗೆ ಬಾಯ್ಗೂಡಿಸೇ !
ಸಾಗಿ, ಬಿಗಿ ತಾಗಿ, ಒಂದಾಗಿ, ಹನಿಹನಿಗೂಡಿ,
ಮಾಗಿ, ಗಡನೊಂದೆ ರಸವಾಗಿ, ಜೀವೈಕ್ಯದೊಳು
ಸಂಗಮಿತ ಹೊಳೆಗಳಂತೆ'.

ಎಂದು ಬಣ್ಣಿಸಿದ್ದಾರೆ. ಇದು ಜಗದ ದಂಪತಿಗಳ ಆನಂದದ ಹಾಡಾಗಿ, ರಸಸ್ಪರ್ಶಿಯಾಗಿ ಈ

ಹಾಡು ದಾಂಪತ್ಯದ ಗಾಥೆಯಾಗಿದೆ. ಹೀಗೆ ವೈಯಕ್ತಿಕ ನೆಲೆಯಿಂದ ರೂಪುಗೊಂಡ ಪ್ರೇಮಗೀತೆಗಳು ಬೇಂದ್ರೆಯವರ ಆದರ್ಶ ಚಿಂತನೆಯ, ಜೀವಪರ ಆಲೋಚನೆಯ, ಸಮರಸ ತತ್ವದ ದೃಷ್ಟಿಯಿಂದ ಸಮಷ್ಟಿಯ ಜೀವಸ್ಪರ್ಶ ಮಾಡಿ ಲೋಕದ ಹಾಡಾಗಿವೆ.

ಪ್ರಿಯಕರ-ಪ್ರೇಯಸಿ ಇವರ ಜೀವನ ಧ್ಯೇಯ - ಒಲವಿನ ಆರಾಧನೆ. ಒಲವೆಂಬ ಚೆನ್ನಮಲ್ಲಿಕಾರ್ಜುನನ ದರ್ಶನಕ್ಕಾಗಿ ಅಕ್ಕಮಹಾದೇವಿ; ಕೃಷ್ಣನ ಸಹವಾಸಕ್ಕಾಗಿ ರಾಧೆ ಹಾಗೂ ಮೀರಾಬಾಯಿ ಸಾಧನೆ ಮಾಡಿದಂತೆ, ಪ್ರಿಯಕರ-ಪ್ರೇಯಸಿ ಸಂಕಲ್ಪ ಮಾಡಬೇಕಾಗುತ್ತದೆ. ಅವರು ಜೀವದ ಗೆಳೆಯ-ಗೆಳತಿ, ಸಖ-ಸಖಿ ಆಗುವುದು ಅವಶ್ಯ. ಇದಕ್ಕೆ ಸಿರಿತನ, ಬಡತನ ಅಡ್ಡಿಯೂ ಅಲ್ಲ, ಪೂರಕವೂ ಅಲ್ಲ. ಇವುಗಳನ್ನು ಮೀರಿ ಈ ಜನ್ಮದ ಜಾತ್ರಿಯಲ್ಲಿಯ ಮರುಳರಾಗದ, ಹುರುಳು ಬಲ್ಲವರಾಗಿ ಆದರ್ಶಮಯ ಬಾಳನ್ನು ಸಾಗಿಸುವುದು ಅವಶ್ಯ ಎಂಬುದು ಬೇಂದ್ರೆ ಪ್ರೇಮಗೀತೆಗಳ ತಿರುಳಾಗಿದೆ.

**ಸಂಖ್ಯಾ ಟಿಪ್ಪಣಿಗಳು**

1. ಮಾಸ್ತಿ ವೆಂಕಟೇಶ ಅಯ್ಯಂಗಾರ್, 'ಮುನ್ನುಡಿ', ದ. ರಾ. ಬೇಂದ್ರೆ, ನಾದಲೀಲೆ, ಶ್ರೀಮಾತಾ ಪ್ರಕಾಶನ, ಧಾರವಾಡ, 1989, ಪು. xix.
2. ಬನ್ನಂಜೆ ಗೋವಿಂದಾಚಾರ್ಯ, 'ಪೀಠಿಕೆ1', ದ. ರಾ. ಬೇಂದ್ರೆ, ಒಲವೆ ನಮ್ಮ ಬದುಕು, ಗೀತಾ ಬುಕ್ ಹೌಸ್, ಮೈಸೂರು, 1986, ಪು. 12.
3. ವಾಮನ ಬೇಂದ್ರೆ, 'ಬೇಂದ್ರೆಯವರ ಒಲವಿನ ನಿಲವು', ಅದೇ, ಪು. 20-21.
4. ದ. ರಾ. ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ, 1974, ಪು. 103.
5. ದ. ರಾ. ಬೇಂದ್ರೆ, 'ಮುನ್ನುಡಿ', ಒಲವೆ ನಮ್ಮ ಬದುಕು, ಪೂರ್ವೋಕ್ತ, ಪು. 4.
6. ದ. ರಾ. ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಪೂರ್ವೋಕ್ತ, ಪು. 104.
7. ಅದೇ, ಪು. 137.
8. ದ. ರಾ. ಬೇಂದ್ರೆ, 'ಪ್ರಥಮ ಮುದ್ರಣದ ಪ್ರಸ್ತಾವನೆ', ಮೇಘದೂತ, ಶ್ರೀಮಾತಾ ಪ್ರಕಾಶನ, ಧಾರವಾಡ, 1991, ಪು. 21.
9. ದ. ರಾ. ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಪೂರ್ವೋಕ್ತ, ಪು. 85.
10. ದ. ರಾ. ಬೇಂದ್ರೆ, ಮೇಘದೂತ, ಪೂರ್ವೋಕ್ತ, ಪು. 5.
11. ದ. ರಾ. ಬೇಂದ್ರೆ, ಮೂರ್ತಿ ಮತ್ತು ಕಾಮಕಸ್ತೂರಿ, ಪ್ರತಿಭಾ ಮುದ್ರಣ, ಧಾರವಾಡ, 1955, ಪು. 35.
12. ಜಿ.ಟಿ. ನಾರಾಯಣರಾವ್, 'ಅಂಜಿಕಾತನಯದತ್ತ, ವಿಜ್ಞಾನ ಮತ್ತು ನಾನು' ಕಸ್ತೂರಿ, ಫೆಬ್ರುವರಿ 1998, ಪು. 75, 76.
13. ಜಿ. ಎಸ್. ಆಮೂರ, ಭುವನದ ಭಾಗ್ಯ, ಸ್ನೇಹ ಪ್ರಕಾಶನ, ಬೆಂಗಳೂರು, 1991, ಪು. 105.
14. ದ. ರಾ. ಬೇಂದ್ರೆ, ಮೂರ್ತಿ ಮತ್ತು ಕಾಮಕಸ್ತೂರಿ, ಪೂರ್ವೋಕ್ತ, ಪು. 37.
15. ದ. ರಾ. ಬೇಂದ್ರೆ, ಮುಗಿಲಮಲ್ಲಿಗೆ, ಪ್ರತಿಭಾ ಮುದ್ರಣ, ಧಾರವಾಡ, 1961, ಪು. 75.
16. ದ. ರಾ. ಬೇಂದ್ರೆ, ಶ್ರೀಮಾತಾ, ಸಮಾಜ ಮುದ್ರಣ, ಧಾರವಾಡ, 1968, ಪು. 9.
17. ದ. ರಾ. ಬೇಂದ್ರೆ, ಮೂರ್ತಿ ಮತ್ತು ಕಾಮಕಸ್ತೂರಿ, ಪೂರ್ವೋಕ್ತ, ಪು. 47.
18. ದ. ರಾ. ಬೇಂದ್ರೆ, ನಾದಲೀಲೆ, ಪೂರ್ವೋಕ್ತ, ಪು. 56.
19. ದ. ರಾ. ಬೇಂದ್ರೆ, ಮುಗಿಲಮಲ್ಲಿಗೆ, ಪೂರ್ವೋಕ್ತ, ಪು. 28.
20. ದ. ರಾ. ಬೇಂದ್ರೆ, ಮೂರ್ತಿ ಮತ್ತು ಕಾಮಕಸ್ತೂರಿ, ಪೂರ್ವೋಕ್ತ, ಪು 39.

21. ಅದೇ, ಪು. 49.
22. ದ. ರಾ. ಬೇಂದ್ರೆ, ಗರಿ, ಶ್ರೀಮಾತಾ ಪ್ರಕಾಶನ, ಧಾರವಾಡ, 1989, ಪು. 63.
23. ದ. ರಾ. ಬೇಂದ್ರೆ, ಸಖೀಗೀತ, ಶ್ರೀಮಾತಾ ಪ್ರಕಾಶನ, ಧಾರವಾಡ, 1990, ಪು. 47.
24. ದ. ರಾ. ಬೇಂದ್ರೆ, ಮಾತೆಲ್ಲ ಜ್ಯೋತಿ, ಮಣಿಪಾಲ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್ (ಲಿ.), ಮಣಿಪಾಲ, 1992, ಪು. 88.
25. ದ. ರಾ. ಬೇಂದ್ರೆ, ಮೂರ್ತಿ ಮತ್ತು ಕಾಮಕಸ್ತೂರಿ, ಪೂರ್ವೋಕ್ತ, ಪು. 36.
26. ದ. ರಾ. ಬೇಂದ್ರೆ, ಉಯ್ಯಾಲೆ, ಸಮಾಜ ಪುಸ್ತಕಾಲಯ, ಧಾರವಾಡ, 1980, ಪು. 74.
27. ಜಿ.ಎಸ್. ಆಮೂರ, ಭುವನದ ಭಾಗ್ಯ, ಪೂರ್ವೋಕ್ತ, ಪು. 105.
28. ದ. ರಾ. ಬೇಂದ್ರೆ, ಮೂರ್ತಿ ಮತ್ತು ಕಾಮಕಸ್ತೂರಿ, ಪೂರ್ವೋಕ್ತ, ಪು. 38.
29. ದ. ರಾ. ಬೇಂದ್ರೆ, ಒಲವೆ ನಮ್ಮ ಬದುಕು, ಪೂರ್ವೋಕ್ತ, ಪು. 276.
30. ಕೀರ್ತಿನಾಥ ಕುರ್ತಕೋಟಿ, ಬಾರೋ ಸಾಧನಕೇರಿಗೆ, ಮನೋಹರ ಗ್ರಂಥಮಾಲಾ, ಧಾರವಾಡ, 1993, ಪು. 230.
31. ದ. ರಾ. ಬೇಂದ್ರೆ, ನಾದಲೀಲೆ, ಪೂರ್ವೋಕ್ತ, ಪು. 50.
32. ಅದೇ, ಪು. 55.
33. ಕೃಷ್ಣ ಕಟ್ಟಿ, ಬೇಂದ್ರೆ ಮತ್ತು ಕನ್ನಡ ಭಾವಗೀತದ ಸ್ವರೂಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1996, ಪು. 97, 98.
34. ತೀನಂಶ್ರೀ, ಭಾರತೀಯ ಕಾವ್ಯಮೀಮಾಂಸೆ, ಮೈಸೂರು, 1990, ಪು. 297.
35. ದ. ರಾ. ಬೇಂದ್ರೆ, ಮೇಘದೂತ, ಪೂರ್ವೋಕ್ತ, ಪು. 3.
36. ದ. ರಾ. ಬೇಂದ್ರೆ, ಮಾತೆಲ್ಲ ಜ್ಯೋತಿ, ಪೂರ್ವೋಕ್ತ, ಪು. 87.
37. ದ. ರಾ. ಬೇಂದ್ರೆ, ಸಖೀಗೀತ, ಪೂರ್ವೋಕ್ತ, ಪು. 38.
38. ದ. ರಾ. ಬೇಂದ್ರೆ, ಮೂರ್ತಿ ಮತ್ತು ಕಾಮಕಸ್ತೂರಿ, ಪೂರ್ವೋಕ್ತ, ಪು. 46.
39. ದ. ರಾ. ಬೇಂದ್ರೆ, ಗರಿ, ಪೂರ್ವೋಕ್ತ, ಪು. 61.
40. ದ. ರಾ. ಬೇಂದ್ರೆ, ಸಂಚಯ, ಪ್ರತಿಭಾ ಮುದ್ರಣ, ಧಾರವಾಡ, 1959, ಪು. 25.
41. ದ. ರಾ. ಬೇಂದ್ರೆ, ಸಖೀಗೀತ, ಪೂರ್ವೋಕ್ತ, ಪು. 82.
42. ಅದೇ, ಪು. 38.
43. ಮುರಲೀಧರ ಉಪಾಧ್ಯ ಹಿರಿಯಡಕ, 'ಬೇಂದ್ರೆಯವರ ಕೆಲವು ಪ್ರಣಯ ಗೀತಗಳು', ಬುದ್ದಣ್ಣ ಹಿಂಗಮಿರೆ (ಸಂ.), ಇಳಿದು ಬಾ ತಾಯಿ, ಸಮಾಜ ಪುಸ್ತಕಾಲಯ, ಧಾರವಾಡ, 1977, ಪು. 503.
44. ಡಿ. ಆರ್. ನಾಗರಾಜ್, ಶಕ್ತಿ-ಶಾರದೆಯ ಮೇಳ, ಅಕ್ಷರ ಪ್ರಕಾಶನ, ಸಾಗರ, 1987, ಪು. 286.
45. ದ. ರಾ. ಬೇಂದ್ರೆ, ಮೂರ್ತಿ ಮತ್ತು ಕಾಮಕಸ್ತೂರಿ, ಪೂರ್ವೋಕ್ತ, ಪು. 45.
46. ದ. ರಾ. ಬೇಂದ್ರೆ, ನಾದಲೀಲೆ, ಪೂರ್ವೋಕ್ತ, ಪು. 59.
47. ಎನ್. ಗಾಯತ್ರಿ, 'ನವೋದಯ ಸಾಹಿತ್ಯದಲ್ಲಿ ಸಂಸ್ಕೃತಿಯ ವಿಕಾಸ ಮತ್ತು ಸ್ತ್ರೀ', ಬರಗೂರು ರಾಮಚಂದ್ರಪ್ಪ (ಪ್ರ.ಸಂ.), ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1993, ಪು. 142.
48. ದ. ರಾ. ಬೇಂದ್ರೆ, ಉಯ್ಯಾಲೆ, ಪೂರ್ವೋಕ್ತ, ಪು. 78.

# ಮುಖ ಮೂರು : ಸಖೀಗೀತ, ಮನದನ್ನೆ ಮುಂತಾದ ಕವನಗಳಲ್ಲಿನ ಮಡದಿ

'ಒಲವೆ ನಮ್ಮ ಬದುಕು' ಎಂದು ಸಾರಿದ ಬೇಂದ್ರೆಯವರ ಕವನಗಳು ಪತಿ-ಪತ್ನಿಯರ ಸ್ನೇಹಸಂಬಂಧದ, ಪರಸ್ಪರರು ಅರಿತು ಬಾಳುವ, ಬದುಕಿನಲ್ಲಿ ನಗುತ್ತ ಬಾಳ್ವೆ ಮಾಡುವ, ಎದೆ ಹಿಗ್ಗಿಗಾಗಿ ಆಶಿಸುವ ಚಿಂತನೆಯನ್ನು ಹೊಂದಿವೆ. ಅವರು ದಾಂಪತ್ಯದ ಚೌಕಟ್ಟಿನಲ್ಲಿ ಪ್ರೀತಿಯನ್ನು ಅರಸುತ್ತ ಅದನ್ನು ಪ್ರೇಮ ಜ್ಯೋತಿಯನ್ನಾಗಿಸಿದ್ದಾರೆ. ಅವರು 'ಅಧರ್ಮಕಾಮವು ಸಂಹಾರಿ, ಧರ್ಮಕಾಮವು ಆತ್ಮವಿಹಾರಿ. ಆತ್ಮವಿಹಾರಕ ಕಾಮವು ಭಕ್ತಿಬೀಜ'[1] ಎಂದು ನುಡಿದಿದ್ದಾರೆ. ಬೇಂದ್ರೆಯವರ ಚಿಂತನೆಯು ಶ್ರೀಮಾತಾರವಿಂದರಿಂದ ಪುಷ್ಟಿಗೊಂಡಿದೆ. ಬೇಂದ್ರೆಯವರು ಮಗುವನ್ನು 'ಅರ್ಧನಾರಿನಟೇಶ್ವರ' ಎಂದು, ತನ್ನನ್ನು 'ಅರೆನಾರಿಯಾದವ'[2] ಎಂದು ಕರೆದುಕೊಂಡು ಸ್ತ್ರೀ-ಪುರುಷ ಸಮಾನತೆಯನ್ನು ಪ್ರತಿಪಾದಿಸಿದ್ದಾರೆ. ಈ ಚಿಂತನೆಯ ಮೂಲ ಶ್ರೀಮಾತಾ ಅವರಲ್ಲಿರುವುದು ಕಂಡುಬಂದಿದೆ. ಶ್ರೀಮಾತಾ ಅವರು : "ಪುರುಷ ಹಾಗೂ ಸ್ತ್ರೀ ಎರಡೂ ಮೂಲವಸ್ತು ಎನ್ನುವುದಕ್ಕೆ ನನ್ನ ಆಕ್ಷೇಪವಿದೆ. ಅದು ನಿಜವಲ್ಲ ಎಂದೇ ಹೇಳುತ್ತಿರುತ್ತೇನೆ. ಒಂದು ಮೂಲವಸ್ತುವು ಹೀಗೂ ಹಾಗೂ ಇರುವುದು (ಶ್ರೀಮಾತಾ ತಮ್ಮ ಕೈಯನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ತಿರುಗಿಸುತ್ತಾರೆ) ಒಂದು ಕ್ರಿಯೆಯು ಹೀಗೆ ಮತ್ತು ಮತ್ತೊಂದು ಕ್ರಿಯೆ ಹಾಗೆ ಇರುವುದು. ಆದರೆ, ನೀವು ಒಂದು ವ್ಯಕ್ತಿಯು ಗಂಡಸು ಮತ್ತೊಂದು ಹೆಂಗಸೆಂದು ಅಷ್ಟೊಂದು ಹಟಹಿಡಿಯುವುದೇಕೆ? ಆ ರೀತಿಯಾಗಿರುವುದಿಲ್ಲ. ಸ್ತ್ರೀ-ಪುರುಷರೆನ್ನುವ ಭೇದಭಾವದ ದಂಥೆಯು ಪ್ರಕೃತಿಯ ತಂತ್ರವಾಗಿದೆ. ಇಲ್ಲಿಯ ರಚನೆಯು ಈ ರೀತಿಯಲ್ಲಿದೆ. ಆದ್ದರಿಂದ ಮೇಲಿನಿಂದ ಭೂಮಿಗಿಳಿಯುವಾಗ ಸ್ತ್ರೀ-ಪುರುಷ ಭೇದದ ಕಲ್ಪನೆಯೇ ಇರುವುದಿಲ್ಲ. ಆ ಕಲ್ಪನೆ ಅರ್ಥಹೀನ. ಆದರೆ ಭೂಮಿಗಿಳಿದು ಬಂದ ಮೇಲೆ ಅದು ನಿಜವಾಗುತ್ತದೆ. ಆಗ ನೀವೇ ಹೇಳಿಕೊಳ್ಳುತ್ತೀರಿ - "ಅದು ಯಥಾಯೋಗ್ಯವಾಗಿದೆ, ಪ್ರಕೃತಿಯು ಈ ರೀತಿ ರಚನೆ ಮಾಡಿದೆ" - ಅದು ಸರಿ. ಆದರೆ ಈ ಕಲ್ಪನೆಗಳು - ಒಂದು ಮೂಲವಸ್ತು ಪುರುಷ ಮತ್ತೊಂದು ಸ್ತ್ರೀ ಎಂಬ ಕಲ್ಪನೆ ಕೆಳಗಿನಿಂದ - ಅಂದರೆ ಮನುಷ್ಯನ ಮೆದುಳಿನಿಂದ ಬಂದಿದೆ. ಅದಕ್ಕೆ ಸ್ತ್ರೀ-ಪುರುಷ ಎಂಬುದಕ್ಕಿಂತ ಬೇರೆ ಕಲ್ಪನೆಯೇ ಬರುವುದಿಲ್ಲ. ಏಕೆಂದರೆ ಮನುಷ್ಯನಿನ್ನೂ ಪ್ರಾಣಿಯಾಗಿದ್ದಾನೆ ತಿಳಿಯಿತೆ?"[3] ಎಂದು ಹೇಳಿದ್ದಾರೆ.

ಈ ಸ್ತ್ರೀ-ಪುರುಷರು ಗಂಡ-ಹೆಂಡತಿಯಾಗಿ ಬಾಳ್ವೆ ಮಾಡಲು ತೊಡಗಿದಾಗ ಈ ಸಮಾನ ತತ್ವವನ್ನು ಅರಿತಿರಬೇಕು ಎಂದು ಬೇಂದ್ರೆಯವರು ತಮ್ಮ ಕಾವ್ಯದಲ್ಲಿ ಸಾರಿದ್ದಾರೆ. ಅವರು ತನ್ನ ಪತ್ನಿಯನ್ನು ಜೀವದ ಗೆಳತಿ, ಸಖೀ ಎಂದು ಕರೆದು ಸಖ್ಯಭಾವದ ಆರಾಧಕರಾಗಿದ್ದಾರೆ. ಅವರು ಹೆಂಡತಿಯನ್ನು 'ನೀಯೆನ್ನ ಹೆಂಡತಿಯೊ ಮೈಗೊಂಡ ನನ್ನಿಯೋ' ಎಂದು ಸತ್ಯ, ಪ್ರೀತಿ, ಶಾಂತಿಯೇ ಹೆಂಡತಿ ಎಂದಿದ್ದಾರೆ. ಗಂಡ-

ಹೆಂಡತಿಯು ಸ್ನೇಹದ ಚಿಗುರೊಡೆಯುವುದು ಕಣ್ಣಿನ ಬೆಳಕಿನಲ್ಲಿ. ಪ್ರೀತಿ ಮೂಡಿ ಮನದಲ್ಲಿ ನೆಲೆಯೂರುವುದು ಮೊದಲು ಕಣ್ಣಿನೂಟದಲ್ಲಿ. ಅದರ ಜೊತೆಜೊತೆಗೆ ಒಬ್ಬರನ್ನೊಬ್ಬರು ಅರಿಯುವ ಪ್ರಯತ್ನ ಸಾಗುತ್ತದೆ. ಅದನ್ನು ಬೇಂದ್ರೆಯವರು 'ಗಂಡುಸು-ಹೆಂಗುಸಿಗೆ' ಎಂಬ ಕವನದಲ್ಲಿ ಎದುರು ಬದುರು ನಿಂತ ಕನ್ನಡಿಗಳ ರೂಪಕದಿಂದ ಸ್ಪಷ್ಟಗೊಳಿಸಿದ್ದಾರೆ.

'ಕನ್ನಡಿಯ ಒಳಗೆ ಪೆರಗನ್ನಡಿಯ ಪಡಿನೆಳಲು
ಕಣ್ಣಿದಿರುಗಣ್ಣಿನೊಳಗೊಬ್ಬರೊಬ್ಬರ ಗೊಂಬೆ
ಚಿನ್ನನಂತದ ಪಾಂಗು ನಮ್ಮಿಬ್ಬರೊಳಗೆ ಹ-
ಬ್ಬಿಹುದು ಅರಿದರಿದು ಹೆಣ್ಣೆ !'

ಕನ್ನಡಿಯ ಒಳಗೆ ಎದುರುಗನ್ನಡಿಯ ಪಡಿನೆಳಲು ಬಿದ್ದು ಅದು ಪ್ರತಿಬಿಂಬಿಸುತ್ತದೆ. ಹಾಗೆಯೇ ಎದುರುಬದುರು ನಿಂತ ಗಂಡು-ಹೆಣ್ಣಿನ ಕಣ್ಣುಗಳಲ್ಲಿ ಅವರ ಗೊಂಬೆಗಳು ಮೂಡಿ ಅದು ಮೈಮನಸ್ಸಿನಲ್ಲೆಲ್ಲ ಚಿನ್ನವಾಗಿ ಹರಿದಾಡುತ್ತದೆ. ಹಾಗೆ ಹರಿದ ಭಾವಲಹರಿಯಲ್ಲಿಯೇ ಅವರು ಒಬ್ಬರನ್ನೊಬ್ಬರು ಹೆಚ್ಚು ತಿಳಿಯುತ್ತಾರೆ ಎಂದು 'ಹಬ್ಬಿಹುದು ಅರಿದರಿದು ಹೆಣ್ಣೆ!' ಎಂದಿದ್ದಾರೆ. ಈ ಬಗೆಯ ಬಿಂಬ ಪ್ರತಿಬಿಂಬದಲ್ಲಿ ದಾಂಪತ್ಯದ ಅನಂತತೆಯನ್ನು ದರ್ಶಿಸುತ್ತ ಅದು ವಿಶ್ವವ್ಯಾಪಿ ಎಂಬುದು ಮನನವಾಗುವಂತೆ ಮಾಡಿದ್ದಾರೆ. 'ಅಂತರಂಗವು ಕನ್ನಡಿಯಾದರೆ ಜೀವನವೆ ಚೆಲುವು'[4] ಎಂದು ಜೀಬ್ರಾನ್ ಹೇಳಿರುವಂತೆ ಗಂಡ-ಹೆಂಡತಿಯರು ಅಂತರಂಗದಲ್ಲಿ ಬೆಳಕಾಗಿ ಚೆಲುವಾಗುತ್ತಾರೆ ಎಂಬ ತತ್ವವನ್ನು ಬೇಂದ್ರೆ ಕಾವ್ಯವಾಗಿಸಿದ್ದಾರೆ. ಈ ಬಗೆಯ ಆಕರ್ಷಣೆಯನ್ನೇ ಕಾಯುತ್ತಿದ್ದ ಸತ್ಯದ ಒಡತಿಯಾದ, ಜಗನ್ಮಾತೆ ಅವರಿಬ್ಬರನ್ನು - ಅವರ ಪ್ರಕಾಶಮಯವಾದ ಬೆಳುದಿಂಗಳಂತಹ ಮನಸ್ಸಿನ ಮೇಲೆ ಎಳೆ ಎಳೆ ಹಾಸುಹೊಕ್ಕಾಗುವಂತೆ ಹೆಣೆದು ಬಟ್ಟೆಯನ್ನು ನೇಯುತ್ತಿದ್ದಾಳೆ. ಈ ಜಗದ ಸೃಷ್ಟಿಕ್ರಿಯೆ ದಂಪತಿಗಳ ಪ್ರೀತಿಯಲ್ಲಿ ವಿಸ್ತಾರವಾಗುತ್ತಿದೆ ಎಂದು ರೂಪಕಾತ್ಮವಾಗಿ ಬಣ್ಣಿಸಿದ್ದಾರೆ:

'ನನ್ನ ನಿನ್ನಯ ಮನದ ಜೊನ್ನ ಮಗ್ಗದ ಮೇಲೆ
ನಿನ್ನ ಮತ್ತೆನ್ನೆದೆಯ ಕಸೆಗೆ ಕಸೆಯನುಗೊಳಿಸಿ
ನನ್ನಿ ನೇಕಾರಿತಿಯು ಮುಗಿಯದಿಹ ಬಟ್ಟೆಯ -
ನ್ನನವರತ ನೇಯುತಿಹಳು'

ಇದನ್ನು ಬೇಂದ್ರೆಯವರೇ ವಿವರಿಸುತ್ತ, 'ಎಂದು ಸರ್ವವ್ಯಾಪ್ತಿಯಾದ, ಅನಂಗವಾದ, ಮಹತ್ವದ ವಸ್ತು, ದ್ವಿಲಿಂಗವಾಗಿ ಪುರುಷ ಪ್ರಕೃತಿಯೆನ್ನಿಸಿಕೊಂಡು ಮನೆ ಮನೆಗೆ ಬಂದು ನೆಲಸಿಕೊಂಡಿತೋ ಅಂದಿನಿಂದ ಇಂದಿನವರೆಗೆ ಈ ಮುಗಿಯದಿಹ ಬಟ್ಟೆಯನ್ನವರು ನೇಯುತಿಹರು -ನನ್ನಿ ನೇಕಾರರು'[5] ಎಂದು ಹೇಳಿದ್ದಾರೆ.

ಬೇಂದ್ರೆಯವರು ತನ್ನ ಮತ್ತು ತನ್ನ ಹೆಂಡತಿಯ ಆಂತರಿಕವಾದ ಏಕಾಂತದ ಒಲುಮೆಯನ್ನು ಲೋಕಾಂತವಾಗಿ ಹಾಡುವಾಗ ಒಂದು ಬಿಗುವಿನಲ್ಲಿ, ಸುಸಂಸ್ಕೃತ ರೀತಿಯಲ್ಲಿ, ಆಹ್ಲಾದಮಯವಾಗುವಂತೆ ರಚಿಸಿರುವುದು ಅವರ ಪರಿಣತ ಮನಸ್ಸಿಗೆ ಸಾಕ್ಷಿಯಾಗಿದೆ. ದಾಂಪತ್ಯದಲ್ಲಿ ಕಾಮ ಸಹಜ, ಅದು ಪ್ರೇಮವಾಗಿ ಅರಳಬೇಕು. ಲೈಂಗಿಕತೆಯನ್ನು ದೂರೀಕರಿಸಬಾರದು, ಅದರ ಕಾವಿನಲ್ಲಿ ವಿಕಾಸಗೊಳ್ಳುತ್ತ ಉದಾತ್ತ ದೃಷ್ಟಿಯನ್ನು ಪಡೆದು ಅದನ್ನು ಜಗತ್ತಿಗೆ ದರ್ಶಿಸಬೇಕು. 'ಸಾಹಿತ್ಯ ಕವಿಯು ಸಾಮಾಜಿಕ ರಸಗಳನ್ನುಪಯೋಗಿಸಿ ಸಾಮಾಜಿಕರ ದರ್ಶನ ಶಕ್ತಿಯನ್ನೇ ಹಿಗ್ಗಿಸುವನು.'[6] 'ರಾಮನಾಗಲಿ ಕಾಮನಾಗಲಿ

ಮನೆ ಒಡತಿ ಇಲ್ಲದೆ ಮಡದಿ ಇಲ್ಲದೆ ಎಂಥ ಶಕ್ತಿ ಇದ್ದವನಿಗೂ ರಮಣೀಯತೆ ಬರಲಾರದು'[7] ಎಂಬ ಸ್ಪಷ್ಟ ಆಲೋಚನೆಯನ್ನು ಹೊಂದಿದ ಬೇಂದ್ರೆಯವರು ಈ ನೆಲದ ಬದುಕನ್ನು ಸವಿದು ಆಧ್ಯಾತ್ಮಿಕತೆಯ ಚಿಂತನಕ್ಕೆ ಮನಸ್ಸು ಕೊಟ್ಟು ರಸಋಷಿಯಾದರು. ಶ್ರೀಮಾತಾ ಅವರು ಈ ನೆಲದ ಜೀವಿಗಳ ಸಹಜ ಆಕಾಂಕ್ಷೆ ಅರಿತು ನುಡಿದ ಚಿಂತನೆ ಬೇಂದ್ರೆಯವರ ನಿಲುವಿಗೆ ಸಹಕಾರಿಯಾಗಿ ಅವರು ಪ್ರೇಮಾರಾಧಕರಾಗಲು ಇಂಬುಗೊಟ್ಟಿತು ಎಂದು ಹೇಳಬಹುದು.

**ಲೈಂಗಿಕತೆಯು ಸುಸಂಸ್ಕೃತವಾಗಬೇಕು**

"ಲೈಂಗಿಕ ಪ್ರಚೋದನೆಯಲ್ಲಿ ಅತ್ಯಂತ ಗಾಢವಾದ ಭೌತಿಕ ಆಸಕ್ತಿಯ ಭಾಗವಾದ ಲೈಂಗಿಕ ತತ್ತ್ವವನ್ನು ಎಷ್ಟೇ ಗುರುತಿಸಿಕೊಂಡರೂ, ಅದನ್ನು ಭೂಮಿಯ ಮೇಲಿನ ದೈವೀಜೀವನದಿಂದ ಹೊರಗಿಡಲು ಸಾಧ್ಯವಿಲ್ಲ. ಜೀವನದಲ್ಲಿ ಅದು ಇದ್ದುಕೊಂಡೇ ದೊಡ್ಡ ಪಾತ್ರವಹಿಸುತ್ತದೆ. ಅದರೊಡನೆ ಸರಿಯಾಗಿ ವ್ಯವಹರಿಸಬೇಕು. ನಿರ್ಲಕ್ಷ್ಯ ಮಾಡಬಾರದು. ನಮ್ಮ ಲಕ್ಷ್ಯದಿಂದ ದೂರ ಸರಿಸಿ ಹತ್ತಿಕ್ಕಿ ತುಳಿದುಬಿಡಬಾರದು. ಮೊದಲನೆಯದು, ವಿಶ್ವದ, ಅದಕ್ಕಿಂತ ದೈವತ್ವದ ತತ್ತ್ವವಾಗಿದೆ. ಅದು ಈಶ್ವರ ಮತ್ತು ಶಕ್ತಿಯ ಆಧ್ಯಾತ್ಮಿಕ ರೂಪ ಪಡೆಯುತ್ತದೆ. ಅದಿಲ್ಲದೆ ಸೃಷ್ಟಿಯೇ ಇರುವುದಿಲ್ಲ. ಪುರುಷ ಪ್ರಕೃತಿಯ ಜಗತ್ತಿನ ತತ್ತ್ವವೂ ಇರುವುದಿಲ್ಲ. ಪುರುಷ ಪ್ರಕೃತಿ ಇಬ್ಬರೂ ಜಗತ್ತಿನ ಸೃಷ್ಟಿಗೆ ಅಗತ್ಯ. ಅವರಿಬ್ಬರೂ ಸಮರಸವಾಗುವುದು ಅಷ್ಟೇ ಅಗತ್ಯ. ಮಾನಸಿಕ ಕಾರ್ಯಕ್ಕೆ ಅವರ ಲೀಲೆಯ ಅದಲುಬದಲಾಗುವಿಕೆಯೂ ಆವಶ್ಯಕ. ಅವರಿಬ್ಬರೂ ಪುರುಷ ಪ್ರಕೃತಿ ಎಂದು ಅಭಿವ್ಯಕ್ತವಾಗಲು ಈ ಸಂಪೂರ್ಣ ಲೀಲಾ ವಿಧಾನವು ಮೂಲಭೂತವಾದುದು. ದಿವ್ಯ ಜೀವನದಲ್ಲಿಯೂ ಸಹ ಅವತಾರೀ ಪುರುಷ ಅಥವಾ ಎರಡು ಶಕ್ತಿಗಳ ಸಾನ್ನಿಧ್ಯವು ಸಶರೀರವಾಗಿ ಇಲ್ಲವೆ ಪ್ರತಿನಿಧಿಗಳ ಮೂಲಕ ಪ್ರಾರಂಭಿಕ ಪ್ರಭಾವವು ನವಸೃಷ್ಟಿಯನ್ನು ಸಾಧ್ಯಮಾಡಲು ಅಗತ್ಯವಾಗಿದೆ. ಮಾನಸಿಕ ಮತ್ತು ಪ್ರಾಣಿಕ ನೆಲೆಯಲ್ಲಿ ಮಾನವನ ಕೃತಿಯಲ್ಲಿ ಲೈಂಗಿಕತೆಯು ಇಡಿಯಾಗಿ ಅದೈವಿಕ ತತ್ತ್ವವಲ್ಲ. ಅದಕ್ಕೆ ಅದರದೇ ಆದ ಉದಾತ್ತ ದೃಷ್ಟಿಯಿರುತ್ತದೆ. ಆದರ್ಶ ಪರಿಕಲ್ಪನೆಗಳು ಇರುತ್ತವೆ. ಅದನ್ನು ಆ ದೃಷ್ಟಿಯಿಂದಲೇ ನೋಡಬೇಕು. ನವ ವಿಶಾಲ ಜೀವನದಲ್ಲಿ ಎಷ್ಟರಮಟ್ಟಿಗೆ ಒಳಪಡಿಸಿಕೊಳ್ಳಬೇಕೆಂದು ವಿಚಾರಿಸಬೇಕು. ಕಾಮದ ಎಲ್ಲ ಸ್ಥೂಲ ಪ್ರಾಣಿತ್ವದ ಆಸಕ್ತಿಯನ್ನೂ ಅದರ ಪ್ರಚೋದನೆಯನ್ನೂ ತ್ಯಜಿಸಬೇಕು. ಉನ್ನತ ಜೀವನಕ್ಕಾಗಿ ಅಥವಾ ಪೂರ್ಣ ಆಧ್ಯಾತ್ಮಿಕ ಜೀವನಕ್ಕೆ ಇನ್ನೂ ಸಿದ್ಧವಾಗದ ಜೀವಿಗಳಲ್ಲಿ ಮಾತ್ರ ಅದು ಉಳಿಯಬಲ್ಲದು.

'ಆಧ್ಯಾತ್ಮಿಕ ಜೀವನಕ್ಕಾಗಿ ಅಭೀಪ್ಸೆ ಮೂಡಿ, ಇನ್ನೂ ಪೂರ್ಣವಾಗಿ ಸ್ವೀಕರಿಸದಂಥವರಿಗಾಗಿ ಲೈಂಗಿಕತೆಯು ಸುಸಂಸ್ಕೃತವಾಗಬೇಕು. ಆಧ್ಯಾತ್ಮಿಕತೆ ಅಥವಾ ಅಂತರಾತ್ಮಿಕಕ್ಕೆ ಅಧೀನವಾಗಿರಬೇಕು ಮತ್ತು ಉನ್ನತತರವಾದ ಮನಸ್ಸು ಮತ್ತು ಪ್ರಾಣದ ನಿಯಂತ್ರಣಕ್ಕೆ ಒಳಗಾಗಬೇಕು. ಕಾಮದ ಎಲ್ಲ ಕ್ಷುದ್ರ ಹಗುರ ಮತ್ತು ಕೀಳ್ಮಟ್ಟದ ರೂಪಗಳನ್ನು ತ್ಯಜಿಸಬೇಕು. ಆದರ್ಶದ, ಪಾವಿತ್ರ್ಯದ ಸಂಸ್ಪರ್ಶದ ಭಾವನೆ ಬರಬೇಕು. ಪ್ರೇಮವೂ ಉಳಿಯಬೇಕು. ಪ್ರೇಮ ಸತ್ಯಕ್ಕೆ ಪಾವಿತ್ರ್ಯ ಉಂಟು. ಆ ಪಾವಿತ್ರ್ಯದ ಎಲ್ಲ ಬಗೆಗಳೂ ಉನ್ನತತರ ಮೆಟ್ಟಿಲನ್ನು ಏರಿ, ತನ್ನ ಅತ್ಯುನ್ನತ ಪ್ರಕೃತಿಯನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಆ ಪ್ರೇಮವು ವಿಸ್ತಾರಗೊಂಡು ವಿಶ್ವಪ್ರೇಮವಾಗಿ, ಭಗವಂತನ ಪ್ರೇಮದಲ್ಲಿ ಐಕ್ಯವಾಗಿ ಹೋಗಬೇಕು. ಸ್ತ್ರೀ ಪುರುಷರ ಪ್ರೇಮವೂ ಕೂಡ ಆ ಮಟ್ಟಕ್ಕೇರಿ ಸಾಫಲ್ಯ ಪಡೆಯಬೇಕು."[8]

ಎರಡನೆಯ ಅಧ್ಯಾಯದಲ್ಲಿ ವೇದಕಾಲದಲ್ಲಿ ಸ್ತ್ರೀಗೆ ಪ್ರಾಮುಖ್ಯತೆಯಿತ್ತು ಎಂಬುದನ್ನು ತಿಳಿದಿದ್ದೇವೆ. ಅದಕ್ಕೆ ಕಾರಣ, ವೇದವು ಐಹಿಕ ಲೋಕದ ಪರವಾಗಿದ್ದುದು. 'The Vedas accept life

in its fullness. It does not reject or neglect what is worldly (ಐಹಿಕ) as many religious sects, attached to other worldly (ಪಾರಲೌಕಿಕ) interests do'[9] ಎಂಬುದು ಸಂಸಾರಿಯಾಗಿ ಐಹಿಕ ಸುಖವನ್ನು ಭೋಗಿಸುತ್ತಲೇ ಆಧ್ಯಾತ್ಮಿಕ ಚಿಂತನೆಯನ್ನು, ವಿಶ್ವಪ್ರೇಮವನ್ನು ರೂಢಿಸಿಕೊಳ್ಳಬೇಕು ಎಂದಿದೆ. ಅದೇ ಚಿಂತನೆ ಬೇಂದ್ರೆಯವರ ಕಾವ್ಯದಲ್ಲಿ ವಿಕಾಸಶೀಲವಾಗಿದೆ.

ಬೇಂದ್ರೆಯವರು ಸಾಹಿತ್ಯದ ವಿರಾಟ್‌ಸ್ವರೂಪದಲ್ಲಿ 'ಪಿಂಗಲಾಚಾರ್ಯ ಶಕುನ ನುಡಿದ : ಧೀ ಶ್ರೀ ಸ್ತ್ರೀ ['ಲಘುವೆ ಹರಿ'; ಲಘುನಿಂದ (ಸೈತು) ಗೆರೆ (|); ಗುರುವೆ ಹರ; ಗುರು ಕೊಂಕು ಗೆರೆ(U)] ಮೂರೂ ಕೊಂಕು, ಮೂರೂ ಗುರು. ಯಸ್ಯಧೀಃ ತಸ್ಯ ಶ್ರೀಃ.ಧೀ ಇದ್ದಲ್ಲಿ ಶ್ರೀ; ಬುದ್ಧಿನಾಶಾತ್ ವಿನಶ್ಯತಿ. ಯಸ್ಯ ಶ್ರೀಃ ತಸ್ಯ ಸ್ತ್ರೀ. ಸ್ತ್ರೀ ಅಶ್ಲೀಲಳಲ್ಲ; ಸಶ್ರೀಕಳು 'ಧೀ ಶ್ರೀ ಸ್ತ್ರೀ' (UUU). ಶೃಂಗಾರವು ಬೀಭತ್ಸವಾದಾಗ ಬೈರಾಗಿಗಳ ಅಂತರ್‌ಪೈಶಾಚಿಕ ವೃತ್ತಿಯು ಭೂತನೃತ್ಯದ ಲೀಲೆಯಾಗುತ್ತದೆ. 'ವರಾಸಾ' (|UU). ಧೀ ಶ್ರೀಗಳಿಂದ ಸ್ತ್ರೀಯನ್ನು ಒಲಿಸಿ, ಗಾರ್ಹಸ್ಥಿಕತೆಯ ಮನೆ ಸಭ್ಯತೆಯ ಆಗರವಾಗಿ ನಿಲ್ಲಬೇಕು.* 'ನ ಸ್ತ್ರೀ ಸ್ವಾತಂತ್ರ್ಯಂ ಅರ್ಹತಿ' ಸ್ತ್ರೀಯನ್ನು ಬಾಳುವೆಗೇಡು, ದಿಕ್ಕುಗೇಡು ಮಾಡಬಾರದು. ಮಿಥುನದಲ್ಲಿ ದಾಂಪತ್ಯಾದ್ವೈತವನ್ನು ಸಾಧಿಸಬೇಕು, ಮನೆಕಟ್ಟುವ ಬುದ್ಧಿ (ವರಾ, ಸಾ) ದೊಡ್ಡದು ....... ಬುದ್ಧಿ ಭೇದದಿಂದ ಮನೆತನ ಕೆಟ್ಟವು, ಭಾವ ವೈರದಿಂದ ಮನುಷ್ಯನೇ ಕೆಟ್ಟ. ಬುದ್ಧಿ-ಭಾವಗಳ ದಾಂಪತ್ಯವು, ಸಹ-ಸಂವಿತ್ತು ಸಾಹಿತ್ಯದ ಬೀಜ. ಅದು ಉತ್ತರಮೀಮಾಂಸೆ. ಮಾನವನ ಉತ್ತರೋತ್ತರ ವೃದ್ಧಿ ಇಲ್ಲಿದೆ'[10] ಎಂದು ಹೇಳಿದ್ದಾರೆ. ಆ ಚಿಂತನೆಯ ಪರಿಶೀಲನೆಯನ್ನು ಈ ಅಧ್ಯಾಯದಲ್ಲಿ ಮಾಡಿದೆ.

ಗೃಹಿಣಿಗೆ ದೊರೆತಿರುವ ಪ್ರಾಮುಖ್ಯ ಅವಳು ಸಾಧಿಸಿ ಪಡೆದದ್ದು. ದಂಪತಿಗಳು ಲೋಕದ ಬೆಳಕಾಗಬೇಕು. ಅವರು ಶಾಶ್ವತ ಪ್ರೇಮದ ಸತ್ಯಶೋಧಕರಾಗಬೇಕು ಎಂಬುದನ್ನು, 'ಗೃಹಿಣಿ', 'ದೀಪ', 'ಫಜಾರಗಟ್ಟಿ ಮುಟ್ಟೋಣು ಬಾ' ಕವನದಲ್ಲಿ ಬೇಂದ್ರೆಯವರು ಹೇಳಿರುವುದನ್ನು ಈಗ ತಿಳಿಯೋಣ :

**ಮನೆಯ ಹೊಸ್ತಿಲಕೆ ಶುಭ ಬರೆಯುವಾಕೆ**

ಇದೇ ಅಧ್ಯಾಯದ 'ತಾಯಿ' ವಿಭಾಗದಲ್ಲಿ ಮಾನವನನ್ನು - ಸಂಸ್ಕೃತಿಯನ್ನು ರೂಪಿಸಿದ ತಾಯಿ ಶಕ್ತಿಯನ್ನು ತಿಳಿದಿದ್ದೇವೆ. ಮೃಗನಾದವನನ್ನು ಮಾನವನನ್ನಾಗಿ ಮಾಡಿದ ಅದೇ ಶಕ್ತಿಯ ತಾಯಿಹೃದಯದ ಮುಂದಿನ ರೂಪ 'ಗೃಹಿಣಿ'.[11] ಮಾತೃಪ್ರಜ್ಞೆ ಬೇಂದ್ರೆ ಕಾವ್ಯದ ಸ್ಥಾಯಿಭಾವ ಎಂದು ಈಗಾಗಲೇ ತಿಳಿದಿದ್ದೇವೆ. ಸ್ತ್ರೀಯ ಬಗ್ಗೆ ಈ ರೀತಿಯ ಉನ್ನತ ಭಾವವಿದ್ದುದರಿಂದಲೇ ಅವರು ಸ್ತ್ರೀಯನ್ನು ಪುರುಷನಿಗಿಂತ ಉತ್ತಮಳೆಂದು ಚಿತ್ರಿಸಲು ಸಾಧ್ಯವಾಯಿತು. ಈ 'ಗೃಹಿಣಿ' ಎಂಬ ಕವನದಲ್ಲಿ ಸ್ತ್ರೀ ತಾಯಿಯಾದ ಕಾರಣ -

'ಏಳು ಮೆಟ್ಟಿನ ಹುಲಿಯ ಬೀರ ಬೇಂಟೆಯ ಬಿಡಿಸಿ
ಮಗುವ ಮುದ್ದಾಡುವೊಲು ಮಾಡಿದಾಕೆ'

ಆಗಿದ್ದಾಳೆ. ಮೃಗನಾದವನು ಮಾನವನಾಗುತ್ತ ಮಗುವನ್ನು ಮುದ್ದಾಡಿ ಪ್ರೀತಿ, ಸಹನೆ, ಶಾಂತಿ ಪಡೆದಾಗ ಅವನು 'ಗುರಿಯಿಟ್ಟ ಕಣ್ಣು'ಗಳಿಂದ ನೋಡಿದಾಗ ಅಂದರೆ to think of, to take aim, to keep in view ಆದಾಗ ಅವಳು ಅವನನ್ನು ಗೃಹಸ್ಥನನ್ನಾಗಿ ಮಾಡಿ, 'ಕಿವಿಯೂದಿ ಹೊರಳಿಸುತ | ತಾನೆ

---

* ಈಗಿನ ಛಂದಸ್‌ಶಾಸ್ತ್ರದಲ್ಲಿ ಗುರುವನ್ನು – (ಅಡ್ಡಗೆರೆ) ಹಾಗೂ ಲಘುವನ್ನು U (ಕೊಂಕುಗೆರೆ) ಪ್ರಸ್ತಾರ ಹಾಕುವ ರೂಢಿ ಚಲಾವಣೆಯಲ್ಲಿದೆ.

ತನ್ನಷ್ಟಕೆ ಹಾಡಿದಾಕೆ' ಆಗಿದ್ದಾಳೆ. ಹಾಗೆ ಹಾಡಿದವಳೇ ಗೃಹಿಣಿ ಎಂದು ಮಾನವರು ಕುಟುಂಬರೂಪಿಗಳಾಗಲು ಹೆಣ್ಣೆ ಕಾರಣವೆಂದು ಬೇಂದ್ರೆ ನುಡಿದಿದ್ದಾರೆ.

ಅವನು 'ಗುರಿಯಿಟ್ಟ ಕಣ್ಣಿ'ನವನಾಗಿ ಬೇಟೆಯನ್ನು ಬಿಟ್ಟು ಒಂದೆಡೆ ನಿಂತಾಗ ಅವಳು 'ತಳಿರಿನುಡುಗೆಯನುಟ್ಟು ಗರಿ ತೊಡುವುಗಳ ತೊಟ್ಟು' ಸೌಂದರ್ಯವನ್ನು ಸೃಷ್ಟಿಸಿಕೊಳ್ಳುತ್ತ ಕಾಡಿನಲ್ಲಿ ಸಂಸ್ಕೃತಿಯು ಮೊದಲಾಗಲು ಕಾರಣಳಾಗಿದ್ದಾಳೆ. ಅವಳೇ ಬೇಸಾಯದ ಮೂಲವನ್ನು ಈ ಪೃಥ್ವಿಯಲ್ಲಿ ಮೊದಲು ಮಾಡಿದವಳು. ಈ ಎಲ್ಲ ಕಾರಣದಿಂದ ಬೇಂದ್ರೆಯವರು ಗೃಹಿಣಿಯನ್ನು 'ಅಡವಿಯಲಿ ಹೂದೋಟ ಹೂಡಿದಾಕೆ' ಎಂದಿದ್ದಾರೆ.

ಅರಣ್ಯದ ಪಶು ಪ್ರವೃತ್ತಿಯಿಂದ ಇಡೀ ಮಾನವಕುಲವನ್ನು ಪ್ರತ್ಯೇಕವಾಗಿಸಿ 'ಗೃಹಿಣಿ'ಯಾದ ಹೆಣ್ಣಿಗೆ ಮಕ್ಕಳೇ ಸರ್ವಸ್ವವಾಗಿದ್ದಾರೆ. ಅವಳು ತನ್ನ ಸಂತತಿಯ ಉಳಿವಿಗಾಗಿ ಪಶು ಪ್ರಾಣಿಗಳೊಡನೆ ಹೋರಾಡಿ ಪ್ರಕೃತಿ ವಿಕೋಪ ಕಂಡು ಅದರಿಂದಲೂ ತನ್ನನ್ನು ತನ್ನವರನ್ನು ರಕ್ಷಿಸಿಕೊಳ್ಳಲು ಪ್ರಕೃತಿಯನ್ನು ಪ್ರಾರ್ಥಿಸಿದ್ದಾಳೆ. ಹೀಗೆ ಪಂಚಭೂತಗಳ ಆರಾಧನೆಯನ್ನು ಪ್ರಾರಂಭಿಸಿದವಳು ಹೆಣ್ಣು ಎಂದು ಬೇಂದ್ರೆಯವರು 'ಬೇರೊಂದು ಲೋಕವನ್ನು ಮೂಕ ಮಾತುಗಳಿಂದ ಬೇಡಿದಾಕೆ' ಎಂದಿದ್ದಾರೆ. 'A wife, verily, is home'[12] ಎಂದು ಋಗ್ವೇದ ಸಾರಿದೆ. ಹೀಗೆ ಸಂಸ್ಕೃತಿರೂಪಿಯಾದ ಮಹಿಳೆ ಇಡೀ ಕುಟುಂಬಕ್ಕೆ ಮಂಗಲರೂಪಿಯಾಗಿದ್ದಾಳೆ. ಆದುದರಿಂದ ಬೇಂದ್ರೆ 'ಗೃಹಿಣಿ'ಯನ್ನು ಕುರಿತು ಅವಳು ಮಂಗಲವನ್ನು, ಜಯವನ್ನು ತರುವವಳು ಎಂದಿದ್ದಾರೆ :

'ಮನೆಯ ಹೊಸ್ತಿಲಕೆ ಶುಭ ಬರೆಯುವಾಕೆ.
ಮಂಗಲವ ಬಾಯೆಂದು ಕರೆಯುವಾಕೆ.
ಬಾಳ ಸುಳಿಯಲಿ ಬೆಳೆಯ ತೋರುವಾಕೆ.
ದಿನ ದಿನವು ನವಜಯವ ಬರೆಯುವಾಕೆ'.

**ಬಂತಿದೊ ಶೃಂಗಾರಮಾಸ**

ಬೇಂದ್ರೆಯವರು ನೀಡಿರುವ ಕವನಗಳ ಭಾವಸಂದರ್ಭಗಳು ಕೆಲವು ಕವನದ ನಾಡಿಮಿಡಿತವನ್ನು ಅರಿಯಲು ಸಹಾಯವಾಗುತ್ತವೆ. ಅಂತಹ ಕಾವ್ಯಸಂದರ್ಭ 'ದೀಪ'[13] ಕವನಕ್ಕಿದೆ. 'ಫಾಲ್ಗುಣ ಪೂರ್ಣಿಮೆಯ ಸುಮಾರಿಗೆ ಗಂಗೋಘದಲ್ಲಿ ದೀಪ ತೇಲಿಬಿಟ್ಟು, ಅದು ತೇಲುವುದೋ ಮುಣುಗುವದೋ ಎಂದು, ಸಭಯ ಆಶೆಯಿಂದ ನಿರೀಕ್ಷಿಸುವ ದಂಪತಿಗಳಿಗೆ ಸಂಸಾರ ಪ್ರವಾಹದಲ್ಲಿ ಪ್ರೇಮದೀಪದ ಗತಿಯೂ ಹೀಗೆ ಎಂದು ಒಮ್ಮೊಮ್ಮೆ ಹೊಳೆಯುವದುಂಟು. 'ಕಾಶೀಯಾತ್ರೆಯಲ್ಲಿ ಬರೆದ ಪದ್ಯ' ಎಂಬ ಹಿನ್ನೆಲೆಯಲ್ಲಿ ಈ ಕವನವನ್ನು ಅಭ್ಯಾಸ ಮಾಡಿದಾಗ 'ದೀಪ'ವು ದಂಪತಿಗಳು ತಮ್ಮ ಜೀವನದಲ್ಲಿ ಕಾಣಬೇಕಾದ ಬೆಳಕಿನ ಜೀವನೋನ್ನತಿಯ ಪ್ರತಿಮೆಯಾಗಿರುವುದು ಕಂಡುಬರುತ್ತದೆ. ದಂಪತಿಗಳು ಜೊತೆಗೂಡಿ ಹೊರಟಂತೆ ತರಳೆ ಇರುಳು ತನ್ನ ಪತಿಯನ್ನು ಹುಡುಕಲು ಹೊರಟ ರೂಪಕ ಇಡೀ ಪ್ರಕೃತಿಯನ್ನು ಆವರಿಸಿದ ಶೃಂಗಾರದ ಉಲ್ಲಾಸವನ್ನು ಪರಿಚಯಿಸುತ್ತದೆ.

'ಬಂತಿದೊ ಶೃಂಗಾರಮಾಸ
ಕಂತು ನಕ್ಕು ಚಂದ್ರಹಾಸ
ಎಂತು ತುಂಬಿತಾಽಕಾಶ
ಕಂಡವರನು ಹರಸಲು'.

ಬೇಂದ್ರೆಯವರ ಕಾವ್ಯದಲ್ಲಿ 'ಸಂಗಮಿತ ಹೊಳೆ' ದಂಪತಿಗಳಿಗೆ ಪ್ರತಿಮೆಯಾಗಿ ಬಂದಿದೆ. ಅವರು 'ಜೀವದ ಗೆಳತಿ'ಯನ್ನು 'ಜೀವೈಕ್ಯದೊಳು ಸಂಗಮಿತ ಹೊಳೆಯಂತೆ'[15] ಹರಿಯೋಣ ಬಾ ಎಂದಿದ್ದಾರೆ. ಅದು ದಂಪತಿಗಳು ಜೀವನದಲ್ಲಿ ಬೆರೆತು ಇರಬೇಕೆಂಬ ತತ್ತ್ವವನ್ನು ಪ್ರತಿಪಾದಿಸುತ್ತದೆ. ಅದೇ ತತ್ತ್ವ ಇಲ್ಲಿ ಇನ್ನೂ ಸಬಲವಾಗಿ ಸಮರ್ಥವಾಗುತ್ತ:

'ಗಂಗೆಯಮುನೆ ಕೂಡಿ ಹರಿದು
ಸಂಗಮ ಜಲ ಬಿಳಿದು ಕರಿದು
ತಿಂಗಳ ನಗೆ ಮೇರೆವರಿದು
ಬೇರೆ ಮೆರುಗು ನೀರಿಗು'.

ಎಂದಾಗಿದೆ. ಈ ರೀತಿ ದಂಪತಿಗಳು ಸೇರುವಾಗ ಅವರ ಜೀವದ್ರವ್ಯವಾದ ಪ್ರೇಮ ಸತ್ತ್ವಕ್ಕೆ ಬೇರೆ ಬೆರಗು ಬರುತ್ತದೆ. ಅವರು ಒಂದೇ ಆದ - ಜೀವನವನ್ನು ಎದುರಿಸಲು ಶಕ್ತವಾದ, ಸಹಬಾಳ್ವೆಯಿಂದ ಸಮರಸದಿಂದ ಸಾಗಿದಾಗ ತುಂಬು ಚೈತನ್ಯಶೀಲರಾಗುವುದನ್ನು, ಸಫಲ ಮುನ್ನೋಟವನ್ನು ಯಶಸ್ಸನ್ನು ಸೂಚಿಸುತ್ತದೆ.

'ಪಂಥದಿಂದ ಮನೆಯ ತೊರೆದು
ಪಾಂಥ ನೆನೆದನತ್ತು ಕರೆದು;
ಇಂಥ ಸಮಯ ಬೇರೆ ಬರದು
ದಂಪತಿಗಳಿಗಾರಿಗು!'

ಈ ನುಡಿಯು ಅರ್ಥವಾಗಬೇಕಾದರೆ ಬೇಂದ್ರೆಯವರ ಜೀವನಸಂದರ್ಭ ಗೊತ್ತಿರುವುದು ಅವಶ್ಯ. "೧೯೩೩ರಲ್ಲಿ ಬೇಂದ್ರೆಯವರು ನಿರುದ್ಯೋಗಿಗಳಾಗಿದ್ದರು. ಪುಣೆಯ ಕಕ್ಕನ ಆಶ್ರಯದಲ್ಲಿದ್ದು ಎಂ.ಎ. ಪದವಿ ಪಡೆಯುವ ಪಂಥ ತೊಟ್ಟು ಹೆಂಡತಿ ಹಾಗೂ ಇಬ್ಬರು ಮಕ್ಕಳೊಂದಿಗೆ ಪುಣೆ ತಲುಪಿದರು. ಪ್ರತಿದಿನದ ವೆಚ್ಚವೂ ಕಕ್ಕನ ಹಣದಿಂದ. ಈ ವ್ಯಥೆ ಬೇಂದ್ರೆಯವರ ಮನಸ್ಸಿಗೆ ಯಾವಾಗಲೂ ಕಾಡುತ್ತಿದ್ದಿತು. ಇಂಥ ಸಮಯದಲ್ಲಿ ಮನೆಯವರೆಲ್ಲರೂ ಕಾಶಿಗೆ ಹೊರಟರು. "ಇಂಥ ಸಮಯ ಬೇರೆ ಬರದು" ಎಂಬ ಭಾವದಿಂದ ಬೇಂದ್ರೆಯವರೂ ಪತ್ನಿಸಹಿತ ಕಾಶಿಯಾತ್ರೆಗೆ ಹೋದರು. ಗಂಗಾ-ಯಮುನೆಯ ಸಂಗಮದಲ್ಲಿ ದಂಪತಿಗಳು ದೀಪ ತೇಲಿಬಿಡುವ ಸಂಪ್ರದಾಯ ಅತ್ಯಂತ ಔಚಿತ್ಯಪೂರ್ಣ. ಆ ದೀಪದ ವೆಚ್ಚ ಕಕ್ಕನದು, ತನ್ನದಲ್ಲ ಎಂಬ ವ್ಯಥೆ ದೀಪ ತೇಲಿಬಿಡುವಾಗಲೂ ಬೇಂದ್ರೆಯವರಿಗೆ ಕಾಡುತ್ತಿತ್ತು ಎಂಬುದು ಕವನ ಮುಕ್ತಾಯದ 'ದೀಪ ತೇಲಿಬಿಟ್ಟೆವೇ? ದೀಪ ತೇಲಿಬಿಟ್ಟೆವು' ಎಂಬ ಸಾಲುಗಳಲ್ಲಿ ಪ್ರತಿಬಿಂಬಿತವಾಗಿದೆ. 'ಕಕ್ಕ ಕಕ್ಕಿಯ ಆದೇಶದಂತೆ ದೀಪ ತೇಲಿಬಿಡುತ್ತಿದ್ದೇವೆ. ಈ ದೀಪಕ್ಕಾಗಿ ಕೊಟ್ಟ ಹಣ ತನ್ನ ಸಂಪಾದನೆಯದಲ್ಲ. ಎಂದಮೇಲೆ ಇದು ತನ್ನ ದೀಪವೇ ಎಂಬ ವ್ಯಥೆ ಇದೆ. 'ಇಂಥ ಸಮಯ ಬೇರೆ ಬರದು' ಎಂಬ ಒಂದೇ ಕಾರಣದಿಂದ ಪಾಂಥ - ಬೇಂದ್ರೆ - ಅತ್ತುಕರೆದು; ಕಣ್ಣೀರು ನುಂಗಿ, ನಗುತ್ತ ಪತ್ನಿಯೊಂದಿಗೆ ದೀಪವನ್ನು ತೇಲಿಬಿಟ್ಟರು. ಮುಂದೆ ಎಂದೂ ಬೇಂದ್ರೆಯವರು ಕಾಶಿಗೆ ಹೋಗಲಿಲ್ಲ" ಎಂಬುದಾಗಿ ವಾಮನ ಬೇಂದ್ರೆ ಈ ಕವನದ ಔಚಿತ್ಯವನ್ನು ನೆನಪಿಸಿಕೊಳ್ಳುತ್ತಾರೆ.

ಈ ಕವನದಲ್ಲಿ ದೀಪ ದಂಪತಿಗಳ ಜೀವನದ ಬೆಳಕಿಗೆ ಸಂಕೇತವಾಗಿದೆ. ಅದನ್ನು ಅವರು ಹಿಡಿದು ಬಿಡುವುದರಲ್ಲಿ, ಆ ಬೆಳಕನ್ನು ಬೆಳಗುವುದರಲ್ಲಿ ತಾವು ಬೆಳಕಾಗಬೇಕು ಎಂಬ ಚಿಂತನೆಯಿದೆ. ದೀಪದ ಜೊತೆಗೆ ಅವರು ತಮ್ಮ ವೈಯಕ್ತಿಕತೆಯನ್ನು ತೇಲಿಬಿಡುತ್ತ ಅದು ಲೋಕದ ಬೆಳಕಾಗುವುದನ್ನು - ತಾವು

ಸಮಾಜಮುಖಿಗಳಾಗಬೇಕು ಎಂಬ ಸಂಕೇತವನ್ನು ಈ ಕವನ ಸಾರುತ್ತದೆ. ಹೀಗೆ ವ್ಯಕ್ತಿ - ಸಮಷ್ಟಿಯಲ್ಲಿ ಬೆರೆತು ವಿಶ್ವ ಚಿಂತನೆಯನ್ನು ರೂಢಿಸಿಕೊಳ್ಳುವುದನ್ನು ಸಂಕೇತಿಸುತ್ತ ದಂಪತಿಗಳಾದ ಗಂಡು ಹೆಣ್ಣು ಲೋಕಕಲ್ಯಾಣದ, ಜಗದ ಬೆಳಕಿನ ಆನಂದದಲ್ಲಿ ತಲ್ಲೀನರಾಗುವುದನ್ನು ದರ್ಶಿಸುತ್ತದೆ. ಪ್ರಕೃತಿಯ ಶೃಂಗಾರದ, ನದಿಯ ಸಮರಸದ, ದೀಪದ ಬೆಳಕಿನ ಚಿಂತನೆಯೆ ಅವರ ಕಾವ್ಯದಲ್ಲಿ ವಿಕಾಸ ಹೊಂದುತ್ತ ಸಾಗಿದೆ. ದಾಂಪತ್ಯಜೀವನವು ಬೆಳಕಿನ ಉಪಾಸನೆ ಎಂಬುದಾಗಿ ಬೇಂದ್ರೆ ನಂಬಿ ನಡೆದುದು ಕಂಡುಬರುತ್ತದೆ.

**ಘಜಾರಗಟ್ಟೀ ಮುಟ್ಟೋಣ ಬಾ**[16]

ಬೇಂದ್ರೆಯವರಿಗೆ ದಾಂಪತ್ಯವೇ ಒಂದು ಸಾಧನೆಯಾಗಿತ್ತು. ಅವರು ದಂಪತಿಗಳನ್ನು 'ನಿಜದನೆಲಿ' ಅಂದರೆ ಶಾಶ್ವತವಾದ ಒಲವಿನ ಶೋಧಕ್ಕೆ ಹೊರಟವರು ಎಂದು ತಿಳಿದಿದ್ದರು. ಅದನ್ನು ಅವರು 'ಘಜಾರಗಟ್ಟೀ ಮುಟ್ಟೋಣ ಬಾ' ಎಂಬ ರೂಪಕದಲ್ಲಿ ಕಾವ್ಯವಾಗಿಸಿದ್ದಾರೆ. ಮೈಸೂರಿನ ಕಡೆಯ ಮಕ್ಕಳ ಕಣ್ಣುಮುಚ್ಚಾಲೆಯ ಆಟವನ್ನು ಧಾರವಾಡದಲ್ಲಿ 'ಘಜಾರಗಟ್ಟೀ ಮುಟ್ಟೋಣ ಬಾ' ಎಂದು ಆಡುತ್ತಾರೆ ಎಂಬುದು ಒಂದು ಅಭಿಪ್ರಾಯವಾಗಿದೆ. ಇದೇ 'ಘಜಾರಗಟ್ಟೀ' ಎಂಬುದು ದೇವಸ್ಥಾನದಿಂದ ರಥೋತ್ಸವ ಹೊರಟು ಒಂದು ಗೊತ್ತಾದ ಸ್ಥಳವನ್ನು ತಲುಪಬೇಕು ಎಂಬುದು ಪದ್ಧತಿಯಾಗಿ, ಅದು ತಲುಪಬೇಕಾದ ಸ್ಥಳವಾಗಿದೆ. ಅಂದರೆ ದಾಂಪತ್ಯದ ರಥ ಗುರಿಮುಟ್ಟಬೇಕು ಎಂಬುದರ ಸಂಕೇತವಾಗಿ ಬೇಂದ್ರೆಯವರು 'ಘಜಾರಗಟ್ಟೀ ಮುಟ್ಟೋಣ ಬಾ' ಎಂದು ಸಖಿಯನ್ನು ಕರೆದಿದ್ದಾರೆ* ಎಂಬುದು ಇನ್ನೊಂದು ಅಭಿಪ್ರಾಯವಾಗಿದೆ. ಹೀಗಾಗಿ ಬೇಂದ್ರೆಯವರ ಬಾಲ್ಯದ ಆಟ 'ಘಜಾರಗಟ್ಟೀ ಮುಟ್ಟೋಣ ಬಾ' ಅವರು ಸಂಸಾರಿಯಾದಂತೆ, ಆಟದ ಮಾಟ, ಸಂಸಾರದಲ್ಲಿ ಸತ್ಯದ ನೆಲೆಯ ಶೋಧವಾಗಿ, ದಾಂಪತ್ಯದ ಆಟದಲ್ಲಿ ಒಲವಿನ ನೆಲೆಯ ಗುರಿಯನ್ನು ಮುಟ್ಟುವ ಸಾಧನೆಯಾಗಿದೆ. ಅದಕ್ಕಾಗಿ ಬೇಂದ್ರೆಯವರು ತನ್ನ ಸಖಿಯನ್ನು 'ಘಜಾರಗಟ್ಟೀ ಮುಟ್ಟೋಣು ಬಾ' ಎಂದು ಕರೆದಿದ್ದಾರೆ.

ಬೇಂದ್ರೆಯವರ ಕಾವ್ಯವೆಂದರೆ ಸತ್ಯದ ಶೋಧ. 'ಮೂರ್ತಿ'[17] ಕವನದಲ್ಲಿ ಅದನ್ನು ಶೋಧಿಸುತ್ತ ಈ ಪ್ರಶ್ನೆ ಕೇಳಿದ್ದಾರೆ:

'ನಿಜವ ಕಂಡವರಿಲ್ಲ,
ನಿಜ ಕಾಣುವಂತಿಲ್ಲ,
ನಿಜವೇನು ಮಳಲ ಹುಡಿಗಿಂತ ಕೀಳೇ?
ನಿಜವ ಕಂಡಿಹೆನೆಂಬ
ಕಣ್ಣ ಜಂಭದ ಹುಂಬ!
ಮಳಲಹುಡಿ ಗುಟ್ಟೇನು ಕಣ್ಣಕೂಳೇ?'

'ನಿಜವೆಂಬುದು ಕಣ್ಣಿನಿಂದ ತಿಳಿಯುವಷ್ಟು ಸುಲಭವಾದುದೇ'ಎಂಬ ಪ್ರಶ್ನೆ ಚಿಂತನೆಗೆ ತೊಡಗಿಸುವ ವಿಷಯವಾಗಿದೆ. ಅದೇ ಚಿಂತನೆಯನ್ನು ಬೆಳೆಸುತ್ತ ಅದನ್ನು ಕಾಣ್ಕೆಯಾಗಿಸಿಕೊಳ್ಳಬೇಕೆಂದು 'ಘಜಾರಗಟ್ಟಿ ಮುಟ್ಟೋಣ ಬಾ' ಎಂಬ ರೂಪಕ ಸೃಷ್ಟಿಸಿ ಅಲ್ಲಿ ದಾಂಪತ್ಯದ ಸಾಧನೆಯಲ್ಲಿ ಅದರ ನೆಲೆ ಕಾಣಲು ಪ್ರಯತ್ನಿಸಿದ್ದಾರೆ. ಬೇಂದ್ರೆಯವರ ಅಂತರಾತ್ಮಕ್ಕೆ ಆ ಸತ್ಯ ಗೋಚರಿಸುತ್ತಿದೆ. ಅದನ್ನು ತಾನೊಬ್ಬನೇ

---

* ಈ ವಿವರವನ್ನು ಬೇಂದ್ರೆಯವರ ಶಿಷ್ಯರಾದ ಶ್ರೀ ಎಸ್.ಜಿ. ನಾಡಿಗೇರ ಮಾಸ್ತರರು ತಿಳಿಸಿದರು. ಅವರು ತಮ್ಮ ಹೊಸಪೇಟೆಯ ವಡಕರಾಯ (ಹನುಮಂತರಾಯ)ನ ರಥೋತ್ಸವ ಹೊರಟು ಘಜಾರಗಟ್ಟಿ ಮುಟ್ಟಿ ಹೊರಳಿ ಬರುತ್ತಿತ್ತು. ರಥ ತಲುಪಬೇಕಾದ ಘಟ್ಟ 'ಘಜಾರಗಟ್ಟಿ' ಎಂದು ಹೇಳಿದರು.

ಮುಟ್ಟಲು ಸಾಧ್ಯವಿಲ್ಲ. ಅದಕ್ಕಾಗಿ ಗಿಣಿಗೆಳೆತನದ ದಂಪತಿಗಳು ಒಂದೇ ಮನದಲ್ಲಿ ಸತ್ಯ ಪ್ರೀತಿಯಿಂದ ಅದನ್ನು ಹುಡುಕಬೇಕು. ಅದು ಐಹಿಕವನ್ನು ಬಿಟ್ಟು ಹೊರಗಾದುದಲ್ಲ. ಅಲ್ಲಿಯೇ ಇದ್ದು ಅಚಿಂತ್ಯವಾದುದು. ಆದಕಾರಣ ಸಖಿಯನ್ನು ಕರೆದು ಹೇಳುತ್ತಾರೆ:

'ಅಂಗಲಿಂಗದ ಜೋಡಿ ಕೂಡಿ ಹೊಸ
ಗಿಣಿ - ಗೆಣೆತನ, ನೋಡೋಣ ಬಾ |
ಮನಾ ಎಂಬೋ ಹೊಸಾ ಬನ ತೆರೆದರs
ಜನಾ ಕಂಡು ಅದ ಕೂಡೋಣ ಬಾ |'

ಬೇಂದ್ರೆಯವರ ಚಿಂತನಾಪರವಾದ ಕವನಗಳಲ್ಲಿ pause ಇದೆ. ಅಲ್ಲಿ ನಿಂತಾಗ ಅದರ ಮರ್ಮ Read in between the linesನಂತೆ ಶಾಂತವಾಗಿ ಸ್ಪಷ್ಟವಾಗುತ್ತದೆ. ಆದಕಾರಣ ಬೇಂದ್ರೆ ಕಾವ್ಯವನ್ನು ಓದುವುದು ಒಂದು ಕಲೆಯಾಗಿದೆ. ಅವರು ಸತ್ಯವನ್ನು ಶೋಧಿಸಲು ತೊಡಗಿದ ತನ್ನ ಮನದ ಮಾತನ್ನು ಮನದನ್ನೆಗೆ ಹೇಳುತ್ತಾರೆ:

'ಇದs ಇದs ಅಂತ ಎದೀ ಅನ್ನತದ
ಅದs ಅಲ್ಲಿ ಮನಿ ಕಟ್ಟೋಣು ಬಾ'

ಈ ಸಾಲನ್ನು ಮೊದಲು ಶಾಂತವಾಗಿ ತಿಳಿಯಬೇಕು. ಅನಂತರ ಅವರು ನುಡಿಯುವ 'ಅದs'ಕ್ಕೆ ಕಿವಿಗೊಡಬೇಕು. 'ಅದs' ಅಂದರೆ ಇದೆ. ಅದು ಇರುವುದು ಸತ್ಯ. 'ಅದs' ಅನ್ನುವುದು ಸಖಿಗೂ ತಿಳಿಯಬೇಕು. ಅವಳಿಗೆ ತನ್ನ ಸಖ ಹೇಳುವುದು ಸ್ಪಷ್ಟ ಗೋಚರವಾಗಬೇಕು. ಅದಕ್ಕೆ ಶಾಂತವಾಗಿ ನಿಲ್ಲಬೇಕು, ತಿಳಿಯಬೇಕು. 'ಅದs' ಎಂಬ ಪದ ಜನರ ಆಡುನುಡಿಯಲ್ಲಿರುವ ಸತ್ಯದ ಗ್ರಹಿಕೆಯ ಪದವೂ ಆಗಿ ವ್ಯಂಗ್ಯಾರ್ಥವನ್ನು ವ್ಯಂಜಿಸುತ್ತದೆ. ಕಣ್ಣುಮುಚ್ಚಾಲೆಯ ಮಕ್ಕಳ ಆಟದಲ್ಲಿ ಹೀಗೆ pauseನಲ್ಲಿ ನಿಲ್ಲುವುದು, ಗ್ರಹಿಸುವುದು, ಮೈಮನವನ್ನೆಲ್ಲ ಏಕಾಗ್ರತೆಗೆ ತಂದುಕೊಳ್ಳುವುದು ಎಲ್ಲವೂ ಇದೆ. ಹಾಗೆ ಇಬ್ಬರಿಗೂ ಅದು 'ಅದs' ಎಂಬುದು ಒಪ್ಪಿಗೆಯಾದಾಗ ಕವಿ ನುಡಿಯುತ್ತಾರೆ:

'ಅಲ್ಲಿ ಮನಿ ಕಟ್ಟೋಣು ಬಾ'

ಸಖಿ ಪ್ರೌಢೆಯಾದುದರಿಂದ - ತಿಳಿವನ್ನು - ಆಕೆ ಗ್ರಹಿಸುವಂತೆ ಮಾಡಲು ನುಡಿಯುತ್ತಾರೆ:

'ನೆಲೀಮ್ಯಾಲ ನೆಲಿ ಅಲ್ಲ ಸಂಗಿ, ಅದು
ಅದs ನಿಜದ ನೆಲ ಮುಟ್ಟೋಣು ಬಾ'

ಅಂದರೆ ಅದು ಇಲ್ಲಿಯೇ ನಮಗೆ ಸಿಕ್ಕಿತು ಎಂಬಂತೆ ಕೈಗೆಟುಕುವುದಲ್ಲ ಅದನ್ನು ಇಬ್ಬರೂ ಜೊತೆಗೂಡಿ ಪಡೆಯಬೇಕು ಎಂದು ಸಂಗೀ (ಜೊತೆಯಾಕೆ) ಎನ್ನುವ ಪದವನ್ನು ಬಳಸಿದ್ದಾರೆ. ಈ ಪದ ದಾಂಪತ್ಯದ ಸಾಧನೆಯ ಒಲವಿನ ಆತ್ಮೀಯತೆಯ ಜೊತೆಯಾದ ಒಂದೇ ಆದ ಭಾವವನ್ನು ಧ್ವನಿಸುತ್ತ, ಅವಳನ್ನು ಆಪ್ತವಾಗಿಸಿಕೊಂಡು 'ಅದs ನಿಜದ ನೆಲ' ಎಂದು ಹೃದಯಕ್ಕೆ ಹತ್ತಿರವಾಗಿಸಿಕೊಂಡು ಆ ನಿಜದ ನೆಲಿ ಶಾಶ್ವತ ಪ್ರೀತಿಯನ್ನು ಮುಟ್ಟೋಣ ಬಾ ಎಂಬ ದರ್ಶನವಿದೆ.

'ಅದs ನಿಜದನೆಲಿ' ಮುಟ್ಟಲು ಬೇಂದ್ರೆ ಯಾವಾಗಲೂ ಆಧರಿಸುವುದು ಗುರು ಮತ್ತು ತಾಯಿಯನ್ನು. ಅವರನ್ನು ಧ್ಯಾನಿಸುತ್ತ ಘಜಾರಗಟ್ಟಿ ಮುಟ್ಟುವುದು ಸಾಧ್ಯ ಎಂದು ಮನತುಂಬಿ ನುಡಿಯುತ್ತಾರೆ:

'ಗುರುವಿನಂಗಳದ ಗಿಡಾಬಳ್ಳಿಯಾಗಿ
ಹೊಸಾ ಹೂವು ನಾವು ಸುರಿಸೋಣ ಬಾ |
ತಾಯಿ ಪಾದದಾನಂದ ಗಂಧ ಉಂಡು
ಬೆಂದವರ ಜೀವ ಬೆರಸೋಣ ಬಾ'

ಸಖ ಸಖಿಯರ ಬಂಧವು ಶಾಶ್ವತ ಒಲವನ್ನು ಕಾಣುತ್ತ ದೇವಕಾಮನನ್ನು ಕಾಮದೇವ (ಮಗು)ವಾಗಿ ಪಡೆಯುತ್ತ, ತಮ್ಮ ವೈಯಕ್ತಿಕ ಮಿತಿಯನ್ನು ಮೀರಿ ಜಗದ ಆನಂದಕ್ಕೆ ಜೊತೆಯಾಗಿ ಸಾಗುತ್ತ 'ಬೆಂದವರ ಜೀವ ಬೆರಸೋಣ ಬಾ' ಎಂದು ನುಡಿದು ಲೋಕಕಲ್ಯಾಣದ ಸಾರ್ವಕಾಲಿಕ ಚಿಂತನೆಯನ್ನು ಮಾಡಿದ್ದಾರೆ. ಅದನ್ನು ಸಾಧಿಸಲು ಅವರು ಗುರು ಮತ್ತು ತಾಯಿಯನ್ನು ಅವಲಂಬಿಸಿ:

'ಇರುವು-ಅರಿವಿನಾ ಹರವೆ ನಮ್ಮ ಕುಋ-
ವಾಗಿ ತಾಯಿಯಾಗಿ
ಮೂರನೊಂದರಲಿ ಪಿಂಡಗೊಳಿಸುವಾ
ಗುರುವೆ ಬಾಯಿಯಾಗಿ
ಸೀಮವನ್ನು ನಿಸ್ಸೀಮದೊಡನೆ ಹುದು-
ಗೊಳಿಸಿ ಮಾಯಿಯಾಗಿ
ಜೀವಪುಷ್ಪದೊಳೆ ಫಲಿಸೆ ಪಕ್ವತೆಗೆ
ಬರಲಿ ಕಾಯಿಯಾಗಿ'[18]

ಎಂದು ತನ್ನ ಅರಿವನ್ನು ವಿಸ್ತರಿಸಿ, ಪಕ್ವಗೊಳಿಸಲು ಪ್ರಾರ್ಥಿಸುತ್ತ, ಸಮರಸತತ್ತ್ವದ ಸಾಧನೆಯತ್ತ ಸಾಗಿರುವುದನ್ನು 'ಸಖೀಗೀತ'ದಲ್ಲಿ ಕಾಣುತ್ತೇವೆ.

**ಸಖೀಗೀತ**

ಬೇಂದ್ರೆಯವರು ತನ್ನ ಪತ್ನಿಯನ್ನು ಸಖಿ ಎಂದು ಕರೆದು'ಸಖೀಗೀತ'ವನ್ನು ರಚಿಸಿದ್ದಾರೆ. ಈ ಸಖ-ಸಖಿ ಭಾವ ಋಗ್ವೇದ ಕಾಲದಲ್ಲಿ 'ದಂಪತಿ'ಗಳ ಸ್ನೇಹಭಾವವನ್ನು ಸುಖ-ದುಃಖವನ್ನು ಸಮನಾಗಿ ಹಂಚಿಕೊಂಡು ಜೀವನವನ್ನು ನಡೆಸುತ್ತಿದ್ದ ಅವರ ಹರ್ಷ ಜೀವನೋಲ್ಲಾಸವನ್ನು ಸೂಚಿಸುತ್ತದೆ. ಋಗ್ವೇದದಲ್ಲಿ - ಕ್ಷತ್ರಿಯನ ವೀರ ಮತ್ತು ಗೃಹಸ್ಥರ ದಾಂಪತ್ಯವು ಒಂದಕ್ಕೊಂದು ಬೆರೆತಿರುವ ಪುರುಷನ ಚಿತ್ರಣದಲ್ಲಿ - ಅವನ ಬಾಣದ ಬಲ್ಮೆಯನ್ನು ಮೆಚ್ಚಿ ಸಖಿಯು ಪಿಸುನುಡಿಯುವಾಗ 'ಸಖನನ್ನು ತಬ್ಬಿ ನುಡಿದಳು' ಎಂಬ ಮಾತಿದೆ.[19] ಆ ಸ್ನೇಹಭಾವ ಭಾರತೀಯ ದಂಪತಿಗಳಲ್ಲಿ ಕ್ರಮೇಣ ಕಳೆಗುಂದುತ್ತ ಬಂದುದನ್ನು ಅವಳನ್ನು ಹೀನಾಯವಾಗಿ ಕಂಡ ವಿವರಗಳನ್ನು ಈ ಅಧ್ಯಯನದ ಭಾಗ ಎರಡರಲ್ಲಿ ವಿವರವಾಗಿ ತಿಳಿದಿದ್ದೇವೆ. ಆದರೆ ಬೇಂದ್ರೆಯವರು ಹೆಣ್ಣಿನ ಮೃದುಭಾವ ಮತ್ತು ಆಕೆಗೆ ಸಮಾಜದಲ್ಲಿ ನೀಡಬೇಕಾದ ಸ್ಥಾನವನ್ನು ಅರಿತವರಾಗಿ ಸಮಾಜಕ್ಕೆ ಆ ಮುಖದ ಸತ್ಯವನ್ನು ದರ್ಶಿಸುತ್ತ ದಂಪತಿಗಳ ಪರಸ್ಪರ ಅರಿವಿನೊಡನೆ ಸಮಾಜ ವಿಕಾಸವಾಗಬೇಕೆಂದು ಕನಸು ಕಂಡರು. ಆದಕಾರಣ ತಮ್ಮ ದಾಂಪತ್ಯದ ನೋವು ನಲಿವು, ಸ್ನೇಹ, ಪ್ರೇಮ, ಸೋಲು-ಗೆಲುವು, ಆತಂಕ-ಉಲ್ಲಾಸವನ್ನು ಸಖ-ಸಖಿ ಭಾವದಿಂದ 'ಸಖೀಗೀತ'ದಲ್ಲಿ ವಿಶ್ಲೇಷಿಸಿದರು. 'ವಿಧಿ ತಂದ ವಧು'ವನ್ನು ಸ್ನೇಹಿತಳನ್ನಾಗಿಸಿಕೊಂಡು ಬಾಳುವೆ ಮಾಡಿದ ಆತ್ಮಕಥೆಯನ್ನು ಕಾವ್ಯವಾಗಿ ಚಿತ್ರಿಸಿದರು. ಅವರು ವಿವಾಹಸಂದರ್ಭದಲ್ಲಿ ಅಂತಃಪಟದಾಚೆ ನಿಂತಿರುವ

ವಧುವನ್ನು ಕಾಣುವುದು - ಆ ಮಧುರ ಭಾವದ ಆಹ್ಲಾದದಿಂದ ಪ್ರಕೃತಿಸಹಜವಾಗಿ 'ಬೆವರಿನ ಬಾಸಿಂಗ'ಕಟ್ಟಿಕೊಂಡ, ಬೆವರಿನ ಹನಿಯೊಂದನ್ನು ಮೂಗುಬಟ್ಟಾಗಿ ಧರಿಸಿದ ಸೌಂದರ್ಯದಲ್ಲಿ.

'ಮುತ್ತಿಗು ಮಿಗಿಲಾಗಿ ಹೂವೀಗು ಹಿರಿದಾಗಿ
ಬೆವರ್ಹನಿ ಬಾಸಿಂಗ ತುಳುಕುತಿರೆ
ನತ್ತನು ನಾಚಿಸಿ ಬೆವರಿನ ಹನಿಯೊಂದು
ಮೂಗುಬಟ್ಟಿನ ಅಂದ ಮಿನುಗುತಿರೆ.'

ಹೀಗಾಗಿ ಕವಿಯು ತನ್ನ ಪ್ರಿಯ ಸಖಿಯು ಭೌತಿಕ ಒಡವೆಗಳಿಂದ ಶೃಂಗಾರಗೊಂಡಿರುವುದಕ್ಕಿಂತ ನಿಸರ್ಗಸಹಜ ಸೌಂದರ್ಯದಲ್ಲಿ ಪಲ್ಲವಿಸುತ್ತಿರುವುದನ್ನು ಕಂಡು ಬಣ್ಣಿಸಿರುವುದು ಅವರ ರೂಪಕಶಕ್ತಿಯು ಆ ಸಖ್ಯದಲ್ಲಿ ಅತಿ ಸಹಜವಾಗಿ ಮೂಡಿದುದಕ್ಕೆ ಪುರಾವೆಯಂತಿದೆ. ಅದು ವಿಕಾಸಗೊಂಡು ಈ ಕಾವ್ಯದಲ್ಲಿ 'ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ| ಕಣ್ಣಿಗು ಕಣ್ಣಾಗಿ ಒಳಗಿಹುದು' ಎಂಬ ತಾತ್ತ್ವಿಕ ಚಿಂತನೆಯನ್ನು ನೀಡುತ್ತದೆ. ಸಖೀಗೀತ ಸೂಕ್ಷ್ಮ ಮನಸ್ಸಿನ ಮಡದಿಯನ್ನು ತಿಳಿಯಲು ಪ್ರಯತ್ನಿಸುವ ಪ್ರಯತ್ನದಂತೆ ಅದರ ಒಡಲಿನಲ್ಲಿ ಕಾವ್ಯದೇವತೆಯ ಉಪಾಸನೆಯಲ್ಲಿ ತೊಡಗಿಕೊಂಡ ಕವಿಯ ಸೃಜನಶೀಲತೆಯನ್ನೂ ಒಳಗೊಂಡಿದೆ. ಇದು ಈ ಕಾಲಮಾನದ ಶ್ರೀಸಾಮಾನ್ಯರ ಬದುಕಿನ ಕಿರಿದಾದ ಮಹಾಕಾವ್ಯವಾಗಿದೆ.

ಬೇಂದ್ರೆಯವರು "....ನನ್ನ ವೈವಾಹಿಕ ಜೀವನದ ಸಿಂಹಾವಲೋಕನ ಮಾಡುವ ಪ್ರೇರಣೆಯುಂಟಾಯಿತು. ಅದರ ಧಾಟಿ, ತನ್ನದೇ ಆದ ಒಂದು ಸ್ವಚ್ಛಂದದಲ್ಲಿ ಬಂತು. ಆ ಧಾಟಿಯ ಸೊಗಸಿಗಾಗಿ ನನ್ನ ಅನುಭವದ ಚರ್ವಣೆಯನ್ನು ಮಾಡಿದೆ. ಹೀಗೆ 'ಸಖೀಗೀತ' ಹುಟ್ಟಿಕೊಂಡಿತು. ಅದರ ಒಡಲಲ್ಲಿಯೇ ನನ್ನ ಪ್ರಕೃತಿ ಪ್ರೇಮಕ್ಕೆ ಬಾಯಿಯೊಡೆಯಿತು. ಅದೊಂದು ಪ್ರಣಯ ಸಾಧನೆ. ಅದರಲ್ಲಿ ಸುಖ-ದುಃಖ ಸರಿಪಾಲಾಗಿ ಬೆರೆತುಕೊಂಡಿವೆ"[20] ಎಂದು ಹೇಳಿದ್ದಾರೆ. ಅವರು "ಸಖೀಗೀತದಲ್ಲಿ ನನ್ನ ಜೀವನ ಕಥೆಯ ಹಂದರದ ಮೇಲೆ ಸಾಮಾನ್ಯ ಸಂಸಾರದ ಸುಖ-ದುಃಖದ ಹಂಬನ್ನು ಹಬ್ಬಿ ಬಿಟ್ಟಿದ್ದೇನೆ"[21] ಎಂದು ಹೇಳಿರುವುದನ್ನು ವಿಶ್ಲೇಷಿಸುತ್ತ, ಜಿ. ಎಸ್. ಆಮೂರ ಅವರು "ಬೇಂದ್ರೆಯವರು 'ಸಖೀಗೀತ'ದ ವೈಯಕ್ತಿಕ ಮತ್ತು ಸಾಮಾಜಿಕ ಮುಖಗಳೆರಡನ್ನೂ ಒಮ್ಮೆ ತೆರೆದು ತೋರಿಸಿದ್ದಾರೆ"[22] ಎಂದು ಹೇಳಿರುವುದು ಅರ್ಥಪೂರ್ಣವಾಗಿದೆ. ಅಂದಿನ ಸಮಾಜದ ಪತಿ-ಪತ್ನಿಯರು ಬಾಳಿದ ರೀತಿಯನ್ನು ತಿಳಿಯುವುದರ ಜೊತೆಗೆ ಅಂದಿನ ಸಮಾಜದಲ್ಲಿ ಓರ್ವ ಬೌದ್ಧಿಕ ಚಿಂತನಶೀಲ ವ್ಯಕ್ತಿ ಸರಳ ಸಾಮಾನ್ಯ ಜೀವನ ನಡೆಸುತ್ತ ಬದುಕಲು ಹೆಣಗುವ, ನೈತಿಕ ಆದರ್ಶಕ್ಕಾಗಿ ತಹತಹಿಸುವ ಪರಿಯನ್ನು ಕಾಣಬಹುದಾಗಿದೆ.

**ಭಾರತೀಯ ಹೆಂಡತಿ, ಪಾಶ್ಚಾತ್ಯ ಹೆಂಡತಿ ವಿಚಾರ**

ಬೇಂದ್ರೆಯವರು 'ಸಖೀಗೀತ'ದ ಮುನ್ನುಡಿಯಲ್ಲಿ ಭಾರತೀಯ ಮತ್ತು ಪಾಶ್ಚಾತ್ಯ ದಾಂಪತ್ಯದ ಬಗೆಗೆ ಹೀಗೆ ನುಡಿದಿದ್ದಾರೆ : "ಭಾರತೀಯರ ಜೀವನದಲ್ಲಿಯೂ ಕಾವ್ಯದಲ್ಲಿಯೂ ದಾಂಪತ್ಯ ಪ್ರಣಯಕ್ಕೆ ಸ್ಥಾನವಿಲ್ಲ. ಕಾವ್ಯದಂತೆಯೆ ಜೀವನದಲ್ಲಿಯೂ ಪ್ರಣಯದ ವಿಲಾಸವು ವೇಶ್ಯಾವಾಟದ ಆವರಣದಲ್ಲಿ ಮಿಂಚಾಡುವುದು. ಪಾಶ್ಚಿಮಾತ್ಯರ ಜೀವನದಲ್ಲಿಯೂ ಅವರ ಕಾವ್ಯದಲ್ಲಿಯೂ ಪ್ರಣಯಾರಾಧನ ವಿಧಿಗೆ ನಿಶ್ಚಿತವಾದ ಕ್ರಮವಿದೆ ಎಂದು ಹೇಳುವದುಂಟು. ಆದರೆ ಈ ವಿಧಾನವು ಸಂಪೂರ್ಣವಾಗಿ ಸತ್ಯವಲ್ಲ. ಯಾವ ವಿಧಿ ಕ್ರಮಗಳು - ಅಲ್ಲಿ ಇಲ್ಲಿ - ಇರಲಿ ಬಿಡಲಿ, ಮಾನವನ ಅವಿವೇಕ ಸುಳಿದಾಡಿದಲ್ಲೆಲ್ಲ ಪ್ರೇಮದ ಕೊಲೆಯು ಅಯಾಚಿತವಾಗಿ ನಡೆಯುವುದು. ಪಾಶ್ಚಿಮಾತ್ಯರ ಪ್ರಣಯಲೀಲೆಯ ಕೊನೆಗೆ ಬರುವ

ಮದುವೆಯಲ್ಲಿ ವಿಯೋಗದ ಲಕ್ಷಣವು, ವಿರಹದ ಚಿತ್ರವು, ಪ್ರೇಮದ ಸಮಾಧಿಯು ಕಟ್ಟಿಹೋಗಿದ್ದುಂಟು. ನಮ್ಮಲ್ಲಿ ವಿವಾಹಪೂರ್ವ ಪ್ರಣಯದ ಸಂಚಾರಿಭಾವಗಳಿಗೆ ಎಡೆಯಿಲ್ಲ. ಮದುವೆಯ ಸ್ಥಾಯಿಯಲ್ಲಿ, ಅನುದ್ದೀಪಕ ಏಕಾಂತ ಗುಹೆಗಳಲ್ಲಿ ರತಿಯ ರಸಾಪೇಕ್ಷೆಯಿಂದ ನವೆಯಬೇಕು. ಪಾಶ್ಚಿಮಾತ್ಯರಲ್ಲಿ ಸ್ವೈರ ಸಂಚಾರವಿದ್ದರೂ ರತಿಗೆ ಮಾತ್ರ ಋತು-ಋತುವಿಗೂ ಮರಣಭಯ ತಪ್ಪಿಲ್ಲ. ನಮ್ಮಲ್ಲಿಯೋ ಕಾಮನು ಅನಾದಿ ಕಾಲದಿಂದ ಅನಂಗನಾಗಿರುವುದರಿಂದ ರತಿಯ ವಿಲಾಪಾಶ್ರುಗಳಿಂದಲೇ ಪ್ರೇಮವಲ್ಲರಿಯು ಕಮರಬೇಕು, ಇಲ್ಲವೇ ದೈವಕೃಪೆಯಿಂದ ಚಿಗುರಬೇಕು, ಅಥವಾ ಪತಿಯೊಂದಿಗೆ ಪಣತೊಟ್ಟ ಸತಿಯ ಪ್ರಣಯ ಸಾಹಸವೆಲ್ಲ ತಪದ ವೈರಾಗ್ಯ ವಿಲಾಸವಾಗಿ - ಬೂದಿಯೊಳಗಿಂದಲೆ ಅಡಗಿದ ಬೆಂಕಿಯೆದ್ದಂತೆ ಕೊನೆಗೆ ಏಳಬೇಕು. ಪಾಶ್ಚಿಮಾತ್ಯರ ಸರಸವು ವಿರಸದ ಪ್ರಸ್ತಾವನೆ. ನಮ್ಮ ರಸವೇ ನೀರಸ. ಹೀಗೆ ಸಾಮಾನ್ಯವಾಗಿ ತೋರಿದರೂ ಭಾರತೀಯರ ವೈವಾಹಿಕ ಜೀವನವೇ ಸಂಸ್ಕಾರವಂತರ ಮನೆಗಳಲ್ಲಿ ಜೀವಮಾನದುದ್ದಕ್ಕೂ ಪ್ರಣಯ ಪರಿಪಾಕದ ರೀತಿಯಾಗಿಯೇ ಇದೆ. ಅಗ್ನಿಸಾಕ್ಷಿಯಾಗಿ, ದಾನವಾಗಿ ಬಂದ ಕನ್ಯೆಯನ್ನು ಸ್ನೇಹದ ಅಭ್ಯಾಸದಿಂದ, ಸುಖ-ದುಃಖಗಳಲ್ಲಿ ಸಮಭಾಗಿಯಾಗುವ ಸಹಾನುಭೂತಿಯ ಅಂತಃ ಕರಣದಿಂದ ಸಖಿಯನ್ನಾಗಿ ಮಾಡುವ ಕ್ರಮವೊಂದು ಎಡೆಬಿಡದೆ ಸಾಗಿರುವದು. ಆ ಕ್ರಮದಲ್ಲಿ ಸ್ನೇಹದ ವಿವಿಧ ರೂಪಗಳೂ ತಮ್ಮ ತಮ್ಮ ಪಾತ್ರವನ್ನಾಡಿ ನಾಯಕ ಪಾತ್ರಕ್ಕೆ ರಸಭಾವಗಳ ಪ್ರಭಾವಲಯವನ್ನು ಕಟ್ಟುವವು. ಅಂತಹ ಚಿತ್ರವೊಂದು ಸಖೀಗೀತದಲ್ಲಿದೆ."[23]

ಈ ಚಿಂತನೆಯ ಕೊನೆಯ ಮಾತುಗಳನ್ನು ಆಧರಿಸಿ ವಿ.ಕೃ. ಗೋಕಾಕರು "In a poem like Sakhigeeta, Bendre reaches out to the epic structure of Wordsworth's 'The prelude'" ಎಂದಿದ್ದಾರೆ. ಹೀಗಾಗಿ ಇದು ಕವಿಯ ಮನದ ಅಂತರ್ಯಾನವಾಗಿದೆ. ಇದು ೯೬೦ ಸಾಲುಗಳಿರುವ ಒಂದು ಖಂಡಕಾವ್ಯ. ಇದು ಒಂದು ಇತಿಹಾಸ. ಅದು ನಡೆದ ಕಾಲ ೧೯೧೯ರಿಂದ ೧೯೩೭. ಆ ಕಾಲಾವಧಿಯಲ್ಲಿ ನಡೆದ ಘಟನೆ ನಾಲ್ಕು ಪಾದಗಳ ನಡೆಯಲ್ಲಿ ಸಾಗುತ್ತ ಇಪ್ಪತ್ತನಾಲ್ಕು ಸಾಲುಗಳಿಗೊಮ್ಮೆ 'ನನಗೂ ನಿನಗೂ ಅಂಟಿದ ನಂಟಿನ ಕೊನೆ ಬಲ್ಲವರಾರು ಕಾಮಾಕ್ಷಿಯೇ!' ಎಂಬ ಅಚ್ಚರಿಯನ್ನು ವ್ಯಕ್ತಪಡಿಸುತ್ತ ತನ್ನ ಜೀವನಾನುಭವವನ್ನು ಅನುಭಾವಿಯ ರೀತಿ ಚಿತ್ರಿಸುತ್ತ ಸಾಗಿದೆ. ಈ ಕಾವ್ಯವನ್ನು ಕುರಿತು ತೀನಂಶ್ರೀ ಅವರು "ಆತ್ಮಕಥೆಯನ್ನು ಹದಗೆಡಿಸದೆ ಬರೆಯುವುದು ಕಠಿನ. ಅದನ್ನು ಗೀತವಾಗಿ ಹಾಡಿ ರಸವುಕ್ಕಿಸುವದಂತೂ ಕಠಿನ. ಇಂಥ ಕಾರ್ಯವನ್ನು 'ಸಖೀಗೀತ'ದಲ್ಲಿ ಬೇಂದ್ರೆಯವರು ಮನೋಹರವಾಗಿ ಸಾಧಿಸಿದ್ದಾರೆ."[25] ಎಂದು ನುಡಿದಿದ್ದಾರೆ. ಡಿ.ಆರ್.ನಾಗರಾಜ್ ಅವರು 'ಸಖೀಗೀತದಲ್ಲಿ ಮುಖ್ಯವಾಗಿರುವುದು ಕಾಮಿ ಮತ್ತು ಕವಿಯ ವ್ಯಕ್ತಿತ್ವಗಳ ವಿಕಾಸ. ಅಥವಾ ಕಾಮಿ ಮತ್ತು ಕವಿಗಳ ಪರಸ್ಪರ ಕೊಳುಕೊಡುಗೆ ಮತ್ತು ಪರಿವರ್ತನೆ. ಕಾಮಿ ತನ್ನ ಅನುಭವದ ಉನ್ನತ ಸ್ಥಿತಿಯಲ್ಲಿ ಕವಿಯಾಗುತ್ತಾನೆ. ತನ್ನ ಅನಂಗಭಾವಕ್ಕೆ (ಮನ್ಮಥ ಅನಂಗ ತಾನೆ, 'ಪೀಠಿಕೆ'ಯಲ್ಲೂ ಬೇಂದ್ರೆ ಈ ಮಾತನ್ನು ಹೇಳುತ್ತಾರೆ) ಕವಿ ಮಾತಿನ ರೂಪ ಕೊಡುತ್ತಾನೆ. ಕಾಮಿ ಮತ್ತು ಕವಿ ಬೇಂದ್ರೆ ವ್ಯಕ್ತಿತ್ವದ ಬೇರೆ ಬೇರೆ ರೂಪಗಳು"[26] ಎಂದು ಅಭಿಪ್ರಾಯಪಟ್ಟಿದ್ದಾರೆ. ಕಾಮಿ ಕವಿಯಾದಾಗ ಆದರ್ಶ ರೂಪಗೊಳ್ಳುತ್ತದೆ. ಕಾಮಿ-ಕಾಮುಕನಾದಾಗ ದಾಂಪತ್ಯದ ಹದ ಕೆಡುತ್ತದೆ. ಋಷಿ ಕವಿ ಎಂದಿಗೂ ಕಾಮುಕನಾಗಲಾರ.

ಈ ಕಾವ್ಯದ ಅಭ್ಯಾಸವನ್ನು ಕವಿಯು ನೀಡಿರುವ ಕಾಲಸೂಚಿಯನ್ನನುಸರಿಸಿ ನಾಲ್ಕು ಭಾಗವಾಗಿ ವಿಂಗಡಿಸಿದ್ದೇನೆ:

೧. ೧೯೧೯ ರಿಂದ ೧೯೨೪

೧೯೧೯ ವಿವಾಹ ಲಕ್ಷ್ಮೀಬಾಯಿ (ರಂಗೂತಾಯಿ) ಅವರೊಡನೆ.
೧೯೨೧ ರಾಷ್ಟ್ರೀಯ ಶಾಲೆಯಲ್ಲಿ ಶಿಕ್ಷಕರಾದದ್ದು.
೧೯೨೨ ಮಗ ಕ್ಷೇಮೇಂದ್ರನ ಜನ್ಮ; ಡಿಸೆಂಬರಿನಲ್ಲಿ ದಾವಣಗೇರಿ ಸಾಹಿತ್ಯ ಸಮ್ಮೇಳನಕ್ಕೆ ಹೋದದ್ದು.
೧೯೨೩ ಮೇದಲ್ಲಿ ಕ್ಷೇಮೇಂದ್ರ ತೀರಿಕೊಂಡ; ಜಯಕರ್ನಾಟಕ ಪತ್ರಿಕೆಯೊಂದಿಗೆ ಸಂಬಂಧ; ವಿಜಾಪೂರ ಸಾಹಿತ್ಯ ಸಮ್ಮೇಳನಕ್ಕೆ ಹೋದದ್ದು.
೧೯೨೪ ತಾಯಿ ತೀರಿದಳು; ಎರಡನೆಯ ಮಗ ರಾಮ ಹುಟ್ಟಿದ್ದು; ಬೆಳಗಾವಿಯ ಕಾಂಗ್ರೇಸು.

೨. ೧೯೨೫ ರಿಂದ ೧೯೨೭

೧೯೨೫ ಮತ್ತೆ ನ್ಯೂ ಇಂಗ್ಲಿಷ್ ಸ್ಕೂಲಿಗೆ (ಮೊದಲಿನ ವಿಕ್ಟೋರಿಯಾ ಹೈಸ್ಕೂಲೇ ಇದು) ಶಿಕ್ಷಕ ಆದದ್ದು.
೧೯೨೬ 'ಸ್ವಧರ್ಮ' ಪತ್ರಿಕೆ ಕೊಂಡದ್ದು; ನಾಡಹಬ್ಬ ಪ್ರಾರಂಭಿಸಿದ್ದು.
೧೯೨೭ ವಿಶೇಷ ಸಂಚಿಕೆಗಳ ಸಂಪಾದಕ; ಮೂರನೆಯ ಮಗ ಭಾಸ್ಕರ ಹುಟ್ಟಿದ್ದು, ತೀರಿದ್ದು.
೧೯೨೮ ಗ್ವಾಲೇರಕ್ಕೆ ಹೋದದ್ದು; ಮಗ ಪಾಂಡುರಂಗನ ಜನ್ಮ; ಉಪನಿಷದ್ ರಹಸ್ಯ ಪ್ರಕಟಗೊಂಡದ್ದು; 'ನನ್ನದು ಈ ಕನ್ನಡನಾಡು' ಪ್ರಕಟಗೊಂಡದ್ದು.

೩. ೧೯೨೮ ರಿಂದ ೧೯೩೦

೧೯೨೯ ಮನೆಯಲ್ಲಿ ಕಳುವು; ಕಕ್ಕ-ಕಕ್ಕಿ ಸಾಧನಕೇರಿಯಲ್ಲಿ ಮನೆ ಕೊಡಿಸಿದ್ದು; ಬೆಳಗಾವಿಯ ಸಾಹಿತ್ಯ ಸಮ್ಮೇಳನಕ್ಕೆ ಹೋದದ್ದು; 'ಹಕ್ಕಿ ಹಾರುತಿದೆ' ಕವನ ವಾಚನ; ದಿ. ಆಲೂರ ಅವರು 'ಜಯಕರ್ನಾಟಕ' ಪತ್ರಿಕೆಯನ್ನು ಗೆಳೆಯರ ಗುಂಪಿಗೆ ವಹಿಸಿಕೊಟ್ಟದ್ದು; ಗ್ವಾಲೇರಕ್ಕೆ ಹೋದದ್ದು.
೧೯೩೦ 'ಹಕ್ಕಿ ಹಾರುತಿದೆ' ಕವನಸಂಗ್ರಹ ಸಂಪಾದಿತ, ಪ್ರಕಟನೆ; ಗರತಿ ಹಾಡು ಹಸ್ತಪ್ರತಿ ಸಿದ್ಧಪಡಿಸಿದ್ದು

೪. ೧೯೩೧ ರಿಂದ ೧೯೩೫

೧೯೩೧ ಕಾರವಾರ ಸಾಹಿತ್ಯ ಸಮ್ಮೇಳನಕ್ಕೆ ಹೋದದ್ದು.
೧೯೩೨ 'ಗರಿ' ಕವನಸಂಗ್ರಹಣದ ಪ್ರಕಟಣೆ; ಹಿಂಡಲಗಿ ಜೇಲುವಾಸ; ಮುಗದದಲ್ಲಿ ನಜರಬಂದಿ.
೧೯೩೩ ಎಂ.ಎ.,ಗಾಗಿ ಪುಣೆಗೆ ಪ್ರಯಾಣ (ಏಪ್ರಿಲ್‌ದಲ್ಲಿ).
೧೯೩೪ ಮಗಳು ಲಲಿತಾ ಹುಟ್ಟಿದಳು, ತೀರಿದಳು; 'ಮೂರ್ತಿ ಕಾಮಕಸ್ತೂರಿ' ಪ್ರಕಟಗೊಂಡದ್ದು.
೧೯೩೫ ಎಂ.ಎ., ಪಾಸಾದದ್ದು; ಜುಲೈನಲ್ಲಿ ಮಗ ವಾಮನನ (ಬಾಳ) ಜನ್ಮ. ಮುಂಬೈಯ ಸಾಹಿತ್ಯ ಸಮ್ಮೇಳನದಲ್ಲಿ ಕವಿಸಮ್ಮೇಳನದ ಅಧ್ಯಕ್ಷ.[27]

ಈ ಕಾಲದಲ್ಲಿ ನಡೆದ ಘಟನೆಗಳು, ಕವಿಯ ಮನಸ್ಸಿನ ಮೇಲೆ ಉಂಟುಮಾಡಿದ ಪರಿಣಾಮವನ್ನು

ಅದಕ್ಕೆ ಕವಿ ಕಾವ್ಯರೂಪದಲ್ಲಿ ಪ್ರತಿಕ್ರಿಯಿಸಿರುವುದನ್ನು ಅಭ್ಯಾಸ ಮಾಡಲು ಸಹಾಯವಾಗುತ್ತದೆ. ಈ ಕಾವ್ಯದ ಭಾಷೆಯನ್ನು ಕುರಿತು ವಾಮನ ಬೇಂದ್ರೆಯವರು " 'ಸಖೀಗೀತ'ದ ನುಡಿಗೊಪ್ಪುವ ದೇಸಿಯ ಛಂದ, ಸಾಂಗತ್ಯ ಸಂಸ್ಕಾರದ ಹುರಿ, ಪಂಡಿತರೂ ತಲೆದೂಗುವಂತೆ ಮಾಡಿದೆ"[28] ಎಂದು ಹೇಳಿದ್ದಾರೆ.

**ಸ್ಮೃತಿಗಳ ಹಾಯಿ ಬಿಚ್ಚೋಣು ಬಾ**

ಸಖ-ಸಖಿಯಾದ ದಂಪತಿಗಳ ಗುಟ್ಟು ಸಂಸಾರದ ಗುಟ್ಟು. ಅದೂ ಸಖಿಯ ಬಗ್ಗೆ ಹೇಳಲು ತೊಡಗುವಾಗ ಅವಳ ಅನುಮತಿಯಿಲ್ಲದೆ ಏನನ್ನೂ ನುಡಿಯಬಾರದು. ಈ ಭಾವನೆ ಪತ್ನಿಯನ್ನು ತನ್ನ ಅರ್ಧಾಂಗಿಯಾಗಿ ಕಾಣುವ ಸಮಾನ ತತ್ತ್ವದ ಜೀವನ ಸಾಧನೆಯ ಫಲಸ್ವರೂಪಿ ವ್ಯಕ್ತಿ ಮಾತ್ರ ಕಲ್ಪಿಸಲು ಸಾಧ್ಯ. ಅದು ಎಲ್ಲ ಕುಟುಂಬದಲ್ಲಿ ಪಸರಿಸಿದರೆ ಅದು ಸಮರಸತತ್ತ್ವಕ್ಕೆ ನಾಂದಿಯಾಗಿ - ಸಮಾಜದಲ್ಲಿ, ದೇಶದಲ್ಲಿ ಶಾಂತಿ, ನೆಮ್ಮದಿ ಸುಖ ಸ್ಥಾಪಿತವಾಗಲು ಸಾಧ್ಯ. ಸ್ತ್ರೀ ಸಮಾನತೆಯ ಭಾವ ಪತಿಯಲ್ಲಿ ಮೊದಲು ಮೂಡಬೇಕು ಎಂಬ ನಿಲುವಿನಿಂದ ಬೇಂದ್ರೆಯವರು ಈ ಕಾವ್ಯವನ್ನು ಪ್ರಾರಂಭಿಸುವ ಮೊದಲು ಪ್ರಾಸ್ತಾವಿಕ ಭಾಗದಲ್ಲಿ ಸಖಿಯನ್ನು:

'ಸಖಿ! ನಮ್ಮ ಸಖ್ಯದ ಆಖ್ಯಾನ ಕಟುಮಧುರ
ವ್ಯಾಖ್ಯಾನದೊಡಗೂಡಿ ವಿವರಿಸಲೇ
ಕರುಳಿನ ತೊಡಕನು ಕುಸುರಾಗಿ ಬಿಡಿಸಿಟ್ಟು
ತೊಡವಾಗಿ ತಿರುಗೊಮ್ಮೆ ನಾ ಧರಿಸಲೇ?'

ಎಂದು ಕೇಳಿದ್ದಾರೆ. ಇದನ್ನು ಕೀರ್ತಿನಾಥ ಕುರ್ತಕೋಟಿಯವರು "ಜೀವನದಲ್ಲಿ ಅನುಭವವನ್ನು ಪಡೆಯುವಾಗ ಅದನ್ನು ಅರಿತುಕೊಂಡು ಪ್ರತಿಕ್ರಿಯೆ ತೋರಿಸುವ ವ್ಯವಧಾನ ಮನಸ್ಸಿಗಿರುವುದಿಲ್ಲ. ತೊಡಕು ಬಿಡಿಸಿ ಕಲಾತ್ಮಕವಾಗಿ ಮಾಡುವದೂ ಅಷ್ಟೆ ಕಠಿಣ. ಆದರೆ ನೆನಪಿನ ಸಹಾಯದಿಂದ ಮರಳಿ ಪಡೆದ ಅನುಭಾವಕ್ಕೆ ಯಾವ ಸಂಸ್ಕಾರವನ್ನು ಬೇಕಾದರೂ ಕೊಡಬಹುದು. 'ಸಖೀಗೀತ' ಅಂಥ ಒಂದು ಕಾವ್ಯ ಪ್ರಯತ್ನವಾಗಿದೆ. ಕವಿತೆಯಲ್ಲಿ ಬಿತ್ತರಗೊಂಡ ಅನುಭವಗಳು ಕವಿಯ ಸ್ವಂತ ಜೀವನಕ್ಕೆ ಸಂಬಂಧಿಸಿದ್ದರೂ ಈ ಕಲಾತ್ಮಕತೆಯಿಂದಾಗಿ ಅವುಗಳಿಗೊಂದು ಸಾರ್ವಕಾಲಿಕತೆ ಬಂದಿದೆ"[29] ಎಂದು ನುಡಿದಿದ್ದಾರೆ.

ಬೇಂದ್ರೆಯವರು ಹೀಗೆ ಸಾರ್ವತ್ರಿಕವಾಗಿ ತಮ್ಮ ದಾಂಪತ್ಯದ ಅನುಭವ ಹಾಡಲು ಸಖಿಯಿಂದ ಅನುಮತಿ ಪಡೆದು, ಸಂತಸದ ಭಾವದಲ್ಲಿ ಸಖ್ಯದ ಆಖ್ಯಾನವನ್ನು - ಕಾವ್ಯದೇವತೆಯ ಮಿನುಮಿನುಗುವ ಪ್ರಭಾವಳಿಯಿಂದ ಸಿಂಗರಿಸತೊಡಗುತ್ತಾರೆ:

'ಇರುಳು ತಾರೆಗಳಂತೆ ಬೆಳಕೊಂದು ಮಿನುಗುವದು
ಕಳೆದ ದುಃಖಗಳಲ್ಲಿ ನೆನೆದಂತೆಯೆ
ಪಟ್ಟ ಪಾಡೆಲ್ಲವು ಹುಟ್ಟು ಹಾಡಾಗುತ
ಹೊಸದಾಗಿ ರಸವಾಗಿ ಹರಿಯುತಿವೆ'.

ಎಂಬ ನುಡಿಯಲ್ಲಿ ತಮ್ಮ ದುಃಖದ ದಿನವನ್ನು ಪ್ರತಿಮಾತ್ಮಕವಾಗಿ ಇರುಳು-ಕತ್ತಲು ಎಂದು ಕರೆದು ಅಲ್ಲಿಯೂ ತಾರೆಗಳಂತೆ ಸುಖದ ಬೆಳಕು ಮಿನುಗಿದೆ ಎಂದು ಹೇಳಿದರೂ ಅದನ್ನು 'ಕಳೆದ ದುಃಖಗಳಲ್ಲಿ ನೆನೆದಂತೆಯೆ' ಎಂದಿದ್ದಾರೆ. ನೆನೆದಂತೆ ಎಂಬ ಪದವನ್ನು ಇಲ್ಲಿ ವ್ಯಂಗ್ಯಾರ್ಥದಲ್ಲಿ ಬಳಸುತ್ತ ಕಳೆದ ದುಃಖವನ್ನು ನೆನಪಿಸಿಕೊಂಡುದು ಒಂದು ಅರ್ಥವಾದರೆ ಅದು ನೆನೆದು ಮೊಳಕೆಯೊಡೆಯುವುದು ಕಾವ್ಯಸೃಷ್ಟಿಯನ್ನು ಸೂಚಿಸುತ್ತದೆ. ಹೀಗಾಗಿ ಈ 'ಸಖೀಗೀತ' ಕಾವ್ಯದ ಹುಟ್ಟು ಹೊಸತಾಗುತ್ತದೆ. ಆ

ದಂಪತಿಗಳು ಸುಖ-ದುಃಖದಲ್ಲಿ ಸಮಭಾಗಿಗಳಾದವರು ಮತ್ತು ಅದರಲ್ಲಿಯೇ ಮುಕ್ತಭಾವವನ್ನು ಅನುಭವಿಸಿದವರು. ಆದಕಾರಣ ಕವಿ ನುಡಿಯುತ್ತಾರೆ:

'ಸುಖ ದುಃಖ ಸಂಗಮವಾದ ಹೃದ್ರಂಗವು
ಪಾವನವೆಂಬೆನು ಯಾವಾಗಲು'

ಕವಿಯು ನೆನಪಿನ ದೋಣಿಯಲ್ಲಿ ಸಾಗುತ್ತ ಮನಸ್ಸಿನ ಅಂತರ್ಯಾನದಲ್ಲಿ ಸುಖಿಸುತ್ತ ಆ ಆಳವನ್ನು ಸ್ಪರ್ಶಿಸಿದಂತೆ 'ಮುತ್ತಿನ ತವರ್ಮನೆ ಮುಟ್ಟನು ಮುಳುಗೋಣ ಬಾ' ಎಂದಿದ್ದಾರೆ. ಕಲ್ಪನೆಯ ಲಹರಿಯಲ್ಲಿ ಈಸಾಡುತ್ತಿದ್ದರೂ ವಾಸ್ತವದ ಪರಿಜ್ಞಾನವಿರುವ ಕಾರಣ ನುಡಿಯುತ್ತಾರೆ:

'ತಾಂಡವ ನಡೆಸಿದ ಝಂಝಾವಾತದ
ಕಾಲಿನ ಹುಲುಗೆಜ್ಜೆ ನಾವಾಗಿರೆ.'

ಮಳೆಯೊಡನೆ ಬೀಸುವ ಭೀಕರ ಬಿರುಗಾಳಿಯನ್ನು ಝಂಝಾವಾತ ಎನ್ನುವರು. ಈ ಪ್ರತಿಮೆ ಅವರ ಜೀವನದ ಘೋರತೆಯನ್ನು ಧ್ವನಿಸುತ್ತದೆ. ಕಿವಿಗಡಚಿಕ್ಕುವ ಶಬ್ದದ - ಕರಡಿಮಜಲಿನ ಶಬ್ದವನ್ನು ಮೀರಿಸುವ ಅದೇ ಬಗೆಯ ಕುಣಿತ - ಝಂಝಾವಾತ. ಆ ಕುಣಿತದವರ ಹೆಜ್ಜೆ ಗೆಜ್ಜೆಯ ನುಲಿಯು ಆ ಘೋರ ಶಬ್ದದ ಮೊರೆತದಲ್ಲಿ ತನ್ನ ಅಸ್ತಿತ್ವವನ್ನೇ ಕಳೆದುಕೊಂಡಂತಾಗಿರುತ್ತದೆ. ಅಂತಹ ಹುಲುಗೆಜ್ಜೆ ನಾವು ಎಂದು ಕವಿ ಬೇಂದ್ರೆಯವರು ಈ ನಾದವಿಲ್ಲದ ಘೋರ ಶಬ್ದಮಯ ಜಗತ್ತಿನಲ್ಲಿ ಕಾವ್ಯದ ದನಿಯಿದ್ದು, ತಮ್ಮಂತಹ ಸಾಮಾನ್ಯ ಜನರ ಬದುಕು ಎಷ್ಟು ದಾರುಣ ಎಂದು ಹೇಳುತ್ತ; ಆದರೂ ತಮಗೂ ದನಿ ಇದೆ ಎಂದು ಹಾಡಲು ತೊಡಗಿ ಸಖಿಯನ್ನು ಕೇಳುತ್ತಾರೆ:

'ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ'!

**೧೯೧೯ ರಿಂದ ೧೯೨೪**

ಬೇಂದ್ರೆಯವರ 'ಸಖೀಗೀತ' ಪ್ರಾರಂಭವಾಗಿರುವ ವರ್ಷ ೧೯೧೯. ಅದು ಬೇಂದ್ರೆಯವರು ಲಕ್ಷ್ಮೀಬಾಯಿಯವರೊಡನೆ ಹುಬ್ಬಳ್ಳಿಯಲ್ಲಿ ವಿವಾಹವಾದ ವರ್ಷ. ಅಂದಿನ ಸಖ ಸಖಿಯ ಚಿತ್ರಣವನ್ನು ನೀಡುತ್ತ ವಾಮನ ಬೇಂದ್ರೆಯವರು "ನನ್ನ ತಾಯಿಯವರ ವಿವಾಹವಾದಾಗ ಅವರಿಗಿನ್ನೂ ಹದಿಮೂರು ವರ್ಷ; ತಂದೆಯವರಿಗೆ ಇಪ್ಪತ್ಮೂರು. ಆಸ್ತಿ, ಪಾಸ್ತಿ ಹೊಲಮನೆ, ಆಪ್ತೇಷ್ಟರುಗಳಿಂದ ಸಮೃದ್ಧ ಮನೆತನಕ್ಕೆ ಸೇರಿದ ತಾಯಿ ನಾಲ್ಕು ವರ್ಷ ಪ್ರಾಥಮಿಕ ಶಿಕ್ಷಣ ಮಾತ್ರ ಪೂರಯಿಸಿದ್ದರಾದರೆ ತಂದೆಯವರಾಗಲೆ ಪದವೀಧರ. ಉದಿತೋದಿತ ಕವಿ. ಆದರೆ ಅವರು ಬೆಳೆದ ವಾತಾವರಣ ಮಾತ್ರ ಭಿನ್ನ. ಮನೆಯಲ್ಲಿ ತಾಯಿ ಮತ್ತು ಒಬ್ಬ ತಮ್ಮನನ್ನು ಬಿಟ್ಟು ಮತ್ತಾರೂ ಇರಲಿಲ್ಲ"[30] ಎಂದು ಹೇಳಿದ್ದಾರೆ. ಇದನ್ನು ಓದಿದಾಗ ನಮಗೆ ಎರಡು ವ್ಯಕ್ತಿಗಳ ಚಿತ್ರಣ ಕಂಡುಬರುತ್ತದೆ. ಒಂದು - ನಮಗೆ ಈಗಾಗಲೇ ಪರಿಚಯವಾದ ಬೇಂದ್ರೆಯವರು ಜೀವನದ ನೋವು ಸಾವನ್ನುಂಡು ಬೆಳೆಯುತ್ತ ಪ್ರೌಢರಾದವರು; ಇನ್ನೊಂದು ವಧು ಲಕ್ಷ್ಮೀಬಾಯಿ ಸಮೃದ್ಧಿಯ ತವರುಮನೆಯಿಂದ ಸಮೃದ್ಧಿಯನ್ನರಸುತ್ತ ಗಂಡನ ಮನೆಗೆ ಬಂದವರು. ಒಂದುಕಡೆ ಪದವೀಧರನಾಗಿ ಕವಿ ಎಂಬ ಸಾಮಾಜಿಕ ಮಾನ್ಯತೆ ಪಡೆದ ಪ್ರೌಢವಯಸ್ಕ, ಮತ್ತೊಂದು ಕಡೆ ಪ್ರೈಮರಿ ವಿದ್ಯಾಭ್ಯಾಸದ, ರೈತಾಪಿ ಸಮಾಜದ ಅರಿವಿದ್ದ ಮುಗ್ಧ ಹೆಣ್ಣು. ಈ ಹಿನ್ನೆಲೆಯಲ್ಲಿ ಸಖೀಗೀತದ ನಾಯಕ ನಾಯಿಕೆಯರು ಬದುಕನ್ನು ಗ್ರಹಿಸುವಲ್ಲಿ ತಮ್ಮದೇ ಆದ ಅಂತರವನ್ನಿಟ್ಟುಕೊಂಡು ರಸದ ಹುಡುಕಾಟ ನಡೆಸಿದ ಮೊದಲ ಘಟ್ಟ ಪರಿಚಯವಾಗುತ್ತದೆ.

ಈ ಕಾವ್ಯದಲ್ಲಿ ಬೇಂದ್ರೆಯವರು ವಿವಾಹ ದಿಬ್ಬಣವನ್ನು ಕಾವ್ಯಮಯವಾಗಿ ವರ್ಣಿಸುತ್ತ ತನ್ನ ಸಖಿಯನ್ನು 'ಅಂತಃಪಟದಾಚೆ ವಿಧಿ ತಂದ ವಧು ನೀನು | ಮಾಲೆಯ ಸಾವರಿಸಿ ನಿಂತಿದ್ದೀಯೆ' ಎಂದು ಬಣ್ಣಿಸಿ ಅವಳನ್ನು 'ವಿಧಿ ತಂದ ವಧು' ಎಂದಿದ್ದಾರೆ. ಅಕ್ಕಲಕೋಟ ಮಹಾರಾಜರ ಆದೇಶವನ್ನು ಅನುಸರಿಸಿ ಅಂಬಿಕೆ ಸೊಸೆಯನ್ನು ಆರಿಸಿದ್ದರು. ಆದುದರಿಂದ ಬೇಂದ್ರೆಯವರು 'ವಿಧಿ ತಂದ ವಧು' ಎಂಬುದಾಗಿ ಸಂಬೋಧಿಸಿದ್ದಾರೆ.

'ಆಟದ ಕನ್ನಿಕೆ ಮಂಗಳ ಲಗ್ನಕೆ
ಮಾಲೆಯನ್ನಿಕ್ಕುತ ಮಡದಿಯಾದೆ,
ನಾಟಿಸಿ ಕಣ್ಣೋಟ ಸೋಕಿಸಿ ಕೈ ಬೆರಳು
ಮರವಟ್ಟ ಮನ-ಬನ ಚಿಗುರಿಸಿದೆ'

ಎಂದು ಹೇಳಿರುವಲ್ಲಿ ಅವಳ ಚಿಕ್ಕ ವಯಸ್ಸು, ಮುಗ್ಧತೆ ಮತ್ತು ಅವಳ ಸ್ಪರ್ಶ ಅವನಲ್ಲಿ ಉಂಟುಮಾಡಿದ ರೋಮಾಂಚನ - ಅವನಲ್ಲುಂಟಾದ ಸೃಜನ ಶಕ್ತಿಯ ಚೇತರಿಕೆಯನ್ನು ಸೂಚಿಸುತ್ತದೆ.

ವಿವಾಹದ ನಂತರ ಪತಿ ಪತ್ನಿಯರ ಪ್ರಣಯ ಅವರು ಪಟ್ಟ ಸಂತಸ ಪದಪದದಲ್ಲಿ ಹೊಗರನ್ನು ಹೊಂದಿದಂತೆ ವರ್ಣಿತವಾಗಿದೆ:

'ನೀನು ದೊಡ್ಡವಳಾದೆ ಮೈಸಲಿಗೆ ಬೆಳೆಸಿದೆ
ಏತಾಂತಕೆಳೆಸಿದೆ ಎಳೆ - ಕೆಳದಿಯೆ
ಏನು ಸಂಭ್ರಮವದು ! ಹರೆಯದ ಹಬ್ಬವು
ಕನಸು ಮನಸೂ ಹೆಣೆದು ಬೆಳೆಬೆಳೆದೆವೇ.'

ಇದರಲ್ಲಿಯ ಎರಡನೆಯ ಸಾಲು ಅವಳು ಅವನನ್ನು ಸೆಳೆದ ರೀತಿ ಮಾತಿನಿಂದೊಡಗೂಡಿದ ಆಕರ್ಷಣೆಯಾಗಿದೆ. ಜೊತೆಗೆ ಅವಳು ಎಳೆಯ ಸ್ನೇಹಿತೆ ಎಂಬುದನ್ನು ಧ್ವನಿಸುತ್ತದೆ. 'ಳ'ಕಾರದ ಒಳಪ್ರಾಸ ಸೆಳೆತವನ್ನು ಸ್ಪಂದಿಸುತ್ತದೆ. ಆತ ಆಕೆಯನ್ನು ಆಸ್ವಾದಿಸಿದ ರೀತಿಯು 'ನಿಂತ ನಿಲುವೆಲ್ಲವೂ ತ್ರಿಭಂಗಿಯೆ!' ಎಂಬ ಸಾಲಿನಲ್ಲಿದೆ. 'ತ್ರಿಭಂಗಿ' ಎಂಬ ಶಬ್ದ ಶಿಲ್ಪಶಾಸ್ತ್ರದಲ್ಲಿ ಸೌಂದರ್ಯಸೂಚಕ. ಅದು ಯೌವನದ ಆಟದ ಕಾಲ. ಆದುದರಿಂದ ಆ ಕಾಲ ಜಾರಿದ ರೀತಿಯನ್ನು ಬೇಂದ್ರೆ ಸವಿದ ಬಾಲ್ಯದ ಶಿಸ್ತಿನ ಆಟದ ತನ್ಮಯತೆಯ ನೆನಪನ್ನು ತರುತ್ತದೆ:

'ಹಗಲೆಲ್ಲೊ ಹಾರಿದವು ಇರುಳೆಲ್ಲ ಜಾರಿದವು
ಋತು ನಿದ್ದೆಯಾಡಿದವು ಬಗುರೆಯೊಲೇ'

ಅದರ ಫಲ 'ನನೆ ಕೊನೆಕಾತಿತು ಅತ್ತೆಯ ಸೊಸೆಮುದ್ದು| ಚೊಚ್ಚಿಲ ಬಸಿರಿ ನೀ ಎದೆ ತೆರೆದೆ|'

ಸಖಿ ಹೆತ್ತ ಮಗು (ಕ್ಷೇಮೇಂದ್ರ) ಹೆಚ್ಚು ದಿನ ಉಳಿಯದೆ ಸತ್ತಾಗ ಸಖಿಗೆ ಬದುಕಿನ ಕ್ರೂರತೆ ಪರಿಚಯವಾಗುತ್ತದೆ. ಆಗ ಅವರಿಬ್ಬರೂ ನೊಂದ ರೀತಿ :

'ಬೆರಗಾದೆ ಬೆಪ್ಪಾದೆ ನಮ್ಮಿಬ್ಬರ ಅಳಲು
ಮೌನ ಮೀಟಿದ ಹಾಗೆ ನರಳುತಿರೆ'

ಎಂಬಲ್ಲಿ ದಂಪತಿಗಳ ಮೌನದ ಮೊದಲ ಪರಿಚಯವಾಗುತ್ತದೆ. ಅವಳ ನೋವೆಲ್ಲ ಮೌನವಾಗುತ್ತ ಸಾಗಿ, ಮುಂದೆ ಮೌನವೇ ಅವಳ ಪ್ರತಿಮೆಯಾಗುತ್ತದೆ.

ಕಾಲ ಸಾಗುತ್ತಿದೆ ಅನ್ನುವಷ್ಟರಲ್ಲಿ ಮರುಚಲ ಬಸುರಿಯಾಗಿ ಅತ್ತೆಗೆ ಅವಳು ಪ್ರಿಯಳಾಗುತ್ತ

ಮನೆಯ ಜ್ಯೋತಿಯನ್ನು ಬೆಳಗಿಸುವವಳಾದಳು ಎನ್ನುವ ಸಂತಸದ ದಿನಗಳಲ್ಲಿಯೇ - ಅವರಿಗೆ ಆಸರೆಯಾಗಿದ್ದ ತಾಯಿ ಅಂಬವ್ವ ತೀರಿಕೊಳ್ಳುತ್ತಾಳೆ. ಅದನ್ನು ಕವಿ:

'ಕನಸಿಗು ಹೊಳೆಯದ ಬರಸಿಡಿಲೆರಗಿತು
ತಾಯಿ-ಗಿಡವು ಮಾಯವಾಯಿತೆಲೇ'

ಎಂದಿದ್ದಾರೆ. ಆ ತಾಯಿಯ ಅಪಾರ ಒಲವನ್ನು ನಾವು ಈಗಾಗಲೇ 'ತಾಯಿ'ಯ ವಿಭಾಗದಲ್ಲಿ ಚೆನ್ನಾಗಿ ತಿಳಿದಿದ್ದೇವೆ. ತಾಯಿಯ ಮರಣದ ನಂತರ ಕವಿ ತಾನು ಪ್ರೌಢನಾದೆ ಎಂದು ಒಂದು ಕಡೆ ಹೇಳಿಕೊಂಡಿದ್ದಾರೆ. ಅಲ್ಲಿಂದಾಚೆಗೆ ಅವರು ತಾಯಿಯ ಪ್ರೀತಿ ಮಮತೆಯನ್ನು ಸಖಿಯಲ್ಲಿ ಕಾಣಲು ತೊಡಗುತ್ತಾರೆ. ಮಡದಿಯಲ್ಲಿ ತಾಯಿತನದ ತಾತ್ತ್ವಿಕತೆ ಕಾಣುತ್ತಾರೆ. ಆಕೆಯನ್ನು 'ಕೂಸಿನ ಹೊಸ ತಾಯಿ' ಎಂದು ಕರೆದು ಅವರು ಅವಳಲ್ಲಿ ಕಂಡ ತಾಯಿಯನ್ನು ಕಾವ್ಯದಲ್ಲಿ ಪರಿಚಯಿಸುತ್ತಾರೆ.

**೧೯೨೫ ರಿಂದ ೧೯೨೬**

ತಾಯಿಯನ್ನು ಕಳೆದುಕೊಂಡ ಬೇಂದ್ರೆಯವರು 'ನೆಲೆ ತಪ್ಪಿದ ಹಕ್ಕಿ ಅಲೆವಂತೆ ಮುಗಿಲಲಿ | ಹತ್ತು ದಿಕ್ಕಿಗೆ ನಾನು ಹಾರಾಡಿದೆ' ಎಂದು ಹೇಳಿರುವುದು ಸತ್ಯ ಘಟನೆಯಂತೆ ತನ್ನ ರೆಕ್ಕೆ ಬಿಚ್ಚಿಕೊಳ್ಳುತ್ತ ಸಖಿ-ಸಖಿಯರನ್ನು ನೆಲೆಗೆಡಿಸಿದ್ದು ಕಾಣುತ್ತದೆ. ತಾಯಿ ಸತ್ತ ವರ್ಷವೇ ಹುಟ್ಟಿದ ಎರಡನೆಯ ಮಗ ರಾಮು, ಕವಿ ಕವಿಪತ್ನಿ ಇಷ್ಟೇ ಜನ ಇದ್ದರೂ ಜೀವನದಲ್ಲಿ ಸಿಟ್ಟು ಸೆಡವು ಉಂಟಾಗಲು ಕಾರಣವಾದುದು ಅವರ - ಅತಂತ್ರ ಆರ್ಥಿಕ ಸ್ಥಿತಿ ಎಂಬುದು ಈ ನುಡಿಗಳಿಂದ ಸ್ಪಷ್ಟವಾಗುತ್ತದೆ:

'ಬಾಳಿನ ಬೆಂಕಿಗೆ ಮೈ ಬೆಂದು ಮನ ನೊಂದು
ಬಲುಮೆಯ ಒಲುಮೆಯ ಕುಲುಮೆಯಲೇ
ತಾಳಿಕೆ ಬರುವಂಥ ಉಕ್ಕಾಗಿ ಬರುತಿದೆ
ಮುಕ್ಕಾದ ಮೊನೆಯೀಗ ಮಸೆಯುತಿರೆ.'

ಸಖಿ ಮತ್ತೆ ಬಸುರಿಯಾಗಿ ೧೯೨೭ ರಲ್ಲಿ ಮೂರನೆಯ ಮಗ ಭಾಸ್ಕರ ಹುಟ್ಟಿದ್ದು, ತೀರಿದ್ದು ಅವರನ್ನು 'ಈಗಿತ್ತು ಈಗಿಲ್ಲ ಎಂಬೀ ಬಾಳೋ ಹಾಳೊ' ಎಂದು ದುಃಖಿಗಳನ್ನಾಗಿಸಿರುವುದು ಕಂಡುಬಂದಿದೆ. ಜೀವನದಲ್ಲಿ ಅಸ್ಥಿರತೆ ಆವರಿಸಿ 'ಬಿದ್ದ ಕಾಲಕ್ಕೆ ಹಾದಿ ಹಿಡಿದದ್ದೆ ನಡುಬೀದಿ' ಎನ್ನುವಂತೆ ಅವರು ದಿನಗಳನ್ನು ನೂಕಿದ್ದು ಅವರ ದಾರುಣ ಬದುಕನ್ನು ಸಾರುತ್ತದೆ. ಆದರೆ ಕವಿಗೆ 'ಸ್ವಧರ್ಮ' ಪತ್ರಿಕೆ ಸಂಪಾದನೆ, ನಾಡಹಬ್ಬ ಆಚರಣೆಯ ಕನ್ನಡದ ಹುಚ್ಚು. ಅದನ್ನು ಕವಿ:

'ನಿನ್ನೆಡೆ ಕರೆಯುವಿ ನೀ ನನ್ನ
ಮತ್ತೆನ್ನ ಕನ್ನಡ ಕರೆವುದು ತನ್ನೆಡೆಗೆ
ಚಿನ್ನಾಟ ನನಗಿದು ನಿನಗದು ಅಗಲಿಕೆ
ಮೌನದರಣ್ಯಕೆ ನೀ ಬೆದರಿದೇ'

ಎಂದು ತನ್ನ ಕನ್ನಡ ಪ್ರೀತಿಯನ್ನು, ಅದನ್ನೇ ಹೆಚ್ಚಾಗಿ ಹಚ್ಚಿಕೊಂಡದ್ದನ್ನು ತಿಳಿಸಿದ್ದಾರೆ. ಈ ತೀವ್ರ ಕನ್ನಡದ ಹಂಬಲವನ್ನು ಕಂಡಾಗ ಶಂಕರ ಮೊಕಾಶಿ ಪುಣೇಕರ ಅವರು ಹೇಳಿರುವ "ಬೇಂದ್ರೆ ಮಾತೃಭಾಷೆ ಮರಾಠಿಯಾದರೂ 'ಅಂಬಿಕಾತನಯದತ್ತ'ನ ಮಾತೃಭಾಷೆ ಕನ್ನಡ. ಅವನು ಕನ್ನಡಿಗ. ಇದರರ್ಥ ಬಲ್ಲವರೇ ಬಲ್ಲರು"[31] ಎಂಬ ನುಡಿಯ ಸತ್ಯ 'ಬೆಳಕಿಗಿಂತ ಬೆಳ್ಳಗೆ' ಗೋಚರವಾಗುತ್ತದೆ.

ಕವಿ ಹೀಗೆ ಸಾರ್ವಜನಿಕ ವ್ಯಕ್ತಿಯಾಗಿ ಕನ್ನಡದ ಕಾಯಕದಲ್ಲಿ ತನ್ನನ್ನು ತೊಡಗಿಸಿಕೊಂಡಾಗ ಕವಿಪತ್ನಿಗೆ ಬದುಕು ನೀರಸವಾಗುತ್ತದೆ. ಅದನ್ನು ಕವಿಯು 'ಹಸುಮಗು ಹಾಲಿನ ರುಚಿ ಸಾಕು ಎನುವಂತೆ| ಸಪ್ಪನೆಯ ಬದುಕಿಗೆ ನೀ ಹೇಸಿದೆ'ಎಂದಿದ್ದಾರೆ. ಆ ಸ್ಥಿತಿಯನ್ನು ಕಲ್ಪಿಸಿಕೊಂಡಾಗ ಅದೇ ಕಾಲಘಟ್ಟದಲ್ಲಿ 'ಬಿಸಿಲುಗುದುರೆ' ಕವನ ರಚಿಸಿರಬೇಕು ಎನಿಸುತ್ತದೆ. ಇದು ಕಳೆದುಹೋದ ಸುಂದರ ಕಾಲವನ್ನು ನೆನೆಸಿ ಹಾಡಿದ ಹಾಡು:

'ಹಳ್ಳsದ ದಂಡ್ಯಾಗ ಮೊದಲಿಗೆ ಕಂಡಾಗ
ಏನೊಂದು ನಗಿ ಇತ್ತs
ಏನೊಂದು ನಗಿ ಇತ್ತ ಏಸೊಂದು ನಗಿ ಇತ್ತ
ಏರಿಕಿ ನಗಿ ಇತ್ತs
ನಕ್ಕೊಮ್ಮೆ ಹೇಳ ಚೆನ್ನಿ, ಆ ನಗಿ ಇತ್ತಿತ್ತ
ಹೋಗೇತಿ ಎತ್ತೆತ್ತs
ಬಡತನದ ಬಲಿಯಾಗ ಕರುಳಿನ ಕೊಲಿಯಾಗ
ಬಾಳ್ವಿಯ ಒಲಿಮ್ಯಾಗ
ಸುಟ್ಟು ಹಪ್ಪಳದ್ಹಾಂಗ ಸೊರಗಿದಿ ಸೊಪ್ಹಾಂಗ
ಬಂತಂತ ಮುಪ್ಪು ಬ್ಯಾಗ!'[32]

ಬಡತನಕ್ಕೆ ಬಲಿಯಾಗಿ, ಕರುಳಕುಡಿಗಳ ಸಾವನ್ನು ಕಂಡು ನೋಯುತ್ತ ಬಾಳ್ವೆಯ ಒಲೆಯ ಮೇಲೆ ಸುಟ್ಟ ಹಪ್ಪಳದ ಹಾಗೆ ಸೊರಗಿದ ಪ್ರತಿಮೆಯಿಂದ ತನ್ನ ಸಖಿಯನ್ನು ಬಣ್ಣಿಸಿದ ಕವಿ; ಅದು ಸಾರ್ವಜನಿಕವಾಗಿ ಸಾರ್ವಕಾಲಿಕವಾಗುವಂತೆ ಮಾಡಿ, ಈ ಲೇಖಕನ ತಾಯಿ ಪಟ್ಟ ನೋವನ್ನು ನೆನಪಿಸಿ ಮನಸ್ಸನ್ನು ತಲ್ಲಣಿಸಿದೆ. ಈ ಕವಿತೆಯನ್ನು ಕುರಿತು ಜಿ. ಎಸ್. ಆಮೂರ ಅವರು 'ಜಾನಪದ ಅಭಿವ್ಯಕ್ತಿ ಕ್ರಮಗಳಲ್ಲಿಯೇ ಬೇಂದ್ರೆಯವರು ಎಂತಹ ಸಂಕೀರ್ಣತೆಯನ್ನು ಸಾಧಿಸಿದರು ಎನ್ನುವುದಕ್ಕೆ ಈ ಕವಿತೆ ಒಂದು ಒಳ್ಳೆಯ ನಿದರ್ಶನ'[33] ಎಂದಿದ್ದಾರೆ.

**೧೯೨೮ ರಿಂದ ೧೯೩೦**

'ಸೊಗಕೊಂದು ಠಾವುಂಟು ಋತು ಬದಲಾದರೇ -
ನೆಮಗೆಮ್ಮ ಬಿತ್ತರದ ಭೂಮಿಯೊಳೆ.'

ಎಂದು ತನಗೆ ಆಸರೆಯಾದ ಜೀವಿಗಳನ್ನು ನೆನೆಯುತ್ತ ತಾನು 'ಉಪನಿಷದ್‌ರಹಸ್ಯ'ವನ್ನು ಅನುವಾದಿಸಿ ಹರ್ಷಗೊಂಡ ಚಿಂತನೆಯನ್ನು ಇಲ್ಲಿ ತಾನೂ ಹರ್ಷಗೊಳ್ಳಲು ಸಾಧ್ಯವಾಯಿತು ಎಂದಿದ್ದಾರೆ. ಆ ಹರ್ಷದ ಫಲವೆಂಬಂತೆ ೧೯೨೮ ರಲ್ಲಿ ಮಗ ಪಾಂಡುರಂಗ ಜನಿಸುವನು. ೧೯೨೯ ರಲ್ಲಿ ಅವರ ಚಿಕ್ಕಪ್ಪನವರಿಂದ 'ಮಲೆನಾಡ ಸೆರಗಿನ ನೆರೆಗಿದ್ದ ಮನೆಯೊಂದು| ಮಮತೆಯ ಕುರುಹಾಗಿ ತಾ ದೊರಕಿತು|' ಅವರು ಬೆಳಗಾವಿ ಸಾಹಿತ್ಯ ಸಮ್ಮೇಳನಕ್ಕೆ ಹೋಗಿ ಅಲ್ಲಿ 'ಹಕ್ಕಿ ಹಾರುತಿದೆ' ಕವನವನ್ನು ಹಾಡಿ ನಾಡಿಗರನ್ನು ಮೆಚ್ಚಿಸಿ ಯಶಸ್ವಿಯಾದರು. 'ಜಯಕರ್ನಾಟಕ' ಪತ್ರಿಕೆಯನ್ನು ಗೆಳೆಯರ ಗುಂಪಿನಿಂದ ನಡೆಸತೊಡಗಿದರು. ಈ ಕಾಲದಲ್ಲಿ ಅವರು ತನ್ನ ಸಖಿಯೂ ಸಂತೋಷವಾಗಿರುವುದನ್ನು ಸೂಚಿಸುವಂತೆ :

'ಸುಖ ತಾನು ಬರುವಾಗ ಗುಳೆ ಎತ್ತಿ ಬರುವುದು
ಒಂದಲ್ಲ ಎರಡಲ್ಲ, ಪರಿವಾರವೆ ;

ಕಂದನ ಕಿರಿ ಕಿರಿ ಕಿಲಿ ಕಿಲಿ ನಗುವಾಗ
ಹೊಸ ಮನೆ ಗಮಗಮ ಎನ್ನುತಿರೆ'

ಎಂಬ ಹರ್ಷವನ್ನು ವ್ಯಕ್ತಪಡಿಸಿದ್ದಾರೆ. ಇದು ಆ ದಂಪತಿಗಳ ಸಂತಸದ ರಸಮಯ ಕಾಲವಾಗಿ ಅವರು ವಾಸಿಸುವ 'ಸಾಧನಕೇರಿ' ಮನೆಗೆ ಪ್ರಕೃತಿಯೆ ನೆರೆಹೊರೆಯಾದುದು ಕವಿಯ ಆಹ್ಲಾದಮಯ ನೆಲೆಯನ್ನು ಪ್ರತಿಮಿಸುತ್ತದೆ:

'ಅಲ್ಲಿರುತಿರಲಾಗಿ ಸಹಜವಾಗಿಯೆ ನನ್ನ
ದೃಷ್ಟಿಯು ನೆಟ್ಟಿತು ಸೃಷ್ಟಿಯೊಳು
ಮಳೆ ಯಾಕೆ ಚಳಿ ಯಾಕೆ ಭೂಮಿಯ ಬೆಳೆಯಾಕೆ
ಬಿಸಿಲಾಕೆ ನನ್ನಾಕೆ ನೆರೆಯಾದರು.
ಇರುಳವಳು ಹಗಲವಳು ಬೆಳಕು-ನೆಳಲಿನವಳು
ಬೆಳದಿಂಗಳವಳು ನಮ್ಮವಳಾದಳು.'

ಅಂತಹ ಸಮ್ಮೋಹಕ ನಿಸರ್ಗದಲ್ಲಿ, ಆ ಪ್ರಕೃತಿಯೊಡನೆ ಸಂವಾದದಂತೆ ಕಾವ್ಯಸೃಷ್ಟಿಸಿದ ಕಾಲವನ್ನು, ಆ ಸೃಜನಶೀಲ ಮನವನ್ನು ಕವಿಯು :

'ಛಂದೋಗತಿಯ ಚೆಂದ, ತಾಳ – ಲಯದಾನಂದ
ಸ್ವಚ್ಛಂದ ಬಂಧವ ಕಲಿಸಿದವು'

ಎಂದಿದ್ದಾರೆ. ಅವರ ಗೆಳೆಯರ ಬಳಗದ ಉಚ್ಛ್ರಾಯ ಕಾಲ ಅದಾಗಿ, ಗೆಳೆಯರ ಗುಂಪಿನಿಂದ 'ಹಕ್ಕಿ ಹಾರುತಿದೆ' ಕವನ ಸಂಕಲನ ಪ್ರಕಟಿಸಿ, 'ಗರತಿ ಹಾಡು' ಜನಪದ ಕಾವ್ಯಸಂಗ್ರಹಕ್ಕೆ ಹಸ್ತಪ್ರತಿ ಸಿದ್ಧಪಡಿಸಿದರು. ಆದುದರಿಂದ ಅವರು:

'ಜೀವದಾಸೆಗಳೆಲ್ಲ ಹೊಸೆದು ಹುರಿಗೊಳ್ಳುತ
ನಮ್ಮ ಮನೋರಥವೆಳೆಯುತಿರೆ
ಗರುಡನ ಹಕ್ಕಿಯು ಗರಿಗೆದರಿ ಹಾರಿತು
ಬಾನಾಗ ಕರೆದಿತು ಬರಿ ಹಾಲನೆ '

ಎಂದು ಹಾಡಿದ್ದಾರೆ. ಕವಿಯಾಗಿ ಅವರು ಉತ್ತಮ ಕಾವ್ಯವನ್ನು ರಚಿಸಿ ಕನ್ನಡ ಕಾವ್ಯಗರುಡನಾಗಿ ನಾಡಿನಲ್ಲೆಲ್ಲ ಹಾರಾಡಿದ ಕಾಲ ಅದು. ಆ ಸಂತಸ ಕಾಲದಲ್ಲಿ ಸಖೀಗೀತದಲ್ಲಿ ಋತುಗಳನ್ನು ವೈವಿಧ್ಯಮಯವಾಗಿ ಬಣ್ಣಿಸಿದ್ದಾರೆ. ಬೇಸಿಗೆಯನ್ನು : 'ಬೇಸಿಗೆಯಟ್ಟಲು ಬೀಸಣಿಗೆ ಬೀಸಾಡಿ | ಮರುಳಾಟದಲಿ ಜನ ತೊಳಲುತಿರೆ' ಎಂದು; ಆಷಾಢವನ್ನು 'ಆಷಾಢದ ಮುಗಿಲು ಬೀಸಾಡಿ ಬಂದವು | ಈಸಾಡಿ ಬಂದಂಥ ಆನೆಗಳೇ' ಎಂದು; ಶ್ರಾವಣವನ್ನು 'ತಿರುಳೆತ್ತಿ ಹುರುಳೆತ್ತಿ ತೆನೆತೆನೆ ತೋರುವದು | ಬೆಂಡಿಗು ಸವಿಯಿತ್ತು ನೆಲ ಹೊಲವು' ಎಂದು; ಚಳಿಗಾಲವನ್ನು 'ಕಾಲ್ಬಿದ್ದು ಕೈಹಿಡಿದು ಮುತ್ತಿಟ್ಟು ಮುಗಿಬಿದ್ದು | ಮೈ ಏರಿ ಮೈ ಹೊಕ್ಕು ಮಾಗಿಬರೆ' ಎಂದು ಮನದುಂಬಿ ಬಣ್ಣಿಸಿದ್ದಾರೆ. ಆ ಸಂತಸದ ಕ್ಷಣದಲ್ಲಿ ಸಖ ಸಖಿಯರು ರಸಾನಂದದಲ್ಲಿದ್ದರೆಂದು ಮತ್ತು ಕಾವ್ಯಸೃಷ್ಟಿ ತನ್ನ ಔನ್ನತ್ಯವನ್ನು ಮುಟ್ಟಿತ್ತೆಂದು ಕವಿ ಹೇಳಿಕೊಂಡಿದ್ದಾರೆ:

'ಪಾದ ಪದ್ಧತಿಯಲ್ಲಿ ಪದ ಕೂಡಿ ಬರುವಾಗ
ಯಾರಾರೆ ಗುರು - ಲಘು ಎಣಿಸುವರೆ?

ಯಾ ರಾಗವೆಂದರು ಯಾರಾಗ ಕೇಳುವರು
ಅನುರಾಗವನುರಣಿಸಿ ತಣಿಸುತಿರೆ?'
'ಕೊಟ್ಟಿದ್ದೆ ರೂಪವು ಇಟ್ಟಿದ್ದೆ ನಾಮವು
ಕಟ್ಟಿದ್ದೆ ಹುರುಳೆಂಬ ಮನದೊಳಿರೆ
ಬ್ರಹ್ಮ ಪಟ್ಟವನೇರಿ ರೂಪಕ ಶಕ್ತಿಯು
ಸೃಷ್ಟಿಯನರ್ಳೆದಿತು ದೃಷ್ಟಿಯೊಳೆ '

ಹೀಗೆ ನುಡಿಯುವಲ್ಲಿ ಕವಿ ಹೊಸ ಛಂದೋಲಯದಲ್ಲಿ ಕಾವ್ಯಪ್ರಯೋಗ ನಡೆಸಿ ಯಶಸ್ವಿಯಾಗಿ ಹರ್ಷಿತನಾಗಿರುವುದು ಕಂಡುಬಂದಿದೆ. ಆ ಆನಂದದ ಲಹರಿಗೆ ಕಾರಣವೆಂದರೆ ಕವಿಯ ಸಾಂಸಾರಿಕ ಸಮಸ್ಯೆ ಕಡಿಮೆಯಾಗಿ ಅವನು ಕಾವ್ಯಚಿಂತನೆಯನ್ನು ನಡೆಸಲು ಅನುಕೂಲ ವಾತಾವರಣ ಸೃಷ್ಟಿಯಾಗಿದ್ದುದು ಎಂದು ಕಂಡುಬರುತ್ತದೆ. ಅದನ್ನು ಕವಿ 'ಕಾದು ಕೆಂಪಾಗಿತ್ತು ದುಃಖದ ಕೆನೆ ಕೂಡ | ಮನೆ-ಮಠ ಮನ-ಮೈಗಳೆರೆ ಮರೆತಿರೆ' ಎಂದು ಹೇಳಿದ್ದಾರೆ. ವಿವಾಹದ ಸಂದರ್ಭದಲ್ಲಿ ತನ್ನ ಸಖಿಯನ್ನು ಬಣ್ಣಿಸಿದ್ದ ಕವಿ ಜೀವನದ ಜಂಜಾಟದಲ್ಲಿ, ದಾಂಪತ್ಯದ ಅನುಭವದ ಫಲವೆಂಬಂತೆ ಮತ್ತೆ ಅವಳ ಬಣ್ಣನೆಗೆ ತೊಡಗುತ್ತಾನೆ:

'ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ
ಕಣ್ಣಿಗು ಕಣ್ಣಾಗಿ ಒಳಗಿಹುದು
ರೂಪ-ಲಾವಣ್ಯಕೆ ಅಳೆಯಲು ಬಾರದು
ಅವುಗಳೆ ಇದರೊಂದು ಕಣವಿಹವು.'

ಈ ರೀತಿಯ ಅಪೂರ್ವ ಸೌಂದರ್ಯಕ್ಕೆ ಮನಸ್ಸು ಕೊಟ್ಟ ಕವಿ ಕವಿಪತ್ನಿಯನ್ನು '''ಕುಣಿಯೋಣು ಬಾ' ಎಂದು 'ಪ್ರಣಯದೋಲೆಯನೊಂದು | ಎದೆವಾತಿನಿಂದೆದೆಗೆ''' ಕಳುಹಿಸುತ್ತಾನೆ. ಆ 'ಕುಣಿಯೋಣು ಬಾರ' ಸಖ ಸಖಿಯನ್ನು ಕುಣಿಸಿದುದರ ಜೊತೆ ಇಡೀ ಕನ್ನಡಿಗರನ್ನು ಕುಣಿಸುತ್ತಾ ನಡೆದಿದೆ. ಅದರ ಆನಂದ ಲಹರಿ ಸದಾ ಹಸಿರಾಗಿದ್ದು ಕನ್ನಡಿಗರ ಹೃನ್ಮನವನ್ನು ಬೆಳಗುವ ಗೀತೆಯಾಗಿದೆ. ಬೇಂದ್ರೆಯವರು ಆ ಗೀತದಲ್ಲಿ :

'ಹದಿನಾಲ್ಕು ಲೋಕಕ್ಕೆ
ಚಿಮ್ಮಲಿ ಈ ಸುಖ
ಹಿಗ್ಗಲಿ ಸಿರಿಮುಖ || ಕುಣಿಯೋಣು ಬಾ'[33]

ಎಂದು ಹಾಡಿ ಎಲ್ಲ ಲೋಕಕ್ಕೂ ಕುಣಿತದ ಹಿಗ್ಗು ಚಿಮ್ಮಲಿ ಎಂದು ವಿಶ್ವದ ಆನಂದವನ್ನು ಆಶಿಸಿದ್ದಾರೆ.

೧೯೩೧ ರಿಂದ ೧೯೩೩

ಆ ಹಾಡಿನ ನಂತರ ಕಾವ್ಯದಲ್ಲಿ ಸಖಿ ಮೌನಿಯಾಗುವುದು ಮತ್ತು ಕವಿ ಮಾತಿಗೆಳೆಯುವುದು ಕಂಡಾಗ ಸಂಸಾರದಲ್ಲಿ ವಿರಸ ಇಣಿಕಿರುವುದು ಗೋಚರವಾಗುತ್ತದೆ. ಅವರು ಸಖಿಯನ್ನುದ್ದೇಶಿಸಿ -

'ಮಾತಿಗು ಮೌನಕು ಯಾತರ ಒಗೆತನ?
ನೀರಿಗು ಕಲ್ಲಿಗು ಏನು ಜತಿ?

☆ ☆

ಮಾತಿನಲ್ಲಿರುವಂಥ ಮೌನದ ಧ್ವನಿಯಿಂದ

ವಿಷ್ವಲತೆ ಬೆಳೆಯುವದಿಬ್ಬರಲಿ
ಇಬ್ಬರ ಮನವಾಗ ಇಬ್ಬಗೆಯಾಗುವುದು
ಒಬ್ಬಗೂ ಸುಖವಿಲ್ಲ ಬದುಕಿನಲಿ.'

ಎಂದು ಹೇಳಿರುವಲ್ಲಿ ಕವಿಯ 'ಗೆಳೆಯರ ಗುಂಪಿನ' ಕನಸು ಒಡೆಯುತ್ತ, ಕವಿಯು ನಿರುದ್ಯೋಗಿಯಾಗಿ ಮನೆಯ ಆರ್ಥಿಕ ಸ್ಥಿತಿ ಹದಗೆಟ್ಟಿರುವ ಸಾಧ್ಯತೆಯಿದೆ. ಈ ದಂಪತಿಗಳ ಮಾತು ಮೌನದ ಬಗ್ಗೆ ವಾಮನ ಬೇಂದ್ರೆಯವರು "ದತ್ತಾತ್ರೇಯ ಲಕ್ಷ್ಮೀಬಾಯಿ ದಾಂಪತ್ಯವೆಂದರೆ ಮಾತು-ಮೌನಗಳ ದಾಂಪತ್ಯವಾಗಿತ್ತು. ಮಾತು ಮತ್ತು ಮೌನ ವಿರುದ್ಧ ಪದಗಳಾಗಿ ಕಂಡರೂ ಅವು ಪರಸ್ಪರ ಪೋಷಕಶಕ್ತಿಗಳು. 'ಮಾತು ಮೌನದ ಪ್ರತಿಮೆ; ಮೌನ ಮಾತಿನ ದೈವ' ಎಂಬುದನ್ನು ಮರೆಯುವಂತಿಲ್ಲ ....... ನನ್ನ ತಂದೆ ತಾಯಿಗಳ ಸಂಬಂಧ ಮಾತು-ಮೌನಗಳ ಸಂಬಂಧದಂತಿತ್ತು ಎಂದೆ. ಇದಕ್ಕೆ ಅವರವರ ಹಿನ್ನೆಲೆಯೂ ಕಾರಣವಿರಬೇಕು. ಬೇಂದ್ರೆ ಅಪ್ಪಾಭಟ್ಟ (ನನ್ನ ಮುತ್ತಜ್ಜ)ರಂತಹ ಮಹಾನ್ ವೈದಿಕ ವಿದ್ವಾಂಸರ ಮನೆತನದಲ್ಲಿ ಹುಟ್ಟಿ ಬೆಳೆದ ನನ್ನ ತಂದೆ ಶಬ್ದಬ್ರಹ್ಮ. ಒಂದೊಂದು ಶಬ್ದದಲ್ಲೂ ಹಲವು ಅರ್ಥಗಳನ್ನು ಕಾಣಬಲ್ಲವರವರು. ವ್ಯಾವಹಾರಿಕ ಅರ್ಥದಲ್ಲಿ ತಾಯಿ ಅಶಿಕ್ಷಿತೆ - ಅವರ ಶಿಕ್ಷಣ ಬರೀ ಪ್ರಾಥಮಿಕ ನಾಲ್ಕೆತ್ತೆಗಳಿಗೇ ಸೀಮಿತವಾದುದು - ಆದರೆ ತುಂಬಿದ ಮನೆಯಲ್ಲಿ ಹುಟ್ಟಿ ಬೆಳೆದ ಕುಟುಂಬವತ್ಸಲೆ ಅವರು. ಮಾತಾಡುತ್ತಿರುವಾಗ ತಮ್ಮ ಮುಗ್ಧ ರೀತಿಯಲ್ಲಿ ಅವರೇನೋ ಒಂದು ಮಾತಾಡಿದಾಗ, ತಂದೆಯವರ ಮಾತಿನ ಜಾಲದಲ್ಲಿ ಅವರಾಡಿದ ಒಂದೊಂದು ಶಬ್ದವೂ ಅವರೆಂದೂ ನಿರೀಕ್ಷಿಸಿರದಿದ್ದಂಥ ಅದೆಷ್ಟೋ ಅರ್ಥಗಳನ್ನೂ ಅರ್ಥಛಾಯೆಗಳನ್ನೂ ಪಡೆಯುತ್ತಿತ್ತು. ತಾಯಿಯವರ ಮಾತು ಮೌನದಲ್ಲೇ ಹುದುಗಿ ಹೋಗುತ್ತಿತ್ತು. ಇಂಥ ಕೆಲ ಸಂದರ್ಭಗಳು ಒಮ್ಮೊಮ್ಮೆ ತುಸು ವಿರಸಕ್ಕೂ ಎಡೆಗೊಡುತ್ತಿರಬೇಕು"[34] ಎಂದು ಹೇಳಿದ್ದಾರೆ.

ಇದೇ ಕಾಲದಲ್ಲಿ ಬೇಂದ್ರೆಯವರು 'ನರಬಲಿ'ಕವನ ಬರೆದು ಹಿಂಡಲಗ ಜೇಲಿನಲ್ಲಿ ಮತ್ತು ಮುಗದ ಗ್ರಾಮದಲ್ಲಿ ನಜರಬಂದಿಯಾಗಬೇಕಾಯಿತು. ಜೀವನದಲ್ಲಿ ಹಲವಾರು ಆಸೆಗಳನ್ನು ಹೊತ್ತ ಹೆಣ್ಣು ಅದನ್ನು ಕೈಗೂಡಿಸಲಾಗದ ವಿದ್ಯಾವಂತ ಆದರ್ಶ ವ್ಯಕ್ತಿಯನ್ನು ಕಂಡು ವಿರಸಗೊಂಡದ್ದು ಸಹಜವೆನಿಸುತ್ತದೆ. ದಿನನಿತ್ಯದ ಜೀವನ ಹೆಣ್ಣಿಗೆ ಮುಖ್ಯವಾಗುತ್ತದೆ. ಆದರ್ಶದ ಕವಿಯು ಜೀವನವನ್ನು ತೂಗಿಸಲಾಗದೆ ಪಡುವ ಸೋಲು ಹೆಂಡತಿ ಮಕ್ಕಳ ಮೇಲೆ ತೀವ್ರ ಪರಿಣಾಮವನ್ನುಂಟುಮಾಡುತ್ತದೆ. ಅದು ಕವಿಗೂ ಗೊತ್ತಿದೆ. ಅವನು ಆತ್ಮಸಂಶೋಧನೆಗೆ ತೊಡಗುತ್ತಾನೆ:

'ಹರಿವ ನೀರಿನ ಮೇಲೆ ಹರಗೋಲ - ಮನೆ ಕಟ್ಟಿ
ಗೊತ್ತಿಲ್ಲವೆ ನಲ್ಲೆ ! ಹೊರಟಿಹೆವು?
ನೆಲವೆಂದು ಸ್ಥಿರವೆಂದು ಅಸ್ತಿವಾರವ ಹಾಕಿ
ನಾಡಾಡಿ ಜನ, ಮನೆ ಕಟ್ಟಿಹುದು.'

ಆದರೆ ಅವರಿಬ್ಬರಲ್ಲಿಯ ಬದುಕಿನ ಹಾಗೂ ಆದರ್ಶದ ಸಂಘರ್ಷ, ಪ್ರೇಮದ ಸಂಘರ್ಷ, ವೈಚಾರಿಕ ಸಂಘರ್ಷ ವಿರಸವನ್ನುಂಟು ಮಾಡಲು ಕಾರಣವಾಗಿದೆ. ಅದನ್ನು ಎದುರಿಸಲು ಅವರು ತೊಡಗಿ ಜೀವನದಲ್ಲಿ ಸಹನೆ, ತಾಳ್ಮೆ, ಮೌನ, ಧಾರ್ಮಿಕ ನಂಬಿಕೆ, ಪ್ರೀತಿಯನ್ನು ಅಳವಡಿಸಿಕೊಂಡು ಯಶಸ್ವಿಯಾದ ರೀತಿ ಅಚ್ಚರಿಯನ್ನುಂಟುಮಾಡುತ್ತದೆ. ಆ ವಿರಸದ ದಿನಗಳಲ್ಲಿ ಅವರು ಸಮತೋಲವನ್ನು ಕಾಯ್ದುಕೊಂಡ ರೀತಿಯನ್ನು ಕವಿ ಒಂದು ಅಪರೂಪ ಉಪಮೆಯಿಂದ :

'ತ್ರಾಸು-ತಕ್ಕಡಿ-ಮುಳ್ಳು ಏಕಾಗ್ರವಿರುವಂತೆ
ಧಾರಣೆಯಲಿ ಕೆಲದಿನ ಕಳೆದೆವೆ '

ಎಂದು ಚಿತ್ರಿಸಿದ್ದಾರೆ. ಆ ಬಗೆಯ ನಿಷ್ಠೆ, ಒಲವು ಧೈರ್ಯಗೆಡದ ಸಾಹಸ ಮನಸ್ಸು ವಿರಸವನ್ನು ಗೆಲ್ಲುತ್ತದೆ ಎಂದು ಹೇಳಿದ್ದಾರೆ. ಗಂಡ ಹೆಂಡತಿಯ ವಿರಸ ಮಕ್ಕಳ ಮೇಲೆ ಪ್ರಭಾವ ಬೀರುತ್ತದೆ. ಅವರು ಅಸಹಾಯಕರಾಗಿ ಬರಿ ಬದುಕನ್ನು ಅಂದರೆ ನಿರಾಶೆಯನ್ನುಣ್ಣುತ್ತಾರೆ ಎಂಬುದನ್ನು ಕವಿ:

'ಉರಿ ಮೋರೆ ಬಿರಿಗಣ್ಣು ಮನೆಯ ಹೊತ್ತಿಸುತಿರಲು
ಕಾಡ -ಬೇಗೆಗೆ ಸಿಕ್ಕ ಮರಿಗಳೊಲು
ಪಕ್ಕಗಳು ಬಲಿತಿಲ್ಲ, ಹಾರಿಕೆ ಕಲಿತಿಲ್ಲ
ಮುಗಿಲನ್ನೆ ಮೊರೆಹೊಕ್ಕು ನೋಡುವವು.'

ಎಂದು ನುಡಿದಿದ್ದಾರೆ. ಹೀಗೆ ತಮ್ಮ ಸೋಲನ್ನು ಸ್ವವಿಮರ್ಶೆ ಮಾಡಿಕೊಳ್ಳುತ್ತ ಸತ್ಯಶೋಧನೆಯ ಜೊತೆಗೆ ಆತ್ಮಶೋಧವೂ ಆಗಿ ಈ ಕಾವ್ಯ ಸಾಗಿರುವುದು ಕಂಡುಬಂದಿದೆ.

ಕವಿಗೆ ಮನೆಯ ಕಷ್ಟ ಬವಣೆಗಳು ಕಣ್ಣಿಗೆ ರಾಚುವಂತಿದ್ದರೂ 'ಗೆಳೆಯರ ಗುಂಪಿನ' ಕನಸು ಒಡೆದುಹೋದುದು ತೀವ್ರವಾಗಿ ಬಾಧಿಸಿದೆ. ಆ ಭಾವ ಕವಿ ವ್ಯಕ್ತಿಗತ ಚಿಂತನೆಗಿಂತ ಸಮಷ್ಟಿಯ ಬದುಕಿಗೆ ಹೆಚ್ಚು ಗಮನಕೊಟ್ಟು ಸಮಾಜಮುಖಿಯಾಗಿರುವುದರ ಪುರಾವೆಯಾಗಿದೆ. ಆ ಮನಸ್ಥಿತಿಯಲ್ಲಿ ಅವರು:

'ಮೂರ್ತಿಯು ಇಂಗಿತ್ತು ಮೈತ್ರಿಯೂ ಹಿಂಗಿತ್ತು
ಮನ ಕನಸ ನುಂಗಿತ್ತು ಒಂದಿರುಳೊಳೆ

☆ ☆

ಹನ್ನೆರಡು ವರುಷದ ತಪ ವಿಫಲವಾಯಿತೋ !
ಮಾಯೆಯು ಮಯ ಸಭೆ ಕಟ್ಟಿದ್ದೆವೋ!'

ಎಂದು ನೊಂದು ನುಡಿದಿದ್ದಾರೆ. ಹೀಗೆ ಬೇಂದ್ರೆಯವರ ಬದುಕು ನಲಿವು-ನೋವು, ಸುಖ-ದುಃಖ, ಆನಂದ-ಆತಂಕಗಳ ಬೆಳಕು-ನೆರಳಾಟದಲ್ಲಿ ಸಾಗುತ್ತ ಈ ಬದುಕಿನ ಚಿಂತನೆಗೆ - ತನ್ನನ್ನೇ ತನ್ನ ಸಖಿಯನ್ನೇ ಪ್ರಯೋಗವನ್ನಾಗಿಸಿಕೊಂಡದ್ದು ಕಂಡುಬಂದಿದೆ. ಅವರು ೧೯೩೩ರಲ್ಲಿ ಎಂ. ಎ. ವಿದ್ಯಾಭ್ಯಾಸ ಮಾಡಲು ಪುಣೆಗೆ ಚಿಕ್ಕಪ್ಪನ ಮನೆಗೆ ಹೋಗುವರು. ಅಲ್ಲಿ ಘನ ವಿದ್ಯಾವಂತನಾಗಿ, ಆದರ್ಶ ಶಿಕ್ಷಕನಾಗಿ ಜೀವನವನ್ನು ರೂಪಿಸಿಕೊಳ್ಳಲು ಹೆಣಗಾಡುವ ಕವಿ ಒಂದೆಡೆ ಇದ್ದರೆ, ತನ್ನನ್ನು ತನ್ನ ಮಕ್ಕಳನ್ನು ಇತರರಂತೆ ವ್ಯಾವಹಾರಿಕ ಬುದ್ಧಿವಂತಿಕೆಯಿಂದ ನೋಡಿಕೊಳ್ಳುತ್ತಿಲ್ಲ ಎಂದು ವಿರಸದಿಂದಿರುವ ಕವಿಪತ್ನಿ ಇನ್ನೊಂದೆಡೆ ಇರುವುದು ಕಂಡುಬರುತ್ತದೆ. ಆ ಕಷ್ಟದ ದಿನಗಳಲ್ಲಿ ಮಗು ಲಲಿತಾ ಹುಟ್ಟಿದಳು, ತೀರಿದಳು. ಆ ದುರ್ದಿನಗಳನ್ನು ನೆನೆಯುತ್ತ ಕವಿ:

'ಬಯಲು ಮಾಳಿಗೆಯಲ್ಲಿ ಬೆಳುದಿಂಗಳೊಳು ಕೂಡ
ಖಗ್ರಾಸದ ದಿನದ ಕತ್ತಲೆಯು'

ಎಂದಿದ್ದಾರೆ. ಈ ನುಡಿಯಲ್ಲಿ ಉಡುಗೆ-ತೊಡುಗೆ, ಜೀವನ ನಿರ್ವಹಣೆಗೆ ತೊಂದರೆಯಿಲ್ಲದೆ ಚಿಕ್ಕಪ್ಪನ ಆಶ್ರಯದಲ್ಲಿ ಬದುಕು ಸಾಗುತ್ತಿದ್ದರೂ, ತನ್ನ ಬಾಳು ಸ್ವತಂತ್ರವಾಗಿ ರೂಪುಗೊಂಡಿಲ್ಲ ಎಂಬ ನೋವನ್ನು ರೂಪಕಶೈಲಿಯಲ್ಲಿ ಕಡೆದಿಟ್ಟಿದ್ದಾರೆ. ಖಗ್ರಾಸದ ದಿನವನ್ನು ಸೃಜನಶೀಲ ಮಾಧ್ಯಮವಾಗಿಸಿರುವ ಅವರ ಪ್ರತಿಭಾಶಕ್ತಿ ಅದ್ಭುತವಾಗಿದೆ. ಅವರು " 'ಲಲಿತಾ' ಎಂದರೆ ನಾಲಿಗೆ ಈಗಲು | ರಸ ಒಸರುತ ಹಿಗ್ಗ

ಬೀರುವದು" ಎಂದು ಆ ದಿನಗಳನ್ನು ನೆನೆಸಿಕೊಂಡು ಆ ಮಗು ಸತ್ತದ್ದಕ್ಕೆ ತುಂಬಾ ನೊಂದಿದ್ದಾರೆ. ಆ ಮಗುವನ್ನು ನೋಡಲು ಹೋದ ಸಂದರ್ಭವನ್ನು "ಅಪತ್ಯಗಳನ್ನು ಕಳೆದುಕೊಂಡ ಸತಿಯೊಬ್ಬಳು, ಆಸನ್ನ ಮರಣ ಶಿಶುವನ್ನು ನೋಡಲು ಬಂದ ಪತಿಯನ್ನು ಕುರಿತು ಅನಿರ್ವಚನೀಯ ದುಃಖದಿಂದ ಅರ್ಥಪೂರ್ಣವಾಗಿ ನೋಡಿದಾಗ, ಅವನ ಎದೆಯಲ್ಲಿ ಹುಟ್ಟಿದ ಹಾಡು"[36] ಎಂದು ಲೋಕದ ಹಾಡಿನಂತೆ ಸಂದರ್ಭ ನೀಡಿರುವುದನ್ನು ಕಂಡಾಗ ಕವಿಯ ನಿರ್ಲಿಪ್ತತೆ ಆಶ್ಚರ್ಯವನ್ನುಂಟುಮಾಡುತ್ತದೆ. ಅದೇ ನಿರ್ಲಿಪ್ತತೆ ಅವರ ನೋವನ್ನು ಮರೆಸಿ ನಂಜುಂಡನಾಗುವಂತೆ ಮಾಡಿದೆ. ಅವರು ಆ ದುಃಖಿ ಹೆಂಡತಿಯನ್ನು ನೋಡಲು ಧೈರ್ಯವಿಲ್ಲದವರಾಗಿ ನುಡಿಯುತ್ತಾರೆ:

'ಆ ಕಣ್ಣು ಎಂದಾರೆ ಈ ಕಣ್ಣ ತಾಗಿದರೆ
ಗೊಂಬಿ ಮೂಡದ ಕುರುಡುಗಾಜಾಗಿರೆ'

ಅವರು ಅದೇ ಸಂದರ್ಭವನ್ನು ನೆನೆದು 'ನೀ ಹೀಂಗ ನೋಡಬ್ಯಾಡ ನನ್ನ | ನೀ ಹೀಂಗ ನೋಡಿದರೆ ನನ್ನ, ತಿರುಗಿ ನಾ ಹ್ಯಾಂಗ ನೋಡಲೇ ನಿನ್ನ |'[37] ಎಂದು ದೈನ್ಯದಿಂದ, ಅತಿ ಆರ್ದ್ರ ನಿಸ್ಸಹಾಯಕ ಹೃದಯದಿಂದ ತನ್ನ ಸಖಿಯನ್ನು ಕೇಳಿರುವುದು ಅವರು ವಿರಸದ ಸವಿಯನ್ನು ಸವಿಯುತ್ತ ತೆರೆದ ಮನಸ್ಸಿನಿಂದ ತನ್ನ ತಪ್ಪನ್ನು ಹೇಳಿಕೊಳ್ಳುತ್ತ ಹೃದಯದ ಮಾತಾಗಿಸಿರುವುದು ಅಚ್ಚರಿಯನ್ನುಂಟುಮಾಡುತ್ತದೆ.

ಬೇಂದ್ರೆಯವರಿಗೆ ದಾಂಪತ್ಯ ಎಂಬುದು ಒಂದು ಸಾಧನೆಯಾಗಿತ್ತು ಎಂದು ಪ್ರಾರಂಭದಲ್ಲಿಯೇ ಹೇಳಿದ್ದೇನೆ. ಆ ಸಾಧನೆ ವಿರಸದ ಜೀವನವನ್ನು ಮತ್ತೆ ರಸಮಯವಾಗಿಸುವ ಪ್ರಯತ್ನದ ಮನಸ್ಥಿತಿ. ಹಾಗಾಗಿ ತೆರೆದ ಮನಸ್ಸಿನಿಂದ ಸಖಿಯನ್ನು ಮಾತಾಡಿಸಿ, ತನ್ನ ತಪ್ಪನ್ನು ತಿದ್ದಿಕೊಳ್ಳುತ್ತ ಸಾಗಿದ ಸಖನನ್ನು ಇಲ್ಲಿ ಕಾಣುತ್ತೇವೆ. ಆದಕಾರಣ ಅವರ ಸಂಭಾಷಣೆಯಲ್ಲಿ ತೆರೆದ ಮನಸ್ಸಿನ, ಪರಸ್ಪರರು ತಿಳಿದು ಬಾಳಲು ಬೇಕಾದ ಮುಕ್ತ ಮಾತಿದೆ. ಅದು ಈ ರೀತಿ ಈ ಕಾವ್ಯದಲ್ಲಿ ಮೂಡಿರುವುದು ಈ ಭಾಗದಿಂದಲೇ ಎಂಬುದನ್ನು ಮುಖ್ಯವಾಗಿ ಗಮನಿಸಬೇಕಾಗಿದೆ. ಸಖಿ ನುಡಿಯುತ್ತಾಳೆ:

'ನಿಮಗೇನು ರಮ್ಯತೆ ರಸಿಕಗೆ ಕರೆಯುವ
ನೂರು ಹಾದಿಯಲೊಂದು ಅದು ಹಾದಿಯು
ನಮಗೆ ಜೀವನದಾಟ-ಪಾಟದ ನೋಟದ
ಬೇಟದ ಕೂಟದ ಸುಸಮಾಧಿಯು.'

ಅದಕ್ಕೆ ಉತ್ತರವೆಂಬಂತೆ ಕವಿ ನುಡಿಯುತ್ತಾನೆ: 'ಜೀವನಿಗಾಧಾರ, ಜೀವನಾಮೃತಧಾರೆ| ಪ್ರೀತಿ ಜೀವನದೊಳಾರೆ ಜೀವನವೇ?'

**ವೈಚಾರಿಕ ಭಿನ್ನತೆ**

'ನಿಮ್ಮ ಜೀವನ ಧ್ಯೇಯ ಗೌರಿಶಂಕರದಂತೆ
ಶಿಖರವನೆತ್ತಿದೆ ಮುಗಿಲಿನೆಡೆ
ನನ್ನೆದೆ ತಿರುಗಿದೆ ಗಂಗೆಯು ಹರಿದಂತೆ
ಜನರೀತಿಯಂತೆಯೆ ನೆಲದಕಡೆ.'

ಎಂದು ಕವಿಪತ್ನಿ ನುಡಿಯುವ ನುಡಿಯಲ್ಲಿ ಅವರಲ್ಲಿರುವ ವೈಚಾರಿಕ ಭಿನ್ನತೆ ಸ್ಪಷ್ಟವಾಗಿ ಗೋಚರವಾಗುತ್ತದೆ. ಅವಳು ಕವಿಯ ಆದರ್ಶ ಜೀವನ ಧ್ಯೇಯವು ಅತಿ ಎತ್ತರವಾದುದು ಎಂದು

ಹೇಳುತ್ತಲೇ ತಾನು ಜನರೀತಿಯಂತೆ ಈ ನೆಲದ ಬದುಕಿನ ಕಡೆಗೆ ಒಲಿದವಳು ಎಂದು ಹೇಳುತ್ತಾಳೆ. ಅದೇ ವಾದವನ್ನು ಮುಂದುವರಿಸಿ ಇನ್ನೂ ಸ್ಪಷ್ಟವಾಗಿ ಆದರ್ಶದ ಕಲ್ಪನೆಯ ಗುಂಪಿಗೂ, ಈ ನೆಲಕ್ಕಂಟಿದ ಜೀವನಕ್ಕೂ ಇರುವ ವ್ಯತ್ಯಾಸವನ್ನು ಹೇಳುತ್ತಾಳೆ. ಹಾಗೆ ನುಡಿದು ಆತನ ಆದರ್ಶವನ್ನು ಅದರಿಂದಾಗುವ ಅವನ ಆನಂದವನ್ನು ತಾನು ಕಂಡಿರುವುದಾಗಿ ಹೇಳುವ ಆಕೆಯು common sense ಇರುವ ಗೃಹಿಣಿಯಾಗಿ ಕಂಗೊಳಿಸುತ್ತಾಳೆ:

'ಗೆಳೆಯರ ಕೂಡಾಡಿ ಬಂದಾಗ, ನಾ ನಿಮ್ಮ
ಮುಖದಲುಕ್ಕುವ ಗೆಲುವ ಕಂಡಿಲ್ಲವೆ !
ಮನೆ ಬೆಳಕು ಮುಂದಿರೆ ಆ ಕಣ್ಣು ಕುಂದಿರೆ
ನಾನೊಳಗೆ ನೊಂದಿರೆ ನೀವರಿಯಿರೆ?'

ಹೀಗೆ ಜೀವಸಂವಾದ ಸಖ-ಸಖಿಯರಲ್ಲಿ ಉಂಟಾಗಿ ಅವರು ವಿರಸದ ಕಾರಣವನ್ನು ತಿಳಿಯುತ್ತಾರೆ. ಅವನು ತಪ್ಪನ್ನು ಅರಿತುಕೊಳ್ಳುತ್ತಾನೆ. ಅದನ್ನು ಸ್ಪಷ್ಟವಾಗಿ ಹೆಂಡತಿಗೆ ಹೇಳದಿದ್ದರೂ ಆತ್ಮಶೋಧಕ್ಕೆ ತೊಡಗಿಕೊಳ್ಳುತ್ತಾನೆ. ತನ್ನನ್ನು ತನ್ನ ತಾಯಿ ಚಿಕ್ಕಂದಿನಲ್ಲಿ ಸಾಕಿದಂತೆ, ಕವಿಮಾನ್ಯನಾದವನ ಮಕ್ಕಳನ್ನು ಆಕೆ ತಾಯಿಯಾಗಿ ಕಷ್ಟಪಟ್ಟು ಸಲಹುತ್ತಿರುವುದು ಅವನ ಪ್ರಜ್ಞೆಯನ್ನು ಎಚ್ಚರಿಸುತ್ತದೆ. ಅವನು :

'ನನ್ನ ತಾಯಿಯ ನೆನೆದು ನಾ ಸಮ್ಮನಾದೆನು
ಒಳಗೊಂದು ಹೊರಗೊಂದು ಜೀವಿಸಿದೆ'.

ಎಂಬ ಒಳಮನದ ನಿಜಸ್ಪರ್ಶದಲ್ಲಿ 'ಗಾಳಿಗಿಂತ ತೆಳ್ಳಗಿತ್ತ' ಎಂಬ ನಿರಾಳಮನದವನಾಗುತ್ತಾನೆ. ಈ ಭಾವ ಬಂದಾಗ ಸಮರಸ ತತ್ತ್ವ ಮೂಡಿದಂತೆ. ಅದು ಬಂದಕಾರಣ ಕವಿಯು ಸಖ-ಸಖಿ ಬಾಂಧವ್ಯವನ್ನು ಕುರಿತು ಸಾರ್ವಕಾಲಿಕವಾದ ಸತ್ಯವನ್ನು ನುಡಿಯುತ್ತಾನೆ:

'ಅನ್ನಕೆ ಬಾಳಾಗಿ ಕಾಮಕೆ ಹೋಳಾಗಿ
ಮಾನಕೆ ಆಳಾಗಿ ಉಸಿರೆಳೆದುದು
ಬಾಳಲ್ಲ ಬದುಕಲ್ಲ; ಜೀವ ಜೀವಕೆ ಉ-
ದ್ದೀಪನವಾದುದೆ ಜೀವನವು'.

ಕವಿ ತನ್ನ ದಾಂಪತ್ಯದ ಆಂತರ್ಯವನ್ನು ಹೀಗೆ ಬಹಿರಂಗಗೊಳಿಸಿದ ಹಾಡು ಹಮ್ಮಿಲ್ಲದ ಮನಹೆಣೆದ ಹಾಡಾಗಿದೆ. ಅಲ್ಲಿ ಅಂತಃಕರಣದ ಗೋಪು ಎಂದರೆ ಕೊರಳಲ್ಲಿ ಧರಿಸುವ ಆಪ್ತವಾದ ಸತ್ತ್ವದಿಂದ ಕೂಡಿದ ಬೆಲೆಬಾಳುವ ದ್ರವ್ಯ ಆಗಿದೆ. ಅದಕ್ಕೆ ಭಾವದ ಲಾಲಿತ್ಯಪೂರ್ಣ ಹಾವಭಾವವಿದೆ. ಆದಕಾರಣ ಅದು ಎಲ್ಲ ನಲ್ಲನಲ್ಲೆಯರ ಕೊರಳನ್ನು ಎದೆಯನ್ನು ಸಿಂಗರಿಸಲಿ, ಅವರು ಅರಿತು ಬಾಳ್ವೆ ಮಾಡುತ್ತ ಈ ಕಾವ್ಯದ ಹೊಳಪಿನಲ್ಲಿ ಬೆಳಗಲಿ ಎಂಬ ಓರಿ ತತ್ತ್ವವಿದೆ:

'ಚಿತ್ತದ ಸೂತ್ರಕೆ ಬುದ್ಧಿಯ ಹುರಿಹಾಕಿ
ಹಮ್ಮಿನ ಮುರಿಹಾಕಿ ಮನ ಹೆಣೆದಿರೆ
ಅಂತಃಕರಣದ ಗೋಪು ಭಾವದ ಕೋಪು
ಎಲ್ಲರ ಕೊರಳೆದೆ ಸಿಂಗರಿಸಿದೆ.'

ಈ ಎಲ್ಲ ಕಾರಣದಿಂದ ಹಾಗೂ ಪ್ರಜಾಪ್ರಭುತ್ವದಲ್ಲಿ ಜನರೇ ಪ್ರಭುವಾದ ಕಾರಣ, ಪ್ರತಿ ಕುಟುಂಬವೂ ಅರ್ಥಪೂರ್ಣವಾಗಿ ಬಾಳಬೇಕಾದುದರಿಂದ ಅದರ ಪ್ರಮುಖ ಪಾತ್ರಗಳಾದ ದಂಪತಿಗಳು

ಅರಿತು ಬಾಳುವುದು ಲೋಕಕಲ್ಯಾಣಕ್ಕೆ ಆಧಾರಭೂತವಾದುದು. ಈ ಹಿರಿಯ ಭಾವದಿಂದ ಕವಿ ಈ ಕಾವ್ಯವನ್ನು ರಚಿಸಿರುವುದಾಗಿ ಹೇಳಿಕೊಂಡಿದ್ದಾರೆ.

'ಏಕಾಂತದ ಜಿನುಗು ಲೋಕಾಂತಕೆಳೆಯಿತು
ಜನವು ಜನಾರ್ದನನೆಂದರಿತೇ?'

ಈ ಕಾವ್ಯದ ಕೊನೆಯ ಭಾಗದ ಹೊತ್ತಿಗೆ ಕವಿ ತನ್ನ ಯಜಮಾನ ಸಂಸ್ಕೃತಿಯಿಂದ, ಪುರುಷಪ್ರಧಾನ ಜಂಭದಿಂದ ಸಡಿಲಗೊಂಡಿದ್ದಾನೆ. ಅವನಲ್ಲಿ ದಾಂಪತ್ಯದ ಆನಂದಕ್ಕೆ ಸಖ-ಸಖಿಯರಲ್ಲಿ ಹೊಂದಾಣಿಕೆ ಸರಿಸಮನಾಗಿರಬೇಕೆಂಬ ತಿಳಿವು ಬಂದಿದೆ. ಅದನ್ನು ಕವಿ ಮುಕ್ತವಾಗಿ ಹೇಳಿಕೊಂಡಿರುವುದು ಈ ಕಾವ್ಯದ ಆ ಕಾಲಮಾನದ ಹೆಮ್ಮೆಯ ವಿಷಯವಾಗಿ ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಮಾನತೆಯನ್ನು ಸಾರಿದ ಆದ್ಯ ಕಾವ್ಯವಾಗಲು ಕಾರಣವಾಗಿದೆ. ಕವಿಯು:

'ಅಂಬಿಕಾತನಯನ ಜಂಭದ ಪಾಡಳಿದು
ನಂಬಿಕೆಯ ಹಾಡಾಗಿ ಬಂತಿಲ್ಲಿಗೆ
ಪೂರ್ವಾನಾರಾಗವೀ ಪರ್ವಕ್ಕೆ ಸಂದಿತು
ಉತ್ತರೋತ್ತರವಿರಲಿ ಉತ್ತರಕೆ'!

ಎಂದು ಹೇಳಿದ್ದಾರೆ. ಸಖ-ಸಖಿಯರ ಬದುಕು ಎಂದರೆ ಅದು ಒಂದು ಕುಣಿತವಿದ್ದಂತೆ. ಅದರ ಹಾಡಿಗೆ 'ಅಕ್ಕರ ಛಂದವು ಸಾಂಗತ್ಯ ಸಂಸ್ಕಾರ'ವಿದೆ. ಆದಕಾರಣ ಸಖೀಗೀತ - 'ಕುಣಿತದ ಹಾಡಿದು ಕುಣಿಯಹಚ್ಚಿತು ಜನಕೆ ಕಲ್ಲಾದ ಮನಗಳ ಕರಗಿಸಿತು.' ಈ ಬಗೆಯ ಆಹ್ಲಾದವನ್ನು ತಂದ ಈ ಕಾವ್ಯದ ಗುರಿಯನ್ನು ಕವಿ ಸ್ಪಷ್ಟಗೊಳಿಸಿದ್ದಾರೆ. 'ಕಲ್ಯಾಣಶಕ್ತಿಯ ಕೈಯ ಕುಶಲತೆಯಿಂದ ಪಾಕವಾಗಲಿ ಪ್ರೇಮ!' ಜೊತೆಯಲ್ಲಿಯೇ ಇದು ಸಖ-ಸಖಿಯರ ಹಾಡು. ಅದು ನಿರಂತರವಾಗಿ ಸಾಗುತ್ತಿರುತ್ತದೆ. ಅದಕ್ಕೆ ಅಂತ್ಯವಿಲ್ಲವೆಂಬುದನ್ನು -

'ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೆ!'

ಎಂಬ ಅಚ್ಚರಿಯ ಪಲ್ಲವಿ ಧ್ವನಿಸುತ್ತದೆ. ಹೀಗಾಗಿ ಈ 'ಸಖೀಗೀತ' ಸದಾ ಮುಂದುವರಿಕೆಯನ್ನು ತನ್ನಲ್ಲಿರಿಸಿಕೊಂಡು ವಿಕಾಸಶೀಲವಾಗಿದೆ. ಬೇಂದ್ರೆಯವರು ಈ ಕಾವ್ಯದಲ್ಲಿ ಸಖಿ ಎಂಬುವಳು ಹೆಣ್ಣು ಮಾತ್ರವಾದ ಜೊತೆಗಾತಿಯಲ್ಲ. ಅವಳು ಬೌದ್ಧಿಕ ಮತ್ತು ಆಧ್ಯಾತ್ಮಿಕ ಜೊತೆಗಾತಿ ಎಂಬುದನ್ನು ಶೋಧಿಸಿದ್ದಾರೆ.

ವಿವಾಹಬಂಧದೊಳಗಿನ ಪ್ರೇಮವು ವೈಯಕ್ತಿಕ ನಂಬಿಕೆಯನ್ನೂ ಪವಿತ್ರ ಭಾವನೆಯನ್ನೂ ಹೊಂದಿರುವಂತಹದು. ಅದು ಗುಟ್ಟಿನ ಕದ್ದುಮುಚ್ಚಿ ಅನುಭವಿಸುವ ಪ್ರೀತಿಯಲ್ಲ. ಅದು ಮುಕ್ತ ಆನಂದದ ನವಿರು ನಲ್ಮೆ. ಅದು ಪ್ರೇಮ. ಅಲ್ಲಿ ಯಾವುದೇ ಆತಂಕ ಅಳುಕಿಲ್ಲ. ಅದು 'ಅಂಟಿಗಂಟು ಚಿಗಿತು ನಂಟು', ಆದಕಾರಣ ಪ್ರೇಮ ಏಕತ್ರಗೊಂಡು ತಪದಂತೆ ಸಾಧಕ ಸ್ವರೂಪಿಯಾದುದು. ಅದು ಒಬ್ಬರನ್ನೊಬ್ಬರು ಅರಿತು ಸಂತಸದ ವಾತಾವರಣವನ್ನು ಸೃಷ್ಟಿಸಿಕೊಳ್ಳುವ ಸೃಜನಶೀಲ ಬಂಧ ಎಂಬುದು ಈ ಕಾವ್ಯದಿಂದ ಸ್ಪಷ್ಟವಾಗಿದೆ.

ಸಖ-ಸಖಿ ಪ್ರತ್ಯೇಕ ವ್ಯಕ್ತಿಗಳು. ಅವರು ಕೂಡಿ ದಂಪತಿಗಳಾದ ಒಂದೇ ಘಟಕವಾದರೂ ಅವರವರ ಚಿಂತನೆ, ಆಲೋಚನೆ ಪ್ರತ್ಯೇಕವಾಗಿಯೇ ಉಳಿಯುತ್ತದೆ. ಹಾಗೆ ಉಳಿಯಬೇಕು. ಹಾಗೆ ಉಳಿದೂ ಅವರು

ಒಂದಾಗಿ ಚಿಂತಿಸಿ ಬಾಳನ್ನು ನಡೆಸುವುದರಿಂದ ಬದುಕು ಅರ್ಥಪೂರ್ಣವಾಗುತ್ತದೆ. ಅಂತಹ ಕುಟುಂಬದ ಬಾಳು ಸಮಾಜದ ಸ್ವಾಸ್ಥ್ಯಕ್ಕೆ ಅತಿ ಆವಶ್ಯಕ. ಅಂತಹ ಕುಟುಂಬಗಳಿಂದ ದೇಶ ಕಲ್ಯಾಣವಾಗುತ್ತದೆ ಎಂಬ ಚಿಂತನೆ ಈ ಕಾವ್ಯದಲ್ಲಿದೆ.

ಪ್ರೀತಿ ಇಲ್ಲಿ ಪ್ರೇಮವಾಗಿ ವಿಕಾಸ ಹೊಂದುವಾಗ ಉಂಟಾದ ಎಡರು ತೊಡರುಗಳು, ಆ ತೊಡಕನ್ನು ಬಿಡಿಸಿಕೊಂಡು ಬೆಳೆದು ಫಲಬಿಟ್ಟ ಬಗೆಯ ಚಿಂತನ ಲಹರಿ ಇಲ್ಲಿದೆ. ವೈವಾಹಿಕ ಬಂಧನದ ಮಿತಿಯಲ್ಲಿ ಪ್ರೀತಿಯ ಪಲ್ಲವದೊಂದಿಗೆ ಶುದ್ಧ ಲೈಂಗಿಕ ಜೀವನ, ಸಂತಾನಾಭಿವೃದ್ಧಿ, ಶಾಂತಿ, ನೆಮ್ಮದಿಗಾಗಿ ಸಖ-ಸಖಿಯರು ಪ್ರಯತ್ನಿಸುತ್ತ ಆ ಮೂಲಕ ಸಮಾಜಮುಖಿ ಚಿಂತನೆಯನ್ನು ಹೊಂದಿ ಸುಸಂಸ್ಕೃತ ನಾಗರಿಕರಾಗಬೇಕೆಂದು ಈ ಕಾವ್ಯ ಆಶಿಸುತ್ತದೆ.

ಸಖೀಗೀತವು ಆತ್ಮಕತೆಯನ್ನು ಕಾವ್ಯಕಲೆಯಾಗಿ ಹೆಣೆದಿರುವ ಅಪೂರ್ವ ಕಾವ್ಯವಾಗಿದೆ. ಇಲ್ಲಿ ಆತ್ಮಕತೆ ಮತ್ತು ಕಲೆ ಸಖ ಸಖಿಯರಂತೆ ಒಂದುಗೂಡಿದೆ. ಹಾಗೆ ಒಂದುಗೂಡಿದ ಕಾವ್ಯದ ಆತ್ಮ 'ಸಖೀಗೀತ'ವಾಗಿದೆ.

**ಬರುವದೇನೆ ನೆಪ್ಪಿಗೆ**

**೧. ರಸ :** 'ಬರುವದೇನೆ ನೆಪ್ಪಿಗೆ'[38] ಎಂಬುದೊಂದು ಪತಿ-ಪತ್ನಿಯರು ಕಳೆದ ಸುಂದರ ಮತ್ತು ನೋವಿನ ಕ್ಷಣಗಳನ್ನು ನೆನಸಿ ಹಾಡಿದ ಸಖ್ಯಸಾಧನೆಯ ನಲ್ವಾಡಾಗಿದೆ. ಇಲ್ಲಿ ಪತಿಯೇ ಪ್ರಶ್ನೆಗಳನ್ನು ಹಾಕಿ, ದಾಂಪತ್ಯದ ಕೆಲವು ಘಟ್ಟದ ಭಾವನೆಯ ಆತ್ಮೀಯ ಕ್ಷಣಗಳನ್ನು ಉತ್ತರ ರೂಪವಾಗಿ ಹೇಳಿ ಅವಳನ್ನು ಮುದಗೊಳಿಸುವ ಭಾವವಿದೆ. ಇಲ್ಲಿ 'ಬರುವದೇನೆ ನೆಪ್ಪಿಗೆ' ಎಂಬ ಸಾಲು ಪಲ್ಲವಿಸುವಾಗ ಮತ್ತು ಮುಕ್ತಾಯವಾಗುವಾಗ ಒಂದೊಂದು ಹೊಸ ಸಾಲನ್ನು ಹೊಂದಿ ಜೀವಂತವಾಗುತ್ತ ಸಾಗಿ ಏಕತಾನತೆಯನ್ನು ದೂರೀಕರಿಸಿ ಬೆರೆತ ಜೀವದ ಭಾವ ಹೊಮ್ಮುವಂತೆ ಮಾಡಿದೆ. ಇಲ್ಲಿಯ ಮೂರು ಭಾಗಗಳಲ್ಲಿ ಮೊದಲನೆಯದರಲ್ಲಿ ಅವರು ಹಿರಿಯರ ಒಪ್ಪಿಗೆ ಪಡೆದು ಕೂಡಿ 'ಬೆಳಕು ಬೆಂಕಿ ಬೆರೆತುಕೊಂಡು | ಭಾವವು ಹೊರದೂಡಿರೆ' ಚೆಲುವು ಒಲವು ಸೇರಿ ಎದೆಗೆ ಎದೆಯ ಅಪ್ಪಿಗೆಯಾದ ಹೊಸ ಪ್ರೀತಿ ಇದೆ.

**೨. ವಿರಸ :** ಎರಡನೆಯ ಭಾಗದಲ್ಲಿ, ಜೀವನ ಸಾಗಿದಂತೆ ವಾಸ್ತವ ಬದುಕನ್ನು ಎದುರಿಸಲಾಗದೆ 'ಬರುವದೇನೇ ನೆಪ್ಪಿಗೆ | ಕೂಡಿದೊಂದ ತಪ್ಪಿಗೆ' ಎಂಬ ಭಾವ ಇಣುಕುತ್ತದೆ. ಅದು ತೀವ್ರವಾದ 'ದುಃಖದೊಂದು ಶೂಲೆಯಲ್ಲಿ | ನೋವುಗೊಂಡು ತಿಣುಕಿದೆ' ಎಂಬ ಕ್ರೂರ ವಾಸ್ತವದಲ್ಲಿ ಹಾಗೂ ಸುಖದ ತೊಟ್ಟೂ ಸಿಗಲಿಲ್ಲ ಎಂಬ ದಾರುಣತೆಯ ಘಟ್ಟವಾಗಿದೆ. ಅದೇ ವಿರಸಕ್ಕೆ ಕಾರಣವಾಗುತ್ತದೆ.

**೩. ಸಮರಸ :** ವಿರಸಭಾವದಲ್ಲಿ ಪತಿ-ಪತ್ನಿಯರು ಅದರ ಕಾರಣದ ಶೋಧಕ್ಕೆ ತೊಡಗುತ್ತಾರೆ. ಒಬ್ಬರು ಇನ್ನೊಬ್ಬರನ್ನು ಸರಿಯಾಗಿ ತಿಳಿಯಲು ತಮ್ಮ ತಪ್ಪನ್ನು ತಿದ್ದಿಕೊಳ್ಳಲು ಸಾಧನೆ ಮಾಡುತ್ತಾರೆ. ಆಗ ಅಲ್ಲಿ 'ಇಬ್ಬಗೆಗೂ ಸೋತೆವು | ಆಸರಾಗಿ ಆತೆವು' ಎಂಬ ಭಾವ ಉದ್ಭವಿಸುತ್ತದೆ. ಆ ಘಟ್ಟದಲ್ಲಿ 'ಬರುವದೇನೆ ನೆಪ್ಪಿಗೆ' ಎಂಬ ರುಚಿರಹಿತ ಬದುಕನ್ನು ನೆನೆಸಿಕೊಳ್ಳುತ್ತಾರೆ. ಅದು ಮೂರನೆಯ ಘಟ್ಟಕ್ಕೆ ನಾಂದಿಯಾಗಿ ಅವರು ಬೇರ್ಪಡಿಸಲಾಗದ ರೀತಿ ಬಂಧಿತರಾಗಿದ್ದಾರೆ. ಬದುಕನ್ನು ಅರಿತ ಮಾತು 'ಬರುವದೇನೆ ನೆಪ್ಪಿಗೆ | ನಾವು ಬಿದ್ದ ಟೊಪ್ಪಿಗೆ' ಎಂಬಲ್ಲಿದ್ದು, ಜೀವನದಲ್ಲಿ ಅರ್ಥಪೂರ್ಣವಾಗಿ ಬಾಳಬೇಕಾದುದರಿಂದ ತಮ್ಮನ್ನೇ ವಂಚಿಸಿಕೊಂಡು ಕಳೆದ ಆ ಕ್ಷಣದ ಮೌಲ್ಯ ಅವರಿಬ್ಬರಿಗೂ ಈಗ ಗೊತ್ತಾಗಿದೆ. ಆ ಅರಿವು ಬಂದಕಾರಣ 'ಇಬ್ಬರನ್ನು ನೂಗಿಕೊಂಡು | ಒಬ್ಬನಾಗಿ ಎದ್ದಿದೆ'. ಅದು ದಾಂಪತ್ಯದ ಸಾರ್ಥಕಸ್ಥಿತಿ. ಆದಕಾರಣ ಸಖ ಸಮರಸಭಾವದಲ್ಲಿ ನುಡಿಯುತ್ತಾನೆ : 'ಬರುವದೇನೆ ನೆಪ್ಪಿಗೆ | ಜೀವ

ಜೀವದಪ್ಪಿಗೆ,' ಹೀಗೆ ಒಪ್ಪಿದ ಗಂಡು ಹೆಣ್ಣು ಜೀವ ಜೀವದಪ್ಪಿಗೆಯನ್ನು ಸಾಧಿಸಿ ಸಖ್ಯಯೋಗಿಗಳಾದ ದಾಂಪತ್ಯಗಾಥೆ ಈ ಕಾವ್ಯದಲ್ಲಿದೆ. ಇದು ಕವಿಯ ವೈಯಕ್ತಿಕ ಜೀವನದ ಹಾಡಾದರೂ ಜಗದೆಲ್ಲ ಸಿಹಿಕಹಿಯ ಮಧುರವಾಹಿನಿಯನ್ನು ತನ್ನಲ್ಲಿ ಹುದುಗಿಸಿಕೊಂಡ ಕಾರಣ ಲೋಕಾಂತಿಕವಾಗಿ ಸಾರ್ವಕಾಲಿಕ ಗುಣವನ್ನು ಹೊಂದಿದ ಕಾವ್ಯವಾಗಿದೆ.*

**ಮನದನ್ನೆ** [39]

'ಮನದನ್ನೆ' ಕಾವ್ಯದಲ್ಲಿ ವಿರಸ ದಾಂಪತ್ಯದ ಚಿತ್ರಣವಿದ್ದು, ಅದು ಪತಿ-ಪತ್ನಿಯರು ಪರಸ್ಪರರನ್ನು ತಿಳಿದು ಪ್ರೇಮಸಾಕ್ಷಾತ್ಕಾರವನ್ನು ಪಡೆಯಬೇಕೆಂಬ ಹಂಬಲವನ್ನು ಹೊಂದಿದೆ. ಈ ಕವನವನ್ನು ಕುರಿತು ಕೆ.ಎಸ್. ನಿಸಾರ್ ಅಹಮದ್ ಅವರು : " 'ಮನದನ್ನೆ'ಯಲ್ಲಿ ಗಂಡ ಹೆಂಡಿರ ಅಪಾರ್ಥತೆ, ವೈಮನಸ್ಸುಗಳನ್ನು ಕಾಣಿಸಿ, ಭಾವಸಂಶುದ್ಧಿಯಾಗದೆ, ಹೃದಯ ಸಂವಾದಕ್ಕೆ ಪುಷ್ಟಿ ದೊರಕದೆ, ಪ್ರೇಮದ ಜಗತ್ತು ಪ್ರಕಟವಾಗದೆಂಬ ತಾತ್ತ್ವಿಕ ಧೋರಣೆಯನ್ನು ಕಲಾತ್ಮಕವಾಗಿ ಅಭಿವ್ಯಕ್ತಿಸಿದ್ದಾರೆ"[40] ಎಂದು ಹೇಳಿದ್ದಾರೆ.

'ಆಡದಿರು ಮನದನ್ನೆ
ಎನಗೆ ಇದಿರಾಡದಿರು'

ಎಂಬಲ್ಲಿ 'Let the wife speak sweet and gentle words to the husband'[41] ಎಂಬ ಮಧುರ ಕುಟುಂಬ ಕಲ್ಪನೆಯ ಅಥರ್ವಣ ವೇದದ ಚಿಂತನೆ ಇರುವುದು ಕಂಡುಬರುತ್ತದೆ. ಇದೇ ನುಡಿಯಲ್ಲಿ ಶತಪಥ ಬ್ರಾಹ್ಮಣದ 'a wife who does not answer back is considered to be praiseworthy'[42] ಎಂಬ ನುಡಿಯಿದ್ದು, ಪತಿಯಾದವನು ತನ್ನ ಹೆಂಡತಿಯ ವಾದಕ್ಕೆ ಬೇಸತ್ತಿದ್ದು, ತನ್ನ ಮಿತಿಗಳನ್ನು ಹೇಳಿಕೊಳ್ಳುತ್ತ ಅವಳನ್ನು ಸಂವಾದಕ್ಕೆ ಕರೆಯುವ ಆರ್ತ ಧ್ವನಿ ಇದೆ.

'ಎಲ್ಲಿಹುದು ತಿಳವಳಿಕೆ
ಜೀವನದ ಸಲುವಳಿಕೆ'

ಎಂದು ತಳಮಳಿಸಿ ನೀರಡಿಸಿ ಬಂದೆ - ಎಂಬ ನುಡಿಯಲ್ಲಿ ಅವನ ತಿಳಿವು ಮತ್ತು ಮಾನ್ಯತೆ ಪಡೆಯುವ ಶಕ್ತಿಯ ನೆಲೆ ತನ್ನ ಪತ್ನಿ ಎಂಬ ಅರಿವಿದೆ. ನನ್ನನ್ನು ಚಿನ್ನದ ರೀತಿ ಒರೆದು ನೋಡು, ನನ್ನದು ಎದೆಯಾಳದ ಮಾತು, ಅದನ್ನಳೆದು ಮಾತಾಡು. ಯಾವುದೋ ಪರಿಸ್ಥಿತಿಯಲ್ಲಿ ವಿರಸಕ್ಕೆ ಕಾರಣವಾದ ಘಟನೆಗಳನ್ನು ನೆನೆದು :

'ಬೆಂದ ಹೆಣವನೆ ಕೊಂದು
ಭೂತ ಲೀಲೆಯಲೀಗ ತೊಡಗಬೇಡ '

ಎಂದು ಅಪೂರ್ವ ರೂಪಕದಿಂದ ಸತ್ತ ಘಟನೆಗಳನ್ನು ಕೆದಕಿ ಜಗಳವಾಡುವ ಮನಸ್ಸನ್ನು ಬಣ್ಣಿಸಿದ್ದಾರೆ. ಇಲ್ಲಿ ಬಳಸಿರುವ ರೂಪಕ 'ಬೆಂದ ಹೆಣ' ಬೆಂದು ಸತ್ತುಹೋಗಿರುವುದು. ಅದನ್ನು ಮತ್ತೆ ಕೊಲ್ಲುವುದು ಎಂದರೆ ಎಂತಹ ಅಸಹ್ಯ ಸಾಹಸ ! ಹಾಗೆ ಕಳೆದ ಸತ್ತ ಘಟನೆಗಳು ಅದರ ಭೂತಲೀಲೆ ಅಂದರೆ ಭೂತ ದೆವ್ವದ ಭಯದ ಸಂಕೇತ. ಅದನ್ನು ಆಹ್ವಾನಿಸಿಕೊಳ್ಳಬೇಡ ಎಂಬ ಮಾತಿದೆ.

---

* ಈ ಕವನವನ್ನು 'ಸಖೀಗೀತ' ಅಭ್ಯಾಸಮಾಡಿ ಅಲ್ಲಿ ಸಖ-ಸಖಿಯರ ಜೀವನವನ್ನು ಅರಿತ ನಂತರ ಓದಿ ಆನಂದಿಸಬೇಕು ಎಂದು ನನಗೆ ಅನಿಸಿದುದರಿಂದ ಸಖೀಗೀತದ ನಂತರ ಇದನ್ನು ನೀಡಿದ್ದೇನೆ.

ಈ ಕವನದ ನಾಯಕ ಜೀವನದಲ್ಲಿ ಸೋತಿದ್ದು, ಸಾಂತ್ವನಕ್ಕಾಗಿ regenerate ಮಾಡುವ ಶಕ್ತಿ ಹೊಂದಿರುವ ಮಡದಿಗಾಗಿ ಆಶಿಸಿಬಂದಿದ್ದಾನೆ. ಅವನಿಗೆ ಅವಳ ಸಲಹೆ, ತಿಳಿವಳಿಕೆಯ ಜೊತೆಗೆ ಅವಳ ದೇಹ ಸಂಪರ್ಕವೂ ಬೇಕಾಗಿದೆ. ಆದಕಾರಣ ಅವನು 'ನಿನ್ನ ತಿಳಿವನು ಹಣಿಸು | ನಿನ್ನ ಹೊಟ್ಟೆಯನುಣಿಸು | ಇದಿರಾಡದಿರು ಗೆಳತಿ ನೀನು ಕೂಡ | ಹೃದಯವನು ರಣರಂಗ ಮಾಡಬೇಡ, ಎಂದು ಪ್ರಾರ್ಥಿಸಿದ್ದಾನೆ. ಈ ಸತ್ಯವನ್ನು 'ಗಂಡ ಹೆಂಡಿರ ಜಗಳ ಗಂಧ ತೀಡಿದ್ಹಾಂಗ' ಹಾಗೂ 'ಗಂಡ ಹೆಂಡಿರ ಜಗಳ ಉಂಡು ಮಲಗುವವರೆಗೆ' ಎಂಬ ಉಕ್ತಿಗಳಿಂದ ಜಾನಪದರು ಪ್ರತಿಪಾದಿಸಿದ್ದುಂಟು.

ಪ್ರಾರಂಭದಲ್ಲಿಯೇ ಹೇಳಿರುವಂತೆ ಅವನಿಗೆ ವಾದವಿವಾದ ಸಾಕಾಗಿದೆ. 'ಜೀವಸಂವಾದಕ್ಕೆ ಹಸಿದುಬಂದೆ' ಎಂದು ಹೇಳುತ್ತಾನೆ. ಅವನಿಗೆ ಸಿಪ್ಪೆ ಸುಲಿದ ತಿಳಲು ಬೇಕಾಗಿದೆ. ಅವನು ಈ ಹಿಂದೆ ಒಳಗೊಂದು ಹೊರಗೊಂದಾಗಿದ್ದಿರಬಹುದು. ಆದಕಾರಣವೇ ಅವನು ಮನದನ್ನೆಗೆ ತನ್ನ 'ಜೀವ ಜೀವಾಳದಲಿ | ಹೃದಯಾಂತರಾಳದಲಿ | ಇಳಿದುನೋಡು|' ಎಂದು ಆಹ್ವಾನಿಸಿ 'ಬಗೆಯ ಬಾನ್‌ಬಯಲನ್ನು' ಅಂದರೆ ತನ್ನ ಮನಸ್ಸಿನ ಒಳಹೊರಗನ್ನು 'ಅಳೆದುನೋಡು' ಎಂದು ಆಹ್ವಾನಿಸುತ್ತಾನೆ. ತನ್ನ ಜೊತೆ ಸಮಸಮನಾಗಿ ಹಾರಾಡಲು ಆಹ್ವಾನಿಸುತ್ತ ತನ್ನನ್ನು 'ಅಣಕಮೂದಲಿಕೆಯಲಿ ಕಟುಕಬೇಡ| ಕೆನ್ನೀರ ಕೆಸರನ್ನು ಕಲಕಬೇಡ' ಎಂದು ಅವಳ ಮೂದಲಿಕೆಯಿಂದ ಅವನು ಕೋಪಗೊಂಡು ಅವನ ರಕ್ತದೊತ್ತಡ ಹೆಚ್ಚಿ ಅವನ ಮನಸ್ಥಿತಿ ಕಲಕುತ್ತದೆ. ಹಾಗೆ ಮಾಡಬೇಡ ಎಂದು ಪ್ರಾರ್ಥಿಸುತ್ತಾನೆ.

**ಒಂದುಸಿರೆ ತಾನಾಡಿದಂತೆ ಇಹುದು**

ಮನದನ್ನ ಮನದನ್ನೆಯರು ತಮ್ಮ ಸಮಸ್ಯೆಯನ್ನು ತಾವೇ ಸಂವಾದದಿಂದ ಬಗೆಹರಿಸಿಕೊಳ್ಳಬೇಕು. ಈ ಹೃದಯ ಸಮುದ್ರದಲ್ಲಿ ಕಣ್ಣೀರಿದೆ. ಅದನ್ನು ಮುಳುಗಿನೋಡು. 'ನೆಲೆಯಿರದ ನೆಲೆ' ಈ ಬದುಕು, ಇದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸು. ಅದನ್ನು ಬಿಟ್ಟು ನಾವು ಬೇರೆ ಬೇರೆ ಎಂಬ ಭಾವದಿಂದ ಪಾಲುಗಾರಿಕೆಗಾಗಿ ಹೆಣಗಿದರೆ, ನಿನ್ನ ಸಹಜ ಸ್ತ್ರೀತ್ವಕ್ಕೆ ಆಸರೆಯಾಗುವ ನೀರನಿಲ್ಲದಂತಾಗುತ್ತದೆ. ನಾವು ಒಂದುಗೂಡೋಣ ಎಂದು ಹೇಳುತ್ತ ಅವಳಿಗೆ ಒಂಟಿತನದ ಭಯ ಹುಟ್ಟಿಸಿ ಅವಳ ಏಕಾಂತದ ನೋವು ತಿಳಿಸಿಕೊಡುವುದರ ಜೊತೆಗೆ ಅವಳನ್ನು ಒಲಿಸಿಕೊಳ್ಳಲು ಅವಳ ದೇಹ ಸೌಂದರ್ಯವನ್ನು ಮತ್ತು ತನ್ನ ಸಂಪತ್ತನ್ನು ಬಣ್ಣಿಸುತ್ತಾನೆ. ಅವನು ಮನದನ್ನೆಗೆ ಗಾಳಿಮಾತು - ಅಂದರೆ ಸುಳ್ಳು ಸುದ್ದಿಗೆ ಮನಸ್ಸು ತೆತ್ತು ಬೇರೆಯಾಗಬೇಡ ತನ್ನ ಜೊತೆಗೂಡು ಎಂದು ಕೇಳಿಕೊಳ್ಳುತ್ತಾನೆ.

> 'ನಿನ್ನ ಮೈಸಿರಿಯೇನು?
> ನನ್ನ ಐಸಿರಿಯೇನು?
> ಒಂದುಸಿರೆ ತಾನಾಡಿದಂತೆ ಇಹುದು
> ಹೀಗಿರಲು ಬಾಳುದ್ದ ಬದುಕಬಹುದು .
> ಗಾಳಿಮಾತುಗಳೆಂದು, ಉಸಿರನೆಳೆದಾಡಿದರೆ
> ಪ್ರಾಣವೇ ಬರಿ ಗಾಳಿಯಾಗಲಹುದು'.

ಇಲ್ಲಿ ಗಾಳಿಯು ಗಾಳಿಮಾತು, ಉಸಿರು, ಪ್ರಾಣ, ಬರಿಗಾಳಿಯಾಗಿ ವಾಚ್ಯಾರ್ಥದಲ್ಲಿ ಇದ್ದರೂ - ಪ್ರಾಣ ಹೊತ್ತ ಜೀವಿ ಇನ್ನೊಂದು ಪ್ರಾಣವನ್ನು ಒಲಿಸಿಕೊಳ್ಳುವ ಪ್ರಯತ್ನದಲ್ಲಿರುವಾಗ ಚಿತ್ರ ಧ್ವನಿಪೂರ್ಣವಾಗುತ್ತದೆ. ಇಲ್ಲಿ ಹೆಣ್ಣು ಗಂಡಿಗೆ - ತಮ್ಮ ಅಸಹಾಯಕತೆಗಳು ಮತ್ತು ಮಿತಿಗಳು ಗೊತ್ತಿದ್ದು

ಅವರು ಪರಸ್ಪರರನ್ನು ಅರಿತು ನಂಬಿ ಬಾಳುವುದರಿಂದ ಅವರು ತಮ್ಮ ದೌರ್ಬಲ್ಯವನ್ನು ಮೀರಬಹುದು ಎಂಬ ಭಾವ ವ್ಯಕ್ತವಾಗಿದೆ.

**ನಿನ್ನ ತಾಯ್ತನದ ಸ್ಥೈರಣೆಯ ವಿತರಣೆ ಬೇಕು**

ತಾನು ಗಂಡುದರ್ಪ ತೊರೆದು ನಿನ್ನ ತೊಟ್ಟಿಲ ಮಗುವಿನಂತೆ, ಬಂದಿದ್ದೇನೆ, ನನಗೆ 'ನಿನ್ನ ತಾಯ್ತನದ ಸ್ಥೈರಣೆ'ಯನ್ನು ದಯಪಾಲಿಸು ಎಂಬಲ್ಲಿ - 'generous Indra, make this woman rich in children and fortunes, Give her ten sons and me the eleventh'[43] ಎಂದು ಪ್ರಾರ್ಥಿಸಿದ ಋಗ್ವೇದದ ಚಿಂತನೆಯಿದೆ.

**ಕೂಡಿರಲಿ ಬಾಳು ಇಡಿಗಾಳಿನಂತೆ**

ಈ ಸಂವಾದದ ನಂತರ ಮನದನ್ನೆ ಅವನನ್ನು ಕ್ಷಮಿಸಿ, ಕೂಸಿನ ರೀತಿ ರಮಿಸಿ 'ಅಂಗೈಯ ಹುಣ್ಣಿನಾರೈಕೆ ಕೊಡುವೆ | ಕೂಸೆಂದು ಹುಡುಗನೊಲು ಮುತ್ತನಿಡುವೆ' ಎಂದು ಆಶ್ವಾಸನೆ ನೀಡುವಳು. ಆ ನುಡಿಯಲ್ಲಿ 'ದುಃಖದ ಕಡಲು ಆನಂದದ ಮುತ್ತುಗಳ ತವರುಮನೆಯಾಗಿ ತೆರೆಯಬೇಕು. ಜೀವನದ ನದಿ ಮಹಾಜೀವನದ ಮುನ್ನೀರಿಗೆ ಹಾತೊರೆಯಬೇಕು'[44] ಎಂಬ ಧ್ವನಿಯಿರುವುದು ಕಂಡುಬರುತ್ತದೆ.

ಆಗ ಮನದನ್ನ 'ನಿನ್ನ ಕಣ್ಣೀರ್ಮುತ್ತು | ನನ್ನ ಕೊರಳಿನ ಸುತ್ತು | ಆಭರಣವೆಂದು ಮೆರೆದಾಡುತಿರುವೆ' ಎಂದು ಹೇಳುವಲ್ಲಿ ಅವರು ಒಬ್ಬರಿಗೊಬ್ಬರು ಅರಿತು ಬೆರೆತ ಭಾವವಿದೆ. ಆ ಸಂದರ್ಭದಲ್ಲಿ ಅವನು 'ಸ್ವರ್ಗ ನರಕಕ್ಕೆ ಕರೆದಲ್ಲಿ ಬರುವೆ' ಎಂದು ಹೇಳುವನು. ಆಗ ದಾಂಪತ್ಯವನ್ನು ಕುರಿತ ಸಾರ್ವಕಾಲಿಕ ಸತ್ಯ ಈ ಕಾವ್ಯದಿಂದ ಹೊರಬೀಳುತ್ತದೆ:

> 'ಮಾಡದಿರು ಬಾಳನ್ನು ಬೇಳೆಯಂತೆ
> ಕೂಡಿರಲಿ ಬಾಳು ಇಡಿಗಾಳಿನಂತೆ.'

ಈ ಚಿಂತನೆ ಉಪನಿಷತ್ ಕಾಲದ ಚಿಂತನೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಇದನ್ನು ಹೀಗೆ ವಿವರಿಸಿದೆ: "ಈ ಸ್ತ್ರೀ ಎಂಬವಳು ಬೇರೆಯಾಗಿ (ವಿಂಗಡಿಸಿಕೊಂಡಿ)ರುವ ತನ್ನದೇ ಅರ್ಧವಾಗಿರುವಳಷ್ಟೆ, ಆ ಕಾರಣದಿಂದಲೇ ಈ ಶರೀರವು ತನ್ನ ಅರ್ಧ ಬೃಗಲದಂತೆ ಅರ್ಧವಾಗಿರುವ ಬೃಗಲವು, ಬೇಳೆಯು - ಬೇಳೆಯಂತೆ ಎಂದರ್ಥ; ಸ್ತ್ರೀಯನ್ನು ಮದುವೆಯಾಗುವ ಮುಂಚೆ ಯಾರ ಅರ್ಧ ಬೃಗಲವು? ಎಂದರೆ ತನ್ನ (ಅರ್ಧ ಬೃಗಲವು) ಎಂದು ಹೀಗೆಂದು ಯಾಜ್ಞವಲ್ಕ್ಯನು - ಯಜ್ಞದವಲ್ಕನು ಎಂದರೆ ವಕ್ತೃವು ಯಾಜ್ಞವಲ್ಕನು; ಅವನ ಮಗನು ಯಾಜ್ಞವಲ್ಕ್ಯನು - ದೈವರಾತಿಯು ಎಂದರ್ಥ ಅಥವಾ ಬ್ರಹ್ಮನ ಮಗನು (ಹೇಳಿರುತ್ತಾನೆ). ಈ ಪುರುಷಾರ್ಥವೆಂಬ ಆಕಾಶವು ಸ್ತ್ರೀ ಎಂಬ ಅರ್ಧವಿಲ್ಲದೆ ಇರುವದಷ್ಟೆ, ಆದ್ದರಿಂದ ಮತ್ತೆ ಮದುವೆಯಿಂದ ಆ ಸ್ತ್ರೀಯೆಂಬ (ಅರ್ಧ) ದಿಂದ ಬೇಳೆಯಾಗಿರುವ ಅರ್ಧವು ಮತ್ತೆ ಸಂಪುಟೀಕರಣದಿಂದ (ಪೂರ್ಣವಾಗುವಂತೆ) ಪೂರ್ಣವಾಗುತ್ತದೆ."[45]

ಇದೇ ಚಿಂತನೆಯು ಇನ್ನೂ ವಿಸ್ತಾರಗೊಂಡದ್ದನ್ನು ಮನುವಿನ ಕಾಲದಲ್ಲಿ ಕಾಣುತ್ತೇವೆ. 'The whole subject of marriage is put on an ethical plane. Marriage should be treated as a sacrament. In it, two complementary halves are brought together to make a complete whole. It is more of psychic bond rather than the merely physical. The husband is born of the wife in his child. The three become physically interwined.' (ಮನುಸ್ಮೃತಿ, 1X8)[46] ಈ ವಿಚಾರವನ್ನೇ "ನಾನು-ನೀನು

ಜೀವದ ಎರಡು ಬೇಳೆ; ಬೇಳೆಯಾದರೆ ಬೆಳೆ ಇಲ್ಲ; ಸಾವು-ಜೀವನ ಬೇರೆ ಇಲ್ಲ"[47] ಎಂದು ಜೀಬ್ರಾನ್ ಹೇಳಿದ್ದಾನೆ. 'ಸಾವು ಮತ್ತು ಸ್ವರ್ಗ ಇವು ಬೇಂದ್ರೆಯವರ ಚಿಂತನೆಯ ವಿಷಯಗಳಲ್ಲ. ಪ್ರತಿನಿತ್ಯ ಬಾಳುವ ಜೀವನದಲ್ಲಿ ಅಮರತ್ವವನ್ನು ಅನುಭವಿಸುವುದು ಹೇಗೆ? 'A Theory of immortality' ಎಂಬುದು ಅವರ ಕ್ಷಣಕ್ಷಣದ ಚಿಂತನೆಯ ವಿಷಯ'[48] ವಾಗಿತ್ತು ಎಂದು ವಾಮನ ಬೇಂದ್ರೆಯವರು ತಿಳಿಸಿದ್ದಾರೆ.

ವಿರಸ ಮಾಗಿ ಸರಸ ಮೂಡಿ ಇಡಿಗಾಳಿನಂತಿರುವ ದಂಪತಿಗಳು ಜಗತ್ತಿನ ಉದ್ಧಾರಕ ಸಂತತಿಯ ಜನಕರಾಗುತ್ತಾರೆ ಎಂಬ ವಿಶ್ವ ಚಿಂತನೆಯನ್ನು ಬೇಂದ್ರೆ ನೀಡುತ್ತ ನುಡಿದಿದ್ದಾರೆ:

'ಹೊಸ ಹುಟ್ಟು ಬರುವದಿದೆ ಇನ್ನು ಮುಂದೆ
ಆಗೋಣ ಆ ಜಗದ ತಾಯಿ ತಂದೆ '.

**ಹೋsದ ಬುಧವಾರಾ ಬರssssಲೊಲ್ದು[49]**

ಬೇಂದ್ರೆಯವರ ಕಾವ್ಯದಲ್ಲಿ ಮಡದಿ ಎಂಬ ಈ ವಿಭಾಗದಲ್ಲಿ ಅವರು 'ವಿಧಿ ತಂದ ವಧುವನ್ನು' ಸಖಿಯಾಗಿಸಿಕೊಂಡು ಅವಳಿಂದ ಸಮರಸತತ್ತ್ವವನ್ನು ರೂಪಿಸಿಕೊಂಡಿರುವುದನ್ನು ಕಂಡಿದ್ದೇವೆ. ಅವರ ಪತ್ನಿ ಲಕ್ಷ್ಮೀಬಾಯಿ ಮೃತಳಾದುದು ಬುಧವಾರ, ೧೭ ಆಗಸ್ಟ್ ೧೯೬೬[50] ಶ್ರಾವಣಮಾಸದಲ್ಲಿ. ಅದು ಬೇಂದ್ರೆಯವರಿಗೆ ಸುಖ-ದುಃಖ ಸಂಗಮವಾದ ಮಾಸ. ಅವರು ಸಖಿ ಮರಣಶಯ್ಯೆಯಲ್ಲಿರುವಾಗ ಆಕೆಯ ಶುಶ್ರೂಷೆ ಮಾಡುತ್ತ ಆಕೆಯನ್ನು ಉಳಿಸಲು ಪ್ರಯತ್ನಿಸಿದ್ದು ಕಂಡುಬರುತ್ತದೆ. ಕವಿ ನುಡಿಯುತ್ತಾರೆ:

'ರವೀ ಬೆಳಕಿನ್ಯಾಗ
ಸೋಮಾ! ನೀನs ಇದ್ದಿ
ಮಂಗಳವಾರ ಕೂಡಿತು ಸಂತಿ,
ಹರೀತು ಸಂತಿ.
ರಾತ್ರಿ ಆತು; ಬೆಳಕ ಆಗಲಿಲ್ಲ.

☆ ☆

ತವರುಮನೀಗೆ ಹೊರಡೋ
ಸಡಗರವೇ ಸಡಗರ
ಮಲ್ಲಿಗೀ ಮಾಲಿ ತುರುಬಿಗೆ
ಅರಿಶಿಣಾ ಕುಂಕುಮಗಲ್ಲಾ, ಹಣೀ
ಹೊಸಾ ಸೀರಿ, ತುಂಬಿದ ಉಡಿ
ಉರಿಯೋ ಹಸೆ-ಮಣಿಗೆ ಹೊರಟಿತ್ತು ಸವಾರಿ
ಶ್ರಾವಣಕ್ಕ ಹೊಸಾ ಹರೆ.'

ಬೇಂದ್ರೆಯವರಿಗೆ ಶ್ರಾವಣ ಸುಖ-ದುಃಖ ಸಂಗಮವಾದ ಮಾಸವಾಗಿದೆ. ಸಖೀಗೀತದಲ್ಲಿ 'ಬಂದಿತು ಶ್ರಾವಣ ಹೃದಯವಿದ್ರಾವಣ' ಎಂದಿದ್ದಾರೆ. ಅವರ ಪತ್ನಿ ತೀರಿಹೋದಾಗ ಆ ಶ್ರಾವಣ ಅವರಿಗೆ ರುದ್ರರಮಣೀಯವಾಗಿ ಕಂಡಿದೆ. ಮುತ್ತೈದೆ ಸಾವನ್ನು ಶ್ರಾವಣದ ಸಡಗರ ತುಂಬು ಹಸಿರೆಂದು ಭಾವನಾತ್ಮಕವಾಗಿ ಸೂಚಿಸಿದರೂ, ಕವಿಗೆ ತನ್ನ ಜೀವಸಖಿಯ ಅಗಲಿಕೆ ಸಹಿಸಲಾಗದ ದುಃಖವನ್ನುಂಟುಮಾಡಿದೆ. ಅವಳು ತವರುಮನೆಗೆ ಹೋಗುವ ಸಡಗರದಲ್ಲಿ ಸಿಂಗಾರಗೊಳ್ಳುತ್ತಿದ್ದಾಳೆಂದು ಒಂದು ಬಗೆಯ ನಿರ್ಲಿಪ್ತ ಭಾವವನ್ನು ತಾಳಿದರೂ; ಸತ್ಯವನ್ನು ಮುಚ್ಚಿಡಲಾಗದೆ, ತನ್ನ ಸಖಿ ವಧುವಿನಂತೆ

ಸಿಂಗಾರಗೊಂಡು 'ಉರಿಯೋ ಹಸೆ-ಮಣೆಗೆ ಹೊರಟಿತ್ತು ಸವಾರಿ' ಎಂದು ಹೃದಯವಿದ್ರಾವಕವಾಗಿ ಬಣ್ಣಿಸಿದ್ದಾರೆ. ಮಣ್ಣಿನಿಂದಾದ ದೇಹ ಮಣ್ಣಿನ ಹರ್ಷರೂಪಿ ಶ್ರಾವಣದಲ್ಲಿ ಲೀನವಾಯಿತು ಎಂಬುದನ್ನು 'ಶ್ರಾವಣಕ್ಕೆ ಹೊಸಹರೆ' ಎಂದು ಕರೆದಿರುವುದು ಅವರು ಶ್ರಾವಣದೊಂದಿಗೆ ಹೊಂದಿದ್ದ ತಾದಾತ್ಮ್ಯವನ್ನು ಸಾರುತ್ತದೆ.

**ಶ್ರೀಲಕ್ಷ್ಮಿಗೆ ಶ್ರೀನಾರಾಯಣದತ್ತ ಅಂದ (ಕುಣಿ-ಗುಣಿ)**[51]

ಈ ಕವನದ ಶೀರ್ಷಿಕೆಯಿಂದಲೇ ಇದನ್ನು ಬೇಂದ್ರೆಯವರು ಪತ್ನಿ ಲಕ್ಷ್ಮೀಬಾಯಿಯು ತೀರಿಹೋದ ನಂತರ ಆಕೆಯನ್ನು ನೆನೆದು ಬರೆದಿದ್ದಾರೆ ಎಂದು ಹೇಳಬಹುದು. ಈ ಶೀರ್ಷಿಕೆಯಲ್ಲಿ ಪತ್ನಿ ಲಕ್ಷ್ಮೀಬಾಯಿಯು ಪುರಾಣಕಲ್ಪಿತ ಶ್ರೀಲಕ್ಷ್ಮೀಯಾಗಿದ್ದಾರೆ. ಆದಕಾರಣ ಕವಿ ಶ್ರೀನಾರಾಯಣದತ್ತನಾಗಿ ಈ ಹಾಡನ್ನು ನುಡಿಯುತ್ತಿರುವುದರ ಸೂಚನೆ ಇದೆ. ಇದು ಪುರಾಣಕಥೆಯಂತೆ ಪ್ರಾರಂಭವಾಗಿ ಜಾನಪದ ಗತ್ತಿನಲ್ಲಿ ರಚಿತವಾಗಿದೆ. ಇದು ಸಾನೆಟ್‌ನಲ್ಲಿ ರಚಿತವಾಗಿದ್ದು ಇದರಲ್ಲಿ ಮೂರು ಚೌಪದಿಗಳಿದ್ದು, ಹದಿಮೂರು ಮತ್ತು ಹದಿನಾಲ್ಕನೆಯ ಸಾಲಿನಲ್ಲಿ ಅಂತ್ಯಪ್ರಾಸವಿರುವ ದ್ವಿಪದಿ ಇದೆ. ಈ ಬಗೆಯ ಪ್ರಯೋಗವನ್ನು ಕುರಿತು ಬರೆಯುತ್ತಾ ಎಸ್. ಅನಂತನಾರಾಯಣ ಅವರು 'ಅಂತ್ಯಪ್ರಾಸದ ಈ ದ್ವಿಪದಿಯ ಕಟ್ಟಿನಲ್ಲಿ ಭಾವದ ಒಯ್ಯಲನ್ನು ತಡೆಹಿಡಿಯುವ ಕಲಾತ್ಮಕ ರೀತಿ ಪು.ತಿ.ನ. ಅವರ ಸಾನೆಟ್ಟುಗಳ ವೈಶಿಷ್ಟ್ಯ... ಮಿಂಚಿನಂತೆ ತಪ್ಪಿಸಿಕೊಂಡು ಹೋಗಿಬಿಡುವ ಕ್ಷಣ, ಮಿಂಚಿನ ಭಾವ, ಓಡುವಿಚಾರ, ಚಿಂತನ ಇವುಗಳನ್ನು ಅಚ್ಚುಕಟ್ಟಾಗಿ ಹಿಡಿದಿಡುವ ರೂಪ ಇದು ಎಂದು ಪು.ತಿ.ನ. ಅವರ ಅಭಿಪ್ರಾಯ'[52] ಎಂದು ಹೇಳಿದ್ದಾರೆ.

ಕವಿ ಮೊದಲ ಚೌಪದಿಯಲ್ಲಿ ಪತ್ನಿ ಲಕ್ಷ್ಮೀಬಾಯಿಯನ್ನು ಪುರಾಣಲೋಕದ ಶ್ರೀಲಕ್ಷ್ಮೀಯಾಗಿಸಿ - ನೀನು ನನ್ನ ಜೀವನದಲ್ಲಿ ಲಕ್ಷ್ಮಿಯ ರೂಪವಾಗಿ ಶ್ರೇಷ್ಠ ಮೌಲ್ಯದವಳಾಗಿರುವೆ ಎಂದಿದ್ದಾರೆ. ಜೊತೆಗೆ ಆಕೆ ತನ್ನಿಂದ ದೂರವಾಗಿರುವುದೇ ಕಾರಣವಾಗಿ ಸೊರಗಿರಬೇಕು ಮರುಗುತ್ತಿರಬೇಕು ಎಂಬ ಮಧುರ ಕಲ್ಪನೆಯಿಂದ 'ಸೊರಗತಿ ಯಾಕ?', 'ಮರಗತಿ ಯಾಕ?' ಎಂದು ಪ್ರಶ್ನಿಸಿರುವ ಬಗೆ ಕವಿಯ ಅಪಾರ ಒಲ್ಮೆಯ ಮೃದುನುಡಿಯಾಗಿದೆ.

ಎರಡನೆಯ ಮತ್ತು ಮೂರನೆಯ ಚೌಪದಿಯಲ್ಲಿ ಕವಿ ಭಾವುಕರಾಗಿ ಆಕೆ ತನ್ನ ಪಕ್ಕದಲ್ಲಿಯೇ ಇರುವಂತೆ ಮಾತನಾಡಿದ್ದಾರೆ. ತನ್ನ ಅಪೂರ್ಣ ಪ್ರೇಮಕ್ಕೆ ಸಾಮಾಜಿಕ ಕಾರಣ ಹೇಳಿ, 'ಕೂದಲಿಗೊಬ್ಬ ಭಕ್ತ ನನಗ ಇಡಕ್ಕಿಡೀ ನಾ ಬೇಕು ನಿನಗ'. ಈ ಸಮಸ್ಯೆಯಿಂದ ನಾನು ಬಿಡಿಸಿಕೊಳ್ಳಲಾಗಲಿಲ್ಲ. ನೀನು ಸ್ವರ್ಗದ ಅಮೂಲ್ಯ ವಸ್ತು, ಈ ಭೂಮಿಯ ಮೇಲೆ ಹುಟ್ಟಿರುವುದರಿಂದ ಸ್ವರ್ಗದ ಸ್ವಪ್ನ ಮರೆತು ಇಲ್ಲಿಯ ಕಲ್ಲಿನ ಸೆಲೆಯಲ್ಲಡಗಿರುವ ನೀರನ್ನು ಸವಿ ಎಂದಿದ್ದಾರೆ. ಈ ಜೀವನವನ್ನೂ ತನ್ನನ್ನೂ ಕುರಿತು 'ತಿರುಗಣಿ ಮಡುವು ಮನುಷಾರ ಮನದಿ ಸುಳಿ' ಎಂದಿದ್ದಾರೆ. ಇದೇ ಕಾರಣದಿಂದ ನನ್ನಿಂದ ಬಿಡಿಸಿಕೊಂಡು ಹೋಗಬೇಡ, 'ಹಿಡಿದ ತಪ್ಪಿಗೆ ನನ್ನ ಕೈ ಕೊಸರಬ್ಯಾಡ ಇನ್ನ ಹೆಜ್ಜಿಮ್ಯಾಲೆ, ಹೆಜ್ಜಿ ಹಾಕು, ಹೇಳಿದ್ದು ತಿಳಿ' ಎಂದು ಹೇಳಿಕೊಂಡಿರುವ ಬಗೆ ಕವಿಯ ಆತ್ಮಶೋಧನೆಯ ಚಿಂತನವಾಗಿ, ತನ್ನ ಪತ್ನಿ ತನ್ನಿಂದ ದೂರವಾಗಬಾರದು ಎಂಬ ಅತೀವ ಪ್ರೇಮದ ಅಭಿವ್ಯಕ್ತಿಯನ್ನು ನೀಡಿದೆ. ಹೀಗೆ ಹೇಳಲು ಕಾರಣವನ್ನು ಶೋಧಿಸಿದಾಗ ಇಲ್ಲಿ ಕವಿಯ ಇನ್ನೊಂದು ಮುಖ ಸೂಕ್ಷ್ಮವಾಗಿ ಪ್ರತಿಬಿಂಬಿತವಾಗಿರುವುದು ಕಾಣುತ್ತದೆ. ಅದು ತೀರಿಹೋದ ಪತ್ನಿ ಈಗ ಸದಾ ತನ್ನೊಡನಿದ್ದಾಳೆ, ತಾನು ಅವಳ ಜೊತೆಗೇ ಇರುವೆನೆಂಬ ಭಾವ. ಆದರೆ ಈ ಬೇರೆಯಾಗದ ಸ್ಥಿತಿ ಆಕೆ ಜೀವಂತವಾಗಿರುವಾಗ ಸಾಧ್ಯವಾಗಿರಲಿಲ್ಲ. ಈಗ ಅಂತಹ ಭಾವ ತನ್ನಿಂದ ದೂರವಾಗಬಾರದು

ಜೊತೆಗೆ ಆಕೆ ತನ್ನ ಕಾವ್ಯದ ಸ್ಫೂರ್ತಿಯಾಗಿ ಸದಾ ತನ್ನ ಜೊತೆ ಇರಬೇಕು ಎಂದು ಮೂಡಿದ ಚಿಂತನೆ ಇದಾಗಿದೆ.

ಕವಿಗೆ ತಾನು ಕಾವ್ಯರ್ಷಿಯಾದರೂ ತನ್ನ ಸಖಿ ಇಲ್ಲದ ಬಾಳು ವ್ಯರ್ಥವೆನಿಸಿದೆ. ಆದಕಾರಣ ಅವನಲ್ಲಿ ಜೀವರಸ ತುಂಬಲು ಆಕೆ ಬೇಕಾಗಿದೆ. ಆಕೆಯನ್ನು ಕುಡುಹಿನ ರೂಪಕವಾಗಿಸಿ ವಾದ್ಯವಾದ ತಾನು ನುಡಿಯಲು ಆಕೆಯೇ ಕಾರಣ ಎಂದಿದ್ದಾರೆ. ನಾಲಗೆಯ ಮೇಲೆ ಕಾವ್ಯ ಹುಟ್ಟುತ್ತದೆ ಅದಕ್ಕೆ ಸ್ಫೂರ್ತಿ ಸರಸ್ವತಿ, ಅವಳು ರಸವತಿ. ಹಾಗೆಯೆ ಪತ್ನಿ ಮರಣಾನಂತರವೂ ಕುಡುಹಾಗಿ ತನ್ನಲ್ಲಿ ಕಾವ್ಯ ನಿರಂತರವಾಗಿ ಹರಿಯಲು ಕಾರಣವಾಗಿದ್ದಾಳೆ. ಗುಣವಂತಿಯಾದ ಅವಳು ತನ್ನ ನಾಲಗೆಯಲ್ಲಿ ಈಗಲೂ ಕುಣಿಯುತ್ತಿದ್ದಾಳೆ. ಆಕೆ ಬದುಕಿದ್ದಾಗ ಸ್ಫೂರ್ತಿಚೇತನೆಯಾಗಿದ್ದಂತೆ ಈಗಲೂ ಇದ್ದಾಳೆ ಎಂದು ಹೇಳಿದ್ದಾರೆ. ಹೀಗೆ ಹೇಳುತ್ತ ದಾಂಪತ್ಯ ಜೀವನದ ಸಫಲತೆಯನ್ನು :

> 'ಋಷಿಕವಿ ಏನು ಕಂಡನೋ? ಸಾಹಿತ್ಯವೆಂದರೂ ಏನು ಮಣ್ಣೋ?
> ನನ್ನ ಕುಡುಹಿನ ನಾಲಿಗೆಯಲಿ ನೀನೇ ಕುಣಿ, ನೀನೇ ಗುಣಿ!'

ಎಂದು ಕಾವ್ಯವಾಗಿಸಿದ್ದಾರೆ. ಜೀವನ ಸಾಮರಸ್ಯಕ್ಕೆ ದಾಂಪತ್ಯದ ಜೀವನವೇ ಪ್ರಥಮ ಪಾಠಶಾಲೆ. ಕುಡಿಯುವ ಪಾನಕದಲ್ಲಿ ನೀರು, ಸಕ್ಕರೆ, ಉಪ್ಪು, ಲಿಂಬಿಯ ಹುಳಿ ಪ್ರಮಾಣದಲ್ಲಿ ಹಾಕಿ ಏಕರಸಪಾಕಗೊಳಿಸಿದಷ್ಟು ಸುಲಭ ಸಾಮರಸ್ಯ ಅಲ್ಲ. ರಸ-ವಿರಸ; ಸುಖ-ದುಃಖ; ವಾದ-ಸಂವಾದ; ಸಿಟ್ಟು-ಒಪ್ಪಂದ; ಆತಂಕ-ನಿರಾತಂಕದ ನೆಲೆಗಳು ಮತ್ತೆ ಮತ್ತೆ ಬರುತ್ತವೆ. ಪ್ರತಿಸಲವೂ ವಿರಸಕ್ಕೆ ಎಡೆಗೊಡದೆ ಎಚ್ಚರ ರಸತ್ವಕ್ಕೆ ತಲುಪುವ ನಿಶ್ಚಯ ಇರಬೇಕಾಗುತ್ತದೆ. ಸಮರಸ ಸಿದ್ಧಾಂತ ಸಮುದ್ರಮಂಥನಕ್ಕೆ ಸಮನಾದ ಕ್ರಿಯೆ. ಮಂಥನದ ಕಾಲಕ್ಕೆ ವಿಷವೂ ತೇಲಿಬರುತ್ತದೆ, ಅಮೃತವೂ ತೇಲಿಬರುತ್ತದೆ. ವಿಷವನ್ನು ಕಂಠದಲ್ಲಿ ಧರಿಸಿ ನೀಲಕಂಠ ಶಿವರಾಗಿ, ಅಮೃತಧಾರಿಗಳಾಗಿ ದಾಂಪತ್ಯ ಜೀವನದಲ್ಲಿ ಸಮರಸತೆಯನ್ನು ತಲುಪಬೇಕಾಗುತ್ತದೆ. ಇಬ್ಬರೂ ಅಳು ನುಂಗಿ ನಗಲು ಸಿದ್ಧರಾದಾಗ ಮಾತ್ರ ಸಾಮರಸ್ಯದ ಹೊನಲು ಗಂಗಾಪ್ರವಾಹವಾಗಿ ಕೌಟುಂಬಿಕ ಜೀವನವನ್ನು ಪವಿತ್ರಗೊಳಿಸುತ್ತದೆ. ಈ ಸಿದ್ಧಾಂತದ ಪ್ರಾತ್ಯಕ್ಷಿಕೆ ರೂಪವೆಂದರೆ ಈವರೆಗೆ ವಿವರಿಸಿದ ಬೇಂದ್ರೆ ಕವನಗಳ ಅಂತರಂಗ ಸಮೀಕ್ಷೆ.

**ಸಂಖ್ಯಾ ಟಿಪ್ಪಣಿಗಳು**

1. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ, 1974, ಪು. 142.
2. ದ.ರಾ.ಬೇಂದ್ರೆ, ಮತ್ತೆ ಶ್ರಾವಣಾ ಬಂತು, ಸಮಾಜ ಪುಸ್ತಕಾಲಯ, ಧಾರವಾಡ, 1973, ಪು. 48.
3. ಶ್ರೀ ಅರವಿಂದರು ಮತ್ತು ಶ್ರೀಮಾತೆ, ಸ್ತ್ರೀಶಕ್ತಿ, (ಅನು.) ಆರ್.ಜಿ.ಕುಲಕರ್ಣಿ, ಶ್ರೀ ದ.ರಾ.ಬೇಂದ್ರೆ, ಸ್ನೇಹ ಮಂಡಲಿ, ಬೆಂಗಳೂರು, 1998, ಪು. 53.
4. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. 107.
5. ದ.ರಾ.ಬೇಂದ್ರೆ, ಮಾತೆಲ್ಲ ಜ್ಯೋತಿ, ಮಣಿಪಾಲ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್ (ಲಿ.), ಮಣಿಪಾಲ, 1992, ಪು. 70.
6. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. 195.
7. ದ.ರಾ.ಬೇಂದ್ರೆ, ಮಾತೆಲ್ಲ ಜ್ಯೋತಿ, ಪೂರ್ವೋಕ್ತ, ಪು. 71.
8. ಶ್ರೀ ಅರವಿಂದರು ಮತ್ತು ಶ್ರೀಮಾತೆ, ಸ್ತ್ರೀಶಕ್ತಿ, ಪೂರ್ವೋಕ್ತ, ಪು. 78, 79, 80.
9. ಎ.ಸಿ. ಬೋಸ್, The call of the Vedas, ಭಾರತೀಯ ವಿದ್ಯಾಭವನ, ಬಾಂಬೆ, 1960, ಪು. 227.

10. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. 80, 81.
11. ದ.ರಾ.ಬೇಂದ್ರೆ, ಉಯ್ಯಾಲೆ, ಸಮಾಜ ಪುಸ್ತಕಾಲಯ, ಧಾರವಾಡ, 1980, ಪು. 40.
12. ಎ.ಸಿ.ಬೋಸ್, The call of the Vedas, ಪೂರ್ವೋಕ್ತ, ಪು. 255.
13. ದ.ರಾ.ಬೇಂದ್ರೆ, ನಾದಲೀಲೆ, ಶ್ರೀಮಾತಾ ಪ್ರಕಾಶನ, ಧಾರವಾಡ, 1989, ಪು. 62.
14. ಅದೇ, ಪು. 91.
15. ದ.ರಾ.ಬೇಂದ್ರೆ, ಉಯ್ಯಾಲೆ, ಪೂರ್ವೋಕ್ತ, ಪು. 78.
16. ದ.ರಾ.ಬೇಂದ್ರೆ, ಗಂಗಾವತರಣ, ಶ್ರೀಮಾತಾ ಪ್ರಕಾಶನ, ಧಾರವಾಡ, 1989, ಪು. 17.
17. ದ.ರಾ.ಬೇಂದ್ರೆ, ಮೂರ್ತಿ ಮತ್ತು ಕಾಮಕಸ್ತೂರಿ, ಪ್ರತಿಭಾ ಮುದ್ರಣ, ಧಾರವಾಡ, 1955, ಪು. 11.
18. ದ.ರಾ.ಬೇಂದ್ರೆ, ಯಕ್ಷ-ಯಕ್ಷಿ, ಪ್ರತಿಭಾ ಗ್ರಂಥಮಾಲೆ, ಧಾರವಾಡ, 1962, ಪು. 53.
19. ಎ.ಸಿ.ಬೋಸ್, The call of the Vedas, ಪೂರ್ವೋಕ್ತ, ಪು. 258, 259.
20. ದ.ರಾ.ಬೇಂದ್ರೆ, 'ಆತ್ಮಕಥನ', ಜಿ.ಬಿ.ಜೋಶಿ, ಕೆ.ಡಿ.ಕುರ್ತಕೋಟಿ (ಸಂ.) ಶ್ರಾವಣ ಪ್ರತಿಭೆ, ಮನೋಹರ ಗ್ರಂಥಮಾಲಾ, ಧಾರವಾಡ, 1987, ಪು. 433.
21 ದ.ರಾ.ಬೇಂದ್ರೆ, ಮುನ್ನುಡಿ, ಸಖೀಗೀತ, ಶ್ರೀಮಾತಾ ಪ್ರಕಾಶನ, ಧಾರವಾಡ, 1990, ಪು. xxxi.
22. ಜಿ.ಎಸ್. ಆಮೂರ, 'ಅಂಬಿಕಾತನಯದತ್ತರ ಸಖೀಗೀತಕ್ಕೆ ಸಹೃದಯಸ್ಪಂದನ', ಸಖೀಗೀತ, ಅದೇ, ಪು. xvii.
23. ದ.ರಾ.ಬೇಂದ್ರೆ, ಮುನ್ನುಡಿ, ಅದೇ ಪು. xxxi, xxxii.
24. ವಿ.ಕೃ.ಗೋಕಾಕ, Bendre: Poet and Seer, ಸೋಮಯ್ಯ ಪಬ್ಲಿಕೇಷನ್ಸ್, ಪ್ರೈ.ಲಿ. ಬಾಂಬೆ, 1970, ಪು. 62.
25. ತೀ.ನಂ.ಶ್ರೀ., ಸಮಾಲೋಕನ, ಶಾರದಾ ಮಂದಿರ, ಮೈಸೂರು, 1958, ಪು. 53, 54.
26. ಡಿ.ಆರ್. ನಾಗರಾಜ್, ಶಕ್ತಿಶಾರದೆಯ ಮೇಳ, ಅಕ್ಷರ ಪ್ರಕಾಶನ, ಸಾಗರ, 1987, ಪು. 289.
27. ವಾಮನ ಬೇಂದ್ರೆ, 'ವಿಭಾಗ 5, ಅನುಬಂಧ 24, ಬೇಂದ್ರೆ ಬದುಕು', ಬೇಂದ್ರೆ ಜೀವನ ಪರಿಚಯ, ಶ್ರೀಮಾತಾ ಪ್ರಕಾಶನ, 1998, ಪು. 254, 255, 256.
28. ವಾಮನ ಬೇಂದ್ರೆ, 'ಸಂನುಡಿ', ಸಖೀಗೀತ, ಪೂರ್ವೋಕ್ತ, ಪು. xii.
29. ಕೀರ್ತಿನಾಥ ಕುರ್ತಕೋಟಿ, ಬಾರೋ ಸಾಧನಕೇರಿಗೆ, ಮನೋಹರ ಗ್ರಂಥಮಾಲಾ, ಧಾರವಾಡ, 1993, ಪು. 53.
30. ವಾಮನ ಬೇಂದ್ರೆ, 'ಅನುಬಂಧ-1, ನನ್ನ ತಾಯಿ' ದ.ರಾ.ಬೇಂದ್ರೆ, ಮತ್ತೆ ಶ್ರಾವಣ ಬಂತು, ಪೂರ್ವೋಕ್ತ, ಪು. 58.
31. ಶಂಕರ ಮೊಕಾಶಿ ಪುಣೇಕರ, ಬೇಂದ್ರೆ ಕಾವ್ಯಮೀಮಾಂಸೆ, ಸಾಹಿತ್ಯ ಭಂಡಾರ, ಬೆಂಗಳೂರು, 1989,ಪು. 77.
32. ದ.ರಾ.ಬೇಂದ್ರೆ, ಗರಿ, ಶ್ರೀಮಾತಾ ಪ್ರಕಾಶನ, ಧಾರವಾಡ, 1989, ಪು. 99.
33. ಜಿ.ಎಸ್. ಆಮೂರ, ಭುವನದ ಭಾಗ್ಯ, ಸ್ನೇಹ ಪ್ರಕಾಶನ, ಬೆಂಗಳೂರು, 1991, ಪು. 107.
34. ದ.ರಾ.ಬೇಂದ್ರೆ, ಗರಿ, ಪೂರ್ವೋಕ್ತ, ಪು. 122.
35. ವಾಮನ ಬೇಂದ್ರೆ, ಅನುಬಂಧ-1, 'ನನ್ನ ತಾಯಿ', ದ.ರಾ.ಬೇಂದ್ರೆ, ಮತ್ತೆ ಶ್ರಾವಣಾ ಬಂತು, ಪೂರ್ವೋಕ್ತ, ಪು. 91.

36. ದ.ರಾ.ಬೇಂದ್ರೆ, ನಾದಲೀಲೆ, ಪೂರ್ವೋಕ್ತ, ಪು.91.
37. ಅದೇ, ಪು. 58.
38. ದ.ರಾ.ಬೇಂದ್ರೆ, ಗಂಗಾವತರಣ, ಪೂರ್ವೋಕ್ತ, ಪು. 18.
39. ದ.ರಾ.ಬೇಂದ್ರೆ, ನಾದಲೀಲೆ, ಪೂರ್ವೋಕ್ತ, ಪು. 63.
40. ಕೆ.ಎಸ್.ನಿಸಾರ್ ಅಹಮದ್, 'ಬೇಂದ್ರೆಯವರ ಮನದನ್ನೆ', ಬುದ್ದಣ್ಣ ಹಿಂಗಮಿರೆ (ಸಂ.), ಇಳಿದು ಬಾ ತಾಯಿ, ಸಮಾಜ ಪುಸ್ತಕಾಲಯ, ಧಾರವಾಡ, 1977, ಪು. 448.
41. ಎ.ಸಿ.ಬೋಸ್, The call of the vedas, ಪೂರ್ವೋಕ್ತ, ಪು. 261.
42. ಶಕುಂತಲಾ ಶಾಸ್ತ್ರೀರಾವ್, Women in the Vedic age, ಭಾರತೀಯ ವಿದ್ಯಾಭವನ, ಬಾಂಬೆ, 1954, ಪು. 79.
43. ಅಕ್ಷಯಕುಮಾರಿದೇವಿ, A History of Sanskrit Literature, ವಿಜಯಕೃಷ್ಣ ಬ್ರದರ್ಸ್, ಕಲ್ಕತ್ತ, ಪು. 32.
44. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. 25.
45. ಶ್ರೀ ಶಾಂಕರಭಾಷ್ಯ ಸಮೇತ ಬೃಹದಾರಣ್ಯಕೋಪನಿಷತ್ತು, ಒಂದನೆಯ ಭಾಗ, ಅಧ್ಯಾತ್ಮ ಪ್ರಕಾಶನ ಕಾರ್ಯಾಲಯ, ಹೊಳೆನರಸೀಪುರ, 1984, ಪು. 179.
46. ಕೇವಲ್ ಮೋತ್ವಾನಿ, Manu Dharma Shastra, ಗಣೇಶ್ ಅಂಡ್ ಕಂ. (ಮದ್ರಾಸು) ಪ್ರೈ.ಲಿ. ಮದ್ರಾಸು, 1958, ಪು. 116.
47. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. 100.
48. ವಾಮನ ಬೇಂದ್ರೆ, 'ಉಯ್ಯಾಲೆಯ ತಂತ್ರ ಚತುರ್ಮುಖ', ದ.ರಾ.ಬೇಂದ್ರೆ, ಉಯ್ಯಾಲೆ, ಪೂರ್ವೋಕ್ತ, ಪು. 122.
49. ದ.ರಾ.ಬೇಂದ್ರೆ, ಮತ್ತೆ ಶ್ರಾವಣಾ ಬಂತು, ಪೂರ್ವೋಕ್ತ, ಪು. 45.
50. ವಾಮನ ಬೇಂದ್ರೆ, ಅನುಬಂಧ-1, 'ನನ್ನ ತಾಯಿ', ಅದೇ, ಪು. 69.
51. ದ.ರಾ.ಬೇಂದ್ರೆ, ಪರಾಕಿ, ಸಮಾಜ ಪುಸ್ತಕಾಲಯ, ಧಾರವಾಡ, 1982, ಪು. 30.
52. ಎಸ್. ಅನಂತನಾರಾಯಣ, 'ಸಾನೆಟ್: ಮೂಲ, ಸ್ವರೂಪ, ಇತಿಹಾಸ', ಹಾ.ಮಾ.ನಾಯಕ, ಸಿ.ಪಿ.ಕೃಷ್ಣಕುಮಾರ್ (ಸಂ.) ಕನ್ನಡ ಛಂದಸ್ಸಿನ ಚರಿತ್ರೆ, (ಎರಡನೆಯ ಸಂಪುಟ), ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ.ವಿ. ಮೈಸೂರು, 1980. ಪು. 508.

# ಮುಖ ನಾಲ್ಕು : ಮಗಳು, ಸಾಹಿತ್ಯಸಹೋದರಿಯರು ಇತರ ಸ್ತ್ರೀಯರು

ಬೇಂದ್ರೆಯವರು ಮಗಳನ್ನು 'ನನ್ನೆದೆಯ ಮುಗುಳು' ಎಂದು ಕರೆದು ಹೃದಯಾನಂದಪಟ್ಟಿದ್ದಾರೆ. ಅವರ ಮಗಳ ಹೆಸರು ಮಂಗಲ. ಅದೇ ಹೆಸರಿನಿಂದ 'ಮಂಗಳಾ' ಎಂಬ ಕವಿತೆಯನ್ನು, 'ಒಂದು ಕನಸಿನ ಕಥೆ', 'ಸಂಜೀಯು ಜಾವಿಗೆ', 'ಸರ್ವಮಂಗಲೆ' ಮುಂತಾದ ಕವನಗಳನ್ನು ರಚಿಸಿದ್ದಾರೆ. ಬೇಂದ್ರೆಯವರು 'ಜೀವನಕಲ್ಯಾಣ' ಕವನದಲ್ಲಿ 'ಜೀವನ ಒಂದು ನಾsಟಕs | ಹೂವು ಹಣ್ಣಿನಾ ಕೂಟಕs' ಎಂಬ ಕೋಲುಹಾಡಿನ ಧಾಟಿಯಲ್ಲಿ ಹಾಡುತ್ತ ಜಗದ ಜೀವಿಗಳ ಜೀವವಿರುವ ಜಾಗವನ್ನು ಕುರಿತು 'ಜೀವಂಬೋದು ಮಕ್ಕಳ ನೋಟ | ಮಾಯಾದೇವಿ ಮಾಟಕ' ಎಂದಿದ್ದಾರೆ. ಮಕ್ಕಳ ನೋಟದಲ್ಲಿಯೂ ತಂದೆಯಾದವನಿಗೆ ಮಗಳ ನೋಟವೆಂದರೆ ಅದು'ಬೆಳಕು ತೊರೆ, ಬಿದಿಗೆಯ ಚಂದ್ರ'ನಂತೆ.

**ಮಗುವಿನ ಜಗ ಮಂಗಳೇ**[2]

ಬೇಂದ್ರೆಯವರು ಪ್ರಕೃತಿಯ ಭಾಗವಾದ ಮನುಜರನ್ನು ಮರಕ್ಕೆ ಹೋಲಿಸಿಕೊಂಡು ಅದರ ಹೂವು ಮಕ್ಕಳೆಂದಿದ್ದಾರೆ. ಈ ಜಗದ ಬಾಳಿನಲ್ಲಿ ಕಪ್ಪೆ ಕೆಸರು ಇದ್ದರೂ ತಾವರೆಯಂತಹ ಮಕ್ಕಳಿದ್ದರೆ ಸಾಕು ಸಾರ್ಥಕವಾಯಿತು ಎಂದಿದ್ದಾರೆ.

'ಮರವು ನಾವು, ನೀವು ಹೂವು
ನಮಗೆ ನಲಿವು ನೀವಿರೆ
ಇರಲಿ ನೀರು ಕಪ್ಪೆ ಕೆಸರು
ಸಾಕು ಇರಲು ತಾವರೆ '.

ಅವರಿಗೆ ಮಗಳ ನಗೆ ಎಂದರೆ ಆನಂದ. 'ನಗೂ ನಗೂ ಹಾಗೆ ನಗು | ಆಡು ಮಗಳೆ ಮಂಗಳಾ' ಎಂದು ಆ ನಗೆಯ ಆಟದಲ್ಲಿ ತಮ್ಮೆಲ್ಲ ನೋವನ್ನು ಮರೆತು ಆನಂದಿಸಿದ್ದಾರೆ. ಅದರ ಅಭಿವ್ಯಕ್ತಿಯಾಗಿ 'ತುಂಬಲಿ ಮನೆ ಸುರಿಯಲಿ ಸೊನೆ | ಸೂಸುತಿರಲಿ ಅಂಗಳಾ' ಎಂದಿದ್ದಾರೆ. ಆ ಮಗಳು ಹುಸಿನಕ್ಕರೂ ಅದು ರತ್ನಧವಳ ಮುತ್ತು ಹವಳ. ಆ ಮುದ್ದು ಮಗಳ ಜೊಲ್ಲು ಜೇನು. ಅದು ತಂದೆಗೆ ಅವಳು ನೀಡುವ ಬೆಲ್ಲ ಸಕ್ಕರೆ. ಆದಕಾರಣ ನುಡಿದಿದ್ದಾರೆ: 'ತುಟಿಯಲೇನು ಜೊಲ್ಲು ಜೇನು | ನಿನ್ನ ಬೆಲ್ಲ ಸಕ್ಕರೆ.' ಈ ನೆಲಕ್ಕೆ ಸ್ವರ್ಗವನ್ನು ತಂದವರು ಮಕ್ಕಳು. ಅವರಿಂದಲೇ ತಂದೆ ತಾಯಿಗೆ ಸ್ವರ್ಗದ ಅನುಭವ: ಅದೇ ಮಂಗಳಮಯವೆಂದು ತನ್ನ ಮಗಳ ಹಾಡನ್ನು ಹಾಡುತ್ತ ಜಗದೆಲ್ಲ ತಂದೆತಾಯಿಯರ ಆನಂದವನ್ನು, ಮಂಗಲ ಭಾವವನ್ನು ಧ್ವನಿಸುತ್ತ ಸಾರ್ವಕಾಲಿಕ ಸತ್ಯವನ್ನು ಹೀಗೆ ನುಡಿದಿದ್ದಾರೆ:

'ಸ್ವರ್ಗ, ಮಕ್ಕಳಾಟ ಕಂಡು
ಹಿಗ್ಗಬಲ್ಲ ಕಂಗಳೇ
ಮಗುವಿನ ನಗೆ ಮಗುವಿನ ಬಗೆ
ಮಗುವಿನ ಜಗ ಮಂಗಳೇ'.

**ಸುಖದ ಮುಖದೊಳಗುಕ್ಕಿಬಂದಂತೆ ನಗುವು**

ಬೇಂದ್ರೆಯವರ 'ಒಂದು ಕನಸಿನ ಕಥೆ' ಅವರೇ ಭಾವಸಂದರ್ಭದಲ್ಲಿ ಸೂಚಿಸಿರುವಂತೆ 'ಕನಸಿನ ಕಥೆಯು ನಿಜವಾಗಿಯೂ ಒಂದು ಕನಸಿನ ಕಥೆಯು. ಇದರ ಅರ್ಥಕ್ಕಿಂತ ಈ ಕನಸಿನ ರೀತಿಯೆ ರಮ್ಯವಾಗಿ ತೋರಿತು. ಅದರ ರಹಸ್ಯ ನನಗೂ ಇನ್ನೂ ಗೂಢವೇ' ಎಂಬಂತೆ ಗೂಢವಾಗಿದೆ. ಕಥೆಯನ್ನು ಕವಿ ತನ್ನ ಮಗಳಿಗೆ ಹೇಳುವಾಗ ಕಥೆಯಂತೆ ಸಾಗಿದ ಕವನ ಕನಸಿನ ಯಕ್ಷಲೋಕ ಸಂಚಾರದಲ್ಲಿ ಗಿಳಿಹಿಂಡು ಹಿಡಿಯಹೋಗಿ ಹುಡುಗನಂತಾದುದು ಅವರ ಮುಗ್ಧ ಮನಸ್ಸಿಗೆ ಸಂಕೇತವಾಗಿದೆ. ಹುಡುಗ ಹಿಡಿಯಹೋದ ಹಕ್ಕಿ 'ಗೆಳೆಯರ ಗುಂಪಿ'ನ ಆಶೆಯ ಹಕ್ಕಿ ಎನ್ನಬಹುದು.

ಕನಸಿನಲ್ಲಿ ಕತೆ ಒಂದಕ್ಕೊಂದು ಸಂಬಂಧವಿಲ್ಲದಂತೆ ಹೆಣೆಯುತ್ತಾ ಹೋಗಿರುತ್ತದೆ. ಆದರೆ ಅದರ ಜೀವತಂತು ಕನಸುಗಾರನ ಜೊತೆಗೆ ಹೆಣೆದು ಸಾಗಿರುವುದರಿಂದ ಅವನ ಒಳಭಾವ ಮತ್ತೊಂದು ರೂಪ ಪಡೆಯುತ್ತದೆ. ಹಾಗಾಗಿ ಮಾತೃವತ್ಸಲನಾದ ಬೇಂದ್ರೆ ತನ್ನ ತಾಯಿಯನ್ನು ತನ್ನ ಮಗಳಲ್ಲಿ ಕಂಡು ಅವಳೇ ಮಗಳಾಗಿ ತಾಯಿಯಾಗಿ ಆನಂದವನ್ನು ನೀಡಿರಬಹುದು. ಹಾಗಾಗಿ ಕವಿ ನುಡಿದಿದ್ದಾನೆ:

'ತಾಯಾಗಿ ಹಾಯಾಗಿ ತಾನೆ ಆಡುತ್ತ
ನೀನು ಲೀಲೆಯೊಳಿದ್ದೆ ಮಗುವ ನೋಡುತ್ತ
ಆಗ ನಿನ್ನಾ ರೂಪ ಏನು ರೂಪ !
ರಾಣಿ ಎನಬಹುದಾಗಿತ್ತು ರಾಜಭೂಪ
ನಿನ್ನ ರೂಪಕೆ ತಕ್ಕ ನಿನ್ನ ಮಗವು
ಸುಖದ ಮುಖದೊಳಗುಕ್ಕಿ ಬಂದಂತೆ ನಗುವು'

ಸಂಭಾಷಣೆಯ ರೂಪದ ಈ ಕವನದಲ್ಲಿ ತಂದೆ ಮಗಳ ಸಂಭಾಷಣೆಯ ಕೊನೆಯಲ್ಲಿ ಮಗಳ ಮಾತು :

'ಕಥೆ ಆಯಿತೇ ಅಣ್ಣಾ, ಬಹಳ ಸಣ್ಣ
ಕಥೆಯ ಮೈಗಿಂತ ಮಿಗಿಲದರ ಬಣ್ಣ'

ಎಂಬುದು ಕವನದಲ್ಲಿಯೇ ಇರುವ ನುಡಿಯಂತೆ 'ಒಳಗಿರುವ ಭಾವಗಳ ಬಣ್ಣ ಮೂಡಿತ್ತು | ರಸ ಸರಸವಾಡುವೊಲು ಜೀವಗೂಡಿತ್ತು' ಎಂಬಂತೆ ಕವಿಯ ಒಳಭಾವಾಭಿವ್ಯಕ್ತಿಯಾಗಿ ಗೂಢವಾಗಿಯೇ ಇದ್ದು, ನನಗೆ ತಿಳಿದಂತೆ ಇದರ ಅರ್ಥ ಹಿಡಿಯಲು ಪ್ರಯತ್ನಿಸಿರುವೆನು. ಈ ಗೂಢವೆ ಇದರ ಜೀವವಾಗಿ ತಂದೆ ಮಗಳ ಸಂವಾದ 'ಒಂದು ಕನಸಿನ ಕಥೆ' ಯಾಗಿ ಕನ್ನಡ ಕಾವ್ಯಲೋಕದಲ್ಲಿದೆ.

**ತುಂ ತುಮುಕು ತಂಬಿಗೆ**

ಮಗಳ ಬಗ್ಗೆ ಮೋಹ ವಿಪರೀತವಾಗಿ ತುಂಬಿ ಹರಿದ ಭಾವ ಜಾನಪದ ಧಾಟಿಯ 'ಸಂಜೀಯ ಜಾವಿಗೆ'[4] ಎಂಬ ಕಾವ್ಯವಾಗಿದೆ. ಈ ಕವನದ ಹಿನ್ನೆಲೆ ಕುರಿತು ಎಷ್ಟೋ ವರ್ಷಗಳ ನಂತರ (೧೯೬೦ ಸುಮಾರು) ಬೇಂದ್ರೆಯವರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದ್ದಾರೆ: "ಈ ಮಂಗಳಾ, ಸರ್ವಮಂಗಳಾ, ತ್ರಿಪುರ ಸುಂದರಿ ಅಂತ ಹೆಸರಿಟ್ಟ, ಮಗಳು ಬಂದಮೇಲೆ ಒಂಬತ್ತನೇ ತಿಂಗಳಿಗೆ ನಮಗೆ ಚಿಂತಿ. ಈಕೆ

ದೊಡ್ಡವಳಾದ ಮೇಲೆ ನೀರು ಜಗ್ಗುವ ಮನೆಗೆ ಕೊಟ್ಟರೆ ನಮಗೆ ದಾಸೀ ಕೊಡುವುದಕ್ಕೆ ಗೊತ್ತಿಲ್ಲ - ದೇವರೇ ಒಳ್ಳೇ ಮನೇ ಕೊಡ್ಸಪ್ಪಾ ಈಕೆಗೆ. 'ಅಯ್ಯೊ ಚಿಂತಿಯೇ' ಅಂತ ಅಂದಳು ನನ್ನ ಹೆಂಡತಿ. ಚಮತ್ಕಾರ ಅಂದರೆ ನಾವೇನೋ ಒಳ್ಳೇ ಊರಿಗೆ ಕೊಟ್ಟೆವು - ಬೇಲಾಪುರದ ಕುಲಕರ್ಣಿಯವರ ಮನೆಗೆ ಕೊಟ್ಟೆವು - ಅವರ ಹಿತ್ತಲದಾಗೇ ನದಿ. ಆದರೆ ನನ್ನ ಮಗಳು ಹೋಗಿ ನೀರು ತಂದು ಮನಿಯೊಳಗೆ ಹಾಕಬೇಕು. ನೀರು ತರಬೇಕು. ಅವರು ದಾಸಿ ಇಡೋ ಹಾಂಗಿಲ್ಲ. ನಾವು ದಾಸಿ ಕೊಡೋಹಾಂಗಿಲ್ಲ."[5]

'ಮಂಗಲೆಯೊಂದಿಗೆ | ಹಿಗ್ಗಾಯ್ತು ತಂದೆಗೆ |
ಕುಣಿಸ್ಯಾಡಿ ಕೂಸಿಗೆ | ಅರಳಿಸಿ ಆಸೆಗೆ ||
ರಾಗದ ಸಾಟಿಗೆ | ತೂಗ್ಯಾಡೊ ಧಾಟಿಗೆ |
ಒಲಿದಾಡೋ ರೀತಿಗೆ | ಹಾಡ್ಯಾನೊ ಗೀತಿಗೆ ||
ಸಂಜೀಯ ಜಾವಿಗೆ | ಹೊರಟೀದಿ ಬಾವಿಗೆ ||

ಎಂದು ಮುದ್ದು ಮಗಳನ್ನು ಕುಣಿಸಾಡುತ್ತ, ಅವಳು ಮದುವೆಯಾಗಿ ನೀರು ತರಲು ಹೋದಾಗ ಆಗುವ ಭಾವಲಹರಿಯನ್ನು ಕಲ್ಪಿಸಿಕೊಂಡ ಭಾವಗೀತವಾಗಿದೆ. ಬೇಂದ್ರೆಯವರ ಕಲ್ಪನೆ ಅದ್ಭುತರಮ್ಯವಾದುದು. ಮಗಳ ಮುದ್ದು ಶೃಂಗಾರದ ಬಣ್ಣನೆ ಮಾಡಿರುವ ರೀತಿ ಅನುಪಮವಾಗಿ ಅದು ಸಂಜೆಯ ಹೊಳಪಿಗೆ ಸ್ಪರ್ಧೆ ಹೂಡಿದಂತಿದೆ. ಕವಿ ನುಡಿದಿದ್ದಾನೆ:

'ಕಳಸೋದೆ ನೀರಿಗೆ | ಇಂಥ ಸುಕುಮಾರಿಗೆ ||
ಚಾಚ್ಯಾವಂಗಾಲಿಗೆ | ಮುಚ್ಚಂಜಿನಾಲಿಗೆ ||

ಆ ಮಗಳು ನಾಚಿಕೆಯಿಂದ ಮುದ್ದೆಯಾದವಳು. ಅದನ್ನು ಕವಿ ಪ್ರಕೃತಿಯ ಹೂವಿನೊಡನೆ ಹೋಲಿಸಿ ನುಡಿದ ರೀತಿ ಜಾನಪದ ಗೀತ ಧಾಟಿಯಲ್ಲಿಯೇ ಅಪರೂಪವಾಗಿದೆ. ಹಾಗೆಯೆ ಮಗಳ ನುಡಿ ಗಿಲುಕಿಯ ನಾದದಂತೆ. ಅಂತಹ ಮುದ್ದು ಹೆಣ್ಣುಮಕ್ಕಳೇ ನೀರು ಸೇದಲು ನೆರೆದರೆ ಅವರ ಬಳೆಯ ಗಲಗಲ ನಾದ, ನೀರು ಸೇದುವ ಗೀರ್ ಗೀರ್ ಶಬ್ದ, ಕುಲುಕುಲು ಮಾತು, ಅವರು ನೀರು ಸೇದಿದಂತಿರುವುದಿಲ್ಲ, ಅದು ಬೇರೇನೋ ಆಗಿರುತ್ತದೆ.

'ಮಾತಿಗು ಆಚೆಗೆ | ಮೀರಿದ್ದ ನಾಚಿಗೆ ||
ಮುಸುಕ್ಯಾವ ಹೂವಿಗೆ | ಬಂದೀಯೆ ಬಾವಿಗೆ ||
ಗಿಲಕೆಂಬೊ ಬಳಿಗೆ | ಕೆಲಸೊಂದುಗಳಿಗೆ ||
ಗೆಳತೇರ ಒಂದಿಗೆ | ಸೇದಿದೆ ಬಿಂದಿಗೆ ||

ಆ ಮಗಳ ರೀತಿ ನೀತಿಯನ್ನು ಕವಿ ಬಣ್ಣಿಸಿರುವ ರೀತಿ, ಯಾವುದೇ ತಂದೆ ತನ್ನ ಮಗಳನ್ನು ಬಣ್ಣಿಸುವ ಬಗೆಯಾಗಿ, ಓದುಗ ತನ್ನ ಮಗಳೇ ನೀರು ಹೊತ್ತು ಬರುತ್ತಿರುವುದನ್ನು ಕಲ್ಪಿಸಿಕೊಂಡು ಆನಂದಪಡುವಂತಿದೆ. ಈ ಬಗೆಯ ಆನಂದ ನಿರ್ಮಲ ಭಾವದ ಸ್ವರ್ಗದಾನಂದ.

'ಮೂಗಿನ ನೇರಿಗೆ | ಹೊರಳೀದೆ ಊರಿಗೆ ||
ತಲಿಮ್ಯಾಲ ಬಿಂದಿಗೆ | ಕಾಲಾಗ ಅಂದಿಗೆ ||
ತುಂತುಮುಕು ತುಂಬಿದೆ | ಬಿಂದೀಗೆ ಅಂತಿದೆ ||
ಝುಣ್ ಝುಣ ಅಂದಿಗೆ | ಅಂದಾವ ಹೊಂದಿಗೆ ||

ಹೀಗಾಗಿ ಕವನ ಬೇಂದ್ರೆಯವರ ಮಗಳದೆಂದು ಪ್ರಾರಂಭದಲ್ಲಿ ಅನಿಸಿದರೂ ಅದು

ವಿಶ್ವವ್ಯಾಪಿಯಾಗಿ, ಕಾಲಾತೀತವಾಗಿ ಸಹೃದಯ ತಂದೆಯರ ಹಾಡಾಗುತ್ತದೆ. ನೀರು ಹೊತ್ತ ಮಗಳ ದಣಿವನ್ನು ಕವಿ 'ಮುತ್ತ್ಹನಿ ಮಾರಿಗೆ | ಮುತ್ತ್ಯಾವೊ ನಾರಿಗೆ |' ಎಂದಾಗ ನಲ್ಮೆಯ ಮಗಳ ಆಯಾಸ ತಂದೆಯ ಹೃದಯಕ್ಕೆ ತಟ್ಟುತ್ತದೆ. ಇದೊಂದು ಹೃದಯಸ್ಪರ್ಶಿಯಾದ ತುಂಬಿಬಂದ ಭಾವದ ಆರ್ದ್ರ ಭಾವಗೀತವಾಗಿದೆ.

**ಸರ್ವಮಂಗಲೆ**[6]

ಈ ಕವನವನ್ನು ಬರೆದ ದಿನಾಂಕ ೧೦.೭.೮೧. ಬೇಂದ್ರೆಯವರು ತೀರಿಹೋದುದು ೨೬.೧೦.೮೧. ಈ ಕಾರಣದಿಂದ ಅವರು ಕಾಯಿಲೆ ಬಿದ್ದಾಗ ತನ್ನ ಮಗಳು ಮಂಗಲಳನ್ನು ನೆನೆದು ಆಕೆಯನ್ನು ನೋಡಬೇಕೆಂಬ ಮನಸ್ಸಿನಿಂದ ಬರೆದ ಕವನ ಇದಾಗಿದೆ. ಕವನದ ಪೂರ್ಣಪಾಠ ಕೆಳಕಂಡಂತಿದೆ.

'ಎಲ್ಲಿದ್ದ ವಿನೀತ ದುರ್ವಿನೀತನು ಎಲ್ಲಿ?
ಕಾವೇರಿ ಇನ್ನುನೂ ಲೋಪಾಮುದ್ರೆಗೆ ಬುಲ್ಲಿ.
ಇಲ್ಲಿಹನು **ಮಕರಂದ** ಆ **ಮಿಲಿಂದ**ನು ಇಲ್ಲಿ
ಅನಳವು ಬಂದಿತ್ತು ದಮಯಂತಿ ಕೈ ಛಲ್ಲಿ.
ಅಸ್ಮಿತೆಯ **ವಿಸ್ಮಿತತೆ** ಆ **ಪ್ರಭಾಕರ**ನಲ್ಲಿ
**ಸರ್ವಮಂಗಳೆ** ಹಸಿರು ಹನ್ನೆರಡು ತಿಂಗಳ ಬಳ್ಳಿ'

ಬೇಂದ್ರೆಯವರು ಮಗಳನ್ನು ಔರಂಗಾಬಾದಿಗೆ ನೀಡಿದ್ದಾರೆ. ಅದು ವಿದರ್ಭದಲ್ಲಿದೆ. ಆಕೆಯ ಇಬ್ಬರು ಗಂಡುಮಕ್ಕಳ ಹೆಸರು **ಮಕರಂದ, ಮಿಲಿಂದ,** ಆಕೆಯ ಪತಿ **ಪ್ರಭಾಕರ.** ಇವರನ್ನೆಲ್ಲ ನೆನೆದು ಬರೆದ ಕವನ ಇದಾಗಿದೆ. ಬೇಂದ್ರೆಯವರು ಕಾವೇರಿ ನಾಡಿನವರು. ಆದರೆ ಮಗಳನ್ನು ವಿವಾಹವಾಗಿ ನೀಡಿರುವುದು ವಿದರ್ಭಕ್ಕೆ. ಲೋಪಾಮುದ್ರೆ ವಿದರ್ಭರಾಜನ ಮಗಳು ಹಾಗೂ ಅಗಸ್ತ್ಯ ಮುನಿಯ ಹೆಂಡತಿ. ಈ ಎಲ್ಲ ವಾಸ್ತವ ಮತ್ತು ಪುರಾಣಗಳ ಹಿನ್ನೆಲೆಯಿಂದ ಈ ಕವನವನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ.

ಕವಿಯು ತನ್ನ ಮಗಳು ಮಂಗಲಳನ್ನು ಸರ್ವಮಂಗಲೆ ಎಂದು ಕರೆದಿರುವ ಕವನದ ಶೀರ್ಷಿಕೆಯಲ್ಲಿಯೇ ಅವಳಿಗೆ ಒಳ್ಳೆಯದಾಗಲಿ, ಆಕೆ ಸದಾ ಮಂಗಲೆಯಾಗಿ ಮುತ್ತೈದೆಯಾಗಿ ಇರಲಿ ಎಂಬ ಮಂಗಳ ಆಶೀರ್ವಾದವಿದೆ. ಅವರಿಗೆ ಕಾಯಿಲೆ ಹೆಚ್ಚಾಗಿ ತಾನು ಉಳಿಯುವೆನೋ ಇಲ್ಲವೋ ಎಂಬ ಮನಸ್ಸಿನ ತಳಮಳ ಜಾಸ್ತಿಯಾದಾಗ ಮಗಳನ್ನು ನೆನೆದಿದ್ದಾರೆ. ಆಕೆಯನ್ನು ಕರ್ನಾಟಕದಲ್ಲಿಯೆ ಎಲ್ಲಾದರೂ ವಿವಾಹ ಮಾಡಿಕೊಟ್ಟಿದ್ದರೆ ಚೆನ್ನಾಗಿತ್ತು, ದೂರದ ಊರಿಗೆ ಕೊಟ್ಟು ತನ್ನ ಕೊನೆ ಗಳಿಗೆಯಲ್ಲಿ ಅವಳನ್ನು ನೋಡಲಾಗಲಿಲ್ಲವಲ್ಲ ಎಂಬ ವ್ಯಥೆ ಕಾಡಿದೆ. ಯಾವ ದುಷ್ಟ ಶಕ್ತಿಗಳ ಕಾರಣವಾಗಿ ತಾನು ತನ್ನ ಮಗಳನ್ನು ಕಾವೇರಿಯ ನಾಡಿನಿಂದ ಲೋಪಾಮುದ್ರೆಯ ದೂರದ ಊರಿಗೆ (ಬುಲ್ಲಿ = to become extensive) ಸಂಬಂಧ ವಿಸ್ತರಿಸಿ ನೀಡಿದೆನಲ್ಲ ಎಂಬ ನೋವು ಮೊದಲ ಚರಣದಲ್ಲಿದೆ.

ದಮಯಂತಿಯಂತಹ ತನ್ನ ಮಗಳಿಗೆ ನಳನಂತಹ ಸಂಬಂಧ ಕೂಡಿಬಂತು, ವಿವಾಹ ಮಾಡಿದೆ. ಈಗ ಆಕೆಗೆ **ಮಕರಂದ ಮಿಲಿಂದ** ಎಂಬ ಎರಡು ಗಂಡುಮಕ್ಕಳು ಹಾಗೂ ಸ್ಮಿತಾ ಎಂಬ ಹಿರಿಯ ಮಗಳಿದ್ದಾಳೆ. ಅವಳ ಜೀವನಕ್ಕೆ ಅರ್ಥ ಬಂದಿರುವುದರಿಂದ ತನ್ನ ಮೊಮ್ಮಕ್ಕಳು ಇಲ್ಲೇ ಇದ್ದಾರೆ ಎಂದು ಭಾವಿಸಬೇಕು ಎಂದು ಸಮಾಧಾನಪಟ್ಟ ಮನಸ್ಸಿನ ಭಾವ ಎರಡನೆಯ ಚರಣದಲ್ಲಿದೆ.

ತನ್ನ ಅಳಿಯ **ಪ್ರಭಾಕರ**ನಲ್ಲಿ ಆಶ್ಚರ್ಯಗೊಳಿಸುವ ರೀತಿಯ ತಿಳಿವಳಿಕೆ ಇದೆ. ಅವನು ಅರ್ಥಪೂರ್ಣವಾಗಿ ಬದುಕುತ್ತಿದ್ದಾನೆ. ಆದಕಾರಣ ತನ್ನ ಕರುಳ ಬಳ್ಳಿಯಾದ ಮಗಳು ಸದಾ

ಸಂತಸದಿಂದಿದ್ದಾಳೆ. ಅದು 'ಹಸಿರು ಹನ್ನೆರಡು ತಿಂಗಳ ಬಳ್ಳಿ' ಎಂಬ ತೃಪ್ತಿಯ ಶಾಂತಚಿತ್ತ ಭಾವ ಮೂರನೆಯ ಚರಣದಲ್ಲಿದೆ.

ಹೀಗೆ ಬೇಂದ್ರೆಯವರಲ್ಲಿ ಮಗಳು 'ಮಂಗಲೆ' ಕಾವ್ಯವಾಗಿ ಹರಿದು ಅವರ ಕಾವ್ಯಸೃಷ್ಟಿಗೆ ಚೇತನದಾಯಿಯಾಗಿದ್ದಾಳೆ ಎಂದು ಹೇಳಬಹುದು.

**ಸಾಹಿತ್ಯ ಸಹೋದರಿಯರು**

ಬೇಂದ್ರೆಯವರಿಗೆ ಒಡಹುಟ್ಟಿದ ಸೋದರಿಯರಿರಲಿಲ್ಲ ಎಂದು ಈಗಾಗಲೇ ತಿಳಿದಿದ್ದೇವೆ. ಆದರೆ ಅವರಿಗೆ 'ವಿದೇಹದೊಲವಿನ' ಅಂದರೆ ದೇಹ ಪ್ರೀತಿಯಲ್ಲದ, ಸಹೋದರತ್ವದ ಅಕ್ಕ ತಂಗಿಯರ ಒಲವಿನ ನಿಜ ಪ್ರೀತಿ ಸಾಹಿತ್ಯ ಸಹೋದರಿಯರಿಂದ ಸಿಕ್ಕಿತ್ತು. ಆ ಧನ್ಯ ಭಾವದಲ್ಲಿ ಕನ್ನಡ ತಾಯಿಯ ಒಡಲಲ್ಲಿ ಹುಟ್ಟಿದ ಸಹೋದರಿಯರ ವಿದೇಹದೊಲವನ್ನು ಕುರಿತು ಅವರ ವ್ಯಕ್ತಿತ್ವದ ಆರಾಧನೆಯಾಗಿ ಬೇಂದ್ರೆಯವರು ಕವನಗಳನ್ನು ರಚಿಸಿದ್ದಾರೆ. ಬೇಂದ್ರೆ ಕಾವ್ಯದ ಹೂಗಂಪಿಗೆ ಅಣ್ಣನನ್ನು ಅರಸಿಬಂದಂತೆ ನಾಡಿನ ಸಹೋದರಿಯರು ಪ್ರೀತಿಯ ಮಳೆಗರೆಸಿದಾಗ ಕವಿಗೆ ತನ್ನ ಕಾವ್ಯದ ಶಕ್ತಿ ಪರಿಚಿತವಾಗಿ ಹೀಗೆ ನುಡಿದಿದ್ದಾನೆ:

'ಕವಿಯು ಮಾನಸಪುತ್ರ
ಅವನು ಅಗಸದೇಹಿ
ಮಾತಿನಲೆ ಮೂಡುವನು, ಭಾವಜೀವಿ.
ಮೈಯಾಚೆ ಉಸಿರಾಚೆ
ಬಗೆಯ ಬಣ್ಣಗಳಾಚೆ
ಅವನ ಹೂವರಳುವದು ಭಾವದೇವಿ'[7].

**ಮಿಂಚಿನಾಚೆಯ ಬೆಳಕ ಬಯಸಿ ಬಳೆದು**

ಬೇಂದ್ರೆಯವರು 'ತಂಗಿ ಜಾನಕಮ್ಮ' ಕವನದ ಭಾವಸಂದರ್ಭದಲ್ಲಿ "'ಜಾನಕಮ್ಮ' ಈಗಾಗಲೇ ದಿವಂಗತರಾದರು. ಅವರ ಕವನ ಸಂಗ್ರಹ ಪ್ರಸಿದ್ಧವಾಗಿದೆ. ಅವರು ನನ್ನನ್ನು ಕುರಿತು ಬರೆದ ಒಂದು ಕವನಕ್ಕೆ ಇದು ಉತ್ತರರೂಪವಾಗಿದೆ" ಎಂದು ಹೇಳಿದ್ದಾರೆ. ಈ ಉತ್ತರರೂಪದ ಕವನದಲ್ಲಿ ಕವಿ ತನಗೆ ಬೇಕಾದವರು ತನ್ನನ್ನು ವಿಚಾರಿಸುವ ಮಮತೆಯ ಸಹೋದರಿಯರು ಇದ್ದಾರೆ ಎಂಬ ಆನಂದದಲ್ಲಿ ತಾನು ತನ್ನ ಸುತ್ತಲಿದ್ದ ಬೇಲಿಯನ್ನು ದಾಟಿ ಆಸ್ತಿಕ ಭಾವದವನಾದುದು ತನ್ನವರೆನ್ನುವ ತನ್ನದೆನ್ನುವ ಭಾವದೀಪ್ತಿಯನ್ನು ಪಡೆದುದನ್ನು ಹೀಗೆ ಹೇಳಿದ್ದಾರೆ:

'ಯಾರಿಗಾರೋ ಎನುವ
ನಾಸ್ತಿಕತೆಯನು ನೂಕಿ
ದಾಟಿ ದಿಕ್ಕಾಲಗಳ ಸುತ್ತು ಬೇಲಿ'.

ತಾನು ಕನ್ನಡನಾಡಿನಲ್ಲಿ ನೂರಾರು ತಂಗಿಯರನ್ನು ಪಡೆದು ಆ ಆನಂದದಲ್ಲಿ 'ಮಿಂಚಿನಾಚೆಯ ಬೆಳಕ ಬಯಸಿ ಬಳೆದು'ದಾಗಿ ಹೇಳುತ್ತ, ತಾನು -

'ದೋಷರಾಹಿತ್ಯದಾ
ಕಲ್ಪನಾ ರಾಜ್ಯದೊಳು
ಸಗ್ಗದೂಟವನುಣುವ ರೂಪು ತಳೆದು'

ಸಂತೋಷಿಸಿದುದಾಗಿ ನುಡಿದಿದ್ದಾರೆ. ಆ ಸಹೋದರಿಗೆ ಕಾವ್ಯಲೋಕವನ್ನು ಪ್ರವೇಶಿಸಿ ಮನದ ಹಾಡನ್ನು ಹಾಡಲು ಆಶಿಸಿರುವ ರೀತಿ ಅನನ್ಯವಾಗಿದ್ದು, ಇದು ಹಿರಿಯ ಕವಿ ಸಾಹಿತಿಗಳು ಕಿರಿಯರನ್ನು ಪ್ರೋತ್ಸಾಹಿಸುವ ಆದರ್ಶ ರೀತಿಯಾಗಿದೆ.

'ಝೇಂಕೃತದ ಸುಳಿ ಹಿಡಿದು
ಅಂತರಂಗಕೆ ನುಗ್ಗು
ಕಮಲವನವಲ್ಲಿ ನಿಸ್ಸೀಮವಹುದು
ಭಾವಶಿಖರಗಳಲ್ಲೆ
ಜೀವಪುರ ನೆಲಸಿಹುದು
ಅದನು ನೀ ವೈದೇಹಿ ಕಾಣಬಹುದು'.

**ಗೌರವಸ್ತ್ರ ಗೌರಸ್ಮಿತ ಗೌರವದೀ ಗೌರೀ**

ಬೇಂದ್ರೆಯವರು ಕಥೆಗಾರ್ತಿ ಕೊಡಗಿನ ಗೌರಮ್ಮನನ್ನು ಕುರಿತು 'ತಂಗಿ ಗೌರಮ್ಮ'[8] ಎಂಬ ಕವನ ರಚಿಸಿದ್ದಾರೆ. ಅವರು ಆಕೆಯ 'ವಿದೇಹದೊಲವ'ನ್ನು ಸದಾ ನೆನೆಯುತ್ತಿದ್ದರು. ಅವರು 'ಸ್ತ್ರೀ'[9]ಯನ್ನು ಕುರಿತು ಮಾತಾಡುವಾಗ ಮನತುಂಬಿ ತಂಗಿ ಗೌರಮ್ಮನನ್ನು ಕುರಿತು: "ಜೀವನದಲ್ಲಿ ಬಂದಮೇಲೆ ಕೊಡಗಿನ ಗೌರಮ್ಮ ಅಂತ ಒಬ್ಬ ಕಥಾಗಾರ್ತಿ, ಏನು ತನ್ನ ಕಥೆಗಳಲ್ಲಿ, ತನ್ನ ಪಾತ್ರಗಳಲ್ಲಿ ಬೇಂದ್ರೆ, ಮಾಸ್ತಿ ಅಂತ ಹೇಳ್ಕೊಂಡಿದ್ದಾಳೆ! ಆಕೆ ನಮ್ಮನ್ನು ನೋಡಿರಲಿಕ್ಕಿಲ್ಲ. ನಾವಾಕೆಯನ್ನು ನೋಡಿರಲಿಲ್ಲ. 'ಏನು ಏನು ಮಾತು, ಯಾಕೊ ಕಾಣೆ, ಯಾಕೊ ಕಾಣೆ ರುದ್ರವೀಣೆ ಮಿಡಿಯುತಿರುವುದು' - ಗೌರಮ್ಮನ ಮಾತು. ಹೀಗೆ ಹೇಳಿದ ಆ ಹುಡುಗಿಯ ಕಥೆ ಹಾಗೆ ಮುಗಿಯಬೇಕೆ? ತಂಗಿ ಗೌರಮ್ಮ - ನಮ್ಮ ಮನೆಗೆ ಬಂದರು, ಜಮಖಂಡಿಗೆ ಬಂದರು. ಮನೆಯವರನ್ನು ಮಾತಾಡಿಸಿ 'ನಿಮ್ಮ ಮನೆಯವರೆಲ್ಲ ಬರಬೇಕು ನಮ್ಮೂರಿಗೆ ಕೊಡಗಿಗೆ' ಹೀಗಂತ ಹೇಳಿದರು. ಒಂದಿವಸ ಪೇಪರಿನಲ್ಲಿ ಬಂದುಬಿಟ್ಟಿತು - 'ಗೌರಮ್ಮ ನೀರಿನಲ್ಲಿ ಮುಳುಗಿ ತೀರಿಕೊಂಡರು. ' ಇಷ್ಟೆ ಗೌರಮ್ಮ ಇರೋದು. ಏನು ಆ ಹೆಸರು ಮುಳುಗಿಹೋದೀತೆ? ಹೆಸರಿನಿಂದ ಕಲ್ಲು ತೇಲುತ್ತದೆ. ರಾಮನಿಗಿಂತ ರಾಮನ ಹೆಸರು ಮಹಿಮೆಯದು ! ಗೌರಮ್ಮನ ಹೆಸರು ಗೌರವ ತರುವ ಹೆಸರು" ಎಂದು ಕವನವನ್ನು ಪೂರ್ತಿ ಓದಿ ಅನಂತರ "ಇಂದಿಗೂ ಕಣ್ಣೆದುರಿನಿಂದ ಗೌರಮ್ಮ ಹೋಗೋದಿಲ್ಲ. ಏನು, ದೇಹವಿದ್ದವರು ಹೋಗಬಹುದು ಸ್ಮರಣಕ್ಕೆ ಮರಣವಿಲ್ಲ" ಎಂದಿದ್ದಾರೆ. ಆ ಸ್ಮರಣದ ಕವನ 'ತಂಗಿ ಗೌರಮ್ಮ'ದಲ್ಲಿ ಗೌರಮ್ಮನನ್ನು -

'ಗೌರವಸ್ತ್ರ ಗೌರಸ್ಮಿತ ಗೌರವದೀ ಗೌರೀ
ಮಿಂಚಿದಳದೊ ಬಾನಂಚಿಗೆ ಕಾವೇರಿಯ ಕುವರಿ'!

ಎಂದು ಬಣ್ಣಿಸುತ್ತ, ಅವಳ ಹೆಣ್ಮನದ, ಕರುಣಭಾವದ ಕಥೆಗಳ ವಿಮರ್ಶೆಯನ್ನು ಕಾವ್ಯದಲ್ಲಿ ಹೀಗೆ ಹಿಡಿದಿಟ್ಟಿದ್ದಾರೆ:

'ಉಷೆ ಸುರಿಸುವ ಇಬ್ಬನಿಯೊಲು ಕರುಣೆಯ ಕಂಬನಿಯ
ಬಾಳ್ ಬಳ್ಳಿಗೆ ಬೀರಿದೆ ನೀ ಮಧುಹಾಸ್ಯದ ಹನಿಯ'.

**ರಸಿಕ ದಾಂಪತ್ಯದಲ್ಲಿ ಆತ್ಮರತಿ!**

ಬೇಂದ್ರೆಯವರು ಕನ್ನಡಕ್ಕಾಗಿ ತ್ಯಾಗ ಆದರ್ಶದ ಬದುಕನ್ನು ಆಯ್ಕೆ ಮಾಡಿಕೊಂಡಂತೆ ಕನ್ನಡಕ್ಕಾಗಿ ಜೀವ ತೇಯ್ದವರು ತಿರುಮಲೆ ತಾತಾಚಾರ್ಯ ಶರ್ಮ. ಅವರ ಕನ್ನಡ ಕೈಂಕರ್ಯಕ್ಕೆ ಹೆಗಲೆಣೆಯಾಗಿ

ನಿಂತವರು ಅವರ ಧರ್ಮಪತ್ನಿ 'ಸೌ|| ಮುತ್ತೈದೆ, ತಿರುಮಲೆ ರಾಜಮ್ಮ.'[10] ಅವರ ದಾಂಪತ್ಯದ ಫಲವಾದ ತಿರುಮಲೆ ಶ್ರೀರಂಗಾಚಾರ್ಯರು ಅದೇ ರೀತಿ ಕನ್ನಡದ ಕೆಚ್ಚಿನ ಸ್ಫೂರ್ತಿಚೇತನವಾಗಿ ಕನ್ನಡದ ಸೇವೆ ಮಾಡುತ್ತಿದ್ದಾರೆ. ಆ ತಾಯಿಯ ಕಾವ್ಯನಾಮ 'ಭಾರತಿ.' ಆ ಅಪರೂಪದ ದಾಂಪತ್ಯದಲ್ಲಿ 'ಸಾಹಿತ್ಯ ಸಂಗೀತ ಸಹಜವಾಗಿದೆ ನಂಟು' ಎಂದು ಹೇಳುತ್ತ, ಅಂತಹ ಆದರ್ಶ ದಾಂಪತ್ಯವನ್ನು ಬೇಡಿ ಬಂದಿರಬೇಕು ಎಂದು ನುಡಿದಿದ್ದಾರೆ.

'ಷೋಕಿ ನಾಟಕವಲ್ಲ, ಶ್ರುತಿ ಬಹಳ ನಾಜೋಕು
ದಾಂಪತ್ಯ ಸೌಹಾರ್ದ, ಬೇಡಿಬಂದಿರಬೇಕು'

**ಇತರ ಸ್ತ್ರೀಯರು**

ಬೇಂದ್ರೆಯವರು ಸ್ತ್ರೀಪರ ಚಿಂತಕರಷ್ಟೇ ಅಲ್ಲದೆ ಅವರ ಕೈಲಾದ ಸಹಾಯವನ್ನು ಅನಾಥ ಹೆಂಗಸರಿಗೆ ಮಾಡುತ್ತಿದ್ದರು ಎಂಬುದು ತುಂಬಾ ಮುಖ್ಯವಾದ ವಿಷಯವಾಗಿದೆ. ಅವರನ್ನು ಬಾಲ್ಯದಿಂದ ಚೆನ್ನಾಗಿ ತಿಳಿದ ಶಾಲಾ ಶಿಕ್ಷಕರಾದ ಸ.ಪ. ಗಾಂವಕರ ಅವರು ನುಡಿದಿರುವ ನುಡಿ ಬೇಂದ್ರೆಯವರ ಸಮಾಜಮುಖಿ ಸೇವಾಭಾವನೆಯನ್ನು ಪರಿಚಯಿಸುತ್ತದೆ. ಅವರು 'ತನ್ನ ಕಷ್ಟದಲ್ಲಿ ಹೆರರ ಕಷ್ಟವನ್ನು ಕಂಡುಕೊಳ್ಳುವವರು ವಿರಳ. ಬೇಂದ್ರೆಯವರು ಹಾಗಿರಲಿಲ್ಲ. ತಮ್ಮ ಕಷ್ಟದಲ್ಲಿಯೂ ಇಬ್ಬರು ಅನಾಥ ಹೆಂಗಸರಿಗೆ ಸಹಾಯ ನೀಡುತ್ತ, ನನಗೆ ಒಪ್ಪಿಸಿದುದನ್ನು ನಾನು ಮರೆತಿಲ್ಲ; ಇಂದು ಅವರಿಬ್ಬರೂ ಹುಬ್ಬಳ್ಳಿಯಲ್ಲಿ ಶಿಕ್ಷಕಿಯರಾಗಿದ್ದಾರೆ. ಅವರು ಬೇಂದ್ರೆಯವರ ಹಂಗಿನ ಹೊರೆಯನ್ನು ಆತ್ಮೀಯವಾಗಿ ಆಗಿಂದಾಗ್ಗೆ ಅಂದುಕೊಳ್ಳುತ್ತಿದ್ದಾರೆ"[11] ಎಂದು ನುಡಿದಿದ್ದಾರೆ. ಬೇಂದ್ರೆಯವರ ಕಾವ್ಯ ಮತ್ತು ಜೀವನವನ್ನು ಚೆನ್ನಾಗಿ ತಿಳಿದ ವಿ.ಕೃ.ಗೋಕಾಕರು 'His sympathy for the poor and downtrodden is seen in his poetry of social justice. It is full of passionate indictment simply because his heart overflows with sympathy for the lowliest and the lost. He is the champion of lost causes and of men and women who are lost or who feel they are lost. No one can infuse light and hope into their minds and hearts better than he does'[12] ಎಂದಿದ್ದಾರೆ.

ಬೇಂದ್ರೆಯವರ 'ಅರ್ಥವಿಲ್ಲ, ಸ್ವಾರ್ಥವಿಲ್ಲ, ಬರಿಯ ಭಾವಗೀತ'ದಂತಹ ಸರ್ವೋದಯ ದೃಷ್ಟಿಯ ಜೀವನ ರೀತಿಯನ್ನು ವಾಮನ ಬೇಂದ್ರೆಯವರು ಹೀಗೆ ಚಿತ್ರಿಸಿದ್ದಾರೆ: "ಧಾರವಾಡದ 'ವನಿತಾ ಸಮಾಜ'ದಂತೆ ಸೊಲ್ಲಾಪುರದಲ್ಲಿ 'ಶ್ರಾವಿಕಾಶ್ರಮ' ಎಂಬ ಒಂದು ಜೈನ ಅನಾಥ ಹೆಣ್ಣುಮಕ್ಕಳ ಸಂಸ್ಥೆ, ನಮ್ಮ ನೀಲಾನಗರದ ವಾಸಸ್ಥಾನದ ಸಮೀಪಕ್ಕೆ ಇತ್ತು. ಅಲ್ಲಿಯ ಅನೇಕ ವಿದ್ಯಾರ್ಥಿನಿಯರಿಗೆ ವಿದ್ಯಾಭ್ಯಾಸ ಹೇಳಿಕೊಡುತ್ತ ಅಲ್ಲಿಯ ಜೈನ ಪುಸ್ತಕ ಭಂಡಾರದಿಂದ ಜೈನ ಸಿದ್ಧಾಂತವನ್ನು ಅಭ್ಯಾಸ ಮಾಡುತ್ತ ಬೇಂದ್ರೆಯುವರು ಸಾಗಿದರು.... ಸೊಲ್ಲಾಪುರದಲ್ಲಿಯ ಸಮಾಜ-ಮಿಶ್ರ ಸಮಾಜ. ಎಲ್ಲ ಸಮಾಜಗಳೊಂದಿಗೆ ಸಂಪರ್ಕಸಾಧಿಸಿ ಅವರ ಅಭ್ಯಾಸವನ್ನು ಬೇಂದ್ರೆಯವರು ಮಾಡತೊಡಗಿದರು. ಯಾವುದೇ ಸಮಾಜದವರು ಭಾಷಣಕ್ಕೆ ಕರೆದರೆ ಅಲ್ಲಿ ಹೋಗಿ ಅವರ ಸಮಾಜದ ಗುಣ-ದೋಷಗಳನ್ನು ಧೈರ್ಯವಾಗಿ ಹೇಳಿಬರುತ್ತಿದ್ದರು. ಇದಕ್ಕೆ ಒಂದು ಉದಾಹರಣೆ ಹೀಗಿದೆ:

ಹೊಲೆಯರ ಸಮಾಜದ ಕೆಲವು ಚಿತ್ರಕಾರರು ಬೇಂದ್ರೆಯವರನ್ನು ಭಾಷಣಕ್ಕಾಗಿ ಆಮಂತ್ರಿಸಲು ಬಂದರು. ಬೇಂದ್ರೆಯವರು ಆಮಂತ್ರಣ ಒಪ್ಪಿಕೊಂಡರು. ಆದರೂ ಮೂರು ಕರಾರು ಹಾಕಿದರು. ಅವು ಹೀಗೆ - ೧. ಚಿತ್ರಕಾರರು ತಮ್ಮ ಮನೆಯ ಗುಡಿಸಲಿನಲ್ಲಿಯೆ ನಿತ್ಯ ಜೀವನದ ಚಿತ್ರಗಳನ್ನೇ ಹೆಚ್ಚಾಗಿ

ಪ್ರದರ್ಶನದಲ್ಲಿ ಇರಿಸಬೇಕು. ೨. ಚಿತ್ರಕಾರರು ಪರಸ್ಪರರಲ್ಲಿ ಅಸೂಯೆ ತಾಳದೆ, ತಾಯಿಯ ಹೆಸರಿನಿಂದ ಕೆಟ್ಟ ಬೈಗಳ ಉಚ್ಚಾರ ಮಾಡಬಾರದು. ೩. ತಮ್ಮ ಕೇರಿಯಲ್ಲಿ ಸಿಕ್ಕ ಸಿಕ್ಕಲ್ಲಿ ಉಗುಳಾಡಬಾರದು. ಈ ಮೂರು ಕರಾರು ಒಪ್ಪಿದರೆ, ತಾವು ಹೊಲಗೇರಿಗೆ ಚಿತ್ರ ಪ್ರದರ್ಶನದ ಉದ್ಘಾಟನೆಗೆ ಬರುವುದಾಗಿ ಹೇಳಿದರು. ಚಿತ್ರಕಾರರು ಒಪ್ಪಿದರು. ಇದರ ಪರಿಣಾಮ - ಆ ಚಿತ್ರಕಾರರ ಜೀವನಕ್ಕೆ ಒಂದು ಹೊಸ ರೂಪ ಸಿಕ್ಕಿತು."[13]

**ಪುಟ್ಟ ವಿಧವೆ** [14]

ಬೇಂದ್ರೆಯವರಿಗೆ ಭಾರತೀಯ ಸಂಸ್ಕೃತಿಯ ಅನಿಷ್ಟವಾದ ಬಾಲ್ಯವಿವಾಹ ಹಾಗೂ ವಿಧವಾ ಪದ್ಧತಿ ನಿರ್ಮೂಲನೆಯ ತುಡಿತ ತೀವ್ರವಾಗಿತ್ತು. ಈ ಸಾಮಾಜಿಕ ಅನಿಷ್ಟ ಮುಗ್ಧ ಹೆಣ್ಣುಮಕ್ಕಳನ್ನು ಶೋಷಿಸುವುದರ ವಿರುದ್ಧ ತೀವ್ರ ಆಕ್ರೋಶವಿತ್ತು. ಅದಕ್ಕೆ ತೀಕ್ಷ್ಣವಾಗಿ ಸ್ಪಂದಿಸಿದ ಕವಿಹೃದಯ ಕನ್ನಡ ಸಾಹಿತ್ಯಕ್ಕೆ ಅಪೂರ್ವವಾದ 'ಪುಟ್ಟ ವಿಧವೆ'ಕವನ ನೀಡಿದೆ. ಈ ಕವನದ ಒಂದು ವೈಶಿಷ್ಟ್ಯವೆಂದರೆ ಈ ಕವನವನ್ನು ಓದುತ್ತಿದ್ದಂತೆ ಪ್ರತಿ ಪದ, ಪದಪುಂಜಕ್ಕೂ ಸಹೃದಯನ ಮನದಲ್ಲಿ ಆ ಮಾತಿಗೆ Negative (ಋಣಾತ್ಮಕ) ಆದ ನುಡಿ ಎಚ್ಚತ್ತು ಇದು ಹೀಗಾಗಬಾರದಾಗಿತ್ತು ಎಂದು ಹೇಳಿಕೊಂಡು ಸಾಗುತ್ತದೆ. ಓದುಗನು ಕವನದ ಒಂದು ಭಾಗವಾಗಿ ಪುಟ್ಟ ವಿಧವೆಯ ಒಟ್ಟು ಅಸಹಾಯಕತೆಗೆ ನೋಯುತ್ತ, ವ್ಯವಸ್ಥೆಯ, ಧಾರ್ಮಿಕ ಕ್ರಿಯೆಯ ವಿರುದ್ಧ ಸಿಡಿದೇಳುತ್ತಾನೆ.

'ಆಕೆಯಿದ್ದಳು ಕೂಸು, ಈತನಿನ್ನೂ ಹುಡುಗ
ಅವರ ತಾಯ್ತಂದೆಗಳ ಹಿಗ್ಗು ಎಷ್ಟು?'

ಎಂದಾಗ ಅವಳು ಬೆಳೆದಿದ್ದರೆ, ಅವನು ಯುವಕನಾಗಿದ್ದರೆ, ಅವರ ತಾಯ್ತಂದೆ ಆ ಕೆಟ್ಟ ಹಿಗ್ಗನ್ನು ಪಡೆಯದಿದ್ದರೆ ಎಂದು ಓದುಗನ ಮನಸ್ಸು ಹೇಳುತ್ತದೆ.

'ಆಕೆ ದೊಡ್ಡವಳಾಗಿ, ಆತ ಚಿಕ್ಕವನಿದ್ದು
ಶೋಭನ ಮಾಡಿದ್ದು ಊರಿಗಾಟ !'

ಎಂದಾಗ ಆಕೆ ದೊಡ್ಡವಳಾಗದಿದ್ದರೆ, ಆತ ಬೆಳೆದಿದ್ದರೆ ಎಂದು ಹೇಳುವ ಮನಸ್ಸು 'ಶೋಭನವ ಮಾಡಿದ್ದು ಊರಿಗಾಟ !' ಎಂದಾಗ, ಛೇ ! ಎಂತಹ ಆಟ ಆಡಿದರು ಎಂದು ನೋಯುತ್ತದೆ. ಹೀಗೆ Negative tendency ಬೆಳೆಸಿಕೊಂಡು ಕಾವ್ಯದ ಒಂದು ಭಾಗವಾಗಿ ಹೋದ ಸಹೃದಯ, ಆ ಕೂಸು ವಿಧವೆಯಾದಾಗ ನೋಯುತ್ತಾನೆ. 'ಶಾಸ್ತ್ರವಿರೆ ಬೇರೆಯ ವಿಚಾರವೇಕೆ?' ಎಂದಾಗ ವಿಚಾರಪರನಾಗಿ ಹೀನ ಶಾಸ್ತ್ರದ, ವ್ಯವಸ್ಥೆಯ ಬಗ್ಗೆ ಬಂಡೇಳುತ್ತಾನೆ. ಕವನ ಹೀಗೆ ಅವನನ್ನು ಕ್ರಿಯಾಶೀಲನನ್ನಾಗಿಸುತ್ತಾ ಸಾಗಿ - ಸಾಮಾಜಿಕವಾದ ಅನಿಷ್ಟವನ್ನು ಮುಂದುವರಿಸಿದ್ದಕ್ಕೆ ಕ್ರುದ್ಧನಾಗುತ್ತಾನೆ. ಪುಟ್ಟ ವಿಧವೆಯ ಘೋರ ಸ್ಥಿತಿ ಕವನದಲ್ಲಿ ಹೆಪ್ಪುಗಟ್ಟುತ್ತ ಸಾಗಿದಂತೆ ಕವಿ :

'ಕುರುಡು ಧರ್ಮಕ್ಕೆ ಸ್ಮಾರಕವು ನಿಂತಂತಾಕೆ
ಮೈಮರೆತು ನಿಂತಾಗ್ಗೆ ಗೂಗೆ ಹಾಡಿತ್ತು.
ಮುದ್ರೆಯೊತ್ತುವ ಕಣ್ಣು ಮೋರೆ ನೋಡಿತ್ತೊಮ್ಮೆ,
ಜಾರ ಕೃಷ್ಣನ ಕಥೆಗೆ ಕೋಡು ಮೂಡಿತ್ತು !'

ಎಂದು ಸಾಮಾಜಿಕ ಅನಿಷ್ಟವಾದ ವಿಧವಾ ಪದ್ಧತಿಯಿಂದ ಅನೈತಿಕ ಘಟನೆಗಳು ಘಟಿಸಲು ಧಾರ್ಮಿಕ ಆಚರಣಾ ವ್ಯವಸ್ಥೆಯ, ಸಾಮಾಜಿಕ ಪ್ರತಿಬಂಧವನ್ನು ವಿಧಿಸುವ, ವಿಧವೆ ಎಂಬ seal ಅನ್ನು ಅವಳ

ಮುಖದ ಮೇಲೆ ಒತ್ತುವವನೇ ಜಾರ ಕೃಷ್ಣನ ಕಥೆಗೆ ಕೋಡು ಮೂಡಲು ಕಾರಣವಾಗುತ್ತಾನೆ. ಸಮಾಜದಲ್ಲಿ ಈ ತರಹದ ಕಾರಣದಿಂದ ಜಾರ ಕೃಷ್ಣರು ಹೆಚ್ಚುತ್ತಾರೆ ಎಂದು ಕಾವ್ಯ ಧ್ವನಿಸಿದ್ದನ್ನು ಓದುಗ ಅರಿತು, ಅವನ ಮನಸ್ಸು ಸಾಮಾಜಿಕ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುತ್ತದೆ. ಅವಳಿಗೆ ಮದುವೆ ಮಾಡಬೇಕಾಗಿತ್ತು ಎಂಬ ಸಾಮಾಜಿಕ ಸುರಕ್ಷತೆಯ ಕಡೆಗೆ ಮುಖ ಮೂಡಿಸುತ್ತದೆ.

ಸುಲಕ್ಷಣವಾದುದನ್ನು ವಿಲಕ್ಷಣ ಮಾಡುವ ಸಾಮಾಜಿಕ ವ್ಯವಸ್ಥೆ, ಪ್ರಕೃತಿಯ ಕರೆಗಳು ಅನೈತಿಕ ರೂಪದಲ್ಲಿ ಚಲಾವಣೆಗೆ ಬರುವ ಈ ಹೀನ ವ್ಯವಸ್ಥೆ ಸರಿಯಲ್ಲ ಎಂದು ಓದುಗ ಹೇಳುತ್ತಾನೆ. ಹೀಗೆ ಈ ಕವಿತೆ ಓದುಗನನ್ನು ಸಮಾಜಮುಖಿಯಾಗಿ, ವ್ಯವಸ್ಥೆಯ ಚಿತ್ರಣದಲ್ಲಿಯೇ ವ್ಯವಸ್ಥೆಯ ವಿರುದ್ಧ ಬಂಡೇಳುವ ಮನಸ್ಸನ್ನು ಸೃಷ್ಟಿಸುವ ಅಪೂರ್ವ ಕಾವ್ಯವಾಗಿದೆ.

ಬೇಂದ್ರೆಯವರು ಬಾಲ್ಯವಿವಾಹವನ್ನು ಕುರಿತು ಬರೆದ ಇನ್ನೊಂದು ಕವನ 'ಕಥೆಯಾದಳು ಹುಡುಗಿ.'[15] ಇಲ್ಲಿಯೂ ಕವಿ ಮಧುರ ಭಾವದಲ್ಲಿ ನೋವಿನ ಕಥೆಯನ್ನು ಹೇಳುತ್ತಾ ಸಹೃದಯನು ವಿಚಾರಪರನಾಗುವಂತೆ ಮಾಡುತ್ತಾನೆ.

'ಪಾಡಾದಳು ಹಣ್ಣಾದಳು
ಮಣ್ಣಾದಳು ಹುಡುಗಿ
ನೆನಪಾದಳು ಕಥೆಯಾದಳು
ವ್ಯಥೆಯಾದಳು ಕಥೆಯಾದಳು
ಎದೆಯಲ್ಲಿಯೆ ಮಡಗಿ !'

ಈ ಕವನವನ್ನು ಕುರಿತು ಕೀರ್ತಿನಾಥ ಕುರ್ತಕೋಟಿಯವರು " 'ಈ ಕಥೆಯಾದಳು ಹುಡುಗಿ' ಒಬ್ಬ ಹುಡುಗಿಯ ಜೀವನದ ಕ್ಷಣಿಕತೆಯನ್ನು, ದುರಂತವನ್ನು ಒಂದು ಸಸಿಯ ರೂಪದಲ್ಲಿ ಚಿತ್ರಿಸುತ್ತದೆ. ಮೊಳಕೆಯೊಡೆದ ಬೀಜ ಎರಡು ದಳವಾಗಿ ಟಿಸಿಲೊಡೆಯುವಂತೆ ಶ್ಲೇಷಾಲಂಕಾರ ಸಹಜವಾಗಿ ಈ ಕಾವ್ಯದ ತುಂಬ ವ್ಯಾಪಿಸಿದೆ. ಅವಿಲ್ಲದಿದ್ದರೆ ಕವಿತೆ ಭಾವನಾವಶತೆಗೆ ಈಡಾಗಬಹುದಿತ್ತು. ಕಪ್ಪುರದ ಚೂರೊಂದು ನೋಡ ನೋಡುತ್ತಿರುವಂತೆ ಉರಿದು ಬೆಳಕಾಗಿ, ಬೂದಿಯಾಗಿ, ಸುವಾಸನೆಯಾಗಿ ಹರಡಿದಂತೆ ಈ ಕಾವ್ಯದ ಅನುಭವ ವಿಸ್ಮಯವನ್ನುಂಟುಮಾಡುತ್ತದೆ" ಎಂದು ವಿಮರ್ಶಿಸಿದ್ದಾರೆ.

ವಿಧವೆಯ ಸಮಸ್ಯೆಯನ್ನು ಕುರಿತು ಬೇಂದ್ರೆಯವರು 'ಹೆಣದ ಹಿಂದೆ'[16] ಎಂಬ ಇನ್ನೊಂದು ಕವನವನ್ನು ಬರೆದಿದ್ದಾರೆ. ಅಂದೊಂದು ದೀರ್ಘ ಕವನವಾಗಿ ವಿಧವೆಯ ನೋವನ್ನು ಎಳೆಎಳೆಯಾಗಿ ಬಣ್ಣಿಸಿ ಅವಳ ಮತ್ತು ಅವಳ ಕೂಸಿನ ಸ್ಥಿತಿಗೆ ಕಳವಳ ವ್ಯಕ್ತಪಡಿಸಿದೆ. ಆ ತಾಯಿ ತನ್ನ ಕರುಳಕುಡಿಗಾಗಿ ಜೀವಹಿಡಿದು ನೊಂದ ಭಾವ ಹೀಗಿದೆ:

'ಹೊಟ್ಟೆಯಿಂದ ಬಂದ ಒಂದು
ಮರುಳು ಕರುಳು ಇಲ್ಲದಿದ್ದ-
ರೆಷ್ಟು ಒಳಿತು ಆಗುತಿತ್ತು!
ಇಲ್ಲದಿರುವದೊಂದೆ ಒಳಿತು.
ಇದ್ದು ಸುರಿದುಕೊಂಡುದೇನು?
ಗಂಡು ಹೆಣವು - ಹೆಣ್ಣು ಅಳುವು,
ಬಾಳು ಕಾಡು - ಕೂಸು ಪಶುವು.'

ಬೇಂದ್ರೆಯವರು ಆ ವಿಧವೆಯು ಜೀವನವನ್ನು ಎದುರಿಸುವವಳಾಗಬೇಕು. ಅದಕ್ಕೆ ಅವಳಲ್ಲಿ ತಾಳ್ಮೆ ಬೇಕು ಎಂದಿದ್ದಾರೆ. ಅವಳ ದಾರುಣ ಸ್ಥಿತಿಯಲ್ಲಿ ತಾಳ್ಮೆ ಎಂಬುದು ವೇದಾಂತದ ಒಣ ಮಾತಾಗದೆ; ದುಃಖದಿಂದ, ಜೀವನ ವಿಮುಖತೆಯಿಂದ ಅವಳು ಮೇಲೇಳಲು ಬೇಕಾದ ಮಾನಸಿಕ ಸಿದ್ಧತೆಯಾಗಿದೆ. ಆದಕಾರಣ ಕವಿ ನುಡಿದಿದ್ದಾರೆ:

'ಭೂಮಿತಾಯಿಯಂತೆ ನಿನಗೆ
ತಾಳ್ಮೆಯೊಂದೆ ಬಾಳ್ಮೆಯಹುದು'.

ಈ ಕವನವನ್ನು ಕುರಿತು ವಿ.ಕೃ.ಗೋಕಾಕರು "His 'Behind a corpse' is unquestionably one of the noblest poems in Kannada"[17] ಎಂದು ಹೇಳಿದ್ದಾರೆ.

**ಗೊಲ್ಲತಿಯರು**

ಬೇಂದ್ರೆಯವರಿಗೆ ಗೊಲ್ಲತಿಯರ ಜೀವನ ಪ್ರೀತಿ ತುಂಬಾ ಹಿಡಿಸಿದೆ. ಅವರು ಭಿಕ್ಷುಕಿಯರಾದರೂ ನಲ್ಲ ಮಕ್ಕಳೊಡನೆ ಬಾಳು ಮಾಡುತ್ತ ಸಾಗುವ ರೀತಿ ಅವರನ್ನು ತುಂಬಾ ಆಕರ್ಷಿಸಿದೆ. ಗೊಲ್ಲತಿಯರ ಚಾಪೆ ಹೆಣೆಯುವ ದುಡಿಮೆ ಮತ್ತು ಶೀಲಸಂಪತ್ತು ಅವರ ಮೆಚ್ಚಿಗೆಯ ವಿಷಯವಾಗಿದೆ. ಅದನ್ನು ಅವರು 'ಮನಸುಖರಾಯನ ಮಗಳು'[18] ಕವನದಲ್ಲಿ ಹೀಗೆ ಬಣ್ಣಿಸಿದ್ದಾರೆ.

'ಗೊಲ್ಲತಿಯು ನಾನಾಗಿ ಅಲೆದಾಡಿ ಬೀದಿಯಲಿ
ತಿರಿದು ಈಚಲ ಚಾಪೆ ಹೆಣೆಯಬಹುದು.
ಬಲ್ಲಂತೆ ನಾನು ನಾಡಾಡಿ ಡೊಂಬತಿಯಾಗಿ
ಗಣೆ ಮಿಣೆಗಳನ್ನೇರಿ ಕುಣಿಯಬಹುದು.
ತಿರಿಪೆ ಅನ್ನವೆ ಇರಲಿ ಹರಕು ಅರಿವೆಯೇ ಬರಲಿ
ಓರಿಗೆಯ ಮೈಯೊಡನೆ ತಿರುಗಬಲ್ಲೆ.
ನೆರಳನ್ನು ಬಿಟ್ಟಲ್ಲೊ ತಿರುಳೆ ಮೈಗರೆದಿರಲು
ಅಂಥ ಒಗೆತನವನ್ನು ಮರೆಯೊ ಒಲ್ಲೆ'.

ಬೇಂದ್ರೆಯವರು 'ಕಣ್ಮರೆಯಾಗುತ್ತಿರುವ ಕೆಲವು ಜೀವನ ಚಿತ್ರಗಳು ಗೊಲ್ಲರು'[19] ಎಂಬ ಲೇಖನದಲ್ಲಿ ಸಮಾಜಶಾಸ್ತ್ರೀಯವಾಗಿ, ಆರ್ಥಿಕತಜ್ಞರಾಗಿ ಅಧ್ಯಯನ ನಡೆಸಿ ಅವರ ಜೀವನಚಿತ್ರಣವನ್ನು ನೀಡಿದ್ದಾರೆ. 'ಶ್ರಾವಣ ಬಂದಾಗ ಗಂಡಸರು ನಾಗಪ್ಪನನ್ನು ತಂದು ತೋರಿಸಿ, ಹಾಲೆರಿಸಿ, ತಂಬಿಟ್ಟೂ, ದಕ್ಷಿಣೆ ಒಂದೆರಡು ದುಡ್ಡು ಗಳಿಸುವರು. ಹಗಲು ೮-೯ಗಂಟೆಗೆ ಬಂದವರು ಸಂಜೆ ೫-೬ರವರೆಗೆ ಬೀದಿ ಬೀದಿಯಲ್ಲಿ ಊರೆಲ್ಲಾ ತಿರುಗುವರು. ಇಷ್ಟು ಹಳಸಿದ ಅನ್ನ, ಗಳಿಸಿದ ಭಕ್ಕರಿ ತುಂಡು ಏನು ಮಾಡುವರೋ? ಎಂದು ಸಂಶಯ ಬರಬಹುದು. ಮಳೆಗಾಲಕ್ಕೂ ಅನುವು ಆಪತ್ತಿಗೂ, ಬೇನೆ ಬೇಸರಿಕೆಗೂ, ಅನ್ನ ಈಡಾಗಬೇಕಾದರೆ, ಅದನ್ನು ಒಣಗಿಸಿ ಕಟಿ ಮಾಡಿ, ಹರವಿಗಳಲ್ಲಿ ತುಂಬಿಡಬೇಕಾಗುವದು. ಇದೇ ಗೊಲ್ಲರ ಸಂಪತ್ತು. ಈ ಹರವಿಗಳ ಹರವು ನೋಡಿ ತರುಣ-ತರುಣಿಯರು ಮದುವೆಯ ಒಡಂಬಡಿಕೆ ಮಾಡಿಕೊಳ್ಳುವರು. ಹೀಗಿತ್ತು ಅವರ ಚುಟುಕು ಸಂಸಾರ."

**ಕುಟುಂಬ ಯೋಜನೆ**

ಬೇಂದ್ರೆಯವರು ಆಧುನಿಕ ಮನಸ್ಸಿನ ವಾಸ್ತವ ಚಿಂತನೆಯ ಕವಿ. ಅವರು ನಮ್ಮ ದೇಶದಲ್ಲಿ ಆಗುತ್ತಿರುವ ಜನಸಂಖ್ಯಾ ಸ್ಫೋಟವನ್ನು ಕಂಡು ಜನ ಕುಟುಂಬ ಯೋಜನೆ ಅಳವಡಿಸಿಕೊಳ್ಳಬೇಕು ಎಂದು

ಪ್ರತಿಪಾದಿಸಿದರು. ಸರ್ಕಾರದ ನುಡಿಯನ್ನು ಒಪ್ಪಿ ಅದನ್ನು ಜನರಿಗೆ ತಿಳಿಸಿಹೇಳುವ ಕಾವ್ಯ ರಚಿಸಿದರು. ಹೀಗೆ ರಚಿಸಲ್ಪಟ್ಟ ಮೂರು ಕವನಗಳು 'ಪರಾಕಿ' ಕವನ ಸಂಕಲನದಲ್ಲಿವೆ. ದೈವುಳ್ಳ ಗಂಡ ಹೆಂಡ್ರನ್ನ ಕುರಿತು,[20] ದುಡಿತದ ಕಾಯಕದವ್ರು ನಾಕು ಹಡಿಬಾರ್ದು,[21] ಬಿಕ್ಕಿ ಬೇಡವ್ರ ಮಕ್ಕಳ ಕಂಟ್ರೋಲ್ ಆಗಲಿ,[22] ಈ ಕವನಗಳು ನಮ್ಮ (ವ್ಯವಸ್ಥೆಯಲ್ಲಿರುವ ವರ್ಗವನ್ನಾಧರಿಸಿದ) ವರ್ಗಾಧಾರಿತ ಸಮಾಜದ ಮೂರು ಮುಖಗಳ ಪರಿಚಯ ಮಾಡಿಕೊಡುತ್ತ ಎಲ್ಲ ವರ್ಗದ ಜನರು ಕುಟುಂಬ ಯೋಜನೆಗೆ ಒಳಗಾಗಬೇಕು, ಇದರಿಂದ ಕುಟುಂಬದ, ಸಮಾಜದ ಮತ್ತು ದೇಶದ ಪ್ರಗತಿ ಇದೆ ಎಂದು ಸಾರಿದ್ದಾರೆ.

**ದೈವುಳ್ಳ ಗಂಡ-ಹೆಂಡತಿ**

ಮೊದಲವರ್ಗವಾದ ಸಿರಿವಂತರನ್ನು ಕುರಿತ ಕವನ 'ದೈವುಳ್ಳ ಗಂಡಹೆಂಡ್ರ'ನ್ನ ಕುರಿತು, ಇಲ್ಲಿ ದೈವುಳ್ಳ ಎಂಬ ಭಾವ ಆರ್ಥಿಕ, ದೈಹಿಕ, ಮಾನಸಿಕ ಸಂಪತ್ತನ್ನು ಒಳಗೊಂಡಿದ್ದು ಅದೆಲ್ಲದರ ಉಳಿವಿಗೆ ಸಂತಾನ ಸಂಪತ್ತು ಮಿತಿಗೊಳ್ಳಲಿ ಎಂಬ ಭಾವವಿದೆ. 'ಮುತ್ತಿನಂಥಾ ಎರಡು ಮಕ್ಕಳು ಸಾಕು' ಎಂಬ ತಿಳಿವನ್ನು ಯುವದಂಪತಿಗಳಿಗೆ ಸಾರುವ ಕವನ ಇದಾಗಿದೆ.

'ಯಾವ ಹುಡಿಗಿಯಾ ಕೈಯ ಹಿಡಿದಿ
ಆ ಮಡದಿ ಮಕ್ಕಳಾ ಖಣಿ
ಮೈಯ ಮಣ್ಣಿನಲಿ ರತ್ನ ಕಟ್ಟಿದಳು
ಕೋಟಿ ಮೇಟಿಯಾ ಧಣಿ.'

ಎಂದು ಜೀವರತ್ನಗಳಾದ ಮಕ್ಕಳನ್ನು ಹೆರುವ ಖಣಿ ಎಂದು ಸ್ತ್ರೀಯ ಸಂಪತ್ತನ್ನು ಸಾರಿದ್ದಾರೆ. ಆ ಸಂಪತ್ತನ್ನು ಶೋಷಿಸಬಾರದು. ಆದಕಾರಣ 'ಮುತ್ತಿನಂಥಾ ಎರಡು ಮಕ್ಕಳು ಸಾಕು' ಎಂದು ಮಕ್ಕಳ ನಿಯಂತ್ರಣಕ್ಕೆ ಒತ್ತುಕೊಟ್ಟು ನುಡಿದು, ಹುಟ್ಟು ಸಾವಿನ ಮೂಲವನ್ನು ಕೆಣಕುತ್ತ ಬಾಳಿನ ಅಮರತ್ವವನ್ನು ಸಾರಿದ್ದಾರೆ.

'ಕಂದ ನೀನು ತಾಯ್ತಂದೆ ಇಲ್ಲದೇ
ಹುಟ್ಟಲಿಲ್ಲವೋ ಮಗೂ
ಹುಟ್ಟು ಸಾವು ನಿನ ಬಿಟ್ಟು ಒಟ್ಟಿವೆ
ಬಾಳು ಅಮರನೊಲು, ನಗು!'

ಸರ್ಕಾರ ಅಂದು 'ಎರಡು ಮಕ್ಕಳು ಸಾಕು' ಎಂದು ಜನಕ್ಕೆ ಸಾರಿಹೇಳಿ ಕುಟುಂಬ ಯೋಜನೆಯ ಪ್ರಚಾರ ಮಾಡುತ್ತಿದ್ದಾಗ, ಬೇಂದ್ರೆಯವರು ಈ ದೇಶದ ಜನಸಂಖ್ಯಾ ಸಮಸ್ಯೆಯ ಬಗ್ಗೆ ತೀವ್ರವಾಗಿ ಆಲೋಚಿಸಿ ನುಡಿದ ನುಡಿ:

'ಹತ್ತು ಹಡಿಯೋದಕ್ಕಿಂತ ಒಂದು ಮುತ್ತು ಹಡಿಯೋದು ಲೇಸು
ನೀವು ಒಪ್ಪಿದರೂ ಭಲಾ, ಒಪ್ಪದಿದ್ದರೂ ಭಲಾ.
ಆಲಂ ದುನಿಯಾಕ್ಕ ನಮ್ಮ ಸಲಾಮು ಅದ'[23].

ಅದು ಈಗ ಸರ್ಕಾರದ ಘೋಷಣೆಯಾಗಿದೆ. ಒಂದು ಕುಟುಂಬಕ್ಕೆ ಒಂದೇ ಮಗು ಸಾಕು ಎಂಬ ಘೋಷಣೆ ನೀಡುತ್ತಿದೆ. ಆದಕಾರಣ ಈ ಮೇಲಿನ ನುಡಿ ಅವರು ಯಾವುದೇ ಸಮಸ್ಯೆಯ ಆಳಕ್ಕೆ ಹೋಗಿ ಚಿಂತಿಸುತ್ತಿದ್ದುದರ ಸಾಕ್ಷಿಯಂತಿದೆ.

**ದುಡಿತದ ಕಾಯಕದವ್ರು**

ನಮ್ಮ ಸಮಾಜದಲ್ಲಿರುವ ಎರಡನೆ ವರ್ಗ ಬಡವರು. ಅವರು ದುಡಿಮೆಯಿಂದಲೇ ಬದುಕುವವರು (ದುಡಿಮೆಗೆ ಹೆಚ್ಚು ಜನ ಬೇಕು). ಮನೆಯಲ್ಲಿ ಹೆಚ್ಚು ಜನ ಎಷ್ಟೇ ದುಡಿದರೂ ಹೊಟ್ಟೆ ಬಟ್ಟೆಗೆ ಸಾಲದ ಪರಿಸ್ಥಿತಿ ಇರುವಾಗ ಮನೆಯಲ್ಲಿ ಹೆಚ್ಚು ಮಕ್ಕಳು ಹುಟ್ಟಿದರೆ ಎಲ್ಲರೂ ದುಡಿದು ಹೊಟ್ಟೆ ಹೊರೆದುಕೊಳ್ಳಬಹುದು ಎಂಬ ಯೋಜನೆ ಬಡವರದು. ಅದು ತಪ್ಪು ಎಂದು ಕವಿ 'ದುಡಿತದ ಕಾಯಕದವ್ರು ನಾಕು ಹಡೀಬಾರ್ದು' ಎಂದಿದ್ದಾರೆ. ಈ ಕವನದಲ್ಲಿ ಮಕ್ಕಳನ್ನು ಹೆತ್ತರೆ ಸಾಲದು, ಅವುಗಳನ್ನು ಸಾಕಲು ಬುದ್ಧಿ ಬೇಕಾಗಿದೆ ಎಂದು ದುಡಿವ ಜನಕ್ಕೆ ಹೇಳಿದ್ದಾರೆ. ಕುಟುಂಬ ಯೋಜನೆ ಎಂಬುದು ಜನರಿಗೆ ತಿಳಿಯಬೇಕು ಎಂದು ಕಾವ್ಯ ಮುಖೇನ ಸಾರಿದ್ದಾರೆ.

'ಹಡಿದೀದಿ ಹೆಣ್ಣು, ಗಂಡು
ಮೂರನೇದ್ದು ಹೊಟ್ಟೀ ಮರಿ
ಪ್ರೀತೀಲೆ ಬಾಳೆ ಮಾಡ್ರಿ ಇನ್ನು ಮುಂದಾ
ಸಾಕೋದಕ್ಕ ಬುದ್ಧಿ ಬೇಕು
ತೇಕೋದಽ ಭಾಳ ಐತಿ
ದುಡಿಯೋದ ಹತ್ತೈತಿ ನಿಮ್ಮ ಹಿಂದಾ'.

ಮಕ್ಕಳು ಹೆಚ್ಚಾದಷ್ಟೂ ಸಂಸಾರದಲ್ಲಿ ಆಗುವ ಕಿರಿಕಿರಿ, ಆ ಮಕ್ಕಳನ್ನು ಸಪುಷ್ಟವಾಗಿ ಬೆಳೆಸಲು ಸಾಧ್ಯವಾಗದ ಪರಿಸ್ಥಿತಿ ಮತ್ತು ದೇಶಕ್ಕೆ ಆಗುವ ಹೊರೆಯನ್ನು ಜನಕ್ಕೆ ತಿಳಿಸಲು ಪ್ರಯತ್ನಿಸಿದ್ದಾರೆ. ಎಷ್ಟು ಹೇಳಿದರೂ ದುಡಿವ ಜನ ಒಂದು ಯಂತ್ರದ ರೀತಿಯಿದ್ದು ವಿವೇಚನಾಶೂನ್ಯರಾಗಿದ್ದಾರೆ ಎಂಬುದು ಕವಿಯ ನೋವಾಗಿದೆ. ಅದು ವ್ಯಕ್ತಿತ್ವ ನಾಶವಾದ ಸ್ಥಿತಿ ಎಂದು ಹೀಗೆ ನುಡಿದಿದ್ದಾರೆ :

'ನಿಮ್ಮ ತಲೀ ಬರೇದೈತಿ
ಹೇಳೋದೆಲ್ಲಾ ಖರೇದೈತಿ
ಗಿರಣಿ ಹ್ವಾರೆ ಟಾಯಿಮ್‌ಶೀರ್ ನಡ್ಯೋದೈತಿ'

ಅವರಿಗೆ ಕುಟುಂಬ ಎಂಬುದು ತುಂಬಾ ಮುಖ್ಯವಾಗಿತ್ತು. ಅವರು ಯಾವ ಸಿದ್ಧಾಂತ ರಚನೆ ಮಾಡದಿದ್ದರೂ ಕುಟುಂಬದ ಉಳಿವು, ಗಂಡು ಹೆಣ್ಣಿನ ತಿಳಿವು, ಮಕ್ಕಳ ಪೋಷಣೆ ಮುಖ್ಯ ಎಂದು ಹೇಳಿದರು. ಪ್ರತಿಯೊಬ್ಬ ವ್ಯಕ್ತಿಯ ವಿಕಾಸದಿಂದ ಸಮಾಜ ವಿಕಾಸವಾಗುವುದು ಎಂದು ನಂಬಿ ಅದರ ಪ್ರತಿಪಾದನೆಯನ್ನು ಕಾವ್ಯಮುಖೇನ ಸಾಧಿಸಿದರು.

'ಮಳೀ ಬೆಳೀ ಕೈಯಾಗಿಲ್ಲಾ
ಬಾಯ್ಬಡದರ ಬರೋದಿಲ್ಲಾ'

ಎಂದು ಹೇಳುತ್ತಲೇ ಸೃಷ್ಟಿ ಮಾತ್ರ ತಮ್ಮ ಹಿಡಿತದಲ್ಲಿರುವುದು ಅದನ್ನು ಅವರೇ ತಡೆಯುವಂತಾಗಬೇಕು. ಆಗ ಮಾತ್ರ ಹೊರಗಿನ ಸ್ಪರ್ಧೆಯ ಸಮಾಜಕ್ಕೂ ಒಳಗಿನ ಕುಟುಂಬಕ್ಕೂ ತಾಳಮೇಳ ಸಾಧ್ಯ. ತಂದೆ ತಾಯಿಗಳು ಮಿತಿಯಾದ ಮಕ್ಕಳನ್ನು ಪಡೆಯಬೇಕು. ಕುಟುಂಬ ಯೋಜನೆ ಅನುಸರಿಸಬೇಕು ಎಂದು ಸಾರಿದ್ದಾರೆ. 'ಬೆಳೆಯೋ ಮಕ್ಕಳ ತಲಿಮ್ಯಾಲೆ ನೆರಳಾಗ್ರಿ' ಎಂದು ಬಡವರನ್ನು ಎಚ್ಚರಿಸಿದ್ದಾರೆ.

**ಬಿಕ್ಕಿ ಬೇಡವ್ರ ಮಕ್ಕಳ ಕಂಟ್ರೋಲ ಆಗಲಿ**

ಈ ಸಮಾಜದ ಶ್ರೀಮಂತವರ್ಗ ಮತ್ತು ಮಧ್ಯಮವರ್ಗಕ್ಕೆ ತಿಳಿಸಿಹೇಳಬಹುದು. ಅವರು

ಕುಟುಂಬ ಯೋಜನೆ ಪಾಲಿಸುತ್ತಾರೆ. ಅವರು ಹಿಡಿತಕ್ಕೆ ಸಿಗುತ್ತಾರೆ. ಆದರೆ ಭಿಕ್ಷೆ ಬೇಡುವರು ಯಾರ ಹಿಡಿತದಲ್ಲಿಯೂ ಇಲ್ಲ. ಭಿಕ್ಷುಕರ ಸಂತತಿಯು ಬೆಳೆಯುತ್ತಿದೆ. ಇದೊಂದು ದೊಡ್ಡ ಸಾಮಾಜಿಕ, ಆರ್ಥಿಕ, ನೈತಿಕ ಸಮಸ್ಯೆ. ಇದು ನಮ್ಮ ದೇಶದಲ್ಲಿ ಯಾರ ಕೈಗೂ ಸಿಗದೆ ದಿನೇ ದಿನೇ ಬೆಳೆಯುತ್ತಾ ಸಾಗಿದೆ. ಹೀಗೆ ಭಿಕ್ಷೆ ಬೇಡುವವರನ್ನು ಕುಟುಂಬ ಯೋಜನೆಗೆ ಅಳವಡಿಸುವುದು ಹೇಗೆ ಎಂದಾಗ ಕವಿಗೆ ಬ್ರಿಟೀಷರ ಕಂಟ್ರೋಲ್ ಪದ ಸಮರ್ಥ ಎನಿಸಿದೆ. Control ತನ್ನದೇ ಆದ ಪ್ರಭುತ್ವ ಮತ್ತು ಶಕ್ತಿಯನ್ನು ಹೊಂದಿದೆ. Control ನಿಘಂಟಿನ ಅರ್ಥ the power or authority to direct, order or manage ಎಂದಿದೆ. ಆದಕಾರಣ ಬೇಂದ್ರೆಯವರು ಈ ಸಮಸ್ಯೆಯನ್ನು ಬಗೆಹರಿಸಲು ಬರಿ ಹೇಳುವುದು ಕೇಳುವುದು ಸಾಧ್ಯವಿಲ್ಲ. ಇಲ್ಲಿ ಸರ್ಕಾರ ನೇರವಾಗಿ ಪ್ರವೇಶಿಸಿ ಕಂಟ್ರೋಲ್ ಮಾಡಬೇಕು ಎಂದಿದ್ದಾರೆ. ಈ ದೇಶದ ಉಳಿವಿಗೆ ಇದರತ್ತ ಸರ್ಕಾರವು ತೀವ್ರವಾಗಿ ಗಮನ ಹರಿಸಬೇಕಾಗಿದೆ ಎಂಬ ಕಳಕಳಿ ಈ ಕವನದಲ್ಲಿದೆ.

'ಹೆಗಲಲ್ಲೊಂದು ಬಗಲಲ್ಲೊಂದು
ಹಿಂದೆರಡು ಮುಂದೆರಡು
ಎಲ್ಲಿ ಹೊರಟೆ ಶೆಟವೀ? ನೀ ಬೀದೀ ಭಿಕಾರೀ !'
ಇಲ್ಲ ಚಾಕರಿ; ಇಲ್ಲಾ ನೋಕರಿ
ಅದು ಬೇಕರಿ, ಇದೂ ಬೇಕ್ರಿ
ಬೇಕರಿ ಬ್ರೆಡ್ಡು, ಭಕ್ಕರಿ ಚೂರು; ಬೇಡ್ತಾಳ ಡೋಕಾರಿ'.

ಎಂದು ಭಿಕ್ಷುಕಿಯನ್ನು ಪ್ರಶ್ನಿಸುತ್ತ, ಭಿಕ್ಷುಕಿ ಎಂತಹ ನಿಸ್ಸಹಾಯಕಳು, ಹೆಣ್ಣಾದ ತಪ್ಪಿಗೆ ಮಕ್ಕಳನ್ನು ಹಡೆದು ಅವುಗಳ ಹೊಟ್ಟೆ ತುಂಬಿಸಲು ಕೊಟ್ಟಿದ್ದೆಲ್ಲ, ಬೇಕರಿ, ಬೇಕ್ರಿ ಎಂದು ಬೇಡಿ ತೆಗೆದುಕೊಳ್ಳುತ್ತಾಳೆ. ಬೇಂದ್ರೆ ನೋವಿನಲ್ಲೂ ಕಿರುಹಾಸ್ಯ ತುಂಬಿರುತ್ತಾರೆ ಎಂಬುದಕ್ಕೆ ಈ ಚರಣದ ಕೊನೆಯ ಸಾಲು ಸಾಕ್ಷಿಯಾಗಿದೆ. ಅವಳಿಗೆ ಮತ್ತು ಅವಳ ಮಕ್ಕಳಿಗೆ ಬೇಕರಿಯ ಬ್ರೆಡ್ಡು ಬೇಕರಿಯ ರುಚಿ ನೋಡುವ ಆಸೆ. ಆದಕಾರಣ ಬೇಕರಿ ಮುಂದೆ ಅವಳು 'ಡೋಕರಿ'ಯಾಗುತ್ತಾಳೆ. ಅಂದರೆ ನೋವಾಗದಿದ್ದರೂ ಅಳುವ ವ್ಯಕ್ತಿಯಾಗಿ ಅಳುತ್ತಾಳೆ, ಕೊರಗುತ್ತಾಳೆ, ಬ್ರೆಡ್ಡು ಕೇಕಿನ ರುಚಿ ನೋಡುವವರು ತುಂಡನ್ನು ತನ್ನತ್ತ ಎಸೆಯಲಿ ಎಂದು. ಹೀಗೆ ಬೇಂದ್ರೆ ಒಂದು ವಸ್ತುವಿನ ಚಿತ್ರಣಕ್ಕೆ ತೊಡಗಿದರೆ ಅದರ ಮೂಲಕ್ಕೆ ಪ್ರವೇಶಿಸಿ ಅದರ ಒಳಹೊರಗನ್ನು ಕಾವ್ಯವಾಗಿಸುತ್ತಾರೆ. ಈ ಹೀನಾಯ ಸ್ಥಿತಿಯನ್ನು ನೆನೆದರೆ ಈ ಕವಿ 'ಬೀದಿನಾಯಿ ರಾಧೆ'[24]ಯನ್ನು ರಚಿಸಿದ ಕವನ ನೆನಪಾಗುತ್ತದೆ. ಅಲ್ಲಿ ಆ ಹೆಣ್ಣು ನಾಯಿ ಜೀವವಾಹಿನಿಯಾಗಿ ಬೇಂದ್ರೆಯವರಿಗೆ ಕಾಣುತ್ತದೆ. ಅದು ಅವರಿಗೆ ತಾಯಿ.

'ಬೀದಿನಾಯಿ ರಾಧಿಗೆ
ಹೊಟ್ಟೆತುಂಬ ಮೊಲೆಗಳು
ಹೊಟ್ಟೆತುಂಬ ಎದೆಯ ತುಂಬ
ಜೋಲು ಮೊಲೆಯ ಸಾಲ್ಗಳು'

ಅದೇ ರೀತಿ ಇರುವ ಭಿಕ್ಷುಕಿಯನ್ನು ಕುರಿತು:

'ಹೆಡಗೀ ತುಂಬ ಮರೀ ಹಡದಿ
ತಿರುಗಲತಿಪ್ಪೀ ಹಾದಿ ಹಿಡದಿ'

ಎಂದು ಮಕ್ಕಳಿಗಾಗಿ ಬದುಕುವ ಹೆಣ್ಣನ್ನು ಚಿತ್ರಿಸುತ್ತಾ ಅವರು 'ಕೂಳಬೇಡೋ ಬದುಕು ಹಾಳು' ಎಂದು

ಬದುಕಿನ ಮೂಲಕ್ಕೆ ಹೋಗಿ ನುಡಿಯುತ್ತಾರೆ. ಬೇಂದ್ರೆಯವರು ಭಿಕ್ಷೆ ಬೇಡುವುದನ್ನು ಬಿಡಲು ಗಂಡಿಗೆ ಕೇಳಿಕೊಳ್ಳುವುದಕ್ಕಿಂತ ಹೆಣ್ಣಿಗೇ ಕೇಳಿಕೊಳ್ಳುತ್ತಾರೆ. 'ಒಳ್ಳೆ ಹರಕೀ ಹೊತ್ತೀ ಮಗಳ ಬಿಡು ಈ ಕಾಯ್ಕಾ'. ಹೀಗೆ ನುಡಿದಿರುವದರಲ್ಲಿ ಏನೇ ಸಾಧ್ಯವಾಗುವುದು ಹೆಣ್ಣಿನಿಂದ, ಅವಳು ಮನಸ್ಸು ಮಾಡಿದರೆ ಎಂತಹುದನ್ನೂ ಸಾಧಿಸಬಲ್ಲಳು ಎಂಬ ಚಿಂತನೆಯಿದೆ. ಭಿಕ್ಷೆ ಬೇಡುವುದಕ್ಕಾಗಿ ಸುತ್ತಾಡುವುದರಲ್ಲಿಯೂ ಅವಳೇ ಮುಂದು. ಭಿಕ್ಷುಕ ಗಂಡು ಸೋಮಾರಿ ಜವಾಬ್ದಾರಿರಹಿತ ವ್ಯಕ್ತಿಯಾಗಿ ಅವಳನ್ನು ಅವಲಂಬಿಸಿ ಬದುಕುವವನು. ಇದನ್ನೆಲ್ಲ ತಿಳಿದ ಬೇಂದ್ರೆ ಭಿಕ್ಷುಕರಲ್ಲಿಯೂ ಹೆಣ್ಣನ್ನು ಮೆಚ್ಚುತ್ತ ಅವಳು ಈ ಬಗೆಯ ಹಾಳು ಬದುಕು ಬಿಟ್ಟು ಹೊರಬರಲು ಕೇಳಿಕೊಂಡಿದ್ದಾರೆ. ಈ ಕವನದ ಕೊನೆಯಲ್ಲಿರುವ ಮೂರು ಸಾಲುಗಳು:

'ತೂಕಾ ಹಿಡಿದು ಮೂವರೂ ಬಾಳ್ರಿ
ಮ್ಯಾಳ ಇರಲಿ, ದುಡಿದು ತಾಳ್ರಿ
ಬೇಡಿಕೊಳ್ರಿ ಬುದ್ಧೀ, ಕೊಡ್ಲಿ ಜಗನಾಯ್ಕಾ'

ಎಂಬುದು ಹಲವಾರು ಧ್ವನಿಯನ್ನು ತನ್ನಲ್ಲಿ ಅಡಗಿಸಿಕೊಂಡಿದೆ. ಮೊದಲ ಸಾಲಿನಲ್ಲಿ ಬೇಂದ್ರೆಯವರು ಗಂಡ ಹೆಂಡತಿ ಮಗು ತೂಕಾಹಿಡಿದು ಬಾಳಲು ಸೂಚಿಸಿದ್ದಾರೆ. ಎರಡನೆಯ ಸಾಲಿನಲ್ಲಿ ಈ ಬಾಳಿನಲ್ಲಿ ದುಡಿದು ತಾಳಿಕೆ ಬರಲು ಅರ್ಥಪೂರ್ಣವಾಗಿ ಇರಲು ತಿಳಿಸಿದ್ದಾರೆ. ಮೂರನೆಯ ಸಾಲು ಈ ರೀತಿ ಆಗಲು ಅವರಿಂದಲೇ ಸಾಧ್ಯವಿಲ್ಲ. ಅದು ಅಧಿಕಾರಸ್ಥ 'ಜಗನಾಯ್ಕ'ರಿಂದ ಆಗಬೇಕಾಗಿದೆ. ಅದನ್ನು ಮಾಡುವಂತೆ ಅವರಿಗೆ ಬುದ್ಧಿ ಬರಬೇಕಾಗಿದೆ. ಹಾಗೆ ಅವರಿಗೆ ಬುದ್ಧಿ ಬರಲು ಭಿಕ್ಷುಕರೇ ಅವರನ್ನು ಪ್ರಾರ್ಥಿಸಬೇಕಾಗಿರುವುದು ಈ ದೇಶದ ವ್ಯಂಗ್ಯ! ಅದನ್ನು ಕವಿ ಕಾವ್ಯದ ವ್ಯಂಗ್ಯಾರ್ಥದಲ್ಲಿ 'ಬುದ್ಧಿ' ಪದವನ್ನು ಬಳಸುತ್ತ ಮೈಸೂರಿನ ಕಡೆಯ ಅಧಿಕಾರಸ್ಥರನ್ನು ಉದ್ದೇಶಿಸಿ ನುಡಿದ ನುಡಿ ಬುದ್ಧಿಯನ್ನು ಬಳಸಿ 'ಬೇಡಿಕೊಳ್ಳಿ ಬುದ್ಧೀ, ಕೊಡ್ಲಿ ಜಗನಾಯ್ಕಾ' ಎಂದಿದ್ದಾರೆ.

ಹೀಗೆ ಸಾಮಾಜಿಕ ಸಮಸ್ಯೆಗೆ ಸ್ಪಂದಿಸಿದ ಕಾವ್ಯ ರಚಿಸುವಾಗ ಬೇಂದ್ರೆಯವರಿಗೆ ಹೆಣ್ಣು ಮುಖ್ಯವಾಗಿ ಆ ಬೆಳಕಿನಲ್ಲಿ ಸಮಸ್ಯೆಯ ಮೇಲೆ ಕ್ಷಕಿರಣ ಬೀರುವುದು ಕಾಣುತ್ತದೆ.

**ಸಂಖ್ಯಾ ಟಿಪ್ಪಣಿಗಳು**

1. ದ.ರಾ.ಬೇಂದ್ರೆ, ಅರಳುಮರಳು, ಶ್ರೀಮಾತಾ ಪ್ರಕಾಶನ, ಧಾರವಾಡ, 1995, ಪು. 66.
2. ದ.ರಾ.ಬೇಂದ್ರೆ, ಗಂಗಾವತರಣ, ಶ್ರೀಮಾತಾ ಪ್ರಕಾಶನ, ಧಾರವಾಡ, 1989, ಪು. 20.
3. ಅದೇ, ಪು. 21
4. ಅದೇ, ಪು. 26.
5. ದ.ರಾ.ಬೇಂದ್ರೆ, ಮಾತೆಲ್ಲ ಜ್ಯೋತಿ, ಮಣಿಪಾಲ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್, ಮಣಿಪಾಲ, 1992, ಪು. 74.
6. ದ.ರಾ.ಬೇಂದ್ರೆ, ಕಾವ್ಯವೈಖರಿ, ಶ್ರೀಮಾತಾ ಪ್ರಕಾಶನ, ಧಾರವಾಡ, 1982, ಪು. 29.
7. ದ.ರಾ.ಬೇಂದ್ರೆ, ಗಂಗಾವತರಣ, ಪೂರ್ವೋಕ್ತ, ಪು. 28.
8. ದ.ರಾ.ಬೇಂದ್ರೆ, ನಮನ, ಪ್ರತಿಭಾ ಮುದ್ರಣ, ಧಾರವಾಡ, 1958, ಪು. 47.
9. ದ.ರಾ.ಬೇಂದ್ರೆ, ಮಾತೆಲ್ಲ ಜ್ಯೋತಿ, ಪೂರ್ವೋಕ್ತ, ಪು. 77.
10. ದ.ರಾ.ಬೇಂದ್ರೆ, ಪರಾಕಿ, ಸಮಾಜ ಪುಸ್ತಕಾಲಯ, ಧಾರವಾಡ, 1982, ಪು. 35.

11. ಸ.ಪ.ಗಾಂವಕರ, 'ನಾ ಕಂಡ ದತ್ತು', ಬೇಂದ್ರೆ ಸತ್ಕಾರ ಸಮಿತಿ, ಕವಿವರ ಬೇಂದ್ರೆ, ಲಲಿತ ಸಾಹಿತ್ಯ ಮಾಲೆ, ಧಾರವಾಡ, 1946, ಪು. 27.
12. ವಿ.ಕೃ.ಗೋಕಾಕ, Bendre: Poet and Seer, ಸೋಮಯ್ಯ ಪಬ್ಲಿಕೇಷನ್ಸ್ ಪ್ರೈ. ಲಿ., ಬಾಂಬೆ, 1970, ಪು. 70, 71.
13. ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ, ಶ್ರೀಮಾತಾ ಪ್ರಕಾಶನ, ಧಾರವಾಡ, 1998, ಪು. 41, 42, 43.
14. ದ.ರಾ.ಬೇಂದ್ರೆ, ಸಖೀಗೀತ, ಶ್ರೀಮಾತಾ ಪ್ರಕಾಶನ, ಧಾರವಾಡ, 1990, ಪು. 92.
15. ದ.ರಾ.ಬೇಂದ್ರೆ, ಅರಳುಮರಳು, ಪೂರ್ವೋಕ್ತ, ಪು. 464.
16. ದ.ರಾ.ಬೇಂದ್ರೆ, ನಾದಲೀಲೆ, ಶ್ರೀಮಾತಾ ಪ್ರಕಾಶನ, ಧಾರವಾಡ, 1989, ಪು. 67.
17. ವಿ.ಕೃ.ಗೋಕಾಕ, Bendre: Poet and Seer, ಪೂರ್ವೋಕ್ತ, ಪು. 51.
18. ದ.ರಾ.ಬೇಂದ್ರೆ, ಸಖೀಗೀತ, ಪೂರ್ವೋಕ್ತ, ಪು. 51.
19. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ, 1974, ಪು. 963.
20. ದ.ರಾ.ಬೇಂದ್ರೆ, ಪರಾಕಿ, ಪೂರ್ವೋಕ್ತ, ಪು. 39.
21. ಅದೇ, ಪು. 40.
22. ಅದೇ, ಪು. 42.
23. ದ.ರಾ.ಬೇಂದ್ರೆ, ತಾ ಲೆಕ್ಕಣಿಕೆ ತಾ ದೌತಿ, ಶ್ರೀಮಾತಾ ಪ್ರಕಾಶನ, ಧಾರವಾಡ, 1982, ಪು. 43.
24. ದ.ರಾ.ಬೇಂದ್ರೆ, ಅರಳುಮರಳು, ಪೂರ್ವೋಕ್ತ, ಪು. 64.

## ಮುಖ ಐದು : 'ಬಸವಿ', 'ಹುಬ್ಬಳ್ಳಿಯಾಂವಾ'

ಬೇಂದ್ರೆಯವರ ಬಾಲ್ಯದ ಕಾಮನಕಟ್ಟೆ ಅವರ ಬಾಲಮನವನ್ನು ರೂಪಿಸಿದ ಕ್ಷೇತ್ರ. ಅಲ್ಲಿ ಸಮಾಜದ ಎಲ್ಲ ಬಗೆಯ ಎಲ್ಲ ಮುಖದ ಜನರಿದ್ದರು. ಅವರು ಬಾಲಕನಾಗಿ, ವೇಶ್ಯೆಯರ ಮನೆಗೆ ವೈದಿಕ ವಟುವಾಗಿ ಹೋಗಿದ್ದು ಅವರು ವೇಶ್ಯೆಯರನ್ನು ಮತ್ತು ಹೆಣ್ಣನ್ನು ಹಾಗೂ ಪ್ರೇಮವನ್ನು ಕುರಿತು ಮುಂದೆ ರಚಿಸಿದ ಕವನಗಳಲ್ಲಿ ಅಶ್ಲೀಲವನ್ನು ಮೀರಿದ, ಆಹ್ಲಾದಮಯ ಭಾವದ ಔನ್ನತ್ಯವನ್ನು ಸಾಧಿಸಲು ಕಾರಣವಾಯಿತು ಎಂದು ಹೇಳಬಹುದು. 'ಬೇಂದ್ರೆಯವರ ಜೀವನ ಪರಿಚಯ' ಕೃತಿಯಲ್ಲಿ ವಾಮನ ಬೇಂದ್ರೆಯವರು ಅವರ ಬಾಲ್ಯವನ್ನು ಚಿತ್ರಿಸುತ್ತ : "ತಾಯಿ ಅಂಬಕ್ಕ ಬೇಂದ್ರೆಯವರಿಗೆ ವಿವಿಧ ಪುರಾಣಗಳನ್ನು, ಸಾಧು-ಸತ್ಪುರುಷರ ಚರಿತ್ರೆಗಳನ್ನು ಓದಿ ತೋರಿಸಲು ಹಚ್ಚಿ ದೈವಾಲಂಬನದ ಬೀಜ ಬಿತ್ತಿದ್ದರು. ಬೇಂದ್ರೆಯವರು ವಾಸಿಸುತ್ತಿದ್ದದ್ದು ಕಾಮನಕಟ್ಟಿಯ ಪರಿಸರದಲ್ಲಿ. ಸುತ್ತುಮುತ್ತು ಅನೇಕ ವೇಶ್ಯೆಯರು ಮಾನದಿಂದ ಬಾಳುತ್ತಿದ್ದರು. ಅಂಬಕ್ಕನವರ ಕಡೆಗೆ ಕೆಲವು ವೇಶ್ಯೆಯರು ಪುರಾಣ ಓದಿಸಿ ಕೇಳಲು ಬರುತ್ತಿದ್ದರು. ಆ ವೇಶ್ಯೆಯರು ದೇವರಲ್ಲಿ, ಪೂಜೆ ಪುನಸ್ಕಾರಗಳಲ್ಲಿ ಭಕ್ತಿಭಾವ ಉಳ್ಳವರು. ಇಂಥವರ ಮನೆಗೆ ಬೇಂದ್ರೆಯವರು ಚಿಕ್ಕವರಿರುವಾಗ ಪೂಜೆಗೆ ಹೋಗಿದ್ದುಂಟು. 'ಹೆಣ್ಣು ಎನ್ನುವ ಮಾತು ತಾಯಿ ಎನ್ನುವ ಮಾತು ಎರಡಲ್ಲ ಒಂದು' ಎಂದು ಬೇಂದ್ರೆಯವರಿಗೆ ತಿಳಿಸಿಕೊಟ್ಟವಳು ತಾಯಿ ಅಂಬಕ್ಕ. ಬೇಂದ್ರೆಯವರಿಗೆ ಅತ್ಯಂತ ಸಾಮಾನ್ಯ ಪ್ರಶ್ನೆಯಿಂದ 'ಸುತ್ತೆಲ್ಲ ಬೆಳಕಿದ್ದು ಒಳಗೆ ಕತ್ತಲೆ ಏಕೆ' ಎಂಬ ಗಹನ ಪ್ರಶ್ನೆ ಬಂದರೂ ಅದಕ್ಕೆ ಉತ್ತರ ಕೊಡುತ್ತಿದ್ದರು ಅಂಬಕ್ಕ"[1] ಎಂದು ಹೇಳಿದ್ದಾರೆ. ಬೇಂದ್ರೆಯವರಿಗೆ ಬೆಳಕು-ಕತ್ತಲೆ ಜಗದ ಗೂಢವನ್ನು ಅರಿಯಲು ಕಾರಣವಾದಂತೆ, ಅದರ ಸಾಮಾಜಿಕ ಮುಖವನ್ನು -ಬೆಳಕಿಗೆ ಎದುರಿ ಬಾಳುವ, ತನ್ನ ನೆರಳಿಗೆ ಅಂಜುವ ಜೀವನಮೌಲ್ಯವನ್ನು - ಬಾಲ್ಯದಲ್ಲಿಯೇ ತಿಳಿಸಿತ್ತು. ಆದಕಾರಣ ಅವರು ಅಂದಿನ ಸಮಾಜ ಜೀವನದ ಒಂದು ಮುಖವನ್ನು :

'ಬೆಳಕಿಗೂ ಕತ್ತಲೆಗು ಹೆದರದ ಜನದಲ್ಲಿ
ಬಣ್ಣ ಬಣ್ಣದ್ದಿತ್ತು ಸಂಸಾರವು
ಮುದ್ದೆಯಾಗಿರಲಿಲ್ಲ ಒದ್ದೆಯಾಗಿದ್ದರೂ
ತಿದ್ದಿಕೊಳ್ಳುವ ಹದದಾಕಾರವು'

ಎಂದು ಬಣ್ಣಿಸಿದ್ದಾರೆ. ಆ ಬಣ್ಣಬಣ್ಣದ ಸಂಸಾರದಲ್ಲಿ ತೊಳಲಾಡುತ್ತಿದ್ದ ಹೆಣ್ಣು ಜೀವಗಳು ಬೇಂದ್ರೆಯವರ ಬಾಲಮನಸ್ಸನ್ನು ಹೆಣ್ಣಿನ ಪರವಾಗಿ ರೂಪಿಸಿದವು ಎಂದು ಹೇಳಬಹುದು. ಅದನ್ನು ಸೂಕ್ಷ್ಮವಾಗಿ ಅರಿತ ಬೇಂದ್ರೆ :

'ರಾಧಾನ ಬಗಲಾಗ ಚಿಮಣಾಃ ಕುಣೀತಾಳ
ಪಾರಿಜಾತದ ಕಾಟಾ ಮುಳ್‌ಸವತಿಗೆ
ಪದ್ಮಾವತಿಯ ಮುಂದೆ ಕೊರವಂಜಿಯ ಮಾಟ
ಜೋಳಿ ತುಂಬುತ್ತಿತ್ತು ಓಂ ಭವತಿಗೆ'[12]

ಎಂದು ಗೃಹಿಣಿ ಮತ್ತು ವೇಶ್ಯೆ ಇವರಿಬ್ಬರು ಒಂದು ಗಂಡಿನಲ್ಲಿ ವಹಿಸುತ್ತಿದ್ದ ಪಾತ್ರವನ್ನು, ಆ ಗಂಡು 'ಬೆಳಕಿಗೂ ಕತ್ತಲೆಗೂ ಹೆದರದವ'ನಾಗಿದ್ದುದನ್ನು ಚಿತ್ರಿಸಿದ್ದಾರೆ. ಗಂಡಿನ ಆ ವರ್ತನೆಯಿಂದ ನೋವಿಗೀಡಾದ ಹೆಣ್ಣು ಬೇಂದ್ರೆಯವರಿಗೆ ಆತ್ಮೀಯವಾದರು. ಬೇಂದ್ರೆಯವರು ಅವರ ಆರ್ದ್ರ ಹೃದಯಸ್ಪಂದನವನ್ನು ಕಾವ್ಯವಾಗಿಸಿದರು ಎಂದು ಹೇಳಬಹುದು.

ಬೇಂದ್ರೆಯವರ ಕವಿ ಮನವನ್ನು ರೂಪಿಸಿದ ಚಿತ್ರಣವನ್ನು ಎನ್ಕೆಯವರು : "ಕಾಮನಕಟ್ಟಿಯ ಬದುಕು ಕಾಮನಬಿಲ್ಲಿನ ವೈವಿಧ್ಯದಿಂದ ತರುಣ ಕವಿಹೃದಯದ ಮೇಲೆ ಅಚ್ಚಳಿಯದ ಪ್ರಭಾವ ಬೀರಿತ್ತು. ಆಗಿನ ಕಾಮನಕಟ್ಟೆ ಅಂದರೆ ನಾಚು-ರಂಗಿನ ಓಣಿಯಾಗಿತ್ತು. ಅಲ್ಲಿಯ 'ವೇಶ್ಯೆಯರ ನಿರ್ಮಲತೆ ನೋಡಿ ನನಗೆ ಮೆಚ್ಚಿಗೆಯೂ ಆಯಿತು' ಎಂದು ನುಡಿದ ಬಾಲಕ ಬೇಂದ್ರೆ 'ವೈದಿಕ ಭಟ್ಟನೆಂದು' ಆಮಂತ್ರಿತನಾಗಿ ವೇಶ್ಯೆಯರ ಮನೆಗಳಲ್ಲಿ ಮಂತ್ರ ಹೇಳಿ ದಕ್ಷಿಣೆ ಪಡೆಯುತ್ತಿದ್ದೆನೆಂದು ಹೇಳುತ್ತಿದ್ದರು. 'ಇನ್ನೂ ಯಾಕ ಬರಲಿಲ್ಲವ್ವ' ಎಂದು ಪ್ರಿಯಕರನಿಗಾಗಿ ಕಳವಳಿಸಿದ ಹೃದಯ, 'ಯಲ್ಲಿ, ಮಲ್ಲಿ, ಪಾರೀ, ತಾರೀ, ನೋಡೀರೇನವ್ವಾ, ನಿಂಗೀ, ಸಂಗೀ, ಸಾವಂತರೀ ಎಲ್ಲಾಽಽನ ನನ್ನಾಂವಾ' ಎಂದು ಹೇಳಿಕೊಂಡ ಹೆಸರುಗಳು ಇದೇ ಕಾಮನ ಕಟ್ಟೆಯ್ಲಲಿದ್ದಿರಬೇಕೆನಿಸುತ್ತದೆ"[3] ಎಂದು ಹೇಳಿದ್ದಾರೆ.

**ಆತ್ಮಕಥೆಯಲ್ಲಿ ದಾಖಲಿಸಿದ್ದು**

'ನಮ್ಮ ಕಾಮನಕಟ್ಟಿ ನಾಚುರಂಗಿನ ಓಣಿ. ಹಳೆಯ ಪಾತರದವರಿಗೂ ಹೊಸ ಕಸಬೆಯರಿಗೂ ಅದು ಸ್ಥಿರಾಶ್ರಯ. ಆದರೆ ಅವರ ಯಾವ ಜೀವನವನ್ನೂ ನೋಡಿ ನನಗೆ ಹೇಸಿಗೆಯಾಗಲಿಲ್ಲ. ಕೆಲವೊಬ್ಬರ ನಿರ್ಮಲತೆಯನ್ನು ನೋಡಿ ನನಗೆ ಮೆಚ್ಚಿಕೆಯೂ ಆಗಿತ್ತು. 'ವೈದಿಕ ಭಟ್ಟ' ಎಂದು ಕೆಲವರು ನನಗೆ ದಾನ ಧರ್ಮ ಮಾಡಿ ನಮಸ್ಕಾರ ಮಾಡುತ್ತಿದ್ದರು. ಕೆಲವರು ನಮ್ಮ ತಾಯಿ ಓದುವ ಪುರಾಣ - ಪುಣ್ಯಕತೆ ಕೇಳಲು ಬಂದು ಕೂಡುತ್ತಿದ್ದರು. ಕೆಲವರು ಅವರವರ ಯಜಮಾನರು ಪ್ರಸಂಗೋಪಾತವಾಗಿ ನಮ್ಮಲ್ಲಿ ಊಟಮಾಡಿ ಹೋಗುವವರೇ. ಈ ಜನ ಸ್ವಭಾವತಃ ಜುಗುಪ್ಸೆಯ ನಡತೆಯವರಲ್ಲ. ಇವರೆಲ್ಲರೂ ಸಂಭಾವಿತರೆಂದೆನಿಸಿಕೊಳ್ಳಲು ಸಾಕಷ್ಟು ಪ್ರಯತ್ನಪಡುತ್ತಿದ್ದರು. ಜೀವನದಲ್ಲಿ ಒಂದು ಬಿಗುವು ಇತ್ತು"[4] ಎಂದು ಬೇಂದ್ರೆಯವರು ತಮ್ಮ ಆತ್ಮಕಥೆಯಲ್ಲಿ ದಾಖಲಿಸಿದ್ದಾರೆ. ಅವರು ಪ್ರತಿಯೊಂದು ಸಂದರ್ಭದಿಂದ ದೂರನಿಂತು ಸ್ವಾನುಭೂತಿ ಹಾಗೂ ಸಹಾನುಭೂತಿಯಿಂದ ಕಾವ್ಯ ರಚಿಸಿದ್ದಾರೆ.

**ಸೂಜಿ ಹಿಂದ ದಾರಧಾಂಗ**

ಈ ಹಿನ್ನೆಲೆಯಲ್ಲಿ ಅವರ ಬಸವಿ ಅಂದರೆ ವೇಶ್ಯೆಯನ್ನು ಕುರಿತು ರಚಿಸಿರುವ ಮೂರು ಕವನಗಳನ್ನು ತಿಳಿಯಲು ಪ್ರಯತ್ನಿಸೋಣ. ಬಸವಿ, ಸೂಳೆ ಎಂಬುದು ಅಚ್ಚ ಕನ್ನಡ ಪದಗಳು. ನಮ್ಮ ಸಮಾಜ ಹೆಣ್ಣನ್ನು ಶೋಷಿಸಿದ ಮತ್ತು ಶೋಷಿಸುತ್ತಿರುವ ಸಾಕ್ಷಿಯಂತೆ ಈ ಪದಗಳಿವೆ. ನಮ್ಮ ಧಾರ್ಮಿಕ ಸಂಸ್ಕೃತಿಯಲ್ಲಿ ದೇವರಿಗೆ ಹೋರಿಯನ್ನು ಬಸವನನ್ನಾಗಿ ಬಿಡುತ್ತಾರೆ. ಅದು ದೇವಾಲಯಕ್ಕೆ ಸೇರಿದ್ದು. ಅದನ್ನು ಯಾರೂ ಏನೂ ಮಾಡುವಂತಿಲ್ಲ. ಅದು ತನಗೆ ಇಷ್ಟ ಬಂದಹಾಗೆ ಇರಬಹುದು, ಕಟ್ಟು ಮೇವು ಇಲ್ಲ. ಅದೇ ರೀತಿ

ದೇವಸ್ಥಾನಕ್ಕೆ ಬಿಟ್ಟ ಹೆಣ್ಣು ಬಸವಿ. ಈ ಹೆಣ್ಣಿಗೆ ಪಶುವಿನ ಸ್ಥಾನವನ್ನು ನೀಡಿ ನಡೆದುಕೊಂಡಿರುವ ಹೀನ ಜನ ನಾವು. ಅಂತಹ ಹೆಣ್ಣಿನಲ್ಲಿ ಪ್ರೇಮದ ಆರಾಧನೆಯನ್ನು ಕಂಡು, ಅವಳನ್ನು ತಾಯಿಯೆಂದು ಭಾವಿಸಿದ್ದು ಬೇಂದ್ರೆಯವರ ಹೆಣ್ಣಿನ ಪರವಾದ ಶ್ರೇಷ್ಠ ಮನೋಧರ್ಮವಾಗಿದೆ. ಅವರ 'ಹುಬ್ಬಳ್ಳಿಯಾಂವ' ಕವನವು "ಪ್ರಣಯ ಭಂಗದಿಂದ ಹುಚ್ಚುಹಿಡಿದ ಸೂಳೆಯೊಬ್ಬಳು ತನ್ನ ಉನ್ಮಾದದಲ್ಲಿ ಈ ಹಾಡನ್ನು ಹೇಳುತ್ತಾಳೆ"[5] ಎಂಬ ಭಾವಸಂದರ್ಭ ಹೊಂದಿದೆ. ಬೇಂದ್ರೆಯವರ ಈ ಕವನವು ತನ್ನ ಭಾವವನ್ನು ಪ್ರಥಮ ನುಡಿಯಲ್ಲಿಯೇ ಹೊಮ್ಮಿಸುತ್ತ ಓದುಗ ಹಾಗೂ ಕೇಳುಗರನ್ನು ತನ್ನ ಲಯಕ್ಕೆ ಸೆಳೆದುಕೊಳ್ಳುವ ಗುಣವನ್ನು ಹೊಂದಿದೆ. ಈ ಕವನದ ಪ್ರಾರಂಭ:

'ಇನ್ನೂ ಯಾಕ ಬರಲಿಲ್ಲವ್ವಾ| ಹುಬ್ಬಳ್ಳಿಯಾಂವಾ
ವಾರದಾಗ | ಮೂರು ಸರತಿ | ಬಂದುಹೋದಾಂವಾ'

ಎಂಬುದು ಕುತೂಹಲವನ್ನುಂಟುಮಾಡುವ ನುಡಿಯನ್ನು ಹೊಂದಿದ್ದು ಅದರ ಹಿಂದೆ ಮನಸ್ಸು 'ಸೂಜಿ ಹಿಂದ ದಾರಧಾಂಗ | ಹೋತಽ ಹಿಂದ ಬಾರಧಾಂಗ|'[6] ಎಂಬಂತಾಗಿ ಆ ಜಾನಪದ ನುಡಿ, ಲಯ, ಭಾವ, ಸ್ಪರ್ಶದೊಂದಿಗೆ ಒಂದಾಗಿಹೋಗುತ್ತವೆ. ಹಾಗೆ ಹೋಗುತ್ತ ಅಲ್ಲಿಯ ವಿರಹದ ಪ್ರೇಮವನ್ನು ಕಂಡು ಆನಂದಿಸುತ್ತವೆ. ಅಲ್ಲಿಯ 'ಭಾರಿ ಜರದ | ವಾರಿ ರುಮ್ಮಾಲಾ ಸುತ್ತಿಕೊಂಡ'ರಸಿಕ ಶೆಟ್ಟರ ಹುಡುಗ, ಅವನ ಹುಡುಗತನದ 'ಏನೊ ಅಂದರ ಏನೋ ಕಟ್ಟಿ ಹಾಽಡ ಹಾಡುವ' ವಯಸ್ಸು, ಅದರ ಮೋಹಕ್ಕೆ ಒಳಗಾದ 'ಜೋಗತಿ' ಇಲ್ಲಿದ್ದಾರೆ. ಜೋಗತಿಯರು ಒಲಿದು ಮೆಚ್ಚಿದವನಿಗೆ ತಮ್ಮನ್ನು ಅರ್ಪಿಸುವ ಸಂಪ್ರದಾಯದ ಯಲ್ಲಮ್ಮ ಭಕ್ತಳ ರೀತಿ : 'ಜೋಗತೇರಿಗೆ ಮೂಗುತಿ ಅಂತ | ನನಽಗ ಅಂದಾವಾ' ಎಂಬಲ್ಲಿ ಅವಳ ಪ್ರೀತಿಯ ನಿಷ್ಠೆ ಇರುವುದು ಕಂಡುಬರುತ್ತದೆ. ರಸಿಕ ಓದುಗರಿಗೆ ಜೋಗತಿಯ ಪ್ರೀತಿಯು 'ಇರು ಅಂದರ ಬರತೇನಂತ| ಎದ್ದು ಹೊರಡಾಂವ' ಎಂಬಲ್ಲಿ ಇಬ್ಬರಲ್ಲಿ ಇದ್ದು ಆಲಿಸುವಂತೆ ಕಿವಿ ತೆರೆಸಿ ಅವಳ ಒಲವನ್ನು ಕಾಣುವಂತೆ ಮಾಡುತ್ತದೆ. ಅದು ಅವರನ್ನು ಶೆಟ್ಟರ ಹುಡುಗ ಜೋಗತಿಯನ್ನು 'ಖರೇ ಅಂತ ಕೈ ಮಾಡಿದರ | ಹಿಡಿಽದ ಬಿಡಾಂವಾ' ಎಂಬಂತೆ ಗಟ್ಟಿಯಾಗಿ ಹಿಡಿದುಬಿಡುತ್ತದೆ. ಅದು ಹಿಡಿದ ರೀತಿ ಜನಮನ ಬಾಳಿನ ಒಂದು ಭಾಗವಾಗಿ ಈ ಕಾವ್ಯ ಹರಿದಂತಾಗುತ್ತದೆ. ಕನ್ನಡ ಜನಮನದಲ್ಲಿ ಹಲವು ಭಾವದ ಹಲವು ಚಿಂತನೆಯ ಹಲವು ಲಹರಿಗಳ ಸ್ವಾದಿಷ್ಟವನ್ನು ನೀಡುವ 'ಚಹಾದ ಜೋಡಿ ಚೂಡಾದ್ಹಾಂಗ' ಸವಿಯನ್ನು ನೀಡುತ್ತದೆ. ಅದನ್ನು ನುರಿಸುತ್ತ ಹೋದಂತೆ ಶೆಟ್ಟರ ಹುಡುಗ ಮತ್ತು ಜೋಗಿತಿ ಒಂದಾದಂತೆ 'ಕಣ್ಣಿನಾಗಿನ ಗೊಂಬಿ ಹಾಂಗ | ಎದ್ದ್ಯಾಗ ನಟ್ಟಾಂವಾ'ದಂತೆ ಆಗುತ್ತದೆ. ಇದು ಕಾವ್ಯ ಕಣ್ತುಂಬುವ, ಮನಸ್ಸಿಗೆ ಹಿಡಿಯುವ ರೀತಿ. ಈ ಕಾವ್ಯ ರಸಿಕನನ್ನು ಸೆಳೆಯುತ್ತ ಶೆಟ್ಟರ ಹುಡುಗ ಜೋಗಿತಿಗೆ ಒಲಿದು ಅವಳನ್ನು 'ಎದಿಮ್ಯಾಗಿನ ಗೆಣಿತನ ಮಾಡಿ'ಕೊಂಡಂತೆ ಗೆಣತಿಯಾಗಿ ಅವನಲ್ಲಿ ಉಳಿಯುತ್ತದೆ. ಪ್ರೀತಿಯನ್ನು ತೋರಿ ಹೋದ ಶೆಟ್ಟರ ಹುಡುಗ ತಿರುಗಿ ಬಾರದ್ದಕ್ಕೆ ಅವಳು ಪರಿತಪಿಸುವ ಪರಿಯನ್ನು ನೋಡುತ್ತ ಹೋದಂತೆ, ಅವಳ ಪ್ರೇಮದ ಅಮರತ್ವ ಅವಳನ್ನು ಹುಚ್ಚಿಯನ್ನಾಗಿಸಿ ಅವಳು : 'ಹಾದೀ ಬೀದಿ | ಹುಡುಕತೈತೇ | ಬಿಟ್ಟ ಎಲ್ಲಾ ಹ್ಯಾಂವಾ' ಎಂಬುದನ್ನು ಕೇಳಿದಾಗ ಮರುಕವುಂಟಾಗುತ್ತದೆ. ಇಲ್ಲಿಯ ಹುಚ್ಚು ಕಾಮದ ಉನ್ಮಾದವಲ್ಲ. ಸಾತ್ವಿಕ ಪ್ರೇಮ ಅಪೇಕ್ಷೆಯ ಭಂಗದ ಪರಿಣಾಮ ಎಂಬುದು ಮನವರಿಕೆಯಾಗುತ್ತದೆ. ಒಂದು ಜೀವ ಮತ್ತೊಂದು ಜೀವಕ್ಕೆ ಸ್ಪಂದಿಸಿ ಅದರ ಆತ್ಮವನ್ನು ತನ್ನದಾಗಿಸಿಕೊಳ್ಳುವ ಬಗೆಯೇ ಮರುಕ. ವಿರಹ ಕಾವ್ಯ ಹೀಗೆ ಮರುಕವನ್ನು ಹುಟ್ಟಿಸಿ ಕಾಮದ ಉನ್ಮತ್ತತೆಯ ಬಗ್ಗೆ ಯಾವ ಅಶ್ಲೀಲ ಎಳೆಯೂ ಸೋಂಕದೆ, ತನ್ನ ಪಾವಿತ್ರ್ಯವನ್ನು ಉಳಿಸಿಕೊಂಡ 'ಅಗ್ನಿ ದಿವ್ಯ'ಕಾವ್ಯ ಇದಾಗಿದೆ. ಇದೇ ಬೇಂದ್ರೆಯವರ ಪ್ರೇಮಕಾವ್ಯದ ಆತ್ಮ.

ಅದು ಅಲ್ಲಿರುವುದರಿಂದಲೇ ಅವರ ಪ್ರೇಮಗೀತೆ ಕುಟುಂಬದ ಎಲ್ಲರೂ ಕೂತು ಆಸ್ವಾದಿಸಿ ಆತ್ಮಾನಂದದ ರೀತಿ ಆಹ್ಲಾದ ಪಡೆಯಲು ಸಾಧ್ಯವಾಗಿರುವುದು.

ಬೇಂದ್ರೆಕಾವ್ಯ ಜೋಗತಿಯ ಪ್ರೀತಿಯನ್ನು ಅವಳದೇ ಜಾನಪದ ಸಂಸ್ಕೃತಿಯಲ್ಲಿ ಹಿಡಿದಿಟ್ಟಿರುವುದನ್ನು ಕೀರ್ತಿನಾಥ ಕುರ್ತಕೋಟಿಯವರು : "ನಗೀ ಕ್ಯಾದಿಗಿ'ಸ್ಪಷ್ಟವಾಗಿ ಗರತಿ ಹಾಡಿನ ಒಂದು ತ್ರಿಪದಿಯಿಂದ ತೆಗೆದುಕೊಂಡದ್ದು. ಪ್ರೀತಿಯ ವೀಳ್ಯವನ್ನು ಕಂಡ ಹೆಣ್ಣಿನಿಂದ ಮಡಿಚಿಕೊಳ್ಳುವ ಕ್ರಿಯೆ ಕನ್ನಡ ಸಂಸ್ಕೃತಿಯಷ್ಟು ಪ್ರಾಚೀನವಾದದ್ದು. ಪ್ರತಿ ಜನ್ಮಕ್ಕೂ ಗೆಣೆಯನಾಗಿ ಬರುತ್ತೇನೆಂದು ಮಾತು ಕೊಡುವದು ಕೂಡ ಹಳೆಯ ಜಗತ್ತಿನ ಮೌಲ್ಯಗಳ ಮೇಲೆ ಅವಲಂಬಿಸಿದ ಒಂದು ರೀತಿಯಾಗಿದೆ"[7] ಎಂದು ನುಡಿದಿದ್ದಾರೆ. ರಂ.ಶ್ರೀ.ಮುಗಳಿಯವರು " 'ಹುಬ್ಬಳ್ಳಿಯಾಂವಾ' ಇದಂತೂ ವಿರಹಗೀತಗಳಲ್ಲಿ ಎಲ್ಲ ದೃಷ್ಟಿಯಿಂದ ಶಿಖರಪ್ರಾಯವಾದ ನಿರ್ಮಿತಿ. ಇದರಲ್ಲಿ ಕವಿ ತಾನು ನಿರ್ಮಿಸಿದ, ತನ್ನ ಪ್ರಕೃತಿಗೆ ತೀರ ಹೊರತಾದರೂ ಅದರಲ್ಲಿ ಅದ್ಭುತ ತಾದಾತ್ಮ್ಯವನ್ನು ಹೊಂದಿದ ಜೋಗಿತಿಯ ಪಾತ್ರದಲ್ಲಿ, ಅದಕ್ಕೆ ಅನುಗುಣವಾದ ದೇಸಿಯಲ್ಲಿ ತುಂಬಿ ಹರಿಸಿದ ವಿರಹ ಭಾವದ ಪೂರವು ಸಾಂಪ್ರದಾಯಿಕ ರಸಸಿದ್ಧಾಂತವನ್ನು ಮೀರಿ ನಿಲ್ಲುವ ಧ್ವನಿರಮ್ಯವಾದ ಉನ್ನತ ರಸಾನುಭವವನ್ನು ಸಹೃದಯರಿಗೆ ನೀಡುತ್ತದೆ"[8] ಎಂದು ಹೇಳಿದ್ದಾರೆ.

ಇಲ್ಲಿಯ ಜೋಗಿತಿ ಕಾಮುಕ ವಿಕೃತಿಯವಳಲ್ಲ ಎಂಬುದು ನನ್ನ ವಿವರಣೆಯಿಂದ ಸ್ಪಷ್ಟವಾಗಿದೆ ಎಂದು ತಿಳಿಯುತ್ತೇನೆ. ಜೊತೆಗೆ ಈ ಕವಿತೆ ಕಾಮವನ್ನು ಮೀರಿದ ದಿವ್ಯ ಪ್ರೇಮವನ್ನು ದರ್ಶಿಸುವ ಮುಖವನ್ನು ಕಾಣಿಸುತ್ತ; ಕಾವ್ಯರಸಿಕನು ಕಾವ್ಯಕಾಮವನ್ನನುಭವಿಸಿ ಅದರಿಂದ ಆನಂದಭರಿತನಾಗಿ, ಅದನ್ನೆ ಅರಸುತ್ತ ಸಾಗುವ ಮುಖವನ್ನೂ ಹೊಂದಿದೆ ಎಂಬುದು ನನ್ನ ಅಭಿಪ್ರಾಯವಾಗಿದೆ.

**ಈ ನರಪಿಂಡ ಹುಲ್ಲು ಹೂವಿಗು ಕೀಳೆ?**

ಬೇಂದ್ರೆಯವರು ಹೆಣ್ಣು ಗಂಡಿನ ಕಾಮಸಹಜವಾದ ಪ್ರೀತಿ ಪ್ರಕೃತಿ ಸಹಜವಾದುದು ಎಂದು ಬಣ್ಣಿಸಲು 'ಸುಖಸ್ಪರ್ಶ'[9] ಎಂಬ ಅಷ್ಟಷಟ್ಪದಿಯ ಕವನದ ಮೊದಲ ಭಾಗದಲ್ಲಿ ಪ್ರಕೃತಿಸಹಜ ವ್ಯಾಪಾರವನ್ನು ಚಿತ್ರಿಸಿದ್ದಾರೆ. ಹೊಳೆನೀರಿನ ಬಳಿ ನೊಸಲು ನೊಸಲಿನಲಿರಿಸಿ ಸುಸಿಲಾಡುವ ಹೂವುಗಳನ್ನು ಹೆಣ್ಣು ಗಂಡಿಗೆ ಸಾದೃಶ್ಯವಾಗಿ ನೀಡಿ - ಅದನ್ನು ಪೋಷಿಸುವ ಅಂದರೆ ನಿಸರ್ಗವನ್ನೇ ಪೋಷಿಸುವ ಇತರ ಪ್ರಕೃತಿಗಳನ್ನು ಬಣ್ಣಿಸುತ್ತ ಸಾಗಿದ್ದಾರೆ. ಆ ಹೂವುಗಳ ಪಡಿನೆಳಲನ್ನು ತನ್ನ ಎದೆಯೊಳಗಿರಿಸಿ ನಲಿದಾಡುವ ನೀರು; ಆ ಚಿತ್ರರತಿಯನ್ನು ನೋಡಿ ಕಣ್ಚೆವುಟುವ ಚಿಕ್ಕೆಗಳು; ಅವುಗಳ ಕಂಪಿನ ಸವಿಮಾತನ್ನು ಪಿಸುಗುಡುವ ಗಾಳಿ; ಅವುಗಳ ರತಿ ಸುಗಮವಾಗಲು ಸಂಜೆ ಕತ್ತಲ ಯೌವನವನ್ನು ಆವರಿಸುತ್ತಿರುವುದು. ('ಸಂಜೆ ಬಾಸಣಿಸುತಲಿದೆ ತಿಮಿರ ಜವನಿಕೆ') ಒಂದಕ್ಕೊಂದು ಪೋಷಕವಾಗಿ ರತಿಯ ಉತ್ಕಟತೆಯನ್ನು ಸಾರುತ್ತದೆ. ಅದನ್ನು ಕವಿ 'ಸಾಕಾರ ಸೃಷ್ಟಿಯು ಹಿಗ್ಗುತಿದೆ ಬಂಡಿನಲ್ಲೂ, ಬ್ರಹ್ಮಾಂಡದಲ್ಲು' ಎಂದು ಹೂವಿನ ಹುಡಿಯಲ್ಲೂ ಬ್ರಹ್ಮಾಂಡದಲ್ಲೂ ಸಾಕಾರ ಸೃಷ್ಟಿ ಹಿಗ್ಗುವುದನ್ನು ದರ್ಶಿಸಿದ್ದಾರೆ. ಬೇಂದ್ರೆ ಕಾವ್ಯದ ಸ್ಥಾಯಿಭಾವ ಹಿಗ್ಗು. 'ಹಿಗ್ಗ ಬೀರಿ ಹಿಗ್ಗಲಿತ್ತು ತನ್ನ ತಾನೇ ಪ್ರೀತಾ' ಎಂಬುದು ಅವರ ಪ್ರೇಮದ, ಕಾವ್ಯದ ಹಿಗ್ಗು. ಹಿಗ್ಗು ಸಂತೋಷವನ್ನು ಕೊಡುತ್ತ ವಿಕಾಸ ಹೊಂದುವ ಸಹಜ ಗುಣವನ್ನು ಹೊಂದಿದೆ. ಅದು ನಿಸರ್ಗ ಸಹಜವಾದುದು ಎಂದು ಹೇಳಿ, ಕವನದ ಎರಡನೆಯ ಭಾಗಕ್ಕೆ ವಿಚಾರದ ಹೊಳಹಿನ ತಿರುವನ್ನು ಹೀಗೆ ನೀಡಿದ್ದಾರೆ:

'ಮೂಜಗಕೆ ಒಸಗೆಯೆನಿಸುವ ಸುಖಸ್ಪರ್ಶ ಬಯ-
ಸುತ ಬಳಲಿ ತೊಳಲುತಿಹರಿವರು ನೀರೆಯರೆ? ಅಹ
ಅವರು ನರರೇ? ಮೈಯ ಮಾರಲಿಹರೇ? ಒತ್ತೆ -
ಕೊಳ್ಳಲಿಹರೇ? ಎಂಜಲಕ್ಕೆ ಕುಲಗೆಡುವರಲೆ
ದೇವತೆಗಳೌರಸರು ! ಏನು ವಿಧಿ ಘಟನೆಯೋ !
ಅರರೆ, **ಈ ನರಪಿಂಡ ಹುಲ್ಲು ಹೂವಿಗು ಕೀಳೆ?'**

ಇಲ್ಲಿ ಹೆಣ್ಣನ್ನು 'ಬಸವಿ' ಎಂದು ಕರೆದ ಹೀನ ಮನುಷ್ಯನ ವಿಕೃತಿಯನ್ನು ಅದಕ್ಕೆ ಪೋಷಕವಾದ ಸಮಾಜವನ್ನು ಕಂಡು ಹೇಸಿ ಈ 'ಮೈಯ ಮಾರುವ' ದಂಧೆಯನ್ನು ಟೀಕಿಸಿದ್ದಾರೆ. 'ಈ ನರಪಿಂಡ ಹುಲ್ಲು ಹೂವಿಗು ಕೀಳೆ?' ಎಂದು ಸಹಜಕಾಮವನ್ನು ಅಸಹಜವಾಗಿಸಿಕೊಂಡ ನರಪಿಂಡವನ್ನು ಮಾರ್ಮಿಕವಾಗಿ ಪ್ರಶ್ನಿಸಿದ್ದಾರೆ. ಆ ಪ್ರಶ್ನೆ ಹೀಗಿದೆ: ಹೂವಿನ ಹುಡಿ ಬ್ರಹ್ಮ ಪದವಿ ತಲುಪುತ್ತದೆ. ಎಲ್ಲವನ್ನು ಅರಿತ ಸೃಷ್ಟಿಯ ಶ್ರೇಷ್ಠ ಜೀವಿ ನರಮನುಷ್ಯ ಹುಡಿಯಾಗಬೇಕೆ?

**ರಾಕಾಸುಂದರಿ**[10]

ಬೇಂದ್ರೆಯವರನ್ನು ಅವರ ಚಿಕ್ಕಂದಿನಲ್ಲಿ, ಯೌವನದಲ್ಲಿ ಕಾಡಿದ ವೇಶ್ಯಾ ಸಮಸ್ಯೆ ಅವರ ಇಳಿವಯಸ್ಸಿನಲ್ಲೂ ಕಾಡಿದೆ. ಈ ಸಮಾಜ ಸ್ತ್ರೀಯನ್ನು ಶೋಷಿಸುವ ಪರಿಯನ್ನು ಕಂಡು ಹೆಣ್ಣೇ ಅದರ ವಿರುದ್ಧ ಸೆಟೆದು ನಿಲ್ಲಬೇಕು. ತನ್ನ ಜೀವನವನ್ನು ತಾನೇ ರೂಪಿಸಿಕೊಳ್ಳಬೇಕು. ಆಗಲೇ ಈ ಸಮಸ್ಯೆಗೆ ಪರಿಹಾರ. ಅದುವರೆಗೂ ಅದು ಸಾಧ್ಯವಿಲ್ಲ ಎಂಬ ಚಿಂತನೆಯನ್ನು ಅವರು 'ರಾಕಾಸುಂದರಿ' ಎಂಬ ಕವನದಲ್ಲಿ ನೀಡಿದ್ದಾರೆ.

ಈ ಕವನವನ್ನು ಓದಿದಾಗ ಸುಂದರ ಹುಣ್ಣಿಮೆಯನ್ನು ಸವಿಯಲು ಬೊಂಬಾಯಿ ಬೀಚಿಗೆ ಹೋದ ಸಂದರ್ಭದಲ್ಲಿ ಕವಿ ಕಂಡ ನೋಟಕ್ಕೆ ನೊಂದು; ಅಲ್ಲಿ ಕಂಡ ಹೆಣ್ಣುಗಳ ಚಿತ್ರಣವನ್ನು ನೀಡಿದ್ದಾರೆ ಎನ್ನಬಹುದು. ಹುಣ್ಣಿಮೆಯ ಚಂದ್ರನೂ ಸುಂದರ ಹೆಣ್ಣಿನಂತೆ. ಆ ಬೆಳದಿಂಗಳಿನಲ್ಲಿ ಜಗತ್ತೇ ಬೆಳಗುತ್ತದೆ. ಆದರೆ ಆಗಸದ ರಾಕಾಸುಂದರಿಯ ಬೆಳಕಿನಲ್ಲಿ ಇಲ್ಲಿ ನೆಲದ ಮೇಲೆ ಕಾಣುವ ಸುಂದರಿಯರನ್ನು ಕಂಡಾಗ ಕವಿಯ ಮನಸ್ಸಿಗೆ ನೋವಾಗಿದೆ. ವಿಕೃತ ಆಸೆಗಳಿಗೆ ಈಡಾದ ಹೆಣ್ಣುಗಳನ್ನು ನೋಡಿ ಅನುಕಂಪಗೊಂಡ ಕವಿ ಅದನ್ನು ಈ ಕವನದಲ್ಲಿ ಬಣ್ಣಿಸಿದ್ದಾರೆ. ಇಲ್ಲಿ ನಾಲ್ಕು ರೀತಿಯ ಹೆಣ್ಣುಗಳನ್ನು ಚಿತ್ರಿಸಿ ನಾಲ್ಕನೆಯ ಬಗೆಯ ಹೆಣ್ಣನ್ನು ರಾಕಾಸುಂದರಿ ಎಂದಿದ್ದಾರೆ.

ಕವನದ ಮೊದಲ ಭಾಗದಲ್ಲಿ ವೇಶ್ಯೆಯರನ್ನು ಕುರಿತು - ಅವರು ಲೈಂಗಿಕವಾಗಿ, ಆರ್ಥಿಕವಾಗಿ ಶೋಷಣೆಗೆ ಒಳಗಾಗಿ ಹೀನಾವಸ್ಥೆಯಲ್ಲಿ ಆಶ್ರಯರಹಿತರಾದುದರ ಬಗ್ಗೆ ಕವಿಯು ನೊಂದಿದ್ದಾರೆ. ಮೈಪರಿವೆ ಇಲ್ಲದೆ ಮಣ್ಣಾಗಿ ಹೋಗಿ ತಮ್ಮ ಅರಿವೇ ಇಲ್ಲವಾದಂತಾಗಿರುವ ಅವರನ್ನು:

'ಬಯಲಾಗಿರತಾರ, ಮೈ ಇಲ್ಲದವರು
ಅವರ ತವರು-ಮಣ್ಣು
ಅವರಿಗೆ ಇಲ್ಲಾ ಕಣ್ಣು'

ಎಂದಿದ್ದಾರೆ. ಎರಡನೆಯ ಭಾಗದಲ್ಲಿ ನಟಿಯಾಗುವ ಆಸೆಯಿಂದ ಕಲ್ಪನಾಲಹರಿಯಲ್ಲಿ ತೇಲಾಡುವ ಅವಳ ಯೌವನದ ತಡೆರಹಿತ ಭಾವವನ್ನು ಕಂಡು:

'ಯಾರೇs ನೀ? ನೀರಿನಾಕೆ !
ಗಾಳೀಯೊಳಗೆ ಇರುವಾಕೆ'

ಎಂದು ಅವಳ ಚಂಚಲತೆಯನ್ನು; ಎಲ್ಲವನ್ನು ಆವರಿಸಿ ಎಲ್ಲರನ್ನೂ ಮೆಚ್ಚಿಸುವ ಎಲ್ಲರಿಗೆ ಬೇಕಾದವಳು ಎನ್ನುವ ಭಾವವನ್ನು ಅಭಿವ್ಯಕ್ತಿಸಿದ್ದಾರೆ. ಅವಳಿಗೆ ತನ್ನ ಜೀವನದ ಅರಿವಿಲ್ಲ. ಬಯಕೆಯ ಕಾರಣ ಹಾಗೂ ಮಿತಿ ತಿಳಿದಿಲ್ಲ ಎಂಬುದನ್ನು 'ನಿನ್ನ ಬಯಕೀಗೆ ಬೇರಿಲ್ಲಾ ತುದಿ ಇಲ್ಲಾ' ಎಂದು ಹೇಳುತ್ತ ಅವಳ ಅವಸ್ಥೆಗೆ ವ್ಯಥೆಪಟ್ಟು ಅವಳು ಈ ಹುಸಿ ಬಯಕೆಗೆ ಈಡಾಗಿ - ನಿಜವಾಗಿ ಬೆಣ್ಣೆ ತುಪ್ಪದಂತಹ ಹೆಣ್ಣಾದರೂ - ಸೋಗಿನವಳಾದಳಲ್ಲ ಎಂದು ಅಚ್ಚರಿಯನ್ನು ವ್ಯಕ್ತಪಡಿಸಿದ್ದಾರೆ.

'ಓಽ ಬೆಣ್ಣೆ ತುಪ್ಪದಾಕೆ, ಹೆಣ್ಣೇ ! ಸೋಗಿನಾಕೆ !'

ಮೂರನೆಯವಳನ್ನು ಬಣ್ಣಿಸುವ ನುಡಿಯ ಲಯ, ಜಿಗಿತದಲ್ಲಿ ಅವಳು ಎಂತಹವಳೆಂಬುದನ್ನು ಓದುಗರಿಗೆ ಪರಿಚಯಿಸುತ್ತಾರೆ. ಇದು ಬೇಂದ್ರೆ ವಿಷಯದ ಒಳಹೊಕ್ಕು ಅದರ ಅಂತರಾಳವನ್ನು ನುಡಿಯಲ್ಲಿ ಹೊಮ್ಮಿಸುವ ಕಾವ್ಯ ವೈಖರಿ.

'ಮಜ್ಜಿಗಿ, ಮತ್ತೆ ಜಿಗಿ
ಎನುವಾಕೆ, ಕಡೆವಾಕೆ'

ಈ ರೂಪಕದಲ್ಲಿ ಮಜ್ಜಿಗಿ, ಅದನ್ನು ಕಡೆಯುವ ಬಗೆಯನ್ನು ಓದಿದಾಗ ಮಜ್ಜಿಗಿ ಮತ್ತು ಕಡೆಯುವ ಕೈ ಬೇರೆಯಲ್ಲ ಒಂದೇ ಎನಿಸುತ್ತದೆ. ಮಜ್ಜಿಗಿಯಲ್ಲಿನ ಜಿಗಿತ, ಅದರ ಕುಲುಕುವ ಬಗೆಯಲ್ಲಿಯೇ ನಾಚವಾಲಿಯ ಪರಿಚಯ ಮಾಡಿಕೊಡುತ್ತಾರೆ. ಅಂತಹವಳನ್ನು ಬಹಳ ಜನಗಳ ಜೊತೆಗೆ ಸೇರುವವಳು, ತನ್ನ ಆರೋಗ್ಯ ಕೆಡಿಸಿಕೊಳ್ಳುವವಳು ಎಂದು ಅವಳ ಅವಸ್ಥೆಗೆ ನೊಂದು - ಇನ್ನು ನೋಡಲಾಗದು ಎಂದಿದ್ದಾರೆ. ಅದು ಆರೋಗ್ಯಪೂರ್ಣವಾಗಿದ್ದ ಮಜ್ಜಿಗೆಯ ಅನಂತರದ ಹೀನಾವಸ್ಥೆ.

'ನಾರುವಾಕೇ ! ಸೋರುವಾಕೆ !
ತುರುಮಂದಿ ಸಂದೀ
ಸೇರುವಾಕೆ. ಪೋಽ ಪೋಽ ಪೋಽ'

ಹುಣ್ಣಿಮೆಯ ಬೀಚಿನಲ್ಲಿ ಹದಿನಾರು ಕಲೆಗಳಿಂದ ಕೂಡಿದ ಚಂದ್ರನ ಮೂರು ಬಗೆಯ ಹೆಣ್ಣುಗಳನ್ನು ನೋಡಿದ ಮೇಲೆ ಹದಿನೇಳಗ ರಾಕಾಸುಂದರಿಯನ್ನು ನೋಡಿ ಕವಿ ಮೆಚ್ಚುತ್ತಾನೆ. ತನ್ನ ಬುದ್ಧಿ, ಶರೀರ, ಧೈರ್ಯವನ್ನು ಒಗ್ಗೂಡಿಸಿಕೊಂಡು ಡೊಂಬರ ಕಲೆಯಲ್ಲಿ ನೈಪುಣ್ಯ ಸಾಧಿಸಿ, ಹಣ ಸಂಪಾದಿಸುವ ಕುಟುಂಬವತ್ಸಲೆಯಾಗಿರುವ ಡೊಂಬರವಳಂತಾಗಬೇಕು ಎಂದು ರಾಕಾಸುಂದರಿಯನ್ನು ಮೆಚ್ಚಿ ನುಡಿಯುತ್ತಾನೆ. ಅವಳೇ ಹುಣ್ಣಿವೇ ಎಂದು ಆಕೆಯ ಕಲೆ ಮತ್ತು ವ್ಯಕ್ತಿತ್ವಕ್ಕೆ ಪರಾಕು ಹೇಳುತ್ತಾನೆ. ಅವಳನ್ನು 'ಹದಿನೆಂಟೇ ಅಲ್ಲಾ ! ನೀ ಹದಿನೇಳರಾಕೇ !' ಎಂದಿದ್ದಾನೆ.

ಚಂದ್ರನಿಗೆ ಹದಿನೇಳು ಕಲೆಗಳು. ಅವನ ಹದಿನೇಳನೆಯ ಕಲೆ - ರಾಕಾಸುಂದರಿ. ಸುಂದರವಾದ ಹುಣ್ಣಿವೆಗೆ ಕವಿ ಕೊಟ್ಟ ಹೆಸರು ರಾಕಾಸುಂದರಿ. ಹದಿನೆಂಟು ದಿನ ನಡೆದ ಮಹಾಭಾರತದ ಯುದ್ಧದಂತೆ ಹದಿನೆಂಟು ನಾಶದ ಹಾದಿ. ಹದಿನೇಳು - ಜೀವನಕಲೆ. ಇದನ್ನು ಬಲ್ಲವಳು ಡೊಂಬರಾಕಿ. ಇವಳು ಹೊಸಬಿ, ಮಿಂಚಿನ ತಲೆಯ ಮೇಲೆ ನಡೆವಾಕಿ. ಶರೀರ, ಬುದ್ಧಿ, ಧೈರ್ಯವನ್ನು ಕಲಾತ್ಮಕವಾಗಿ ರೂಢಿಸಿಕೊಂಡು, ಕೌಶಲ್ಯದ ಆಟವಾಡಿ ಕುಟುಂಬವತ್ಸಲೆಯಾಗಿ ಜೀವನ ಸಾಗಿಸುವವಳು ಇವಳು. ಇವಳು ಕವಿಗೆ ಪ್ರಿಯ. ಹದಿನೆಂಟು ಗ್ರಹಣದ ಸಂಕೇತವಾದರೆ, ಹತ್ತೊಂಬತ್ತು (೫ + ೬ + ೮ = ಐನೂರಿನಾ ಅರುವತ್ತಾರಾ ಎಂಟರಾಕೆ) ಗ್ರಹಣ ಮುಕ್ತಿಯ ಸಂಕೇತ. ಗ್ರಹಣ ಎಂಬುದು ಚಂದ್ರನಿಗೆ ಘಟಿಸುವ ದೋಷ. ಈ ದೋಷದಿಂದ ಮುಕ್ತಳಾದವಳು ರಾಕಾಸುಂದರಿ - ಡೊಂಬರಾಕೆ. ಮೊದಲಿನ ಮೂವರ - ವೇಶ್ಯೆ, ಸೋಗಿನ

ತಾರೆ ಮತ್ತು ನಾಚವಾಲಿ ಬುದ್ಧಿಗೆ ಗ್ರಹಣ ಹಿಡಿದಿದೆ. ಅವರ ನಡತೆ ಹೇಯವಾಗಿದೆ. ಇವರ ಸ್ಥಿತಿಯನ್ನು ಕಂಡು ಕವಿ ವ್ಯಥೆಯನ್ನು ವ್ಯಕ್ತಪಡಿಸಿದ್ದಾನೆ. ಇವರ ಮನದ ಪರಿವರ್ತನೆ ನಿಜವಾದ ಹುಣ್ಣಿವೆ. ಹೆಣ್ಣಿನ ಬುದ್ಧಿ ಕೆಟ್ಟರೆ ಅದು ಗ್ರಹಣ; ಸುಬುದ್ಧಿಯವಳಾದರೆ ಹುಣ್ಣಿವೆ ಎಂಬುದು ಕವಿಯ ಆಶಯವಾಗಿದೆ. ಕವಿ ರಾಕಾಸುಂದರಿಯನ್ನು ಹೊಗಳುತ್ತಾನೆ:

'ಬಾ ಹೊಸಬೀ ! ತಲೆಯಾಕೆ
ಪಡೆವಾಕೆ
ಮಿಂಚಿನ ತಂತಿಯ ಮೇಲೆ ನಡೆವಾಕೆ
ಐನೂರಿನ ಅರುವತ್ತಾರಾ
ಎಂಟರಾಕೆ
ಹದಿನೆಂಟೇ ಅಲ್ಲಾ ! ನೀ
ಹದಿನೇಳರಾಕೇ !
ರಾಕಾಸುಂದರೀ !
ಬೆಳುದಿಂಗಳಾಕೆ. ಪರಾಕು ನಿನಗೆ '.

ಹೀಗೆ ಮಹಿಳೆಯನ್ನು ಬಣ್ಣಿಸುವಲ್ಲಿ ಸಮಾಜದ ಹೀನ ವ್ಯವಸ್ಥೆ, ವಿಕೃತ ಬದುಕನ್ನು ಕಾಣುತ್ತ; ಆ ವ್ಯವಸ್ಥೆಯಲ್ಲಿಯೇ ಅದೇ ಶರೀರ, ಉಡುಪು, ನೃತ್ಯದ ಶೈಲಿ ಬಳಸಿಕೊಂಡು ಸುಕೃತ ಶೈಲಿಯಲ್ಲಿ ಬದುಕಲು ಸಾಧ್ಯ ಎಂಬುದನ್ನು ಈ ಕವನ ಸೂಚಿಸುತ್ತದೆ. ಹೆಣ್ಣಿನ ನಿಜಸತ್ತ್ವವನ್ನು ಮೆಚ್ಚಿ ಬರೆದ ಉತ್ತಮ ಕವನ ಇದಾಗಿದೆ. ಬೇಂದ್ರೆಕಾವ್ಯ ಲೋಕವಸ್ತುವಿನ ಪ್ರತಿಕೃತಿಯಲ್ಲ, ಪ್ರತಿಮೆಯಲ್ಲ. ಅದು ಪ್ರತಿಸೃಷ್ಟಿ ಎಂಬುದು ಈ ಕಾವ್ಯದಿಂದ ಸ್ಪಷ್ಟವಾಗಿದೆ.

**ಮೈತಿಳಿದು ಮಣ್ಣಂತ | ಮೈಮ್ಯಾಲೆ ಬರಬ್ಯಾಡಾ**

ಹೆಣ್ಣು ಗಟ್ಟಿಯಾಗಬೇಕು, ತನ್ನತನ ತಿಳಿಯಬೇಕು ಎಂದು ಆಶಿಸಿದವರು ಬೇಂದ್ರೆ. ಅವರು ಮೂಗೇಡಿ ಗಂಡಿಗೆ ಹೆಣ್ಣು ನೀಡುವ ಎಚ್ಚರಿಕೆಯನ್ನು ಜಾನಪದ ತ್ರಿಪದಿಯಲ್ಲಿ ಹೀಗೆ ಹೇಳಿದ್ದಾರೆ:

'ಮೈ ತಿಳಿದು ಮಣ್ಣಂತ | ಮೈ ಮ್ಯಾಲೆ ಬರಬ್ಯಾಡಾ
ಮೈಗಂಪು ಮೈಮೆ ಗಮ್ ಗಮಕ; ಮೂಗಿಲ್ಲಾ | ಮೂಗೇಡಿ
ಮಾಗಿಲ್ಲ ನಿನ್ನ ತಿಳಿಮನಸು'[11]

ಗಂಡಿಗೆ ಮಾಗಿದ ಮನಸ್ಸಿನವನಾಗಿ ಹತ್ತಿರ ಬಾ ಎಂದು ಹೇಳುವ ಸ್ಥೈರ್ಯದ ಕಲಿಯಾಗಬೇಕು ಹೆಣ್ಣು - ಎಂದು ಕವಿ ಆಶಿಸಿದ್ದಾರೆ. ಪುರುಷನಾದವನು ಗಂಡನಾಗಿ ಬಾಳ್ವೆ ಮಾಡದಿರುವುದನ್ನು; ಹೊಣೆಯರಿಯದ ಅವನ ರೀತಿಯನ್ನು ಕಂಡು ಅವನು ಪ್ರಾಣಿಗಳಿಗಿಂತ ಕೇಡು ಎಂದಿದ್ದಾರೆ.

ಹೆಣ್ಣಿನ ಮೋಹದ ಹದಾsನ ಕೆಡಿಸಿ
ಮಕ್ಕಳ ಹಾದಿ ಮೊದಲsನ ಬಿಡಿಸಿ
ಕಂತ್ರಾಟ ನಿನ್ನದು ಹ್ಯಾಂಗಾರೆ ನಡಿಸಿ ಕುಣೀಬ್ಯಾಡೊ ಮೂಢಾ
ಬಾಳೆ ಮಾಡ್‌ತಾವ ಅಕ್ಕರೆ ಬರುವಂಗ ಕಾಮಿ ಬಾವುಗ ಜೋಡಾ'[13]

**ಮನಿ ಹಿಡಿದು ಬಾಳS**

ಅವರು ಹೆಣ್ಣಿಗೆ ಮನೆ ಹಿಡಿದು ಬಾಳಲು; ಹುಚ್ಚಿಮಲ್ಲಿಯಾಗಿ ಸೂಳೆಯಾಗದಿರಲು;

ಎಚ್ಚರದಿಂದಿದ್ದು, ನಿರ್ಮಲವಾಗಿ ಬದುಕಲು 'ಹೇಳತೀನಿ ಕೇಳ'[14] ಎಂದು ತಮ್ಮ ಕೊನೆಯ ದಿನಗಳಲ್ಲಿ (೨೦.೮.೧೯೮೧) ಹೀಗೆ ನುಡಿದಿದ್ದಾರೆ:

'ಕಥೀ ಹೇಳತೇನಿ ಕೇಳS
ಮನೀ ಹಿಡಿದು ಬಾಳS | ಬಾಲೀ
ಆಗಬ್ಯಾಡ ಹುಚ್ಚಮಲ್ಲಿ,
ಒತ್ತಿ ಇಟ್ಟೀ ಏನ್ ತಲಿ?
ತಲೆತಲಾಂತರದಿಂದ ಬಂದ ಕಥೀ
ಬೆಲಿಗೆ ಹಚ್ಚಬ್ಯಾಡಾ ನಿನ್ನ ಮೊಲೀ
ಆಗು ನಿರಂಬಳಾ, ನಿರ್ಮಲಾ
ಆಗಬ್ಯಾಡಾ ಸುಂಬಳಹುಳಾ'.

ಬೇಂದ್ರೆಯವರು ಸಮಾಜಸುಧಾರಣೆ ಮುಂತಾದ ಹಿರಿಯ ಮಾತುಗಳ ಜಾಲದಲ್ಲಿ ಪರಿವರ್ತನೆಯ ಸೂಕ್ಷ್ಮ ರೂಪಣವನ್ನು ಅಡಗಿಸಿ ಮೆಚ್ಚಿಗೆಗೆ ಪಾತ್ರರಾಗುವವರಲ್ಲ. ಅವರು ಸೂಕ್ಷ್ಮಾತಿಸೂಕ್ಷ್ಮ ಬದುಕನ್ನು ದರ್ಶಿಸುತ್ತ ಓದುಗರ ಹಾಗೂ ಸಮಾಜದ ಆಮೂಲಾಗ್ರ ಬದಲಾವಣೆಗೆ ಪ್ರಯತ್ನಿಸುವ ಚಿಂತನಶೀಲರು. ಅವರು ಹೆಣ್ಣಿನ ಅಂತರಾತ್ಮವನ್ನು ಎಚ್ಚರಿಸುವ ಕಾವ್ಯರ್ಷಿ.

## ಸಂಖ್ಯಾ ಟಿಪ್ಪಣಿಗಳು


1. ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ, ಶ್ರೀಮಾತಾ ಪ್ರಕಾಶನ, ಧಾರವಾಡ, 1990, ಪು. 12.
2. ದ.ರಾ.ಬೇಂದ್ರೆ, ಮತ್ತೆ ಶ್ರಾವಣಾ ಬಂತು, ಸಮಾಜ ಪುಸ್ತಕಾಲಯ, ಧಾರವಾಡ, 1973, ಪು. 12.
3. ಎನ್ಕೆ, ದ.ರಾ.ಬೇಂದ್ರೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1991, ಪು. 10.
4. ದ.ರಾ.ಬೇಂದ್ರೆ, ಆತ್ಮಕಥನ, ಜಿ.ಬಿ.ಜೋಶಿ ಮತ್ತು ಕೆ.ಡಿ.ಕುರ್ತಕೋಟಿ (ಸಂ.) ಪುಟಬಂಗಾರ (ಸಂಪುಟ ಐದು), ಶ್ರಾವಣ ಪ್ರತಿಭೆ, ಮನೋಹರ ಗ್ರಂಥಮಾಲಾ, ಧಾರವಾಡ, 1987, ಪು. 423.
5. ದ.ರಾ.ಬೇಂದ್ರೆ, ಸಖೀಗೀತ, ಶ್ರೀಮಾತಾ ಪ್ರಕಾಶನ, ಧಾರವಾಡ, 1990, ಪು. 100.
6. ದ.ರಾ.ಬೇಂದ್ರೆ, ಗಂಗಾವತರಣ, ಶ್ರೀಮಾತಾ ಪ್ರಕಾಶನ, ಧಾರವಾಡ, 1989, ಪು. 62.
7. ಕೀರ್ತಿನಾಥ ಕುರ್ತಕೋಟಿ, ಬಾರೋ ಸಾಧನಕೇರಿಗೆ, ಮನೋಹರ ಗ್ರಂಥಮಾಲಾ, ಧಾರವಾಡ, 1993, ಪು. 288.
8. ರಂ. ಶ್ರೀ. ಮುಗಳಿ, ಬೇಂದ್ರೆ ಕಾವ್ಯ, ಕನ್ನಡ ಸಂಘ, ಕ್ರೈಸ್ತ ಕಾಲೇಜ್, ಬೆಂಗಳೂರು, 1986, ಪು. 29.
9. ದ.ರಾ.ಬೇಂದ್ರೆ, ಉಯ್ಯಾಲೆ, ಸಮಾಜ ಪುಸ್ತಕಾಲಯ, ಧಾರವಾಡ, 1980, ಪು. 9.
10. ದ.ರಾ.ಬೇಂದ್ರೆ, ಪರಾಕಿ, ಶ್ರೀಮಾತಾ ಪ್ರಕಾಶನ, ಧಾರವಾಡ, 1982, ಪು. 44.
11. ದ.ರಾ.ಬೇಂದ್ರೆ, ಶ್ರೀಮಾತಾ, ಸಮಾಜ ಪುಸ್ತಕಾಲಯ, ಧಾರವಾಡ, 1968, ಪು. 8.
12. ದ.ರಾ.ಬೇಂದ್ರೆ, ಕಾವ್ಯವೈಖರಿ, ಶ್ರೀಮಾತಾ ಪ್ರಕಾಶನ, ಧಾರವಾಡ, 1982, ಪು.46.
13. ದ.ರಾ.ಬೇಂದ್ರೆ, ಅರಳುಮರಳು, ಶ್ರೀಮಾತಾ ಪ್ರಕಾಶನ, ಧಾರವಾಡ, 1995, ಪು. 386.
14. ದ.ರಾ.ಬೇಂದ್ರೆ, ಕಾವ್ಯವೈಖರಿ, ಸಮಾಜ ಪುಸ್ತಕಾಲಯ, ಧಾರವಾಡ, 1982, ಪು. 46.

# ಮುಖ ಆರು : ಧಾರವಾಡದ ತಾಯಿ, ಕನ್ನಡತಾಯಿ, ಭಾರತಮಾತೆ, ಭೂಮಿತಾಯಿ, ಪ್ರಕೃತಿಮಾತೆ, ವಿಶ್ವಮಾತೆ

ಪ್ರಕೃತಿಯ ಶಿಶುವಾದ ಮಗು ತಾಯಿಯನ್ನು ತಬ್ಬಿ ಅವಳ ಮುಖಾಂತರ ಇಡೀ ಜಗತ್ತನ್ನು ತಿಳಿಯುವಂತೆ; ಅದೇ ಪ್ರಕೃತಿಯನ್ನು, ಜಗತ್ತನ್ನು ಮಾತೆ ಎಂದು ಕವಿ ಆರಾಧಿಸುತ್ತಾನೆ. ಭವ್ಯವಾಗಿ ಹೊಳೆಯುವ ಪ್ರಕೃತಿಯು ತನ್ನ ಐಹಿಕ ಅನುಕೂಲವನ್ನು ಪೂರೈಸುವ ಭೌತಿಕ ವಸ್ತು ಎಂದು ತಿಳಿದವನೇ ಅದನ್ನು ದೈವಿಕಶಕ್ತಿ ಎಂದು ಆರಾಧಿಸಿದ್ದು; ಈ ಗೂಢವನ್ನು ಋಗ್ವೇದದ ಋಷಿಗಳು 'ವಿಭೂತಿಯೋಗ[1] ಎಂದು ಕರೆದಿದ್ದಾರೆ. ನಾವು ಈ ಅಧ್ಯಯನದ ಪ್ರಾರಂಭದಲ್ಲಿಯೇ ಧಾರವಾಡದ ಸಮುದಾಯದ ಬಾಲಕನಾಗಿ ಬೆಳೆದ ಬೇಂದ್ರೆ ಕನ್ನಡ ಸಮುದಾಯದ ಮಾತೃಪ್ರಜ್ಞೆಯನ್ನು ಗ್ರಹಿಸಿ ಅದನ್ನು ತನ್ನ ಜೀವವಾಹಿನಿಯಾಗಿಸಿಕೊಂಡರೆಂದು ತಿಳಿದಿದ್ದೇವೆ. ರಾಬರ್ಟ್ ಬ್ರಿಫಾಲ್ಟ್ ಅವರು "All good and bad luck comes from the mothers; it is they who, when angry, send diseases and death. Among the aboriginal populations of India, especially in the south where Aryan influence has been weakest, the native cults are represented by local deities who, with few exceptions, are female and are frequently spoken of as, simply the Mother" ಎಂದು ಹೇಳಿದ್ದಾರೆ.

ಹೀಗೆ ಜನರ ಎಲ್ಲ ಒಳಿತು ಕೆಡಕಿಗೆ ಕಾರಣವಾದ 'ಅಮ್ಮ'ನನ್ನು ಜನಪದರು ತಮ್ಮ ತಮ್ಮ ಊರಿನಲ್ಲಿ ಮಾರಮ್ಮ, ದ್ಯಾಮವ್ವ, ದುರ್ಗೆ, ಕಾಳಿ, ಅಣ್ಣಮ್ಮ, ಮಾಯಕ್ಕ, ಯಲ್ಲಮ್ಮ, ಲಕ್ಕಮ್ಮ, ಮಾಸ್ತಮ್ಮ ಎಂದು ಕರೆಯುತ್ತ ಜೊತೆಗೆ ಅವರ ಊರಿನ ಹೆಸರನ್ನೆ ಆ ಅಮ್ಮನಿಗಿಟ್ಟು ಆರಾಧಿಸಿರುವುದು ಕಂಡುಬಂದಿದೆ. ಇದು ಜನಪದರ ಶಾಕ್ತ ಆರಾಧನೆಯ ಭಾವಸ್ಪಂದನವೆಂಬುದನ್ನು ಅರಿತ ಬೇಂದ್ರೆಯವರು ಈ ಜಾನಪದ ನೆಲೆಯ ಚಿಂತನೆಯನ್ನು ತಮ್ಮ ಕಾವ್ಯದ ಕೇಂದ್ರವನ್ನಾಗಿಸಿಕೊಂಡಿರುವುದು ಕಂಡುಬಂದಿದೆ. ತಾಯಿಯನ್ನು ಧಾರವಾಡದ ತಾಯಿ ದುರ್ಗೆ, ಮಾಯಕಾರತಿ, ಮಾಹೂರಗಡದಾಕಿ ಎಂದು ಶಕ್ತ್ಯಾರಾಧನೆಯ ಪುರಾಣಗಳಲ್ಲಿರುವುದನ್ನು ಕಾವ್ಯವಾಗಿಸಿದ್ದಾರೆ. ಅದರಲ್ಲಿ ಆ ಶಕ್ತಿಗೂ ಮನುಷ್ಯನಿಗೂ ಇರುವ ಭಾವನಾತ್ಮಕ ಸಂಬಂಧ ಮತ್ತು ಅದಕ್ಕೆ ಕಾರಣವಾದ ನಿಸರ್ಗ ಚೇತನಕ್ಕೂ ಅವನಿಗೂ ಇರುವ ಸಂಬಂಧಗಳನ್ನು ಕಾವ್ಯಶೋಧಕ್ಕೆ ಒಳಪಡಿಸಿದ್ದಾರೆ. ಜನಪದರ ಮೂಲಭೂತ ಚಿಂತನೆಗೆ ಕಾರಣವಾಗಿ ಕಾಲ್ಪನಿಕ ಕಥೆಯಾದ ದೇವತೆಗಳನ್ನು ವೈಜ್ಞಾನಿಕ ಶೋಧಕ ದೃಷ್ಟಿಯಿಂದ ಕಂಡು ಭೂಮಿತಾಯಿ, ಮೊದಲಗಿತ್ತಿ, ಮಾಯಕಾರತಿ ಎಂದು ಕಲ್ಪನೆಯ ಮಿಥ್ ಕಥಾನಕಗಳ ಹಿಂದಿರುವ ಗೂಢವನ್ನು ಬಯಲುಗೊಳಿಸಿದ್ದಾರೆ. ಹಾಗೆ ಸತ್ಯವನ್ನು ಅನಾವರಣಗೊಳಿಸುತ್ತ ಮಾತೃಕಲ್ಪನೆಯಲ್ಲಿ ಅಡಗಿರುವ ಮನುಷ್ಯನ ಅಳಿವು ಉಳಿವುಗಳನ್ನು ಕುರಿತ ಸೂಕ್ಷ್ಮ

ಚಿಂತನೆ ಓದುಗನ ಪ್ರಜ್ಞಾವಲಯವನ್ನು ಹೊಗುವಂತೆ ಮಾಡಿದ್ದಾರೆ. ಕನ್ನಡ ಜನಪದ ಪರಂಪರೆಯ ಮಾತೃಶಕ್ತಿಯ ಮೂಲವನ್ನು ಸ್ಪರ್ಶಿಸಿದ ಬೇಂದ್ರೆಯವರು ಪರಂಪರೆಯನ್ನು ಶಿಥಿಲಗೊಳಿಸುತ್ತ, ಸತ್ಯಶೋಧಕವಾದ ವೈಜ್ಞಾನಿಕವಾದ ಜೀವ ಜಗತ್ತಿಗೆ ಮೂಲವಾದ ಈ ಮಿಥ್‌ಗಳ ಗೂಢವನ್ನು ತಿಳಿಯಲು ಪ್ರಯತ್ನಿಸಿ ಯಶಸ್ವಿಯಾಗಿದ್ದಾರೆ. ಅಲ್ಲಿಯ ವಿಶ್ವಾಸ, ಭಕ್ತಿ, ಶ್ರದ್ಧೆ, ಧಾರ್ಮಿಕ ಆಚರಣೆ ಮನುಷ್ಯನ ಬದುಕಿಗೆ ಅವನ ಉಳಿವಿಗೆ ಎಷ್ಟು ಆವಶ್ಯಕ ಎಂಬುದನ್ನು ಚಿಕಿತ್ಸಕ ದೃಷ್ಟಿಯಿಂದ ಕಂಡಿದ್ದಾರೆ. ಮಾತೃಶಕ್ತಿಯ ಆರಾಧನೆ ಮತ್ತು ಪಂಚಭೂತಗಳ ಆರಾಧನೆಯಲ್ಲಿ - ಲೌಕಿಕ ಅಲೌಕಿಕಗಳ ಸಂಬಂಧ, ಮನುಷ್ಯ ಪ್ರಕೃತಿಯೊಡನೆ ಬೇರ್ಪಡಿಸಲಾಗದೆ ಒಂದಾಗಿರುವ ಸತ್ಯ; ಆ ಸತ್ಯದ ಅರಿವಿನಲ್ಲಿಯೇ ಅವನು ನಾಗರಿಕತೆಯನ್ನು ಬೆಳೆಸಿಕೊಂಡ ರೀತಿ ಬೇಂದ್ರೆಯವರ ಚಿಂತನೆಯ ವಿಷಯವಾಗಿದೆ. ಹೀಗೆ ಬೆಳೆದ ಮಾನವ, ಕ್ರೂರಿಯಾಗಿ ತನ್ನ ಅಳಿವಿಗೆ ತಾನೇ ಕಾರಣನಾಗುತ್ತಾನೆ ಎಂದಾಗ ಅವನ ಉಳಿವು ಮುಖ್ಯ ಮತ್ತು ಅವನ ಉಳಿವಿಗೆ ಈ ಪ್ರಕೃತಿ ಮುಖ್ಯ ಎಂದು ಅರಿತ ಕವಿ ಸಾಂಪ್ರದಾಯಿಕ ಮಿಥ್‌ನಲ್ಲಿಯೇ ಮೌಢ್ಯತೆಯನ್ನು ಮೀರಿದ ಶಕ್ತಿ ಆಲೋಚನೆ ಅಡಗಿರುವುದನ್ನು ಕಂಡು ಅದನ್ನು - 'ಧಾರವಾಡದ ತಾಯಿ', 'ನಮ್ಮ ತಾಯಿ ಮಾಹೂರಗಡದಾಕಿ', 'ಯಾವೂರಾಕಿ ನೀ ಮಾಯಕಾರತಿ', 'ಚಿಗರಿಗಂಗಳ ಚೆಲುವಿ', 'ಮೊದಲಗಿತ್ತಿ' ಎಂಬ ಕವನಗಳಲ್ಲಿ ದರ್ಶಿಸಿದ್ದಾರೆ. ಅದೇ ಚಿಂತನೆ 'ಗಂಗಾಷ್ಟಕ' 'ಗಂಗಾವತರಣ', 'ಸರಸ್ವತಿಸೂಕ್ತ', 'ಲಲಿತೆ'ಯಲ್ಲಿ ಕಾವ್ಯವಾಗಿ ಹರಿದಿದೆ. ಅದು ವಿಕಾಸಗೊಳ್ಳುತ್ತ ನಾಡಿಗರನ್ನು ಆವರಿಸಲು 'ಕನಸಿನೊಳಗೊಂದು ಕನಸು', 'ಕನ್ನಡದ ಕಂದವ್ವನ ಲಾಲಿ', 'ಕನ್ನಡ ಕಣ್ಣು', 'ಕನ್ನಡದ ಕಮಳ' ಎಂದು ಬೆಳೆಯುತ್ತ; 'ಮುವತ್ತುಮೂರು ಕೋಟಿ'ಯಾಗಿ 'ಭಾರತನವಶಕ್ತಿ' ವಿಶ್ವವ್ಯಾಪಿ 'ಪ್ರೇಮಬೀಜ'ವಾಗಿ 'ಹಲವು ಮಾತೆ ಜಗನ್ಮಾತೆ'ಯಾಗಿ ಹರಡಿದೆ. ಅದು ಪ್ರಕೃತಿಯಾಗಿ ಎಲ್ಲ ಜೀವಕೋಟಿಯ ಉಳಿವಿನ ಭೌತಿಕ ಸತ್ಯವಾಗಿದೆ. ಅದು ಅವರಿಗೆ ಒಟ್ಟಾಗಿ 'ಶ್ರಾವಣ'ವಾಗಿದೆ. ಮನುಷ್ಯನ ಉಳಿವು ಅದರ ಶ್ರವಣದ ಅರಿವಿನಲ್ಲಿದೆ. ಅದು ಜನಾಂಗವನ್ನು ರೂಪಿಸುವ ಕವಿಯ ಶ್ರವಣಶಕ್ತಿ. ಅದು ತನ್ನ ನೋವನ್ನು, ನಲಿವನ್ನು; ತನ್ನ ಮೇಲಿನ ಮಾನವನ ಕ್ರೌರ್ಯ, ದೌರ್ಜನ್ಯವನ್ನು ಕವಿಗೆ ನುಡಿದಂತೆ ಶ್ರಾವಣ ವೈಭವವಾಗಿ - ಕವಿಯ ಪ್ರತಿಭೆಯಲ್ಲಿ ಜೀವಶೋಧಕವಾಗಿದೆ.

ಬೇಂದ್ರೆಯವರು ಮಿಥ್‌ಗಳನ್ನು ಅಲೌಕಿಕವೆಂದು ದೂಷಿಸುವವರಿಗೆ ಅದರಲ್ಲಿ ಅಡಗಿರುವ ಲೌಕಿಕ ಪರಿಸರದ ರಕ್ಷಣಾಸೂತ್ರಗಳನ್ನು ಹಾಗೂ ಅವನು ಉಳಿಯಲು ಬೇಕಾದ ಪೋಷಕದ್ರವ್ಯಗಳನ್ನು ತಮ್ಮ ಕಾವ್ಯಮುಖೇನ ತಿಳಿಯುವಂತೆ ಮಾಡಿದ್ದಾರೆ. ನಾವು ಈಗಾಗಲೇ ತಿಳಿದಿರುವಂತೆ ಸಂಸ್ಕೃತಿ ರೂಪುಗೊಂಡದ್ದು ತಾಯಿಯಿಂದ, ಮನುಷ್ಯ ನಾಗರಿಕನಾದುದು ಅವಳಿಂದ, ಅವಳಿಲ್ಲದಿದ್ದರೆ ಅವನ ನಾಶ ಖಂಡಿತ. ಇದನ್ನು ಬೇಂದ್ರೆಯವರು ಭೂಮಿತತ್ತ್ವವೆಂದು ಕರೆದಿದ್ದಾರೆ. ಲೌಕಿಕದ ಬದುಕಿಗೆ ಅಲೌಕಿಕದ ಶಕ್ತಿ ಬೇಕು ಎಂಬುದರ ಹಿಂದೆ ಮಾತೃಶಕ್ತಿಯ ಮಿಥ್ ಅಡಗಿದೆ ಎಂಬುದನ್ನು ಕಾವ್ಯಮುಖೇನ ತಿಳಿಸಿದ್ದಾರೆ. 'ಅಂಬಿಕಾತನಯದತ್ತ'ರ ಇನ್ನೊಂದು ಮುಖ, ತನ್ನ ತಾಯಿಯನ್ನು ಅಲೌಕಿಕ ಶಕ್ತಿ ಎಂದು ಭಾವಿಸಿದ್ದು. ಆ ಭಾವ ಆರಾಧನೆಯಾಗಿ ಅವರಲ್ಲಿ ಬೆಳೆದಿದೆ. ತಾಯಿಯನ್ನು ಅರಿಯಲು ಪ್ರಯತ್ನಿಸುವ ಸತತ ಯತ್ನದಲ್ಲಿಯೇ ಕಾವ್ಯಸೃಷ್ಟಿಯಲ್ಲಿ ಸಫಲವಾಗುವ ಕ್ರಿಯಾಶೀಲತೆಯನ್ನು ಅವರಲ್ಲಿ ನಾವು ಕಾಣುತ್ತೇವೆ. ಇದೇ ಅವರ ಸೃಜನಶಕ್ತಿಯ ಕೇಂದ್ರವಾಗಿದೆ. ಮಾತೃಶಕ್ತಿಯ ಆರಾಧನೆಯಿಂದ ದ್ರಾವಿಡ ಮತ್ತು ಆರ್ಯ ಚಿಂತನೆಯನ್ನು ಒಗ್ಗೂಡಿಸಿಕೊಂಡು ಜಾನಪದ ಮತ್ತು ವೈದಿಕ ಪರಂಪರೆಯನ್ನು ಬೆಸೆದು, ಅದರ ಅಂತರಾಳದ ವಿಶ್ವವ್ಯಾಪಿ ತತ್ತ್ವವನ್ನು ಬೇಂದ್ರೆ ಕಾವ್ಯವಾಗಿಸಿದ್ದಾರೆ. ಹೀಗಾಗಿ ಸಮುದಾಯದ ಮೂಲದಲ್ಲಿರುವ ಸಮುದಾಯದ ಉಳಿವಿನ ಶ್ರೀಶಕ್ತಿಯನ್ನು ಹಾಡಿ ಅದರಲ್ಲಿ ತಾದಾತ್ಮ್ಯವನ್ನು ಸಾಧಿಸಿದ್ದಾರೆ ಎಂದು ಹೇಳಬಹುದು. 'To

approach the gods and understand them, one must withdraw from practical duties and household cares, one must listen to the admonitions of dream, the voice of reason, the commands of spirit' ಎಂದು ಲೆನಿಸ್ ಮಮ್‌ಫೋರ್ಡ್ ಹೇಳಿದ್ದಾರೆ. ಅದರಂತೆ ಕನಸು, ಕಾರ್ಯಕಾರಣದ ಚಿಂತನೆ, ದೈವೀಶಕ್ತಿಯ ಆಜ್ಞೆಗೆ ಒಳಗಾದ ಭಾವ ಬೇಂದ್ರೆಯವರ ಕಾವ್ಯದಲ್ಲಿರುವುದು ಕಂಡುಬಂದಿದೆ. ಅವರು ಕಂಡ ಮಾತೃಭಾವ, ಜೀವಪರವಾಗಿ ಲೋಕಕಲ್ಯಾಣಕಾರಕವಾಗಿದೆ. ಬೇಂದ್ರೆಯವರ ಈ ಬಗೆಯ ಚಿಂತನೆಯ ಕವನವನ್ನು ಕುರಿತು ಶಂಕರ ಮೊಕಾಶಿ ಪುಣೇಕರ ಅವರು - "ಪಾಶ್ಚಾತ್ಯರ ಹಲವಾರು ವಿಮರ್ಶಾಭಾಸಗಳಿಂದ ಭಾರತೀಯ ವಿಮರ್ಶಕನು ಮುಕ್ತನಾಗಬೇಕು. ಇಷ್ಟದೇವತೆಯ, ಪರಮಾತ್ಮನ, ತಾಯಿಯ, ತಾಯ್ನಾಡಿನ ಹೆಸರನ್ನು ತೆಗೆದುಕೊಂಡೊಡನೇ ಕವಿಯ ಭೂಮಿಜೀವನ ಮರೆಯಾಯಿತೆಂದೂ, ಅದರಿಂದ ಕಾವ್ಯಕ್ಕೆ ಬಾಧೆ ಬಂದಿತೆಂದೂ ತಿಳಿಯುವುದು ಇಂಥ ಆಭಾಸಗಳಲ್ಲಿ ಒಂದಾಗಿದೆ"[4] ಎಂದು ನುಡಿದಿರುವ ಮಾತು ತುಂಬಾ ಮೌಲಿಕವಾಗಿದೆ.

ತಾಯಿಯು ಪೂರ್ಣವಾಗಿ, ತನ್ನ ಜೀವದ ಕುಡಿಗಳಿಗಾಗಿ ದಾಂಗುಡಿಯಾಗಿ ಬದುಕಿ ಅದನ್ನೇ ವ್ರತವಾಗಿಸಿಕೊಂಡ ಅವಳ ಪ್ರೇಮ, ತ್ಯಾಗ, ರಕ್ಷಕ ಚೇತನವನ್ನು ಭಾರತೀಯರು ಆರಾಧಿಸಿರುವುದು ಕಂಡುಬಂದಿದೆ. ಅದನ್ನೇ ಪ್ರಕೃತಿಮಾತೆಯೆಂದು ಕರೆದು 'Aditi - the good protectress, the gracious Guide' (ಯಜುರ್ವೇದ ೨೧-೫)[5] ಎಂದು ಅದಿತಿಯನ್ನು ಕರೆದಿದ್ದಾರೆ. ಬೇಂದ್ರೆಯವರು ಆ ದೇವತೆಯನ್ನು:

> 'ಅರಿವಿನ ಆನಂದ ಪಡೆಯಲು
> ಆ ಆನಂದದಲ್ಲಿ ನಡೆಯಲು - ಈ ಜೀವ
> ನಿರಂತರವಾಗಿ ಉನ್ಮುಖವಾಗಿದೆ; ಸರ್ವತೋಮುಖವಾಗಿದೆ.
> ನಿನ್ನ ಬೆಳಕಿನಲ್ಲಿ ನನ್ನನ್ನು ಬದುಕಿಸು ತಾಯಿ,
> ಓ ಮಹಾಮಾತೆ, ಅದಿತಿ-ಶಕ್ತಿ !'[6]

ಎಂದು ಪ್ರಾರ್ಥಿಸಿದ್ದಾರೆ.

"ಅತ್ಯಂತ ಅಮೂರ್ತವಾದ ವಿಶ್ವವ್ಯಾಪಿಯಾದ ಮಾತೃತತ್ತ್ವದಿಂದ ಮೊದಲಾಗಿ ಅತ್ಯಂತ ಮೂರ್ತವಾದ ಜಗನ್ಮಾತೆಯವರೆಗೆ ಕವಿ ತನ್ನ ಸ್ಫೂರ್ತಿಸ್ಥಾನಗಳನ್ನು ಒಂದು ಸಮನ್ವಿತ ದರ್ಶನವಾಗಿ ಕಂಡಿರುವುದು ಮತ್ತು ಅದಕ್ಕೆ ಅನುಗುಣವಾಗಿ ಅವನ ಕೃತಿಗಳಲ್ಲಿ ಅದು ವಿಧವಿಧವಾದ ಆಕಾರ ತಾಳಿರುವುದು ಅವನ ವಿಶ್ವಪ್ರಜ್ಞೆಗೆ ನಿದರ್ಶನವಾಗಿದೆ"[7] ಎಂದು ರಂ.ಶ್ರೀ. ಮುಗಳಿಯವರು ನುಡಿದಿದ್ದಾರೆ. ಅದನ್ನು ಅವರ ಕವನಗಳ ವಿಶ್ಲೇಷಣೆಯಿಂದ ತಿಳಿಯಲು ಪ್ರಯತ್ನಿಸೋಣ.

**ನಾನು**

ಬೇಂದ್ರೆಯವರು 'ನಾನು' ಎಂಬುದರ ಬಗ್ಗೆ ವಿಶ್ಲೇಷಣೆಯನ್ನು ನೀಡುತ್ತ, ತಮ್ಮನ್ನು ತಾವು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದ್ದಾರೆ. ಅವರು "ನಾನು ಎಂದರೆ ಏನು ಎಂಬುದಕ್ಕೆ ಯಾವಾಗಲೂ ಅರ್ಥ ಮಾಡಿಕೊಳ್ಳುತ್ತೇನೆ. ಬೇಂದ್ರೆ ಎಂಬ ನಾನು ಎಲ್ಲ ವ್ಯವಹಾರಕ್ಕೂ ನಿಶ್ಚಯವಾದ ನಾನು. ಆದರೆ ಒಂದು ತಾಯಿ ಜೀವದಿಂದ ವರ್ಧಿತವಾದ, ಉದ್ದೀಪಿತವಾದ ಸ್ವಭಾವವು, ಕನ್ನಡ ಮಾತಿನ ಮೂಲಕ ಆ ನಾಡಿನ, ನುಡಿಯ, ಜನದ ಅರ್ಥವನ್ನು ಮಾಡಿಕೊಂಡು ಇನ್ನೊಂದು ವ್ಯಾಪಕ ಭಾವವನ್ನು ಪಡೆದು, ಕನ್ನಡನಾಡು

ಭರತಭೂಮಿಯ ಒಂದು ಜೀವಂತವಾದ ಅಂಗ ಎಂದು ಅನುಭವವಾದಾಗ ಮಹಾಭಾರತದಂತೆ ಒಂದು ವೈಶಾಲ್ಯವನ್ನು ಪಡೆದು ಸಂಸ್ಕೃತಿಗಳ ಸಂಗಮದಿಂದ ಅವುಗಳ ಉಗಮದತ್ತ ಹೊರಟಾಗ ಭಾರತ ಭಾವವು 'ವಸುಧೈವ ಕುಟುಂಬ'ದ ಭಾವದಲ್ಲಿ ಪರಿಣತವಾಗದಿದ್ದರೆ ತಾನು ತಾನಲ್ಲ, ಎಂಬ ಅರಿವು ಮೂಡಿ ಇಂಥ ಈ ವೈಶಾಲ್ಯವೂ ಅಗಣಿತ ಸೂರ್ಯದಿಂದ ತುಂಬಿದ ಈ ಸಂಸ್ಥೆಯಲ್ಲಿ ಯಾವ ಗಿಡದ ತೊಪ್ಪಲು? ಎಂಬ ಅನುಭಾವವೂ ಅಂತೆಯೇ. ಒಂದು ಮಹತ್ವದ ಭಾವವೂ ಸ್ಪಂದಿಸಿದಾಗ ನಾನೆಂದರೆ ವಿರಾಟ್‌ಸ್ವರೂಪನ ಒಂದು ನರ-ನಾಡಿ ಎಂಬ ಭಾವಸಹಜವಾಗುವುದು"[8] ಎಂದು ನುಡಿದಿದ್ದಾರೆ. ಈ ಹಿನ್ನೆಲೆಯಲ್ಲಿ ಅವರ ಕವನ 'ನಾನು'[9]ವನ್ನು ಅಧ್ಯಯನ ಮಾಡಿದಾಗ ಅವರು 'ವಿಶ್ವಮಾತೆಯ ಗರ್ಭಕಮಲ ಜಾತ-ಪರಾಗ | ಪರಮಾಣು ಕೀರ್ತಿ ನಾನು' ಎಂದು ಹೇಳಿರುವಲ್ಲಿ ಅವರ ವಿಶ್ವಚಿಂತನೆ ಇರುವುದು ಕಂಡುಬಂದಿದೆ. ಅವರು ಭೂಮಿತಾಯಿ, ಭರತಮಾತೆ, ಕನ್ನಡದ ತಾಯಿ, ಹೆತ್ತತಾಯಿ ಅಂಬಿಕೆ - 'ಈ ಐದು ಐದೆಯರೆ ಪಂಚಪ್ರಾಣಗಳಾಗಿ| ಈ ಜೀವ ದೇಹನಿಹನು' ಎಂದು ಹೇಳಿಕೊಂಡಿದ್ದಾರೆ. ಅವರು ತಮ್ಮ ಹೃದಯಾರವಿಂದದಲ್ಲಿರುವ ನಾರಾಯಣನೇ ನರರೂಪದ ಈ ದತ್ತಾತ್ರೇಯನಿಂದ ವಿಶ್ವದ ಅಂತರಂಗದ ಮಾತುಗಳನ್ನು ಕನ್ನಡಿಸುತ್ತಿರುವನು ಅಂದರೆ ಪ್ರತಿಫಲಿಸುತ್ತಿರುವನು ಮತ್ತು ಕನ್ನಡದಲ್ಲಿ ನುಡಿಯುತ್ತಿರುವನು ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ.

'ಹೃದಯಾರವಿಂದದಲ್ಲಿರುವ ನಾರಾಯಣನೆ
ತಾನಾಗಿ ದತ್ತನರನು
ವಿಶ್ವದೊಳನುಡಿಯಾಗಿ ಕನ್ನಡಿಸುತಿಹನಿಲ್ಲಿ
ಅಂಬಿಕಾತನಯನಿವನು'

ಬೇಂದ್ರೆಯವರು ಸಾಹಿತ್ಯದ ವಿರಾಟ್‌ಸ್ವರೂಪದಲ್ಲಿ ಇದೇ ಚಿಂತನೆಯನ್ನು 'ಬೆಂದ್ರೆಲೋಕದಲ್ಲಿ - ಭಕ್ತನಲ್ಲಿ ಭವಿ ಮಡಗಿದ್ದಾನೆ; ಭವಿಯಲ್ಲಿ ಭಕ್ತ ಮೊಳೆಯತೊಡಗಿದ್ದಾನೆ. ೧. ದೇಹಕೊಟ್ಟ ತಾಯಿ; ೨. ಮಾತು ಕಲಿಸಿದ ತಾಯಿ; ೩. ಸಂಸ್ಕಾರ ಸಂಪನ್ನ ಮಾಡಿದ ತಾಯಿ; ೪. ಭೂಮಂಡಲದ ಮಾನವತೆಯಲ್ಲಿ ನೆಲೆಸಿದ ತಾಯಿ; ೫. ವಿಶ್ವೋದರದಲ್ಲಿ ಧರಿಸಿದ ತಾಯಿ - ಈ ಐದು ಐದೆಯರು ದತ್ತನ ತಾಯಂದಿರು. ಇದು ಪಂಚಕೋಶಗರ್ಭ. 'ಅಂಬಿಕೆ'ಯ ತೊಡೆ, ಹೊಟ್ಟೆ, ಎದೆ, ಕೊರಳು, ತುಟಿ, ಕಣ್ಣು - ಒಂದೊಂದರಲ್ಲಿಯೂ ಈ ಮಹಾಸ್ಪರ್ಶವಿತ್ತು. ಆದರೆ ಆಕೆಯ ದೀಕ್ಷೆಯಲ್ಲಿ ಅನಂತ ಸಹನೆ ಇತ್ತು; ಯುಗಯುಗದ ನೋಂಪಿಯ ಕಂಪಿತ್ತು. ತಂದೆಯ, ಅವನ ಬಳಗದ, ನಿಕಟ ಸಾನ್ನಿಧ್ಯದಿಂದ ದೈವವಂಚಿತನಾದ ನಾನು ನನ್ನ ತಾಯಿ, ತಾಯಿಯ ತಾಯಿ, ಆಕೆಯ ತಾಯಿ ಇವರ ಪ್ರತ್ಯಕ್ಷ ಚಾರಿತ್ರ್ಯದಲ್ಲಿ ಪೌರುಷವನ್ನು ಕಂಡೆ"[10] ಎಂದು ಹೇಳಿದ್ದಾರೆ. ಅವರಲ್ಲಿ ಈ ಐದು ಐದೆಯರು ಪಂಚಮಾತೃಕೆಯರಾಗಿ ಅವರನ್ನು ರೂಪಿಸಿರುವುದನ್ನು ಅವರು ಸದಾ ನೆನೆದಿರುವುದು ಅವರ ಎಲ್ಲ ಪ್ರಮುಖ ಬರಹಗಳಲ್ಲಿ ಕಾಣುತ್ತದೆ. ಅವರು ಆತ್ಮಕಥನದಲ್ಲಿ "'ನಾನು' ಎಂಬ ಕವನದ ಬೀಜ-ಮಾತುಗಳನ್ನು ಉಸುರಿದೆ. ಪಂಚ-ಪ್ರಾಣಗಳ ಸಂಯೋಗದಲ್ಲಿ ಜೀವಕ್ಕೆ ಪೀಠ ಉಂಟಾಗುವಂತೆ, ಮೈಗೊಟ್ಟು ನನ್ನ ಹಡೆದ ತಾಯಿ, ಮಾತು ಕೊಟ್ಟ ಕನ್ನಡ ತಾಯಿ, ಸಂಸ್ಕೃತಿಯ ತಿರುಳುಗೊಟ್ಟ ಭಾರತಮಾತೆ, ಅಸ್ತಿತ್ವಕ್ಕೆ ಅಸ್ತಿಭಾರವಾದ ಭೂಮಾತೆ, ಜನ್ಮ ಜನ್ಮಾಂತರಕ್ಕೂ ಅನಂತ ವಿಸ್ತಾರ ಕಲ್ಪಿಸುವ ವಿಶ್ವಮಾತೆ ಈ ಐವರು ಮಾತೆಯರು ನನ್ನ ಜೀವನಕ್ಕೆ ಪ್ರಸ್ತಾರ ಹಾಕಿ ಸ್ವಚ್ಛಂದೋಕ್ತಿಗಳಿಗೂ ಮಂತ್ರಛಾಯೆಯನ್ನು ಒದಗಿಸುತ್ತಿದ್ದಾರೆ ಎಂದು ಹೇಳಿದ್ದೇನೆ. ಅದು ಎಂದಿಗೂ

ನಿಜ"[11] ಎಂದು ನುಡಿದಿದ್ದಾರೆ. ಈ ಶರೀರ, ಜ್ಞಾನದ ಸಾಧಕ ಕ್ಷೇತ್ರ. ಅದರಿಂದ ಸಾಧನೆಯನ್ನು ಮಾಡಬೇಕು ಎಂಬುದನ್ನು ಪ್ರತಿಪಾದಿಸಿದ್ದಾರೆ.

'ತನುವಿನಲ್ಲಿಯೇ ತನ್ನತನದ ನೆಲೆ -
ಯಾಗಲೆಂದೆ ತಾನು
ತೊಗಲು ಮೈಯೊಳೇ ಅರಿವು ನುರಿಯುವದು
ಆಗಿ ಹೋಗಿ ನಾನು'[12].

**ಧಾರವಾಡದ ತಾಯಿ**

ಬೇಂದ್ರೆಯವರು " 'ಧಾರವಾಡದ ತಾಯಿ'ಯನ್ನು ಕುರಿತು ಬರೆದ ಹಾಡಾಗಲಿ, 'ನಾವು ಬರ್ತೇವಿನ್ನ ನೆನಪಿರಲಿ ತಾಯಿ | ನಂ ನಮಸ್ಕಾರ ನಿಮಗS ಕಾಯ್ದಿರಿ ಕೂಸಿನ್ಹಾಂಗ ನಮಗS ||' ಎಂಬ ಲಾವಣಿಯಾಗಲಿ ಮಾತೃಶಕ್ತಿಯನ್ನೆ ಕುರಿತದ್ದು. ಪಾಂಡಿಚೇರಿಯ ಶ್ರೀಮಾತೆಯವರ ದರ್ಶನವಾದ ಮೇಲಂತೂ ಎಲ್ಲ ತಾಯ್ತನವನ್ನು ಎತ್ತಿಹಿಡಿಯುವ ಆಧಾರವೇ ಕಂಡಂತಾಯಿತು. 'ಅಂಬಿಕಾತನಯದತ್ತ' ಈ ಹೆಸರಿನಿಂದ ಮೊದಲ ಕವಿತೆ ಮುದ್ರಿತವಾದದ್ದು ೧೯೧೮ ಶ್ರಾವಣದಲ್ಲಿ; 'ಪ್ರಭಾತ' ಮಾಸಿಕದ ಮೊದಲ ಸಂಚಿಕೆಯಲ್ಲಿ"[13] ಎಂದು ನುಡಿದಿದ್ದಾರೆ. ಈ ಧಾರವಾಡದ ತಾಯಿ ದುರ್ಗೆ ಧಾರವಾಡವನ್ನು, ಬೇಂದ್ರೆಯನ್ನು ಕಾಪಾಡಿದ ಮಾತೆಯಾಗಿದ್ದಾಳೆ. ಬೇಂದ್ರೆಯವರು ಆ ತಾಯಿಗೆ ಪೂರ್ಣ ಶರಣು ಹೋದ ಭಾವವನ್ನು:

'ಧಾರವಾಡದ ತಾಯೇ | ನನಗಾ | ಧಾರ ನಿನ್ನದಲ್ಲದಿಲ್ಲ
ಭಾರ ನಿನ್ನ ಮೇಲೆ ಇರಲು | ಯಾರಿಗಾರು ಎಂಬರೇನೆ?'[14]

ಎಂದು ವ್ಯಕ್ತಪಡಿಸಿದ್ದಾರೆ. ದುರ್ಗಾಮಾತೆಯ ದರ್ಶನ ಭಕ್ತರಿಗಾಗುವುದು ಅವಳ ಕಣ್ಣಿನಿಂದ. ಅದೇ ಅವರನ್ನು ಕಾಪಾಡುವ ಬೆಳಕು. ಆದುದರಿಂದ ಕವಿ:

'ನಿನ್ನ ಕಣ್ಣ - ಕಡೆಗೋಲಿಂದ
ನನ್ನ ಹೃದಯ ಕಡಿಯೇ ತಾಯಿ
ಎನ್ನ ಹೃದಯ ಕಡೀ ..........'

ಎಂದು ಪ್ರಾರ್ಥಿಸಿದ್ದಾರೆ. ನಾವು ಈಗಾಗಲೇ ಹಿಂದಿನ ಅಧ್ಯಾಯದಲ್ಲಿ ತಿಳಿದಿರುವಂತೆ ಕಾಮ ಈ ಜೀವದಲ್ಲಿರುವ ಅರಿಷಡ್ವರ್ಗಗಳಲ್ಲಿ ಒಂದು. ಅದನ್ನು ಗೆಲ್ಲಬೇಕು ಎಂದು ಪ್ರಯತ್ನಿಸುವುದರಲ್ಲಿಯೇ ಜೀವನದ ಸಾರ್ಥಕತೆ ಇದೆ. ಆದಕಾರಣ ಅವರು ಧಾರವಾಡದ ತಾಯಿಯನ್ನು:

'ಕಾಮಮೆತ್ತಿ ಬತ್ತಿದ ಮನಕೆ | ನೇಮನಿತ್ಯ ಬಂತೆಲ್ಲಿಂದ
ಪ್ರೇಮವಾಹಿನಿ ನೀ ಹರಿಯದಲೆ | ತಾಮಸ ತಾ ಹರಿದೀತೇನೇ?'

ಎಂದು ಪ್ರಶ್ನಿಸಿ ಪ್ರೇಮವೇ ಬೆಳಕು, ಪ್ರೇಮವೇ ತಾಯಿ, ಅದು ತನ್ನ ಮೇಲೆ ಹರಿದಾಗ ಕಾಮ, ಕ್ರೋಧ, ಮೋಹ, ಲೋಭ, ಮದ, ಮಾತ್ಸರ್ಯಗಳ ಕತ್ತಲು ದೂರವಾಗುವುದು ಎಂದು ಆ ತಾಯಿಯನ್ನು ಪ್ರಾರ್ಥಿಸಿದ್ದಾರೆ. ಇದು ಸುಲಭದಲ್ಲಿ ಆಗುವುದಲ್ಲ. ಹೃದಯಪರಿವರ್ತನೆಯಿಂದ ಆಗಬೇಕು. ತಾಯಿ ತನ್ನ ಕಣ್ಣಕಡೆಗೋಲಿನಿಂದ ಹೃದಯ ಕಡೆದಾಗ ಬೆಣ್ಣೆ ಬರುತ್ತದೆ. ಅದರ ಸವಿಯನ್ನು ತನಗೆ ತಾಯಿ ಉಣಿಸುತ್ತಾಳೆ ಎಂದು ಭಾವಿಸಿ, ಅವಳಿಂದ ಸಾತ್ತ್ವಿಕ ಗುಣದ ಬಲ ಸಿಗುತ್ತದೆ ಎಂದು ತಿಳಿದು ಪ್ರಾರ್ಥಿಸಿದ್ದಾರೆ:

'ಎನ್ನ ಹೃದಯ ಕಡೀ ......
ಬೆಣ್ಣೆ ಮೇಲೆ ತೇಲಿಸಿ ತಂದು
ನನ್ನ ಬಾಯ್ಗೆ ಹಿಡೀ
ನೀನೆ ಬಾಯ್ಗೆ ಹಿಡೀಯೆ ತಾಯಿ.'

**ಮಾವು ಮಲ್ಲಿಗೆಗಳ ಬೀಡು**

ಬೇಂದ್ರೆಯವರ ಕಾವ್ಯ ರೂಪುಗೊಂಡು ನಾಡಿನ ತುಂಬ ಕಂಪು ಹರಿಸಿದ್ದು ಧಾರವಾಡದ ಬದುಕು, ಭಾಷೆ, ಪ್ರಕೃತಿ, ಪರಿಸರದ ಕಾವಿನಲ್ಲಿ. ಅವರಿಗೆ 'ಶಾಂತೀರಸವೇ ಪ್ರೀತಿಯಿಂದ ಮೈದೋರಿದ್ದು', 'ಎದೆಯಲಿದ್ದ ತನನ ತಾನ | ಮೌನವೆತ್ತ ಗಾನ'ವಾಗಿ ಶ್ರಾವಣ ಪ್ರತಿಭೆಯಿಂದ ಗೋಚರವಾದದ್ದು, 'ಏಕೆ ಬಂದೆ? ಏನು ತಂದೆ ? ಹೇಳೋ ಹೇಳು ಶ್ರಾವಣ | ನೀನು ಬಂದ ಕಾರಣ' ಎಂದು ಶ್ರಾವಣನನ್ನು ಪ್ರಶ್ನಿಸಿದ್ದು, 'ಗರುಡನ ಹಕ್ಕಿಯು ಗರಿಗೆದರಿ ಹಾರಿತು | ಬಾನಾಗ ಕರಿದಿತು ಬರಿಹಾಲನೆ' ಎಂದು ಕವಿಯಾಗಿ ಹಾಡಿದ್ದು, 'ಚಿತ್ತಪಾಕದೊಳಿಳಿದ ರಸರುಚಿ ಅಮೃತವಾಗಿದೆ ಬಾಳಿಗೆ' ಎಂದು ಸಾವು, ನೋವನ್ನು ನುಂಗಿ ಅದನ್ನು ಅಮೃತವಾಗಿಸಿಕೊಂಡು, 'ಪಟ್ಟ ಪಾಡೆಲ್ಲವೂ ಹುಟ್ಟು ಹಾಡಾಗುತ | ಹೊಸದಾಗಿ ರಸವಾಗಿ ಹರಿಯುತಿವೆ' ಎಂದು ಕನ್ನಡ ಕಾವ್ಯವನ್ನು ಹೊಸದಾಗಿ, ನವೋನವ ಛಂದಸ್ಸಿನಲ್ಲಿ ರಚಿಸಿ ಹಾಡಿದ್ದು ಧಾರವಾಡದಲ್ಲಿ. ಅವರಿಗೆ ಧಾರವಾಡ 'ಮಾವು-ಮಲ್ಲಿಗೆಗಳ ಬೀಡು.' ಧಾರವಾಡದ ಭಾಷೆಯನ್ನು ಕುರಿತು ಬೇಂದ್ರೆಯವರು "ಧಾರವಾಡ ಕನ್ನಡಕ್ಕೆ ಕೊಂಕಣಿ, ಮರಾಠಿಗಳ ಸಂಪರ್ಕವಿರುವಂತೆ ಹವ್ಯಕರ ನೆರೆಹೊರೆಯೂ ಇದೆ. ಇಲ್ಲಿಯ ಭಾಷೆ ರಾಜಭಾಷೆಯ ಮರ್ಯಾದೆಯದಲ್ಲ. ಜನಭಾಷೆಯ ಬೀಸುತನದ್ದು. ಬಾಯಿ ಬಿಗಿಹಿಡಿದು ಮಾತನಾಡಿ ಅದಕ್ಕೆ ಗೊತ್ತಿಲ್ಲ. ಪೇಶ್ವಾ ಮತ್ತು ಹೈದರ-ಟೀಪು ಸುಲ್ತಾನರ ಇಬ್ಬದಿಯ ದಾಳಿಗಳ ಹೋರಾಟದಲ್ಲಿ ಬಂದ ಬಂಡುಗಾರಿಕೆಯ ಪುಂಡತನ ಅದರ ಮಾತಿನ ಮಲಕಿನಲ್ಲಿ, ಒರಟು ಹಾರಾಟ-ವಿರಾಟಗಳಲ್ಲಿ ಕಂಡುಬರುವದು. ಪುಲಿಗೆರೆಯ ಅಂದರೆ ಬನವಾಸಿ-ಲಕ್ಷ್ಮೇಶ್ವರ ಪ್ರಾಂತದ ನುಡಿಯು ಧಾರವಾಡದ ಬುನಾದಾಗಿದೆ. ಮುಳಗುಂದದ ನಯಸೇನ, ಕೋಳಿವಾಡದ ಕುಮಾರವ್ಯಾಸ, ಕರ್ಜಗಿಯ ದಾಸರು, ಸರ್ವಜ್ಞ, ಶರೀಫಸಾಹೇಬ ಇವರೇ ಮೊದಲಾದವರು ಇದನ್ನು ಬೆಳೆಸಿಕೊಂಡು ಬಂದರು. ಗಳಗನಾಥ, ಆಲೂರ, ಮುದವೀಡು ಕೃಷ್ಣರಾಯರು, ತೂರಮರಿ, ಹೊನ್ನಾಪುರಮಠ, ಶಾಂತಕವಿ, ನಾರಾಯಣರಾವ ಹುಯಿಲಗೋಳ, ಗರೂಡ ಸದಾಶಿವರಾವ ಈ ಕವಿಗಳು, ವಾಗ್ಮಿಗಳು, ನಾಟಕಕಾರರು ಅದರ ಕೆಚ್ಚು ಉಳಿಸಿದ್ದಾರೆ"[15] ಎಂದು ಹೆಮ್ಮೆಯಿಂದ ಹೇಳಿದ್ದಾರೆ. ಧಾರವಾಡದ ನುಡಿಯನ್ನು ಬಾನುಲಿಯಲ್ಲಿ ಕೇಳಿದರೂ ಕೋಕಿಲದ ನುಡಿಯಂತೆ ಮಧುರ ಎಂದಿದ್ದಾರೆ.

'ಸೂತ್ರ ಸರಿಯಾಗಿರಲು ಪಾತ್ರವಾಡುವದು ಪಟ
ನೇತ್ರದಲ್ಲರಳುವದು ನವಿಲುಗರಿಯು
ಧಾರವಾಡದ ಮಾತು ಬಾನುಲಿಯಲಾಡಿದರೆ
ಎದೆಗೂಡ ಕುಕಿಲಿಗದು ಸುಗ್ಗಿ ಕರೆಯು"[16]

ಅವರಿಗೆ ಧಾರವಾಡದ ಮಣ್ಣು, ಹುಲ್ಲು, ಕಲ್ಲು, ಹುಡಿ ಎಲ್ಲವೂ ಪವಿತ್ರ. ಅವರು ಧಾರವಾಡದಲ್ಲಿ ಬಾಲ್ಯದಲ್ಲಿ ಕಂಡ ಚಿಗರಿಯನ್ನು ನೆನೆಸಿಕೊಂಡು ಅದರಂತೆ ಉಲ್ಲಾಸಮನದಿಂದ ಹಾಡಿದ್ದಾರೆ:

'ಧಾರವಾಡದ ಶಿಲೆಯು ನಮ್ಮ ಶಾಲಿಗ್ರಾಮ
ಮಾವು ಮಲ್ಲಿಗೆ ಚಿಗುರು ನಮ್ಮ ತುಳಸಿ

ಮುತ್ತುರುಳಬಹುದೆಂದು ದಿಕ್‌ನಾಗ ಜಡೆಯುವರೆ?
ಇಲ್ಲಿ ನಾಗರ ಖಂಡ ಸುತ್ತು ಬಳಸಿ.
ಗುಪ್ತಗಾಮಿನಿ ನಮ್ಮ ಶಾಲ್ಮಲೆಯು ಸೆಲೆ ಆಳ
ಸಂಜೆ-ನಂಜನು ತೊಳೆಯೆ ಧುಮುಕುತಿಹಳು.
ಏಕಾಂಗಿ, ನಿಃಸಂಗಿ, ಗಂಗಾವಳಿಯ ಭಂಗಿ,
ಕನ್ನಡವ ಒಪ್ಪಿಡಿಯಲಮುಕುತಿಹಳು.'

☆ ☆

'ಧಾರವಾಡದ ಪೂರ್ವಬಯಲೊ ಬಯಲು ಅಪೂರ್ವ
'ಕಲ್ಯಾಣ'ದಾಚೆಗಿದೆ ಭಾಗ್ಯನಗರಿ.
ಕರೆನಾಡು ಎರೆನಾಡು, ನಡುವೆ ಅಂದದ ಕಾಡು -
ಗಂಡೆರಳೆ ಸುತ್ತಿರುವ ಹಿಂಡು ಚಿಗರಿ.'[17]

ಬೇಂದ್ರೆಯವರು ವಿದ್ಯೆಗಾಗಿ, ಕೆಲಸಕ್ಕಾಗಿ ಊರೂರು ಸುತ್ತಾಡಿದ್ದು ಈಗಾಗಲೇ ತಿಳಿದಿದೆ. ಹಾಗೆ ಬೇರೆ ಊರಿನಲ್ಲಿ ನೆಲೆಸಿದ್ದಾಗ ಅವರಿಗೆ ಧಾರವಾಡ ಯಾವಾಗಲೂ ಕೈಬೀಸಿ ಕರೆಯುತ್ತಿತ್ತು. ಅವರು 'ಮಮತೆಯ ಕುರುಹಾಗಿ' ಚಿಕ್ಕಪ್ಪನಿಂದ ದೊರೆತ ಸಾಧನಕೆರೆ ಬಡಾವಣೆಯಲ್ಲಿನ ಮನೆಯನ್ನು, ಆ ಪರಿಸರವನ್ನು ತುಂಬಾ ಮೆಚ್ಚಿಕೊಂಡಿದ್ದರು. ಅದು ಈಗ ಸಾಧನಕೇರಿ ಆಗಿದೆ. ಬೇಂದ್ರೆಯವರ ಕಾವ್ಯ ಸಾಧನೆಯ ಕೇರಿಯೂ ಹೌದು. ಸಾಧನಕೇರಿಯ ಮನೆಯ ಸುಂದರ ಪ್ರಕೃತಿಯನ್ನು ಅವರು:

'ಅಲ್ಲಿ ಸಂಪಿಗೆಯಿತ್ತು ಪಾರಿಜಾತಕವಿತ್ತು
ಮಾವು ಮಲ್ಲಿಗೆಯಿತ್ತು ಮನೆಯಿದುರು.
ಮುಗಿಲ-ಮಲ್ಲಿಗೆಯಿತ್ತು, ತೆಂಗಿತ್ತು ಹಲಸಿತ್ತು
ನಿಂಬಿಯ ಇಂಬಿತ್ತು ಎಡೆ ಎಡೆಗೆ
ಹೊಂಗೆಯ ಸಾಲಿತ್ತು ಕಣ್ಮುಂದೆ ಕೆರೆಯಿತ್ತು
ಗುಡ್ಡದ ನೆರೆಯಿತ್ತು ಅದರಾಚೆಗೆ.'[18]

ಎಂದು ಬಣ್ಣಿಸಿದ್ದಾರೆ.

**ಮೂರೂ ಹೊತ್ತಿನ್ಯಾಗ ನಿಮ್ಮ ಧ್ಯಾನ**

"ಧಾರವಾಡವನ್ನು ಬಿಟ್ಟು ಹೋಗುವ ಹೊತ್ತಿನೊಳಗೆ ಧಾರವಾಡದ ತಾಯಿ ಕಲಿಸಿದ ಪಾಠ ನೆನಪಾಯಿತು. ಹೆಣ್ಣು ನನಗೆ ಕಲಿಸಿದ ಪಾಠ ನೆನಪು ಮಾಡಿಕೊಂಡು ನಾನು ಊರು ಬಿಡುತ್ತಾ ಇದ್ದೇನೆ. ಇದು ಧಾರವಾಡದ ತಾಯಿಯ ಕುರಿತು ತೋಡಿಕೊಂಡ ಹಾಡು"[19] ಎಂದು 'ನಾವು ಬರತೇವಿನ್ನ'[20] ಕವನದ ಭಾವಸಂದರ್ಭದಲ್ಲಿ ಬೇಂದ್ರೆ ನುಡಿದಿದ್ದಾರೆ. ಇದು ಲಾವಣಿಯ ನಡಿಗೆಯನ್ನು ಹೊಂದಿದೆ. ಧಾರವಾಡದ ತಾಯಿಯು ಕೂಸಾದ ತಮ್ಮನ್ನು ಸಾಕಿದ್ದನ್ನು ನೆನೆದು:

'ಅಲ್ಲಿ ನಿದ್ದೆ ಮಾಡಿ - ಎದ್ದೆವೀಗ
ಯಾವುದೋ ಹೊಸಾ ನಸುಕಿನ್ಯಾಗ'

ಎಂದು ಆ ತಾಯಿಯ ತೊಡೆಯ ಮೇಲೆ ಬೆಳೆದಿದ್ದನ್ನು ತುಂಬಾ ಸಹಜವಾಗಿ ಹಾಡಿದ್ದಾರೆ. ಆ ತಾಯಿ ತನಗೆ ಹಾಲು ಕುಡಿಸಿ ಪೋಷಿಸಿ ತನ್ನನ್ನು ರಕ್ಷಿಸಿದ್ದನ್ನು ತುಂಬಾ ಆತ್ಮೀಯವಾಗಿ ಬಣ್ಣಿಸಿದ್ದಾರೆ:

'ನಿಮ್ಮ ಸೆರಗ ಮರೀ ಮಾಡಿದಿರಿ
ಲಾಲಿ ಹಾಡಿದಿರಿ
ಆಟ ಆಡಿದಿರಿ - ಏನೋ ಹಾಂಗs
ಮರೆತೆವು - ಕಳೆದ ಜನ್ಮದ್ಹಾಂಗ !'

ಬೇಂದ್ರೆಯವರಿಗೆ ಅವರು ಹುಟ್ಟಿ ಬೆಳೆದ ನೆಲ ಧಾರವಾಡ ಪವಿತ್ರವಾಗಿದೆ. ಅವರು ಬೆಳೆದು ದೊಡ್ಡವರಾದ ರೀತಿ ಆಟದಂತೆ ನಡೆದು ಹೋಗಿದೆ. ಆದಕಾರಣ ಅದು 'ಕಳೆದ ಜನ್ಮದ್ಹಾಂಗ' ಆಗಿದೆ ಎಂದಿದ್ದಾರೆ ಅವರಿಗೆ. ಅವರಿಗೆ ಧಾರವಾಡದ ಭೂಮಿ, ಧಾರವಾಡದ ದುರ್ಗೆ ತಾಯಿಯಾದ ಹಾಗೆ ಆ ಸಮುದಾಯದಲ್ಲಿ ವಾತ್ಸಲ್ಯದ ಸವಿಯುಣಿಸಿದ ಎಲ್ಲ ಹೆಣ್ಣುಗಳೂ ಪವಿತ್ರವಾಗಿದ್ದಾರೆ. ಆದಕಾರಣ ಅವರು ಆ ಸ್ತ್ರೀಯರಲ್ಲಿ ತಾಯಿಯನ್ನು ಕಂಡಿದ್ದಾರೆ. ತಾಯಿಯೆಂದರೆ, ಬೇಂದ್ರೆಯವರಿಗೆ ಸೌಂದರ್ಯ, ಜ್ಞಾನ, ಸಾಮರಸ್ಯ ಹಾಗೂ ಶಕ್ತಿಯ ಸಂಕೇತ.

'ಅಕ್ಕ-ತಂಗಿ-ಮಗಳು-ತಾಯಿ-ಹಡೆದ ತಾಯಿ .....
ಕನ್ನಿ-ಗೆಳತಿ-ಮಡದಿ-ದಾಯಿ-ಸಾಕುದಾಯಿ ......
ಜೋಡೆ-ಸೂಳೆ ಮತ್ತೆ ಮಾಯಿ-ವಿಧೀಮಾಯಿ.'

ಇದೇ ಬೇಂದ್ರೆ ಕಂಡ ಸ್ತ್ರೀಯ ವಿರಾಟ್‌ಸ್ವರೂಪದ ತಾಯಿ ಚೇತನ. ಅವರು ತಾಯಿಯನ್ನು ನೆನೆದಾಗ ತನ್ನ ಅಹಂಕಾರವನ್ನು, ಕಾಮವನ್ನು ನೆನೆಯುತ್ತಾ ತನ್ನ ಮಡ್ಡ ಅಂದರೆ ಅಹಂನ ಕೊಬ್ಬನ್ನು ಇಳಿಸುವವಳು ತಾಯಿ, ತನ್ನನ್ನು ಮಾನವಂತನನ್ನಾಗಿ ಮಾಡುವವಳು ತಾಯಿ ಎಂದಿದ್ದಾರೆ. ಅದು ಅವರು ತಾಯಿಗೆ ಕಾಯಾ, ವಾಚಾ, ಮನಸಾ ಅರ್ಪಿಸಿಕೊಂಡ ಬಗೆಯಾಗಿದೆ.

'ನೂರಾರು ವೇಷ ಕಳಿಸಿದಿರಿ
ಮಡ್ಡ ಇಳಿಸಿದಿರಿ
ಮಾನ ಬೆಳಿಸಿದಿರಿ.
ಯಾಕೋ ಕರುಣ ಬಂತು ತಮಗs
ನಾ ಶರಣು ಬರಲಿಲ್ಲ ಸುಮಗs'

ಎಂದು ಸತ್ಯಶೋಧನಾ ಮನದಿಂದ ತಾಯಿಗೆ ಶರಣು ಹೋಗಿದ್ದಾರೆ. ಈ ಜಗತ್ತಿನಲ್ಲಿ ಮಣ್ಣಿನ ಗೊಂಬೆಯಾದ ತಾನು ಏನು ಇಲ್ಲ. ತನ್ನನ್ನು ಹೆತ್ತು ಹೊತ್ತು ಪೊರೆವವಳು ಈ ಪ್ರಕೃತಿಮಾತೆ, ನೆಲದಾಯಿ. ಅವಳೇ ಧಾರವಾಡದ ತಾಯಿ. ಅವಳ ರಕ್ಷಣೆ ಒಂದಿದ್ದರೆ ತನಗೆ ಸ್ವರ್ಗ-ನರಕ ಯಾವುದೂ ಲೆಕ್ಕಕ್ಕೆ ಬರುವುದಿಲ್ಲ ಎಂದು ಸಮರ್ಪಣಭಾವದಿಂದ ಆರಾಧನಾ ಭಾವನೆಯಿಂದ ಹಾಡಿದ್ದಾರೆ:

'ಮಾಡೀತೇನು ಮಣ್ಣಿನs ಗೊಂಬಿ?
ನಿಮ್ಮ ಹೆಸರನಂಬಿ
ಹೊತ್ತುಕೊಂಡು ಕಂಬಿ-ಕುಣಿಯುತಿರಲಿ
ಸ್ವರ್ಗ-ನರಕ ಯಾವುದೂ ಇರಲಿ!'

ಈ ಕವನದಲ್ಲಿರುವ ಜೀವನಶ್ರದ್ಧೆಯ ಬಗ್ಗೆ ಶಂಕರ ಮೊಕಾಶಿ ಪುಣೇಕರ ಅವರು ಈ ರೀತಿ ನುಡಿದಿದ್ದಾರೆ: "ಇನ್ನು ಹಲವಾರು ವಿಕೃತ ಬುದ್ಧಿ-ಜೀವಿಗಳು ಭಾರತೀಯ ಸಂಸ್ಕಾರವನ್ನೂ ಜೀವನಶ್ರದ್ಧೆಯನ್ನೂ ಅಲ್ಲಗಳೆದು ಹಾಸ್ಯಮಾಡಿ ಜೀವನದಲ್ಲಿ ವೃಥಾ ರುಚಿಗೇಡಿತನವನ್ನು (pointless cynicism) ತರುವರು.

ಅವರನ್ನು ಅಲ್ಲಗಳೆದು ಭೂಮಿಜೀವನದೊಳಗೆ ಶ್ರದ್ಧೆಯನ್ನು ಉಳಿಸಬೇಕೆಂಬ ವಿಷಯವನ್ನು 'ಸೌಭಾಗ್ಯದರ್ಶನ'ವೆಂಬ ಕವನದಲ್ಲಿ ಅಮೋಘವಾಗಿ ಪ್ರತಿಪಾದಿಸಿದ್ದಾರೆ. 'ಈ ಸೃಷ್ಟಿ ಭಗವತ್ ದೃಷ್ಟಿ ..... ಬರಿ ವಿಸರ್ಜನವಲ್ಲ....' ಭಾರತೀಯ ಸಂಸ್ಕಾರದ ಜೀವನ-ಪರಿಪಾಕವನ್ನು ಜಾನಪದ ಹಾಡುಗಳಿಂದಲೂ ಮಾರ್ಗದ ಧರ್ಮಶ್ರದ್ಧೆಯಿಂದಲೂ ಉದಾಹರಿಸಿದ್ದಾರೆ : 'ವಿಷ್ಣು ಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವಮೇ...' Susanne K. Langerರವರ 'Philosophy in a new key' ಎಂಬ ಗ್ರಂಥವನ್ನು ಓದಿದವರಿಗೆ ಈ ಬಗೆಯ 'ಮೂಢನಂಬಿಕೆಗಳು ನಿಜವಾಗಿಯೂ ಜೀವನ ಶ್ರದ್ಧೆಯ ಅನುಭವದ ಸಂಕೇತಕಾವ್ಯ (life symbols) ಎಂಬ ಮಾತು ಮನವರಿಕೆಯಾಗದಿರದು. ಇದೇ ಮಾಂಗಲ್ಯದ ಜೀವನ ಸಂಸ್ಕಾರ 'ಧಾರವಾಡದ ತಾಯಿ'ಯಂಥ ಅನೇಕಾನೇಕ ಕವನಗಳಲ್ಲಿ ಅಪೂರ್ವ ಶಾಂತರಸವನ್ನು ತಂದಿರುತ್ತದೆ.

"ಎಲ್ಲಿ ಹೋದರಲ್ಲಿರಲಿ ನಮ್ಮ ಹತ್ರ
ನಿಮ್ಮ ಕೃಪಾಛತ್ರ
ಕಾರ್ಯ ಸುಸೂತ್ರ - ನಡೀತಿರಲಿ
ನಿಮ್ಮ ಹೆಜ್ಜೆ ಜೋಡಿಗಿರಲಿ !"[21]

**ಗಿಡದ ಹೊದರೊಳು ಹಾಡಿದೆ**

ಈ ರೀತಿಯಾಗಿ ಬೇಂದ್ರೆಯವರು ಎಲ್ಲಿಯೇ ಇರಲಿ ಅವರ ಒಳಮನಸ್ಸು ಸದಾ ಧಾರವಾಡವನ್ನು ನೆನೆಯುತ್ತಿತ್ತು. ಆದಕಾರಣ ಅವರು ಯಾವಾಗಲೂ ಹಾಡಿಕೊಳ್ಳುತ್ತಿದ್ದರು:

'ಬಾರೊ ಸಾಧನಕೇರಿಗೆ |
ಮರಳಿ ನಿನ್ನೀ ಊರಿಗೆ'[22]

ಆ ಸಾಧನಕೇರಿಯು ಬೇಂದ್ರೆಯವರಿಗೆ 'ನಂದನದ ತುಣುಕಿ'ನಂತೆ. ಅದು ಶ್ರಾವಣದಲ್ಲಿ 'ಭೂಮಿತಾಯ್ ಒಡಮುರಿದು ಎದ್ದಳೊ' ಎಂಬಂತೆ ಹಸುರಿನಿಂದ ಕಂಗೊಳಿಸುತ್ತ ಇರುತ್ತದೆ. ಅದನ್ನು ಅವರು 'ಬೇಲಿಗೂ ಹೂ ಬೆರಳಿದೆ' ಎಂದು ವ್ಯಕ್ತೀಕರಿಸುವ ನವೀನ ರೀತಿಯಲ್ಲಿ ಬಣ್ಣಿಸಿದ್ದಾರೆ. ಅವರಿಗೆ ಸಾಧನಕೇರಿಯನ್ನು ನೆನೆಯುತ್ತಿದ್ದಂತೆ ಅಲ್ಲಿಯ ಗಿಡದ ಹೊದರಿನ ಹಾಡಿನಿಂದ ಅವರ ಮನಸ್ಸಿನ ದುಗುಡ ದೂರವಾಗುತ್ತದೆ. ಅವರಿಗೆ ಹೊಸ ಚೇತನವುಂಟಾಗುತ್ತದೆ. ಇದು ಮನೋವೈಜ್ಞಾನಿಕವಾಗಿಯೂ ಸತ್ಯವಾಗಿದೆ. ಅವರು ಹಾಡಿದ್ದಾರೆ:

'ಮರವು ಮುಗಿಲಿಗೆ ನೀಡಿದೆ
ಗಿಡದ ಹೊದರೊಳು ಹಾಡಿದೆ
ಗಾಳಿ ಎಲ್ಲೂ ಆಡಿದೆ
ದುಗುಡ ಇಲ್ಲಿಂದೋಡಿದೆ'.

**ಓಂಕಾರ ಕಹಳೆಯ ಮೊಳಗು**

ಬೇಂದ್ರೆಯವರಿಗೆ ಶ್ರಾವಣಮಾಸ ತುಂಬಾ ಪ್ರಮುಖವಾದುದು. ಅವರು 'ಶ್ರಾವಣಾ ಬಂದಾ | ಕಿವಿ ತೆರಿ ಎಂದಾ' ಎಂದು ಶ್ರಾವಣ ಪ್ರತಿಭೆಗೆ ಮೈಗೆದರಿ ಕುಣಿದು ಹಾಡಿದ ಕವಿ. ಅವರಿಗೆ ಶ್ರಾವಣಮಾಸವೆಂದರೆ ಆಧ್ಯಾತ್ಮಿಕ ಚಿಂತನೆಯ 'ಸಣ್ಣ ಸೋಮವಾರ'[23]ದ ನೆನಪನ್ನು ತರುತ್ತಿತ್ತು. 'ಶ್ರಾವಣ' ಎಂಬ ಪದ ಅಪಭ್ರಂಶವಾಗಿ ಗ್ರಾಮೀಣರ ಬಾಯಲ್ಲಿ 'ಸಣ್ಣ' ಎಂದಾಗಿದೆ. ಅವರಿಗೆ ಜನಪದರು ಸಣ್ಣ

ಸೋಮವಾರದಲ್ಲಿ ಭಕ್ತಿಪರವಶರಾಗಿ ಹಾಡಿ ನಲಿದು ಆಧ್ಯಾತ್ಮಿಕ ಸ್ಪರ್ಶವನ್ನು ನೀಡಿದ್ದಾರೆ. ಹೀಗೆ ಅಧ್ಯಾತ್ಮ ಚಿಂತನೆಯನ್ನು ಉಂಟುಮಾಡಿದ ಜನಪದರ ನುಡಿ ಸಂತಸದ ಪಯಣವನ್ನು ಸೂಚಿಸುವಲ್ಲಿ ಆತ್ಮ ಪರಮಾತ್ಮನತ್ತ ಹರಿದು ಸಾಗುವ ಭಾವವಿದೆ. ಅದು ನುಡಿಯುತ್ತದೆ:

'ಬಂತಣ್ಣ ಸಣ್ಣ ಸೋಮವಾರ
ಕಾಣಬೇಕಣ್ಣ ಸೋಮೇಶ್ವರ '

ಜನಪದರ ಆಸ್ತಿಕಭಾವ ಬೆಳೆದು ಆಧ್ಯಾತ್ಮಿಕ ಅನುಭಾವವಾಗುವುದು ಈ ಕವನದ ವೈಶಿಷ್ಟ್ಯವಾಗಿದೆ.

'ಭಾsವಾs ಇದ್ಧಾಂಗ ದೇವಾ
ಹೇಳಿದ್ರು ಹಿರಿಯರು
ಅಲ್ಲೇ | ಸುತ್ತಾಡತಾವ ನಮ್ಮ ಖ್ಯಾಲಾ.
ಎಣಿಸಿದರ ಏನೋ ಕನಸ
ಕಂಡ್ಹಾಂಗ ಅನಸ್ತsದ
ಕಣ್ಣು | ಆಗ್ತಾವ ಹ್ಯಾಂಗೊ ತೇಲುಮೇಲಾ.'

**ಕನ್ನಡತಾಯಿ**

ಬೇಂದ್ರೆಯವರು ಧಾರವಾಡದಲ್ಲಿ 'ಕನ್ನಡ ತಾಯಿ ತಾವರೆಯ ಪರಿಮಳವುಂಡು ಬೀರುತಿಹ ಗಾಳಿ'ಯಾಗಿ ಕನ್ನಡಿಗರ ಪ್ರಾಣವಾಯುವಾದವರು. ಅವರಿಗೆ ಕನ್ನಡವೇ ಸರ್ವಸ್ವವಾಗಿತ್ತು. ಅವರು ಬೆಳೆದುಬಂದ ಪರಿಸರ ಅವರಲ್ಲಿ ಕನ್ನಡದ ಕೆಚ್ಚನ್ನು ರೂಢಿಸಿತ್ತು. ಅವರು ಚಿಕ್ಕಂದಿನಿಂದಲೇ ಆದರ್ಶದ ಬೆನ್ನುಹತ್ತಿ ಶಿಕ್ಷಕರಾಗಿ, ಕನ್ನಡದ ಸೇವಕರಾಗಿ ತಮ್ಮನ್ನು ತಾವೇ ರೂಪಿಸಿಕೊಂಡವರು. ಅದನ್ನು ಅವರ ಜೊತೆ ಪ್ರಾಥಮಿಕ ಒಂದನೇ ತರಗತಿಯಿಂದ ಓದಿದ ಅವರ ಬಾಲ್ಯದ ಗೆಳೆಯ ಶ್ರೀಧರ ಖಾನೋಳಕರರು ಹೀಗೆ ಹೇಳಿದ್ದಾರೆ: "ಶ್ರೀ ಬೇಂದ್ರೆಯವರು ಬಿ.ಎ.ದಲ್ಲಿರುವಾಗಲೇ ಅವರ ನಿಶ್ಚಯವಾಗಿತ್ತು - ಕರ್ನಾಟಕದ ಸೇವೆಗಾಗಿ ಏನಾದರೂ ಮಾಡಬೇಕು. ತನಗೆ ಯಾವದು ಸಾಧ್ಯ? ಜ್ಞಾನದಾನ - ಶಿಕ್ಷಣ. ಆದ್ದರಿಂದ ಬಿ.ಎ. ಆದಕೂಡಲೇ ಅವರು ಧಾರವಾಡಕ್ಕೆ ಹೋಗಿ ಮಾಸ್ತರರಾದರು. ಆಗಿನ ಕಾಲದಲ್ಲಿ ಅಂದರೆ ೧೯೧೭-೧೮ರಲ್ಲಿ ಸರಕಾರೀ ನೌಕರಿ ಹಿಡಿದಿದ್ದರೆ ಅವರಿಗೆ ಈಗ ಐನೂರರಷ್ಟು ಸಂಬಳವು ದೊರೆಯುವಷ್ಟು ಸೌಕರ್ಯ ಇತ್ತು. ಅವರಿಗೆ ಒಂದೇ ಒಂದು ಧ್ಯೇಯ. ಕರ್ನಾಟಕದ ಸಂಸ್ಕೃತಿಯ ಉನ್ನತಿ. ಆ ಧ್ಯೇಯವನ್ನು ಸಾಧಿಸುವದು ಇನ್ನೆಲ್ಲಿಯೂ ಇಲ್ಲ. ಕರ್ನಾಟಕದಲ್ಲಿ. ಅದೂ ಅಧ್ಯಾಪಕರಾಗಿ ಅಂದರೆ ಎಳೇ ಮಕ್ಕಳಿಗೆ ಕರ್ನಾಟಕಾಭಿಮಾನವನ್ನು ಕಲಿಸಿ ಅದನ್ನು ಬೇರೂರುವಂತೆ ಮಾಡುವದು. ಆ ಅಭಿಮಾನವು ಒಣ ಜಂಭವಲ್ಲ. ಕರ್ನಾಟಕದಲ್ಲಿ ಹುಟ್ಟಿದ ವೀರರ, ವೇದಾಂತಿಗಳ ಚರಿತ್ರ ಮಹಾತ್ಮ್ಯವನ್ನು ತಿಳಿದು, ಕರ್ನಾಟಕದ ಕಲೆಯ ವೈಭವವನ್ನು ಕಂಡುಹಿಡಿದು, ಕನ್ನಡ ವಾಙ್ಮಯದಲ್ಲಿ ಅಡಕವಾಗಿರುವ ಉಚ್ಚ ಜೀವನ ತತ್ತ್ವಗಳನ್ನು ಕಲಿತು ನಡೆದು ತೋರಿಸಿ, "ಇದು ನೋಡಿರಿ ನಮ್ಮ ಕರ್ನಾಟಕ ಇಷ್ಟು ದೊಡ್ಡದು. ಇದರ ವಿಷಯವಾಗಿ ಅಭಿಮಾನ ತಾಳಿರಿ" ಎಂದು ಬೋಧಿಸುವದು. ಈ ಧ್ಯೇಯವನ್ನು ಸಾಧಿಸುವದಕ್ಕೋಸ್ಕರ ಅವರು ಪಟ್ಟ ಕಷ್ಟಗಳು, ಅವರು ಮಾಡಿದ ಸಾಹಸ, ಅವರು ಕೈಗೊಂಡ ದಾರಿದ್ರ್ಯ, ಅವರು ಆಚರಿಸಿದ ದೀರ್ಘೋದ್ಯೋಗ - ಇವುಗಳನ್ನೆಲ್ಲ ನೋಡಿದರೆ, ಎದೆಯು ತಣ್ಣಗಾಗುವದು ಭೆಟ್ಟಿಯಾದವರಿಗೆಲ್ಲ 'ಕನ್ನಡ ಓದಿರಿ' ಇದೇ ಮಂತ್ರವನ್ನು ಎಷ್ಟೋ ದಿವಸ ಹೇಳುತ್ತ ನಡೆದ ಇವರನ್ನು ನೋಡಿ ಈ ಗೃಹಸ್ಥನಿಗೆ ಬೇಸರಿಕೆ ಹೇಗೆ ಬರುವದಿಲ್ಲವೆಂದು ನನಗೆ ಆಶ್ಚರ್ಯವಾಗುತ್ತಿತ್ತು."[24]

**ಕನ್ನಡವ ಬಿಟ್ಟೆನಗೆ ಅನ್ಯ ಜೀವನವಿಲ್ಲ**

ಬೇಂದ್ರೆಯವರ ತಮ್ಮನ ಶಾಲಾ ಶಿಕ್ಷಕರಾಗಿ ಬೇಂದ್ರೆಯವರನ್ನು ಚೆನ್ನಾಗಿ ಬಲ್ಲ ಸ.ಪ.ಗಾಂವಕರ ಅವರು ಬೇಂದ್ರೆಯವರ ಕನ್ನಡ ಪ್ರೇಮವನ್ನು ಕುರಿತು ಹೀಗೆ ಹೇಳಿದ್ದಾರೆ. "ಬೇಂದ್ರೆಯವರು ಹೈಸ್ಕೂಲಿಗೆ ಸೇರಿದರೆಂದು ಹಿಂದೆ ಹೇಳಿದೆ. 'ಕನ್ನಡವ ಬಿಟ್ಟೆನಗೆ ಅನ್ಯ ಜೀವನವಿಲ್ಲ' ಎಂಬ ಅವರ ಬಾಳು ಅಂದಿನಿಂದಲೇ ಆರಂಭವಾಯಿತು. ಸಾಹಿತಿಗಳನ್ನು ಕಂಡುಹಿಡಿಯುವ ಅವರ ಕಣ್ಣು; ಅದರ ಜೊತೆಗೆ ಅವರು ಸಾಹಿತ್ಯಕ್ಕೆ ಹಾಕಿಕೊಟ್ಟ ಹೊಸದೊಂದು ಹಾದಿ; ಒಂದಲ್ಲ, ಎರಡಲ್ಲ ಹಲವಾರು ಎದ್ದೇಳುವ ಸಾಹಿತಿಗಳನ್ನು ಸಾಹಿತ್ಯಮಣಿಮಾಲೆಯಲ್ಲಿ ಗುಂಪುಗೈದಿತು. ಪ್ರೊ.ಮುಗಳಿ ಮುಂತಾದ ಇಂದಿನ ಸಾಹಿತಿಗಳು ಅವರ ಮನೆಗೆ ಬಂದುಹೋಗುವದನ್ನು ಕಂಡಿದ್ದೇನೆ. ಹೀಗಾಗಿ ಗೆಳೆಯರ ಗುಂಪೊಂದು ಅವರ ಸುತ್ತಲೂ ರೂಪುಗೊಂಡಿತು; ಎಲ್ಲೆಲ್ಲೂ ತಲೆಯೆತ್ತಿತು; ಇಂದಿನ ಕನ್ನಡಕ್ಕೊಂದು ಕಾಣಿಕೆಯಿತ್ತಿತು. ಮುಂದಿನ ಕನ್ನಡಕ್ಕೆ ಕೈದೀವಿಗೆಯಾಯಿತು. ಇದೊಂದು ಕನ್ನಡಕ್ಕಾಗಿ ಬೇಂದ್ರೆಯವರು ಗೆಳೆಯರ ಗುಂಪಿನ ಗುರುದೇವತ್ವದಲ್ಲಿ ಕೊಟ್ಟ ದೊಡ್ಡ ಕೊಡುಗೆಯೆಂದರೆ ಬೆಳಿಸಿದ ಬೆಳ್‌ಮಾತಾಗದು."[25]

ಹೀಗೆ ಕನ್ನಡವನ್ನು ಜೀವಪ್ರಾಣವಾಗಿಸಿಕೊಂಡ ಬೇಂದ್ರೆಯವರು ಸಿಂಪಿ ಲಿಂಗಣ್ಣನವರಿಗೆ ಕಂಡ ರೀತಿ ಹೀಗಿದೆ : "ಶ್ರೀ ಬೇಂದ್ರೆ ಅವರು ಕನ್ನಡ ತಾಯಿಯ ಮುಖಗಳಲ್ಲಿ ಒಂದು ಮುಖ. ಅಂತೆಯೇ ಕನ್ನಡತಾಯಿಯು ಆ ಮುಖದಿಂದ ತನ್ನ ಹಲವು ಹಾಡುಗಳನ್ನು ಹಾಡಿಸಿದ್ದಾಳೆ; ಕೆಲವು ಕೃತಿಗಳನ್ನು ಮಾಡಿಸಿದ್ದಾಳೆ. ಅಂತೂ ಅವರ ಹೃದಯವು, ಅವರ ಮುಖವು ಕನ್ನಡ ತಾಯಿ ಬಳಸುವ ಕೊಳಲು, ವೀಣೆ, ಕಿನ್ನರಿಯೆಂದು ಹೇಳಬಹುದು. ಕನ್ನಡಮ್ಮನ 'ಆ ಸಾವಿರ ಬಾಯಿಗಳಲ್ಲಿ ನನ್ನದೊಂದು; ಅದೇ ನನ್ನ ಧನ್ಯತೆ' ಎಂದು ಶ್ರೀ ಬೇಂದ್ರೆ ಅವರೂ ಒಂದೆರಡು ಕಡೆಗೆ ಹೇಳಿಕೊಂಡದ್ದುಂಟು."[26]

ಕನ್ನಡನಾಡು ಭಾರತದ ಒಂದು ಅವಿಭಾಜ್ಯ ಅಂಗ. ಕರ್ನಾಟಕ ಭಾರತಮಾತೆಯ ಮಗಳು ಎಂಬುದು ಕನ್ನಡ ಕವಿಗಳ ಹೆಮ್ಮೆಯ ವಿಷಯವಾಗಿದೆ. ಬೇಂದ್ರೆಯವರು ೧೯೧೯ರಲ್ಲಿ 'ಭಾರತಮಾತೆಯು ಪೂರ್ವ-ಪಶ್ಚಿಮ ಘಟ್ಟಗಳ ತೊಟ್ಟಿಲಲ್ಲಿ ಮಲಗಿದ ಕನ್ನಡಕಂದವ್ವನನ್ನು ತೂಗುವಾಗ ಹೇಳಿದ ಪದ್ಯ'[27]ವನ್ನು ರಚಿಸಿದ್ದಾರೆ. ಅದನ್ನು 'ಕನ್ನಡದ ಕಂದವ್ವನ ಲಾಲಿ'[28] ಎಂದು ಕರೆದಿದ್ದಾರೆ.

'ಓರ್ವ ತಾಯಿಯು ತನ್ನ ಕೂಸಿರುವ ತೊಟ್ಟಿಲವ ಕೈಯಿಂದ ತೂಗುತಿಹಳೋ
ಪೂರ್ವ ಪಶ್ಚಿಮ ಘಟ್ಟದಲ್ಲಿ ಪಟ್ಟಿರುವಂಥ ನಾಡನ್ನೆ ನೂಗುತಿಹಳೋ.'

ಎಂದು ಭಾರತಮಾತೆ ಕನ್ನಡಕಂದವ್ವನನ್ನು ತೂಗುತ್ತಿರುವಾಗ, ಆನಂದದಿಂದ ಆಕೆ 'ನನ್ನ ಎದೆಮುಗುಳೆ ಜೋ ಜೋ' ಎಂದಿದ್ದಾಳೆ. ಬೇಂದ್ರೆಯವರಿಗೆ ಮಗಳು 'ಎದೆಮುಗುಳು.' ಅದು ಇಲ್ಲಿ ಭರತಮಾತೆಯ ಆನಂದವಾಗಿ ಹರಿದಿದೆ. ತನ್ನ ಕಂದವ್ವ ಮತ್ತು ಅವಳ ಮಕ್ಕಳು ಬೆಳೆಯಲಿ ಎಂದು 'ನಿನ್ನ ತಳಿ ಬಳೆಯಲೌ' ಎಂದು ಹಾರೈಸಿ, 'ಆಟಪಾಟಗಳಲ್ಲಿ ನೋಟಕೂಟಗಳಲ್ಲಿ ನೆಲೆಗೊಂಡ ಗೊಂಬಿ ಜೋಜೋ' ಎಂದು ಹಾಡಿದ್ದಾಳೆ. ಇದೇ ರೀತಿಯ ಕಲ್ಪನೆಯಲ್ಲಿ ಅನಂತರದ ಕವಿಗಳು ಹಲವಾರು ಕವನಗಳನ್ನು ರಚಿಸಿದ್ದಾರೆ. ಕುವೆಂಪು ಅವರ 'ಜೈಭಾರತ ಜನನಿಯ ತನುಜಾತೆ, ಜಯಹೇ ಕರ್ನಾಟಕ ಮಾತೆ' ಎಂಬುದು ಕರ್ನಾಟಕದ ನಾಡಗೀತೆಯಾಗಿದೆ.

**ಗಂಡಸಾದರೆ ನಿನ್ನ ಬಲಿಕೊಡುವೆಯೇನು?**

ಈ ರೀತಿ ಕನ್ನಡಮಯವಾದ ಬೇಂದ್ರೆಯವರು ಕನ್ನಡವನ್ನು ಆರಾಧಿಸುತ್ತ ಕನ್ನಡತಾಯಿಯನ್ನು ಹೊಗಳುತ್ತ ಕನ್ನಡಿಗರನ್ನು ಎಚ್ಚರಿಸುವ ಕೆಲಸವನ್ನು ಮಾಡಿದರು. ಅವರಿಗೆ ಕನಸು ಮನಸಿನಲ್ಲಿಯೂ ಕನ್ನಡ

ಆವರಿಸಿತ್ತು. ಆದಕಾರಣ ೧೯೨೫ರಲ್ಲಿ 'ಕನಸಿನೊಳಗೊಂದು ಕಣಸು'[29] ಎಂದು ಕನ್ನಡತಾಯಿ ಮತ್ತು ಮಕ್ಕಳ ಸಂವಾದದ ರೀತಿಯ ಕವನ ರಚಿಸಿದ್ದಾರೆ. ಆ ಕವನದ ಶೀರ್ಷಿಕೆಯ ಕೆಳಗೆ ಆವರಣದಲ್ಲಿ (ಈಗಿನ ಕನ್ನಡನಾಡಿನ ಮತ್ತು ಕನ್ನಡಿಗರ ಸ್ಥಿತಿಯ ಚಿತ್ರ) ಎಂದು ನಮೂದಿಸಿದ್ದಾರೆ. ಅದು ಕನ್ನಡಿಗರ ಮಾನಸಿಕ ಸಿದ್ಧತೆಯನ್ನು, ಕನ್ನಡದ ಮಕ್ಕಳು ಮಾಡಬೇಕಾದ ಯೋಗಸಾಧಕವಾದ ಕನ್ನಡದ ಸೇವೆಯನ್ನು ತಿಳಿಸುವ ಕವನವಾಗಿದೆ. ಹಿಂದಿನ ಕನ್ನಡನಾಡಿನ ವೈಭವವನ್ನು ನೆನೆದು ಅಂದಿನ ಸ್ಥಿತಿಯನ್ನು ಕುರಿತು ಬರೆದ ಕೆಚ್ಚಿನ ಕವನ ಅದಾಗಿದೆ. ಆ ಸಂವಾದವೇ ರೋಮಾಂಚನವನ್ನುಂಟುಮಾಡುತ್ತದೆ.

"ಯಾರು ನಿಂದವರಲ್ಲಿ ತಾಯೆ" ಎಂಬೆ.
"ಯಾರು ಕೇಳುವರೆನಗೆ, ಯಾಕೆ ತಂದೆ?"

* *

"ನೀನಾರ ಮನೆಯವಳು ಮುತ್ತೈದೆ ಹೇಳು".
"ನಾನಾರ ಮನೆಯವಳೊ ಬಯಲನ್ನೆ ಕೇಳು".

ಈ ನುಡಿಯಲ್ಲಿ ಅಂದು ಹಂಚಿಹರಿದುಹೋಗಿದ್ದ ಕರ್ನಾಟಕ ಮತ್ತು ಕನ್ನಡತಾಯಿಗೆ ತನ್ನದೇ ಆದ ಒಂದು ರಾಜ್ಯವಿಲ್ಲದ ಸ್ಥಿತಿಯನ್ನು ಧ್ವನಿಸುತ್ತ, ಅದಕ್ಕಾಗಿ ತನ್ನ ನೆಲದ ನಾಡಿಗನನ್ನು ಎಚ್ಚರಿಸುವ, ಅವನಲ್ಲಿ ತನ್ನ ನಾಡು-ನುಡಿಯ ಬಗ್ಗೆ ಅರಿವು ಮೂಡಿಸುವ ಭಾವ ವ್ಯಕ್ತವಾಗಿದೆ. ಅದನ್ನು ತಿಳಿಯಲು ಮಕ್ಕಳು ಯೋಗಶಾಲಿಗಳಾಗಿ ತ್ಯಾಗಶೀಲರಾಗಬೇಕು ಎಂದಿದೆ. ಆ ಮನಸ್ಸು ಮಕ್ಕಳಲ್ಲಿ ರೂಪುಗೊಂಡಾಗ, ನಾಡು ಕಟ್ಟುವ ಕಾರ್ಯ ಯಶಸ್ವಿಯಾಗುತ್ತದೆ ಎಂಬ ಚಿಂತನೆಯಿದೆ. ಆ ಸಂವಾದ ಮುಂದುವರಿಯುತ್ತದೆ.

"ಹಿಂಜರಿವ ಅಂಜಿಕೆಯು ಹಿಡಿದಿಹುದು ಕೈಯ".
"ಮುಂಜರಿವ ಹುರುಪಿನೊಡ ಮುಂದೆ ಬಾರಯ್ಯ".
"ಇಲ್ಲೆನ್ನಲಾರೆ ನಾನಹುದೆನ್ನಲಮ್ಮೆ"
"ಬಲ್ಲವರು ದೈವವನು ಪರಿಕಿಸುವರೊಮ್ಮೆ !"
"ಚಂಡಿ ಚಾಮುಂಡಿ ಪೇಳ್ ಬೇಕಾದುದೇನು?"
"ಗಂಡಸಾದರೆ ನಿನ್ನ ಬಲಿಕೊಡುವೆಯೇನು?"

ಬೇಂದ್ರೆಯವರಿಗೆ ಕನ್ನಡವನ್ನು ಕುರಿತು ಮಾತಾಡುವುದು 'ಒಡನುಡಿ'. ಜೊತೆಗೆ ಸ್ನೇಹಿತರೊಡನೆ ಆಟಪಾಠಗಳಲ್ಲಿ ಸಹಭೋಜನದಲ್ಲಿ ಬೆರೆತು ಹಾಡಿ ಅದನ್ನು ಆಗುಮಾಡುವಂತೆ ಮಾಡುವ ಕ್ರಿಯಾಶೀಲ ರೀತಿ. ಅದನ್ನು ಶಿಲ್ಪಿ ರೂಪಿಸಿದಂತೆ ಆ ಕಲೆಯಲ್ಲಿ ಪರಿಣತನಾಗಿ, ತಾಳ್ಮೆ, ಸಹನೆ, ಸಹಕಾರ, ತದೇಕಚಿತ್ತದಿಂದ ಸಾಧಿಸಬೇಕು. ಆದಕಾರಣ ಅದೇ ಬಂಧದ ಷಟ್ಪದಿಯಲ್ಲಿ, 'ಒಡನುಡಿ'[30] ಯನ್ನು ಕವಿ ರಚಿಸಿದ್ದಾರೆ. ಅದು ೧೯೩೮ರಲ್ಲಿ ಪ್ರಕಟವಾದ 'ಉಯ್ಯಾಲೆ' ಕವನಸಂಕಲನದಲ್ಲಿದೆ. ಈ ಕವನದ ಮೊದಲ ನುಡಿಯಲ್ಲಿಯೇ ಆಶಾಭಾವನೆ ಗರಿಗೆದರಿ ಹೊಮ್ಮುತ್ತದೆ: 'ದುಃಸಾಧ್ಯ ಸಂಭಾವ್ಯವೆಂಬ ಸೊಲ್ಲಿನ ಗುಲ್ಲುಗುಡುಗುತಿದೆ'. ಅವರಿಗೆ ಕನ್ನಡನಾಡಿನ ಸ್ಥಿತಿ ಒಡೆದ ಕನ್ನಡಿಯಂತೆ ಕಂಡಿದ್ದು ಅದನ್ನು ಕಟ್ಟಬಲ್ಲ ಕೈಗಾಗಿ ಹುಡುಕುವ ಸಂಘಟನಾ ಮನವಿದೆ. ಗತವೈಭವವನ್ನು ಮರೆತು ತಮ್ಮತನವನ್ನು ಲೆಕ್ಕಿಸದ ಜನರನ್ನು ಛೇಡಿಸುತ್ತಾರೆ:

'ದನದ ಜಂಗುಳಿಯಂತೆ ಹಿಂಡಾಗಿ, ಮನ ತಡೆದು
ನಿಂತಿದೆ, ನಿರಾಯಾಸ ಮೆಲುಕು ಹಾಕುತ ಸಿಡಿದು.'

ಆದರೂ ಅವರಿಗೆ ನಾಡನ್ನು ಕಟ್ಟುವ ಶಕ್ತಿ ಕುಂದಿಲ್ಲ. 'ಒಡನುಡಿ' ನುಡಿಯುತ್ತಾ ಸಾಗುತ್ತಾರೆ:

"ಶ್ರೀ ಕನ್ನಡದ ಧೂಳಿ ಬಾಂದೊರೆಯೊಳೋಕುಳಿಯ-
ನಾಡೀತು. ಸೂರ್ಯಮಾಲೆಯ ರಾಸಲೀಲೆಯದು
ಕನ್ನಡದಿ ಬಣ್ಣನೆಯ ಪಡೆದೀತು, ಪರಿಶುದ್ಧ
ಕನ್ನಡದ ಕೀರ್ತಿ ನಾಡಿಗೆ ಪ್ರಭಾವಳಿಯ ಕುಡಿ -
ಯೊಡೆಸೀತು. ಓಂ ಸ್ವಸ್ತಿ."

**ಮೆಟ್ಟಿ ನಡೆದುದೆ ಕನ್ನಡ, ಮುಟ್ಟಿ ನುಡಿದುದೆ ಕನ್ನಡ**

ಬೇಂದ್ರೆಯವರು ಭಾರತಕ್ಕೆ ಸ್ವಾತಂತ್ರ್ಯ ಬಂದ ಮರುವರ್ಷ ಮಹಾನವಮಿ ಬೆಳಗು ೧೯೪೮ರಲ್ಲಿ ಕನ್ನಡಿಗರನ್ನು ಪ್ರಶ್ನಿಸುವಂತೆ ಬರೆದಿರುವ ಕವನ 'ನೀವಾರಲಾ'[31] ಧ್ವನ್ಯಾರ್ಥದಲ್ಲಿದೆ. ಅವರು ಕರ್ನಾಟಕವನ್ನು, ಕನ್ನಡವನ್ನು ಕನ್ನಡಿಗರನ್ನು ಒಂದುಗೂಡಿಸಿ ಎಚ್ಚರಿಸುವ ರೀತಿಯಲ್ಲಿ ಹೀಗೆ ನುಡಿದಿದ್ದಾರೆ:

'ನೀವಾರಲಾ ನೀವಾರಲಾ ನೀವಾರಲಾಽ !
ಯಾರೋಽ ಯಾರೋಽ ......'

ಈ ನುಡಿ ಆಶ್ಚರ್ಯಸೂಚಕವಾಗಿ ಸೂಚಿತವಾಗಿದ್ದರೂ, ಮುಂದಿನ ಯಾರೋಽ ಎಂಬ ಪ್ರಶ್ನಾರ್ಥಕ ನುಡಿ ಪ್ರಶ್ನಾರ್ಥಕ ಚಿಹ್ನೆ ಇಲ್ಲದೆ ಮುಂದುವರಿದಂತೆ ಸಾಗಿರುವುದು; ಬೇಂದ್ರೆಯವರು ಓದುಗರನ್ನು ತನ್ನ ಆಲೋಚನೆಯ ಸೆಳೆತಕ್ಕೆ ಎಳೆದು ತನ್ನ ವಿಚಾರದ ಕೇಂದ್ರಕ್ಕೆ ಕೊಂಡೊಯ್ಯುವ ಶೈಲಿಗೆ ಉತ್ತಮ ಉದಾಹರಣೆಯಾಗಿದೆ. ಹೀಗೆ ಕೇಳುತ್ತ ಅವರು ಯಾರೆಂಬುದನ್ನು ಸ್ಪಷ್ಟಗೊಳಿಸುತ್ತ ಸಾಗುತ್ತಾರೆ:

'ನೀವು ತುಳಿವೀ ತೊಡೆಗಳೋ
ನಿಮ್ಮೆಡೆಗಳೋ |
ನೀವು ಆಡುವ ಬಾಯಿಯೋ
ಅದೆ ತಾಯಿಯೋ !
ನೀವು ಅಪ್ಪುವ ತೋಳೊಳೇ
ನೀವು ಬದುಕುವ ಬಾಳೊಳೇ
ತಾಯಿ - ಎದೆ ತುಂಬಿರುವದಣ್ಣಾ
ಬರಿದೆ ಮರುಗುವಿರೇತಕೆ?
ಬನ್ನಿ ತಾಯಿಯ ಜೀತಕೆ.
ಮೆಟ್ಟಿ ನಡೆದುದೆ ಕನ್ನಡ
ಮುಟ್ಟಿ ನುಡಿದುದೆ ಕನ್ನಡ.'

ಮೆಟ್ಟಿ, ಮುಟ್ಟಿ ತನ್ನದಾಗಿರುವ ಕನ್ನಡವನ್ನು ಅರಿತು ಕನ್ನಡಿಗರು ತಮ್ಮ ರಾಜ್ಯವನ್ನು ತಾವು ಕಟ್ಟಿಕೊಳ್ಳಬೇಕು, ಅದಕ್ಕೆ ಒಳ್ಳೆಯ ಅವಕಾಶ ಬಂದಿದೆ ಎಂದು ಹೇಳಿದ್ದಾರೆ. ಕನ್ನಡವು ಧಾರ್ಮಿಕ, ಸಾಹಿತ್ಯಕ, ರಾಜಕೀಯ ಸಂಸ್ಕೃತಿಸಂಪನ್ನವಾಗಿರುವುದನ್ನು ಸಾರುತ್ತ ಅದು ಜನಸಾಮಾನ್ಯರ ಕನ್ನಡ ಎಂದು ಸಾರಿದ್ದಾರೆ.

'ತಮಿಳರಣ್ಣಾ ತೆಲುಗ ತಮ್ಮಾ ಕೇರಳದ ಕಿರಿಸೋದರಾ
ಆರದಿರಲೈ ಆದರಾ.
ಮಹಾರಾಷ್ಟ್ರನಿರು ನೀನುತ್ತರಾ

ನೆರೆಹೊರಿಕೆಯಾಗಲಿ ಹತ್ತಿರಾ;
ಬೆಳೆಸೋಣ ಇಬ್ಬರ ಎತ್ತರಾ.'

ಎಂದು ಕರ್ನಾಟಕದ ಗಡಿಯನ್ನು ಚಿತ್ರಿಸಿಕೊಟ್ಟು ಕರ್ನಾಟಕ ರಾಜ್ಯದ ಉದಯವನ್ನು ಕಲ್ಪಿಸಿಕೊಂಡಿದ್ದಾರೆ. ಹೀಗೆ ರೂಪುಗೊಳ್ಳುವ ರಾಜ್ಯದ ಕನ್ನಡಿಗರು ಅರ್ಥಪೂರ್ಣವಾಗಿ ಬಾಳಬೇಕು, ಆದರ್ಶವಂತರಾಗಿರಬೇಕು ಎಂದು ಆಶಿಸಿ ನುಡಿದಿದ್ದಾರೆ:

'ಮರ್ಯಾದೆ ಮೀರದೆ ನಡೆಯಿರಿ
ವಿಶ್ವ ತಾಳವ ಹಿಡಿಯಿರಿ.'

**ಒಂದೆ ಕರ್ನಾಟಕ**[32]

ಕರ್ನಾಟಕವನ್ನು ಕುರಿತ ಹಾಡುಗಳಲ್ಲಿ ತುಂಬಾ ಜನಪ್ರಿಯವಾದ ಗೀತ ಇದಾಗಿದೆ. " 'ಒಂದೇ ಕರ್ನಾಟಕ' ಎಂಬ ಕವನ ಪರಿಹಾಸ ವಿನೋದ ಎಂಬಂತೆ ಬರೆದರೂ ಇಂದು ಅದು ಪರಮಾರ್ಥವಾಗಿ ನಿಂತಿದೆ" ಎಂಬ ಭಾವಸಂದರ್ಭ ಸೂಚನೆ ಹೊಂದಿದೆ. ಕವಿ ಪರಿಹಾಸ-ವಿನೋದ ಮನದವನಾದರೂ ಚಿಂತನೆಯು ಔನ್ನತ್ಯದ ಶಿಖರದಲ್ಲಿ ನಿಂತಿರುತ್ತದೆ ಎಂಬುದಕ್ಕೆ ಇದೊಂದು ಉದಾಹರಣೆಯಾಗಿದೆ. ಕವಿ ಆಶಾಮಯವಾಗಿ ನುಡಿದ ನುಡಿ ಸಹೃದಯರಿಗೆ ದೀಪ್ತಿಚೇತನವಾಗಿದೆ.

'ಒಂದೇ ಒಂದೇ ಒಂದೇ ಕರ್ನಾಟಕ ಒಂದೇ ! ||ಪಲ್ಲ||
ಇಂದೇ ಮುಂದೇ ಎಂದೇ ಕರ್ನಾಟಕ ಒಂದೇ
ಜಗದೇಳಿಗೆಯಾಗುವದಿದೆ ಕರ್ನಾಟಕದಿಂದೆ ||
ಇಲ್ಲಿಯ ಜನ-ಮನ-ಭಾಷೆಯು ಕನ್ನಡವದು ಒಂದೇ
ಒಂದೇ ಜನವೂ ಮನವೂ ಕನ್ನಡಿಗರು ಎಂದೇ
ಕುಲವೊಂದೇ ಸ್ಥಲವೊಂದೇ ನೀತಿಯ ನೆಲೆಯೊಂದೇ
ಹೀಗೆನ್ನದ ಹೆರವರು ಅವರಿದ್ದರು ಒಂದೇ;
ಇರದಿದ್ದರು ಒಂದೇ !
ಕನ್ನಡವೆಂದೂ ಒಪ್ಪದು ಕರ್ನಾಟಕನಿಂದೇ
ಒಂದೇ ಒಂದೇ ಒಂದೇ ಕರ್ನಾಟಕ ಒಂದೇ.'

ಈ ಕವನದ ಮೂರನೇ ಚರಣದಲ್ಲಿ ಬಂದಿರುವ 'ಉಗ್ಗಡಿಸಿರಿ ನಾಸ್ತಿಗೆ ಜಯ ಜಯ ಜಯ ಜಯವೆಂದೇ' ಎಂಬ ಪದದ 'ನಾಸ್ತಿ' ಪದ ನಾಸ್ತಿಸಮ್ ಅನ್ನು ಕುರಿತದ್ದು. ಆಗ ಕವಿ ಬೇಂದ್ರೆಯವರು ತಮ್ಮ ಹೆಸರನ್ನು ಜರ್ಮನೀಕರಣಗೊಳಿಸಿ 'ಹರ್‌ಬಂಡರ್' ಎಂದು ಕರೆದುಕೊಂಡುದು ಹಳೆಯ ಘಟನೆ. ಈ ಸಮಸ್ಯೆ ಹೊತ್ತ 'ಜೀವಿ' ಕುಲಕರ್ಣಿ ಅವರಿಗೆ ಬೇಂದ್ರೆ ಅವರು ನೀಡಿದ ವಿವರ ಈ ರೀತಿ ಇದೆ: "ಇದಕ್ಕೆ ನಾನು ಟಿಪ್ಪಣಿಯಲ್ಲಿ 'ಪರಮಾರ್ಥ' ಎಂದು ಬರೆದದ್ದು. ಪರಮ + ಅರ್ಥ ಇದರಲ್ಲಿ ನೀವು ಕಾಣಬಹುದು. ಕರ್ನಾಟಕದಲ್ಲಿ 'ನಾಸ್ತಿ' ಪಂಥ ಬರಲಿ ಬಿಡಲಿ, ಇದನ್ನು ಈ ಕವಿತೆಯ ಪೂರ್ವ ಹಿನ್ನೆಲೆ ಇಲ್ಲದೆಯೇ ಅರ್ಥೈಸಬಹುದು. ನಾವು ಜಯಜಯಕಾರ ಮಾಡುವ 'ನಾಸ್ತಿ' ಎಂತಹುದು ಎಂಬುದಕ್ಕೆ ಎರಡನೆಯ ಚರಣದಲ್ಲಿ ಉತ್ತರವಿದೆ.

'ಕನ್ನಡ ಮಾತೇ ಮಾತೆಯು, ಕರ್ನಾಟಕ ಒಂದೇ
ಅದು ದೈವತ ಅದು ಜೀವಿತ ಒಪ್ಪಿಹೆವದುವೆಂದೇ

ನಮ್ಮದು ನಿಮ್ಮದು ಅವರದು ಈ ಆಸ್ತೀ ಪಾಸ್ತೀ.
ನಾಡಿನ ತಾಯಿಗೆ ಸೇರಿದೆ, ಬೇರೆಯ ಮನೆನಾಸ್ತೀ
ಕನ್ನಡ ಕಾಯಕದಲ್ಲಿಲ್ಲವು ಕಮ್ಮೀ ಜಾಸ್ತೀ ||
ಇದನೊಪ್ಪದ ಹೆರವರು ಅವರಿದ್ದರು ಒಂದೇ,
ಇರದಿದ್ದರು ಒಂದೇ !
ಕರ್ನಾಟಕ ಹಿತ-ವಿಹಿತವು ಕನ್ನಡ-ಕುಲದಿಂದೇ
ಒಂದೇ ಒಂದೇ ಒಂದೇ ಕರ್ನಾಟಕ ಒಂದೇ.'

ಎಲ್ಲವೂ ತಾಯಿಗೆ ಸೇರಿದೆ, ಬೇರೆಯದು 'ನಾಸ್ತಿ', ಆ 'ನಾಸ್ತಿ' ಭಾವಕ್ಕೆ ಜಯವೆಂದು ಹೇಳಿದೆ ಎಂಬ ಅರ್ಥ ತೆಗೆದುಕೊಂಡರೆ ಈ ಕವಿತೆಗೆ ಹೊಸ ಸಂದರ್ಭ ಬರುತ್ತದೆ. ಆಗ ಇದರಲ್ಲಿ ಪರಮಾರ್ಥ ದೊರೆಯುತ್ತದೆ."

ಬೇಂದ್ರೆಯವರ ಈ ನುಡಿಯ ನಂತರ 'ಜೀವಿ' ಕುಲಕರ್ಣಿಯವರು ತಮ್ಮ ಅಭಿಪ್ರಾಯವನ್ನು ಈ ರೀತಿ ವ್ಯಕ್ತಪಡಿಸಿದ್ದಾರೆ: "ಈ ವಿವರಣೆ ಕೇಳಿದಾಗ ನನಗೆ ಸಮಾಧಾನವಾಯಿತು. 'ಕನ್ನಡವೂ ಭಾರತವೂ ಜಗವೆಲ್ಲವು ಒಂದೇ', 'ಜಗದೇಳಿಗೆಯಾಗುವದಿದೆ ಕರ್ನಾಟಕದಿಂದ' ಎಂಬ ಪ್ರವಾದಿಸದೃಶ ಉಕ್ತಿಗಳಿರುವ ಈ ಕಾವ್ಯವಿನೋದಕ್ಕೆ ಪರಿಹಾಸಕ್ಕೆ ಬರೆದದ್ದೇ? ಎಂಬ ಪ್ರಶ್ನೆಗೆ ಸಮಾಧಾನ ದೊರೆಯಿತು. 'ಋಷಿಮೂಲದಂತೆ ಕವಿತೆಯ ಮೂಲವನ್ನೂ ನೋಡಬಾರದು!' ಎಂಬ ವಿಚಾರ ಹೊಳೆದು ಹೋಯಿತು."[33] ಈ ವಿವರವನ್ನು ನೋಡಿದ ನಂತರ ಶಂಕರ ಮೊಕಾಶಿ ಪುಣೇಕರ ಅವರ ನುಡಿ "ಕವಿಯು ಶಬ್ದವನ್ನು ಅರ್ಥದ ಬಂಧನದೊಳಗಿಂದ ಪಾರು ಮಾಡಿ ಅದನ್ನು ಭಾವರೂಪಕ್ಕೆ ಅಣಿಗೊಳಿಸುವನು"[34] ಎಂದಿರುವುದು ಎಷ್ಟು ಸತ್ಯ ಎಂಬುದು ಸ್ಪಷ್ಟವಾಗುತ್ತದೆ.

**ಕೇಳಿ ನುಡಿ, ಕಂಡು ನಡೆ**

ಬೇಂದ್ರೆಯವರಿಗೆ ಕನ್ನಡವೆಂದರೆ ಕನ್ನಡ ಜನಾಂಗದ ಪ್ರಗತಿ, ಕನ್ನಡ ಜನಾಂಗದ ಶ್ರೇಷ್ಠ ಬಾಳು. ಅದಕ್ಕಾಗಿ ಆಶಿಸಿ ಅವರು ಹಲವಾರು ಕವನಗಳನ್ನು ರಚಿಸಿದ್ದಾರೆ. 'ಶೃಂಗೇರಿಯ ಶಾರದೆಯ ಕರುಣೆಯಲಿ ಕನ್ನಡಕೆ ಜಯವಾಗಲಿ'[35] ಎಂದಿದ್ದಾರೆ. ಅವರು 'ಕೇಳಿ ನುಡಿ', 'ಕಂಡು ನಡೆ'[36] ಎಂಬ ಕವನದಲ್ಲಿ:

'ಕೇಳಿ ನುಡಿ, ಕಂಡು ನಡೆ
ಓ ಕನ್ನಡ ಕಂದಾ !
ಇದೆ ಬಾಳಿನಾ ಅಂದಾ.
ದಾಸರಾಗ ಕಾಲದಲ್ಲಿ
ಶರಣ-ವಚನ-ತಾಲದಲ್ಲಿ
ತೀರ್ಥಂಕರ ಉದಯವು
ಅದೆ ಕನ್ನಡ ಹೃದಯವು.

☆ ☆

ಕೇಳಿ ನುಡಿ ಶ್ರುತಿಯ ಹಿಡಿ
ಕಂಡು ನಡೆ ದರ್ಶನದೆಡೆ
ಶ್ರುತಿ ದರ್ಶನ ಸಂಮತ

ಅದು ಕನ್ನಡ ಒಂಮತ.

☆ ☆

ಹೃದಯ ಸಿದ್ಧವಿರದ ಬದುಕು

ಬರಿ ನಡತೆಗೆ ದಕ್ಕದು,

ಕಣ್ಣಾಣದ ನಡೆ ಕುರುಡು

ಕಿವಿ ಹಿಡಿಸದ ನುಡಿ ಬರಡು

ಇದೆ ಕನ್ನಡ ಧ್ರುವಪದ

ಭಾರತದೀ ಜನಪದ.'

ಎಂದು ನುಡಿದು ಕನ್ನಡಿಗರು ಅರ್ಥಪೂರ್ಣವಾಗಿ ಬದುಕಬೇಕು ಎಂದು ಹೇಳಿದ್ದಾರೆ. ಜಾನಪದ ಛಂದದಲ್ಲಿ 'ಕನ್ನಡದಪ್ಪನ ಕೋಲು' ಎಂಬ ಕನ್ನಡ ರಾಷ್ಟ್ರಗೀತೆ ರಚಿಸಿದ್ದಾರೆ. ಅದು 'ಕೋಲುಗಳ ತಾಳಕ್ಕೆ ಹಾಡುತ್ತ ನೃತ್ಯ ಮಾಡುವ ಕೃಷ್ಣ ಮತ್ತು ಗೋಪಿಯರ ಶೃಂಗಾರ ನರ್ತನವಾದ ರಾಸಲೀಲಾ ನೃತ್ಯಕ್ಕೆ ಸಮಾನವಾದ ಆನಂದಗೀತಪ್ರಕಾರ'[37]ವಾಗಿದೆ. ಕೋಲಾಟದಲ್ಲಿ ಹಾಡಿ ಕುಣಿದು ನಲಿಯಬೇಕಾಗಿದೆ.

'ಕೋಲು ಕೋಲಿನ ಆಟ, ಕೂಡಿ ಕೊಳಲಿನ ಕೂಟ,

ರಾಸಲೀಲೆಯ ಕೋಲ |

☆ ☆

ನವ್ಯನಂದನ ಮಾಟ, ದಿವ್ಯ ಹೃದಯದ ತೋಟ,

ಕರುವಳ್ಳಿಯ ಕೋಲ |

ಕಾವ್ಯರಸದ ಕೂಟ; ನೇಹದುಸುರಿನ ತೀಟ,

ತಿರುಳು ಮಲ್ಲಿಗೆಯ ಕೋಲ |'[38]

ಬೇಂದ್ರೆಯವರ ಕನ್ನಡನಾಡಿನ, ಕನ್ನಡದ ಪ್ರೀತಿ ಅದ್ವಿತೀಯವಾದುದು. ಅದರಲ್ಲಿಯೇ ಜೀವನದ ಸಾರ್ಥಕತೆ ಕಂಡಿರುವ ಕಾವ್ಯರ್ಷಿ ಅವರು. ಅವರಿಗೆ ಕನ್ನಡ ಎಂದಾಗ ಅದರ ಇತಿಹಾಸ, ಸಂಸ್ಕೃತಿ, ಕಲೆ, ಜೀವನದರ್ಶನ ಕಣ್ಮುಂದೆ ಕಟ್ಟಿದಂತಾಗುತ್ತದೆ. ಆದಕಾರಣ ಅವರು ಮನದುಂಬಿ ಹಾಡಿದ್ದಾರೆ:

**ನನ್ನದು ಈ ಕನ್ನಡನಾಡು**

'ನನ್ನದು ಈ ಕನ್ನಡನಾಡು ನನ್ನದೋ !

ಅವರಿವರದೆಂದು ಎಂದೂ ಎನ್ನದೋ !

ಅದು ನನ್ನದೆಂತು ಹಾಗೇಽ ನಿನ್ನದೋ !

ನನ್ನದು ಈ ಕನ್ನಡ ನಾಽಡು

ಈ ಕನ್ನಡ ನಾಡು.

☆ ☆

ಕಲ್ಯಾಣ ಕಟ್ಟಿ, ಉಳವಿಯನು ಮುಟ್ಟಿ, ದಿಗ್ದೇಶ ಮೆಟ್ಟಿ

ಲಿಂಗಾಂಗ ಅಪ್ಪಿದಾ

ಮಾತೆಲ್ಲ ಜ್ಯೋತಿ, ಸರ್ವಜ್ಞ ರೀತಿ, ಬರಿದೇಕೆ 'ನೇತಿ'

ಭವಿಸಂಗಽ ತಪ್ಪಿದಾ

ಆ ಕನ್ನಡ ನಾಡು
ನನ್ನದು.'[39]

ಕರ್ನಾಟಕದ ಏಕೀಕರಣಕ್ಕಾಗಿ ದುಡಿದವರ ಕರ್ನಾಟಕ ದರ್ಶನಕ್ಕೂ ಹಾಗೂ ಸ್ವಾತಂತ್ರ್ಯೋತ್ತರ ಕರ್ನಾಟಕ ತಾಳಿದ ನಿಲುವಿಗೂ ಅಜಗಜಾಂತರವಾಗಿರುವುದನ್ನು ಕಂಡ ಬೇಂದ್ರೆ ವ್ಯಥೆಯಿಂದ ನುಡಿದಿದ್ದಾರೆ:

'ಇಂದಂದಿನದಲ್ಲಿ ಹಾಡು
ನಾಡಿದಿನಾ ಕನ್ನಡನಾಡು
ಆ ಕನ್ನಡನಾಡು ನನ್ನದು
ನನ್ನದು ಈ ಕನ್ನಡ ನಾಡು'[40]

ಪ್ರಾಂತೀಯ ವಿಭಜನೆ, ಒಳನಾಡ ಕನ್ನಡಿಗರು ಮತ್ತು ಹೊರನಾಡ ಕನ್ನಡಿಗರು ಎಂಬ ಭಾವನೆ ಕನ್ನಡಿಗರ ಐಕ್ಯಕ್ಕೆ ಆಘಾತ ಮಾಡದೇ ಬಿಡದು. ಕನ್ನಡಿಗರು ಎಲ್ಲೇ ಇರಲಿ ಅವರು ಭಾರತೀಯರು - ವಿಶ್ವದ ನಾಗರಿಕರು ಎಂಬ ಬೀಜಕ್ಕೆ ಹುಳಹತ್ತಬಾರದು. ಭತ್ತದ ಮೇಲೆ ಇರುವ ಕವಚ - ತುಷವು ಬೀಜವನ್ನು ಕಾಪಾಡುವಂತೆ ಕರ್ನಾಟಕವು ಕನ್ನಡ ಬೀಜವನ್ನು, ಬೀಜದ ಐಕ್ಯ ಸತ್ತ್ವವನ್ನು ಕಾಪಾಡಬೇಕು. ಆ ಸತ್ತ್ವವು -

'ಭಾರತೀಯ ಜೋಡಿ, ಕನ್ನಡದ ಮೋಡಿ, ಭೂದೇವಿ ಮಾಡಿ
ಎರಕವನೆ ಹೊಯ್ದಿರೆ
ರಸದೊಳಗೆ ರಸವು ಹಲ ಬಣ್ಣ ಹೊಸವು, ಬೀಜವನೆ ತುಷವು
ತಾಯಾಗಿ ಕಾಯ್ದಿರೆ '[41]

ಎಂಬ ಭಾವ ಪ್ರಜ್ವಲಿಸಬೇಕಾಗಿದೆ. ಬೇಂದ್ರೆ ದರ್ಶನದ ಕನ್ನಡನಾಡು ಇನ್ನೂ ಹುಟ್ಟಿಲ್ಲ ಎಂಬ ಭಾವ ಈ ಕವನದ ಭಾವವಾಗಿದೆ. ಕನ್ನಡಿಗರ ಮನಸ್ಸು ದಿನದಿನಕ್ಕೆ ಸಂಕುಚಿತವಾಗುತ್ತಿದೆ, ಐಕ್ಯ ಹಾಳಾಗುತ್ತಿದೆ, ವ್ಯಾಪಕತೆಯನ್ನು ಕಳೆದುಕೊಳ್ಳುತ್ತಿದೆ ಎಂಬ ವಿಷಯ - ಭೂದೇವಿ, ಭಾರತ, ಕನ್ನಡಗಳ ಎರಕದ ಮೂರ್ತಿ ಸಿದ್ಧಗೊಳ್ಳಬೇಕು ಎಂಬಲ್ಲಿ ಬೇಂದ್ರೆ ಸ್ಪಷ್ಟಪಡಿಸಿದ್ದಾರೆ. ಬೇಂದ್ರೆಯವರು ಕವನವನ್ನು ಬರೆಯುವುದನ್ನು ಬಿಟ್ಟರೂ ಬಿಡಬಹುದು ಆದರೆ ಕನ್ನಡದ ಜಯಘೋಷವನ್ನು ಬಿಡಲಾರರು ಎಂಬುದು ಅವರ 'ಯಾರಿಗೆ ಬೇಕಾಗೈತಿ ನಿಮ್ಮ ಕವಿತಾ?' ಎಂಬ ಕವಿತೆಯಿಂದ ತಿಳಿಯುತ್ತದೆ. ಜೀವನ ಮುಖ್ಯ ಎಂಬುದನ್ನು ಹೇಳುತ್ತಾ ಕವನ ಪ್ರಾರಂಭಿಸಿದ ಕವಿ, ಆ ಕವನದ ಕೊನೆಯಲ್ಲಿ ಹೇಳಿದ್ದಾರೆ:

'ಒಗಿ ಆ ಕವಿತಾ
ತಾ ಇಲ್ಲಿ, ಕೈ ತಾ
ಹಾಕು ಕೈಮ್ಯಾಲೆ ಕೈ
ಅನ್ನು, "ಕರ್ನಾಟಕ ಮಾತಾಕು ಜೈ" '[42]

ಬೇಂದ್ರೆಯವರ ಕವನ 'ಕಿಡಿಗಳು[43] ತನ್ನ ಹೃದಯದಲ್ಲಿರುವ ಕನ್ನಡ ಕಿಡಿಯನ್ನು ಕಾರುತ್ತ, ಕನ್ನಡ ಜನ ತಮ್ಮ ಭವವನ್ನು ರೂಪಿಸಿಕೊಳ್ಳಬೇಕು ಎಂದು ಆಶಿಸುತ್ತ, ಕನ್ನಡತನ ನಿತ್ಯನೂತನ ಎಂದಿದ್ದಾರೆ.

'ಕನ್ನಡದ ಜನ ತಮ್ಮ ಭವವನು ರೂಪಿಸುತ್ತಿಹರೆಂದಿಗೂ
ಕನ್ನಡದ ನುಡಿ ಮಿಡಿದು ಹೃದಯಂಗಮವು ಇಂದಿನ ಮಂದಿಗೂ
ಕನ್ನಡದ ನಡೆ ಸಾಗಿ ಬಂದಿದೆ ಎಂದಿನಿಂದಲೊ ಇಂದಿಗೂ
ಕನ್ನಡದತನ ನಿತ್ಯನೂತನ ಯುಗ ಯುಗ ಪ್ರತಿಸಂಧಿಗೂ.'

ಅವರು 'ಯುಗಾದಿ'[44] ಯನ್ನು ನೆನೆದರೂ ಕನ್ನಡವನ್ನು ನೆನೆಯುತ್ತಾರೆ. ಆ ಕವನದಲ್ಲಿ ಜಗವನ್ನು, ಜನರ ಬದುಕನ್ನು ಚಿತ್ರಿಸತೊಡಗಿ 'ಅನ್ನ ಅನಂತಾದರ | ಧರ್ಮಾರ್ಥ ಸರೀ ಹಾದೀ ಹಿಡಧಾಂಗ' ಎಂದು ಸಾರುತ್ತ,

'ಕನ್ನಡದ ಬಾವುಟಾ ಮುನ್ನಡೀ ಗುಡೀ ಕಟ್ಟ್ಯದ
ಹೃದಯದಾಗ ಮೂಡಲ ಮೊಳಕಿ ಹುಟ್ಟ್ಯದ'.

ಎಂದು ತನ್ನ ಹೃದಯದಲ್ಲಡಗಿರುವ ಕನ್ನಡದ ಮಹಿಮೆಯನ್ನು ಹಾಡಿದ್ದಾರೆ.

**ಭಾರತಮಾತೆ**

ಬೇಂದ್ರೆಯವರು 'ಭರತಮಾತೆಯ ಕೋಟಿ ಕಾರ್ತಿಕೋತ್ಸವದಲ್ಲಿ | ಮಿನುಗುತ್ತಿರುವ ಜ್ಯೋತಿ ನಾನು' ಎಂದು ಹೇಳಿರುವುದನ್ನು ಈಗಾಗಲೇ ತಿಳಿದಿದ್ದೇವೆ. ಆ ಜ್ಯೋತಿ ಭಾರತಮಾತೆಯನ್ನು ಅವರು ಕಾವ್ಯದಲ್ಲಿ ನೆನೆದಿದ್ದಾರೆ. ಅವರು ಚಿಕ್ಕವರಿದ್ದಾಗ ಅವರ ಮನೆಯ ಎದುರಿನಲ್ಲಿಯೇ ರಾಷ್ಟ್ರೀಯ ಶಿಕ್ಷಣ ಸಂಸ್ಥೆ ಇದ್ದು, ಅಲ್ಲಿ ನೆರೆಯುತ್ತಿದ್ದ ರಾಷ್ಟ್ರೀಯ ಮುಖಂಡರ ಪ್ರಭಾವ ಅವರ ಮೇಲಾಗಿತ್ತೆಂದು ಅವರ ಬಾಲ್ಯದ ಅಧ್ಯಾಯದಲ್ಲಿ ತಿಳಿದಿದ್ದೇವೆ. ಅವರು ಕವಿಯಾಗಿ ರಾಷ್ಟ್ರಭಕ್ತಿಯಿಂದ ಸ್ವಾತಂತ್ರ್ಯಕ್ಕಾಗಿ ೧೯೩೦ರಲ್ಲಿ 'ನರಬಲಿ'[45] ಕವನ ರಚಿಸಿ ಹಿಂಡಲಗಾ ಜೇಲಿನ ವಾಸ ಅನುಭವಿಸಿದರು.

'ನೀತಿಯ ಭೂತವೆ ಹೊರಡಿಲ್ಲಿಂದ
ದಯೆಯ ದೆವ್ವವೆ ನೀ ಹೊರಡು
ಕರುಳಿನ ಮರುಳೇ ಓಡಿಲ್ಲಿಂದ
ನ್ಯಾಯ ರಾಕ್ಷಸನೆ ನೀನೋಡು
ಬಲಗಾಲ್ ಬುಡದಿಂ ಬಿಡುಗಡೆ ಬಿಡಿಸಲು
ನರಬಲಿಯೇ ಬೇಕು |'

ಎಂದು ನರಬಲಿ ಕವನದಲ್ಲಿ ಗುಡುಗಿದ್ದರು. ಸ್ವಾತಂತ್ರ್ಯಪೂರ್ವ ೧೯೨೮ರಲ್ಲಿ ಜನರನ್ನು ಎಚ್ಚರಿಸಲು 'ಮೂವತ್ತುಮೂರು ಕೋಟಿ' ಕವನ ರಚಿಸಿ, ಜನರಲ್ಲಿ ಕೆಚ್ಚನ್ನು ತುಂಬಿದರು.

'ಮಕ್ಕಳಿವರೇನಮ್ಮ? ಮಕ್ಕಳಿವರೇನಮ್ಮ
ಮೂವತ್ತು ಮೂರು ಕೋಟಿ?

ಭಾರತಮಾತೆ ಹಡೆದು ಹಿಂಗಿದ ರೀತಿ ಇರುವ ಕೆಚ್ಚಿಲ್ಲದ ನಿಸ್ತೇಜರಾದ ಭಾರತೀಯರನ್ನು ಧ್ವನ್ಯಾರ್ಥದಲ್ಲಿ 'ಸೂಲಗಳು' ಎಂದು ಕರೆದು ಎಚ್ಚರದ ಕಹಳೆಯೂದಿದರು.

'ಮೂವತ್ತುಮೂರು ಕೋಟೀ, ಮೂವತ್ತುಮೂರು ಕೋಟೀ!
ಬಯಕೆಗಳು ಬಸಿರುಗಳು ಹಡೆದಿದ್ದು ಹಿಂಗಿದ್ದು
ಮೂವತ್ತು ಮೂರು ಕೋಟಿ !
ಸೂಲಗಳು
ಮೂವತ್ತು ಮೂರು ಕೋಟಿ !!'[46]

ಬೇಂದ್ರೆಯವರು ಭಾರತಮಾತೆಯನ್ನು ತನ್ನ ಮಕ್ಕಳಿಗೆ ನವಶಕ್ತಿ ನೀಡುವ ಚೇತನದಾಯಿನಿ ಎಂದು ತಿಳಿದು ಅಭಯವನ್ನು ನೀಡಲು ಮಂಗಲವನ್ನುಂಟು ಮಾಡಲು ಪ್ರಾರ್ಥಿಸಿದ್ದಾರೆ. ಆ ಮಂಗಲವು ಜನರ ಹೊಸನಗೆಯಲ್ಲಿ ಹೊಮ್ಮಿ, ಅವರ ಮಹಿಮೆ ಎಲ್ಲ ದಿಕ್ಕುಗಳಿಗೆ ಹಬ್ಬಲಿ, ಹಿರಿದಾದ ಗುರಿ ಇರಲಿ ಎಂದು ಆಶಿಸಿದ್ದಾರೆ. 'ಭಾರತನವಶಕ್ತಿ'[47] ಕವನದ ಪ್ರಾರ್ಥನೆ ಹೀಗಿದೆ:

'ಹೃಜ್ಞಾತೇ ! ಚಿನ್ಮಾತೇ !
ಹೃನ್ಮಾತೆ, ಚಿಜ್ಞಾತೇ ! ಭಾರತ ನವಶಕ್ತಿ !
ನಮ್ಮಾತ್ಮವೆ, ಪರಮಾತ್ಮವೆ, ಕರುಣಿಸು ತವಭಕ್ತಿ !'

ನಾವು ಭಾರತೀಯರು ಎಂಬ ಭಾವ ಪ್ರತಿ ಕನ್ನಡಿಗನಲ್ಲೂ ಉದ್ಭವಿಸಬೇಕಾಗಿದೆ. ಕನ್ನಡಿಗ ಎಂಬುದು ಜೀವಾತ್ಮಾ; ಭಾರತೀಯ ಎಂಬುದು ಪರಮಾತ್ಮ. ಜೀವಾತ್ಮ ಹಾಗೂ ಪರಮಾತ್ಮ ಐಕ್ಯವಾದಾಗ ಆನಂದಕ್ಕೆ ಕೊರತೆಯಾಗಲಾರದು. ಈ ಐಕ್ಯದ ಬುದ್ಧಿ ಪ್ರತಿಯೊಬ್ಬನ ಹೃದಯದಲ್ಲಿ ಹುಟ್ಟಿ, ಚಿತ್ತದಲ್ಲಿ ಸ್ಥಿರವಾದಾಗ ಅವನ ನಡೆ, ನುಡಿ ಸಾಮರಸ್ಯಕ್ಕೆ ಪೂರಕವಾಗುತ್ತದೆ. ಅದು ಆಗದಿದ್ದರೆ ವಿರಸವಾಗಿ ಮರಣದ ಮಾರ್ಗ ತೆರೆಯುತ್ತದೆ. ಕನ್ನಡಿಗರಲ್ಲಿ ಭಾರತೀಯರು ನಾವು ಎಂಬ ನವಶಕ್ತಿಯ ವಿಕಾಸದ ಆವಿರ್ಭಾವವಾಗಲಿ ಎಂಬುದಾಗಿ ಪ್ರಾರ್ಥಿಸಿಕೊಂಡ ಗೀತವಿದಾಗಿದೆ.

**ಭಾರತಮಾತೆಯ ಹೊಸ ಶ್ರುತಿ**

ಬೇಂದ್ರೆಯವರು 'ಶ್ರೀಮಾತಾ' ಕವನ ಸಂಕಲನವನ್ನು 'ಶ್ರೀಮಾತೆ ಭೂಮಾತೆ, ಕನ್ನಡಮಾತೆ, ನಿಮಗಲ್ಲದೆ ಯಾರಿಗಿದು ಅರ್ಪಿತ? - ಅಂದತ್ತ' ಎಂದು ಚೈತನ್ಯಶಕ್ತಿಗಳಿಗೆ ಅರ್ಪಿಸಿದ್ದಾರೆ. ಈ ಅರ್ಪಣೆಯಲ್ಲಿ ಆ ಮಾತೆಯರಲ್ಲಿ ಅವರು ಕಾಣುತ್ತಿರುವ ಜೀವಶಕ್ತಿ ಇದೆ.

ದೇಶಕ್ಕೆ ಸ್ವಾತಂತ್ರ್ಯ ಬಂದುದು ಶ್ರಾವಣಮಾಸವಾದ ೧೫ ಆಗಸ್ಟ್ ತಿಂಗಳಿನಲ್ಲಿ. ಅದನ್ನು ಅವರು ತಮ್ಮ ಕಾವ್ಯದಲ್ಲಿ ಮೊದಲೇ ಕಂಡಿದ್ದಂತೆ ನುಡಿದಿದ್ದಾರೆ. ಅವರಿಗೆ ಶ್ರಾವಣಮಾಸವು

'ಬಂದಿಯೊಳಗಿದ್ದವರ ಬಂಧನವ ಬಿಡಿಸುವಾ
ಬಂದಿಕಾರ ಶ್ರಾವಣ !'

ಆಗಿದೆ. ಆ ಶ್ರಾವಣಮಾಸ ಬೇಂದ್ರೆಯವರಿಗೆ ಸುಖ, ದುಃಖವನ್ನೆರಡನ್ನೂ ಹೊತ್ತು ತಂದಿರುವ ಮಾಸವಾಗಿದೆ. ಆದಕಾರಣ ಈ ದೇಶವು ಪಾರತಂತ್ರ್ಯದಲ್ಲಿರುವ ಕತ್ತಲದಿನಗಳುರುಳಿ, ಸ್ವಾತಂತ್ರ್ಯದ ಬೆಳಕು ಬರುತ್ತದೆ. ಅದನ್ನು ಶ್ರಾವಣಮಾಸ ತರುತ್ತದೆ ಎಂದು ೧೫.೮.೧೯೪೨ರಲ್ಲಿ ಹಾಡಿದ್ದಾರೆ:

"'ಕತ್ತಲೆಯ ತುಟ್ಟತುದಿ ಹತ್ತಿರವೆ ಬೆಳಕು ಬದಿ'
ಎಂದು ಸಾರೋ ಶ್ರಾವಣಾ.
ಮುಂದೆ ಬರುವ ಸ್ವತಂತ್ರ ವಂಧಿಮಾಗಧ ನೀನು
ಬಂಧುರಾಂಗ ಶ್ರಾವಣಾ!"[48]

ಅವರು ಆಶಿಸಿದಂತೆ ಶ್ರಾವಣಮಾಸದಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದಾಗ ಶ್ರಾವಣಕವಿ ಬೇಂದ್ರೆಯವರು 'ಜನವೇ ರಾಷ್ಟ್ರ'[49] ಎಂಬ ಗೀತೆಯನ್ನು ರಚಿಸಿದ್ದಾರೆ. ಆ ಕವನದಲ್ಲಿ ಭಾರತೀಯ ನರನಾರಿಯರ ಬಾಳು ಸತ್ತ್ವಪೂರ್ಣವಾಗಬೇಕು, ಮಾನವತೆ ಉಳಿಯಬೇಕು, ವಿಜ್ಞಾನ ಬೆಳೆಯಬೇಕು, ಹೃದಯ ವಿಕಾಸವಾಗಬೇಕು ಎಂದು ಆಶಿಸಿದ್ದಾರೆ.

'ಶ್ರಾವಣಮಾಸಕೆ ಶ್ರವಣಕೆ ಸಾರಿತು
ಭಾರತಮಾತೆಯ ಹೊಸ ಶ್ರುತೀ
ಜನವೇ ರಾಷ್ಟ್ರವು; ರಾಷ್ಟ್ರವೇ ಜನವು
ಸಾರ್ವಭೌಮ ಮಾನವನ ಸ್ತುತೀ'

☆ ☆

ಭಾರತ ಸ್ವಾತಂತ್ರ್ಯದ ವರ್ಧಂತೀ
ಶ್ರಾವಣಮಾಸದ ಮಳೆ -ಬಿಸಿಲು
ಜೀವನಚಕ್ರವ ತಿರುಗಿಸುತ್ತಲಿದೆ
ಜೀವನತತ್ತ್ವವ ಬಿಂಬಿಸಲು.'

ಅವರು ಭಾರತಕ್ಕೆ ಜಯವನ್ನು ಆಶಿಸುತ್ತ ಅದರ ಧಾರ್ಮಿಕ, ಐತಿಹಾಸಿಕ, ಸಾಂಸ್ಕೃತಿಕ, ವಿಶ್ವವಿಶಾಲ ನೆಲೆಯನ್ನು ಬಣ್ಣಿಸುತ್ತ 'ಜಯವಾಗತೈತಿ'[50] ಎಂಬ ಜಯಘೋಷಣೆಯ ಶುಭಾಶಯದ ಕವನವನ್ನು ರಚಿಸಿದ್ದಾರೆ. ಅದರಲ್ಲಿ:

'ಕರ್ನಾಟಕಂ ಒಂದೆ
ಭೂಮಾತರಂ ವಂದೇ
ಭಾರತಂ ವಂದೇ.'

ಎಂದು ನಮಸ್ಕರಿಸುತ್ತಾ 'ಅಜ್ಞಾನ ಸುಲಿದಾಗ | ವಿಜ್ಞಾನ ಚೆಲುವು' ಎಂದು ಹೇಳಿ ಭಾರತೀಯನು ಪ್ರಜ್ಞಾವಂತನಾಗಿ ದುರಭಿಮಾನವನ್ನು ಬಿಟ್ಟು ಭಾರತಮಾತೆಗೆ ತನ್ನನ್ನು ಅರ್ಪಿಸಿಕೊಳ್ಳಬೇಕು ಎಂದು ನುಡಿದಿದ್ದಾರೆ:

'ನಾ ನಿನ್ನವ; ನೀ ನನ್ನವ
ಬಿಡು ದುರಭಿಮಾನವ
ಕೊಡು ದಾನವ
ನಾನಭಿಮಾನವ
ಶಕ್ತಿಯರ್ಪಣ ಮಾಡು.'

**ಬನ್ನಿ ಒಂದಾಗಿರಿ**

ಬೇಂದ್ರೆಯವರು ಭಾರತದ ಜನತೆಯಲ್ಲಿ ಸ್ಫೂರ್ತಿಯನ್ನು ತುಂಬಿ ರಾಷ್ಟ್ರ ಚೇತನವು ಮೈಗೂಡುವಂತಹ ಕಾವ್ಯವನ್ನು ರಚಿಸಿದರು. ಅವು ನಾಡಿಗರಲ್ಲಿ ರಾಷ್ಟ್ರ ಭಕ್ತಿಯನ್ನು ಸ್ಫುರಿಸುವ ಚೈತನ್ಯದ ಚಿಲುಮೆಗಳು. 'ಯುದ್ಧ ಧರ್ಮವಾದಾಗ ಯುದ್ಧ ಪರಾಙ್ಮುಖತೆ ಅಧರ್ಮ' ಎಂಬ ಭಾವಸಂದರ್ಭ ಹೊಂದಿದ **'ಯುದ್ಧ ಬಂತು ಮನೆಯವರೆಗೆ'** ಎಂಬ ಕವನದಲ್ಲಿ ಭಾರತದ ಜನತೆಯನ್ನು - ಬನ್ನಿ ಒಂದಾಗೋಣ, ಒಳಜಗಳವನ್ನು ನಿಲ್ಲಿಸಿ, ನಾವು ತಾಯಿನಾಡಿಗೆ ಸೇವೆ ಸಲ್ಲಿಸಿ ಹಗೆಯನ್ನು ಎದುರಿಸೋಣ- ಎನ್ನುವ ಕರೆ ನೀಡಿದ್ದಾರೆ.

'ಯುದ್ಧ ಬಂತು ಮನೆಯವರೆಗೆ
ಬನ್ನಿ ಒಂದಾಗಿರಿ.
ಒಳಜಗಳವ ಕ್ಷಣವೆ ನಿಲಿಸಿ
ನಮ್ಮ ಜನವ ಒಲಿದು ಒಲಿಸಿ
ತಾಯಿ ನೆಲಕೆ ಸೇವೆ ಸಲಿಸಿ
ನಿಮ್ಮ ಹಗೆಯ ತಾಗಿರಿ.'

**'ಯುದ್ಧ ಬಂತು ಮನೆಯವರೆಗೆ' (ಅರಳು ಮರಳು)**

ಬೇಂದ್ರೆಯವರು 'ಸ್ವಾತಂತ್ರ್ಯ ದೇವಿಗೆ' ಎಂಬ ಕವನದಲ್ಲಿ ರಾಷ್ಟ್ರದ ಜನರಲ್ಲಿ ಕೆಚ್ಚನ್ನು ಮೂಡಿಸುತ್ತ; ಸ್ವಾತಂತ್ರ್ಯದ ಉಳಿವಿಗಾಗಿ, ಭಾರತ ಮಾತೆಯ ರಕ್ಷಣೆಗಾಗಿ ಮೈಕೊಡವಿ ಎದ್ದು ಹೋರಾಟಮುಖಿಯಾಗಬೇಕು ಎಂದು ಹೇಳಿದ್ದಾರೆ. ತಾಯಿಯ ಅಪಮಾನಕ್ಕೆ ಕೈಹಚ್ಚಿದ ವೈರಿ ದುರುಳ ರಾಕ್ಷಸನನ್ನು ಸಂಹರಿಸು, ತಾಯಿಯ ಮಾನವನ್ನು ಕಾಪಾಡು, ರಣದ ಕಣಕ್ಕೆ ನುಗ್ಗು ಎಂದು ಹುರಿದುಂಬಿಸಿದ್ದಾರೆ.

ಮೂರು ಮುಸುಕು ಎಳೆದುಕೊಂಡು
ಮಲಗಿದೇಕೆ ಮಾನವಾ?
ಸುಡಿಸಿ ಸುಟ್ಟು ಕೆಡಿಸಿ ಕೆಟ್ಟು
ಕುಣಿಯುತಿಹನು ದಾನವಾ
ಧೀರೆ ಇಳೆಯ ಸೀರೆ ಸೆಳೆವ;
ಉಳಿಸೊ ಉಳಿಸು ಮಾನವಾ.

☆ ☆

ನುಗ್ಗಿರಣ್ಣ ರಣದ ಕಣಕೆ
ಅಸುರರಿಂದ ಬಿಡಿಸಿರಿ
ತಾಯ ಸೆರೆಯ, ಎಲ್ಲರಿಂದ
ಗೆಲುವಿನ ಗುಡಿ ಹಿಡಿಸಿರಿ
ಭೂಮಿದೇವಿ ನಲಿಯುವಂತೆ
ವಿಜಯಗೀತ ನುಡಿಸಿರಿ.

**ಒಂದೆ ತಾಯಿಯ ಮಕ್ಕಳು**

ಈ ಭಾರತ ಭೂಮಿಯೇ ನಮ್ಮ ಒಡಲನ್ನು ರೂಪಿಸಿದ ಮಣ್ಣು. ಇಲ್ಲಿ ಹುಟ್ಟಿದ ಪ್ರತಿಯೊಬ್ಬರೂ ಒಂದೇ ತಾಯಿಯ ಮಕ್ಕಳು. ನಮ್ಮ ಬಾಹ್ಯ ಆಚರಣೆಯ ಧರ್ಮ, ಆಚಾರ, ಜಾತಿ ಪಂಥ, ಭಾಷೆ ಪಂಗಡ, ಬಣ್ಣ ಉಡುಪುಗಳೆಲ್ಲ ನಾವು ರೂಪಿಸಿಕೊಂಡದ್ದು. ನಾವು ಒಂದೇ ಒಕ್ಕಲಿಗೆ ಸೇರಿದವರು. ನಾವು ಒಂದು ಎಂಬ ಸತ್ಯವನ್ನು ಬೇಂದ್ರೆಯವರು 'ಒಂದೆ ತಾಯಿಯ ಮಕ್ಕಳು' (ನಮನ) ಎಂಬ ಕವನದಲ್ಲಿ ನೀಡಿದ್ದಾರೆ. ಈ ಕವನದ ಪ್ರತಿ ಪದವೂ ಭಾರತೀಯತೆಯನ್ನು, ಭಾರತದ ಮಣ್ಣಿಂದ ಹುಟ್ಟಿ, ಈ ಮಣ್ಣಿಂದ ರೂಪುಗೊಂಡ ಅನ್ನವನ್ನುಂಡು ಬೆಳೆದ ಸತ್ಯವನ್ನು ಅರಿವಿಗೆ ತರುತ್ತದೆ. ಈ ಭರತ ಭೂಮಿಯಿಲ್ಲದೆ ನಾವಿಲ್ಲ. ಇದೇ ನಮ್ಮ ಮೂಲಸೆಲೆ ಎಂಬುದನ್ನು ಬಿಂಬಿಸುತ್ತದೆ.

ಒಂದೆ ತಾಯಿಯ ಮಕ್ಕಳು
ಒಂದೆ ತವರ್ಮನೆ ಒಕ್ಕಲು.
ಬಣ್ಣ ಬಣ್ಣದ ಜನರು ನಾವಿಂದೊಂದುಗೂಡಲು ಬಂದೆವು
ಮಣ್ಣ ಭೇದವನೆಣಿಸದೇ ಒಂದೆದೆಯ ಬಲವನು ತಂದೆವು
ತಾಯಿ ನೆಲವೇ ಅನ್ನವೆಂದೇ ನಿನ್ನ ಮೈಯ್ಯನ್ನುಂಡೆವು
ತಾಯಿ ಮೊಲೆವಾಲೆಂತು ತೊರೆವುದೊ ಅಂತು ಸೆಲೆಗಳ ಕಂಡೆವು'

ನಮ್ಮ ದೇಶದಲ್ಲಿ ವೇದಕಾಲದ ಋಷಿಗಳು ಕಂಡ ಜಗನ್ಮಾತೆ ಅದಿತಿ. ಅವಳೇ ಭಾರತಿ ಶ್ರೀಮಾತೆ.

ಅವಳು ನಮ್ಮನ್ನು 'ಅಸತ್ತಿನಿಂದ ಸತ್ತಿಗೆ, ಅಭೂತದಿಂದ ಅಪೂರ್ವದ ಕಡೆಗೆ, ಅಜೀವದಿಂದ ಜೀವದ ಕಡೆಗೆ ನಡೆಸಲಿ' ಎಂದು ಬೇಂದ್ರೆಯವರು ಬೇಡಿಕೊಳ್ಳುತ್ತ ಹೀಗೆ ಪ್ರಾರ್ಥಿಸಿದ್ದಾರೆ:

'ಕತ್ತಲೆಯಿಂದಾ ಜ್ಯೋತಿಯ ಬದಿಗೆ
ಅಶ್ರದ್ಧೆಯಿಂದಾ ಶ್ರದ್ಧಾನದಿಗೆ
ಅನೈಕ್ಯದಿಂದಾ ಐಕ್ಯದ ತುದಿಗೆ
ನಿಲಿಸೌ ಶ್ರೀಮಾತೇ
ನಿಲಿಸೌ ಶ್ರೀಮಾತೇ.'

- **'ಲೋಕಾಲೋಕೆ' (ಮುಗಿಲ ಮಲ್ಲಿಗೆ)**

ಹೀಗೆ ರೂಪುಗೊಂಡ ಭಾರತೀಯನಿಗೆ, ಈ ರಾಷ್ಟ್ರಕ್ಕೆ ಜಯವಾಗುತ್ತದೆ. ಕನ್ನಡ ಮತ್ತು ಇತರ ಭಾಷೆಗಳನ್ನಾಡುವ ನಾವೆಲ್ಲ ಸಹೋದರರು. ನಮ್ಮ ಚಿಂತನೆಯೆಲ್ಲ ರಾಷ್ಟ್ರವನ್ನು ಕುರಿತದ್ದು, ನಮ್ಮ ಮನಸ್ಸು ಒಂದು. ನಾಡಿನ ಸುಸಂಸ್ಕೃತ ಜೀವಿಗಳ ಅರ್ಥಪೂರ್ಣ ಬದುಕು, ಶಾಂತಿ ಪ್ರಿಯ ನಡವಳಿಕೆ, ಧೀಶಕ್ತಿಯೇ ಈ ನಾಡಿನ ಸರ್ವಸ್ವ. ಅದೇ ಈ ನಾಡಿನ ದಿವ್ಯತೆ. ದಿವ್ಯತೆಯ ಪಥವನ್ನು ತೆರೆಯುವ ಮನೋರಥದವರು ನಾವಾಗಿರುವುದರಿಂದ ನಮಗೆ ಜಯ ಎಂದು ಬೇಂದ್ರೆಯವರು ಸಾರಿದ್ದಾರೆ.

'ಜಯವಾಗತೈತೇ ಜಯವಾಗತೈತೇ
ಭಾರತಿಗೇ - ಪ್ರತಿ ಭಾರತಿಗೇ
ಕನ್ನಡದ ಇನ್ನುಳಿದ ಭ್ರಾತೃಗಳ ಪಥಕೇ
ದಿವ್ಯತೆಯ ಪಥ ತೆರೆವ ಭಾರತ ಮನೋರಥಕೆ'

- **'ಜಯವಾಗತೈತಿ' (ಮರ್ಯಾದೆ)**

**ನಾಡಗುಡಿ**

ನಮ್ಮ ಉತ್ತರದ ಗಿರಿಶಿಖರದಲ್ಲಿ ವೀರಯೋಧರು ನಾಡಗುಡಿ ತ್ರಿವರ್ಣಧ್ವಜವನ್ನು ಹಾರಿಸಿದ್ದಾರೆ. ಅದನ್ನು ನೆನೆದಾಗ ಅವರ ಸಾಹಸಕ್ಕೆ ಮೈ ರೋಮಾಂಚನಗೊಳ್ಳುತ್ತದೆ. ರಾಷ್ಟ್ರಧ್ವಜ ನಮ್ಮ ನಾಡಿನ ಸತ್ಯ, ಶಾಂತಿ, ತ್ಯಾಗದ ಸಂಕೇತ. ನಮ್ಮ ರಾಷ್ಟ್ರದ ಮಾನ, ಸಮ್ಮಾನ. ಅದನ್ನು ಹೊತ್ತು ಗಗನಕ್ಕೇರಿಸಿದ ವೀರರಿಂದ, ನಮ್ಮ ಮೈಯಲ್ಲಿ ಪೂರ್ವಜರ ಪುಣ್ಯವೇ ಸಂಚರಿಸುತ್ತಿದೆ ಎಂದು ಕವಿ ಬೇಂದ್ರೆ ಹಾಡಿದ ಹಾಡು ಸ್ಫೂರ್ತಿಶಕ್ತಿಯಾಗಿದೆ. 'ಜಯನಾದ ನಾಲಗೆಯಲ್ಲಿ ಮೊಳಗುವಾಗ ಎದೆಯಲ್ಲಿ ಭಯವಿರುವುದಿಲ್ಲ. ರಾಷ್ಟ್ರನದಿಯಲ್ಲಿ ದೇಶಭಕ್ತಿಯ ಪೂರ ಬಂದಿರಲು ಅದರಲ್ಲಿ ಜಯವೆಂದು ಮುಳುಗಿರುವೆ.' ಎಂದು ರಾಷ್ಟ್ರಭಕ್ತಿಯಲ್ಲಿ ಮಿಂದ ಹರ್ಷಾನಂದವನ್ನು ಅನನ್ಯವಾಗಿ ವ್ಯಕ್ತಪಡಿಸಿದ್ದಾರೆ.

'ಬಾ ಬಂದೆಯಾ ಹೊತ್ತೆ! ಬಾಗಿ ಎತ್ತುವೆನೆಂದು
ನಾಡಗುಡಿಯನ್ನು ಕೈಯೊಳ್,
ಬಾ ಬಂದೆಯಾ ವೀರ, ಪೂರ್ವಜರ ಪುಣ್ಯವೇ
ಚರಿಸಿದಂದು ನನ್ನ ಮೈಯೊಳ್

☆ ☆

ಜಯನಾದ ನಾಲಗೆಯ ತುದಿಯಲ್ಲಿ ಮೊಳಗುತಿದೆ
ಭಯವಿಲ್ಲ ಎದೆಯ ಬದಿಯೊಳ್,

ಜಯವೆಂದು ಮುಳುಗಿದೆನು ದೇಶಭಕ್ತಿಯ ಪೂರ
ಬಂದಿರಲು ರಾಷ್ಟ್ರ ನದಿಯೊಳ್'

**- ನಾಡಗುಡಿ (ಅರಳುಮರಳು)**

**ಇಗೊ ಹೊರಟೆವು ಬಿಡುಗಡೆಗಾಗಿ**

ಭಾರತ ಮಾತೆಯ ಪ್ರತಿ ಇಂಚು ನೆಲವೂ ಪವಿತ್ರ. ಅದು ನಮ್ಮದು. ಅದನ್ನು ಅತಿಕ್ರಮಣಕಾರರು ಆಕ್ರಮಿಸಿದರೆ ಅವರನ್ನು ಹೊಡೆದಟ್ಟಿ ರಕ್ಷಿಸಬೇಕು. ತಾಯಿ ಭಾರತಾಂಬೆಯನ್ನು ರಕ್ಷಿಸಿದಾಗ 'ಅಂದರಳ್ವುದು ತಾಯಿಯ ಮೊಗವು' ಎಂದು ಹೇಳುತ್ತ ಬೇಂದ್ರೆಯವರು, ನಾಡಿನ ಬಿಡುಗಡೆಗಾಗಿ ಪ್ರತಿಯೊಬ್ಬರೂ ಮುಂದೆ ನುಗ್ಗಬೇಕು ಎಂದು **ಬಿಡುಗಡೆ** ಕವನದಲ್ಲಿ ನುಡಿದಿದ್ದಾರೆ.

'ಇಗೊ| ಹೊರಟೆವು ಬಿಡುಗಡೆಗಾಗಿ
ಬಹ| ರಾರು ನಮಗಿದಿರಾಗಿ?'

ಈ ಆತ್ಮವಿಶ್ವಾಸದ, ತಾಯಿಯ ರಕ್ಷಣೆಯ ಹೋರಾಟದಿಂದಲೇ ಭಾರತಾಂಬೆಯ ಆನಂದವಿದೆ. ಅದರಿಂದ ನಾಡಿನ ಕೀರ್ತಿ ಬೆಳೆದು, ಅಕೀರ್ತಿಯ ಕೆಸರು ತೊಳೆದುಹೋಗುತ್ತದೆ, ತಾಯಿಗೆ ಮತ್ತು ನಾಡಿನ ಜನಕ್ಕೆ ಬಿಡುಗಡೆಯ ಉಸಿರು ದೊರಕುತ್ತದೆ, ಎಂದು ನುಡಿದಿದ್ದಾರೆ.

'ತೊಳ| ತೊಳಗುದು ತಾಯಿಯ ಬಸಿರು
ಕಳೆ| ಗೊಳುವದು ನಾಡಿನ ಹೆಸರು
ತೊಳೆ| ದಳಿವುದಕೀರ್ತಿಯ ಕೆಸರು
ದೊರ| ಕಿಸಲೀ ಬಿಡುಗಡೆಯುಸಿರು
ಅದಕಾಗಿ| ತಾಗಿ| ಸಾಗಿ.....'

**ಭಾವೈಕ್ಯತೆ**

ನಾವು ಭಾರತೀಯರೆಲ್ಲ ಒಂದು. ನಮ್ಮಲ್ಲಿಯ ಹಿಂದೂ, ಪಾರಸಿ, ಮುಸ್ಲಿಂ, ಕ್ರಿಶ್ಚಿಯನ್, ಸಿಖ್, ಎಲ್ಲರೂ ಒಂದಾಗಿ ದೇಶವನ್ನು ನಡೆಸುತ್ತ ರಾಷ್ಟ್ರವನ್ನು ರಕ್ಷಿಸುತ್ತ ಇದ್ದೇವೆ. ಭಾರತದ ದಂಡು ದೇಶರಕ್ಷಣೆಯಲ್ಲಿ ಮುನ್ನುಗ್ಗಿ ವೈರಿಯನ್ನು ನುಗ್ಗಾಗಿಸುತ್ತಿದೆ. ವಿಜಯದಲ್ಲಿ ಸಂತೋಷವು ಬಿತ್ತರಿಸಿದೆ, ವೀರಕ್ಕೆ ಅದ್ಭುತ ಸಿದ್ಧಿ ಇದೆ. ಯುದ್ಧ ನಮ್ಮ ಭಾವೈಕ್ಯತೆಯನ್ನು ಸಾರುತ್ತಿದೆ. ಏಸು ಶಾಂತಿದೂತ. ಅವನೇ ಈ ಯುದ್ಧ ಸಾರುವ ವೈರಿಗಳಿಗೆ ಸುದ್ಬುದ್ಧಿಯನ್ನು ನೀಡಬೇಕು ಎಂಬ ಭಾವದಲ್ಲಿ ಬೇಂದ್ರೆಯವರು 'ಸನ್ಮತಿ ಯೇಸು ಭಗವಾನ್' (ಮರ್ಯಾದೆ) ಎಂದು ಕಾವ್ಯ ರಚಿಸಿದ್ದಾರೆ.

'ಜಯಹಿಂದ್, ಜಯಹಿಂದ್, ಜಯಹಿಂದ್
ಪ್ಯಾಟನ್ ಟ್ಯಾಂಕಿನ ಹಿಂಡು| ಹಾರಿಸಿತೊ ಗುಂಡು
ಇದಿರಾಯ್ತು ಭಾರತದ ದಂಡು
ಹಿಂದೂಽ ಪಾರಸಿಕಾಽ ರಸಿಕಾ, ಮುಸ್ಲಿಂ, ಕ್ರಿಸ್ತೀ ಸೀಖಾ
ಸಹವೀರ್ಯಾ ಸಹಧೈರ್ಯಾ ಸೌಖ್ಯ
ತಂದಿದೆ ಭಾವೈಕ್ಯ.'

**ಶ್ರೀಮನ್ ಮಹಾಭಾರತ**

ಚೀನಾ ದೇಶವು ನಮ್ಮ ಮೇಲೆ ಯುದ್ಧ ಮಾಡಿದಾಗ ಬೇಂದ್ರೆಯವರು ರಚಿಸಿದ ಕವನ 'ಶ್ರೀಮನ್

ಮಹಾಭಾರತ'. ಅದರಲ್ಲಿ ಅವರು ಚೀನಿ ಪಂಚಶೀಲ ತತ್ತ್ವವನ್ನು ಸಾರುತ್ತ ನಮ್ಮ ಬೆನ್ನಿರಿದುದನ್ನು ಹೇಳಿ; ನೆರೆಯ ಜಪಾನು ಹಿರೋಶಿಮಾದಿಂದ ಪಾಠ ಕಲಿತರು- ಆ ಪಾಠ ತನಗೆ ಸಾಲದು ಎಂಬ ರೀತಿ ಉದ್ಧಟತನದಿಂದ ಯುದ್ಧದಾಟ ಹೂಡಿದೆ ಎಂದು ನುಡಿದಿದ್ದಾರೆ. ನಮಗೆ ಚಂದ್ರಹಾಸನನ್ನು ಕಾಪಾಡಿದ ಕಾಳಿಯ ಬಲವಿದೆ, ನಿನ್ನ ದುಷ್ಟ ಬುದ್ಧಿಗೆ ನಾಶವಿದೆ ಎಂದು ಪೌರಾಣಿಕದ ದುಷ್ಟಬುದ್ಧಿಯು ನಾಶವಾದ ಹೋಲಿಕೆಯನ್ನು ಕಾವ್ಯಾತ್ಮಕವಾಗಿ ನೀಡಿದ್ದಾರೆ. ಆ ಕಾವ್ಯದಲ್ಲಿ 'ಮರ್ಯಾದೆ ಮಾತಿನದು' ಎಂದು ಪಂಚಶೀಲತತ್ತ್ವದ ಅರ್ಥವನ್ನರುಹಿ 'ದುರ್ಯೋಧನತೆ ಸಾಕು' ನಿನ್ನ ನಾಶ ಖಚಿತ ಎಂಬ ಭಾವವನ್ನು ವ್ಯಕ್ತಪಡಿಸಿದ್ದಾರೆ. ಇದನ್ನು ಓದಿದಾಗ 'ಮರ್ಯಾದೆ ಮಾತಿನದು' ಎಂಬ ಮನುಷ್ಯ ಜೀವಿಯ ಮಾತಿನ ಮೌಲ್ಯ ಅರಿಯದ ಚೀನ ಮತ್ತು ಪಾಕಿಸ್ತಾನದ ವರ್ತನೆ ಹೇಯವೆನಿಸುತ್ತದೆ. ಅಪಾಯಕಾರಿ ನೆರೆಹೊರೆಯಾದ ಚೀನವನ್ನು ಕುರಿತು ಬೇಂದ್ರೆಯವರು :

> ನೀನು ಕ್ರೂರನು ಕ್ಷುದ್ರ, ನಿನಗೆ ಜೀವನ ಯುದ್ಧ
> ನಿನ್ನ ದೃಷ್ಟಿಯೆ - ಸಾವು - ರುಧಿರ ರುದ್ರಾಕ್ಷಿ!'

ಎಂದು ನುಡಿದದ್ದು ಪಾಕಿಸ್ತಾನಕ್ಕೂ ಅನ್ವಯಿಸುವಂತಿದೆ. ಯುದ್ಧ ಎಂಬುವುದು ನೋವು. ಅದು 'ಯಾ ಅಲ್ಲಾ!' ಎಂದು ದೇವರನ್ನು ನೆನೆಸುವಂತಹದು. ಅದು ಕವಿತಾ, ನಾಟಕ, ಕಾದಂಬರಿ ಅಲ್ಲ. ವಿವೇಚನೆ, ಹೃದಯವಂತಿಕೆ, ಮನುಷ್ಯತ್ವ ಇಲ್ಲದ್ದು ಯುದ್ಧ. ಪರಸ್ಪರ ಕೊಡುಕೊಳೆಯ ಪಾಶ್ಚಿಮಾತ್ಯ ಉದಾತ್ತ ನೀತಿ ಮಣ್ಣು ಮುಕ್ಕಿದ ಅವಸ್ಥೆಯ ಪ್ರತೀಕ ಈ ಯುದ್ಧ. ಇದರಿಂದ 'ಹೊಸ ಯುಗ ಬರೋಹಂಗಿಲ್ಲ!' ಎಂದು 'ನಾ ಈ ಕವಿತಾ ಬರೀಬಾರ್ದಿತ್ತು' ಎಂಬ ಕವನದಲ್ಲಿ ನೊಂದು ನುಡಿದಿದ್ದಾರೆ.

> 'ಇಸ್ಲಾಂ ಧರ್ಮಾ ಭಾರತಧರ್ಮಾ ಬ್ಯಾರೆ ಅಲ್ಲಾ'
> ಒಡಕೊಂಡು, ಸಿಡಕೊಂಡ ಮ್ಯಾಲೆ
> ಪರಲೋಕದ ಹೊರತು ಗತಿ ಇಲ್ಲಾ.

ಎಂದು ಧರ್ಮವೆಂಬುದು ಒಂದೇ ಎಂಬ ಅರಿವನ್ನು ನೀಡಿದ್ದಾರೆ. ಧರ್ಮದ ಕಾರಣದಿಂದ ಬೇರೆಬೇರೆಯಾದಾಗ ಅದು ಸಾವನ್ನು ತರುತ್ತದೆ ಎಂದು ಧರ್ಮದ ಸೂಕ್ಷ್ಮ ಅಪಾಯವನ್ನು ಕಾಣಿಸಿದ್ದಾರೆ. ಬೇಂದ್ರೆಯವರು ಇಡೀ ರಾಷ್ಟ್ರಕ್ಕೆ-ನಮ್ಮ ನೆರೆಹೊರೆಯಾದ ಪಾಕಿಸ್ತಾನದ ಸಂಬಂಧದ ಒಳಹೊರಗನ್ನು ಕಾವ್ಯಾತ್ಮಕವಾಗಿ 'ಭುಟ್ಟೋ ನಮ್ಮಾವಾ, ಅಬ್ದುಲ್ಲಾ ನಮ್ಮಾವಾ| ಜಿನ್ನಾ ನಮ್ಮಾವಾ' ಎಂದು ಧ್ವನ್ಯಾರ್ಥದಲ್ಲಿ ಕೆಟ್ಟ ರಕ್ತಸಂಬಂಧದ ಬಾಂಧವ್ಯವನ್ನು ಸೂಚಿಸಿದ್ದಾರೆ. ಅಂತಹ ನಮ್ಮಾವನನ್ನು ಕೃಷ್ಣನು ಕಂಸನನ್ನು ಕೊಂದಂತೆ ಕೊಲ್ಲಬೇಕು. ಇಲ್ಲದಿದ್ದರೆ ಉಳಿಗಾಲವಿಲ್ಲ ಎಂದು ಎಚ್ಚರಿಸಿದ್ದಾರೆ. ರಾಜಕೀಯ ತಂತ್ರದ ಸೂಕ್ಷ್ಮತೆ ಅರಿತು ಸಂಹರಿಸದಿದ್ದರೆ ಬಾಂಗ್ಲಾ ದೇಶವನ್ನು ಕಳೆದುಕೊಂಡಂತೆ ಕಾಶ್ಮೀರವನ್ನು ಕಳೆದುಕೊಳ್ಳಬೇಕಾದೀತು ಎಂದು ಇಡೀ ರಾಷ್ಟ್ರಪ್ರಜ್ಞೆಯನ್ನು ಜಾಗ್ರತಗೊಳಿಸಿದ್ದಾರೆ.

> 'ಭುಟ್ಟೋ ನಮ್ಮಾವಾ, ಅಬ್ದುಲ್ಲಾ ನಮ್ಮಾವಾ
> ಜಿನ್ನಾ ನಮ್ಮಾವಾ.
> ಕಂಸ ಕೂಡ ಕೃಷ್ಣನ ಮಾವಾ
> ಇತಿಹಾಸ ಮರೀತೀರೇನು? ಯಾವ ವರ್ಷ ಯುದ್ಧ ಆಗಿಲ್ಲಾ?
> ಮತ್ತ ಮತ್ತ ಪಾನಿಪತ್ತು ಮಾಡ್ಯಾರ
> ಬಂಗ್ಲಾದೇಶಾ ಕೃಷ್ಣಾರ್ಪಣಾ!

ಕಾಶ್ಮೀರಕ್ಕೂ ತರ್ಪಣಾ ಮಾಡಬೇಕಾದೀತು
ಎಚ್ಚರಕಿ!'

**ವೀರಧರ್ಮ ಸಾರವೇ ಅಮೃತ**

ಯುದ್ಧದಲ್ಲಿ ವೀರಯೋಧರು ದೇಶಕ್ಕಾಗಿ ಪ್ರಾಣತ್ಯಾಗ ಮಾಡಿ ಅಮರರಾಗುತ್ತಾರೆ. ಅವರ ತ್ಯಾಗ ಬಲಿದಾನದಿಂದ ನಾವು ಸುರಕ್ಷಿತವಾಗಿದ್ದೇವೆ. ಅಂತಹ ವೀರಯೋಧರನ್ನು ಕುರಿತು ಬೇಂದ್ರೆಯವರು 'ಸಮರದಲ್ಲಿ ಅಮರರಾದ ಧೀರ'ರು ಮತ್ತೆ ಹುಟ್ಟಿ ಬರುವರು ಎಂದು ಹೇಳಿದ್ದಾರೆ. ಆ ವೀರರು ಈ ನಾಡಿನ 'ಬಂಧನದಾ ಕುಣಿಕೆ ಬಿಚ್ಚಿ ಮುಕ್ತಿ ಮಾಲೆ ತರುವರು' ಎಂದು ಘೋಷಿಸುತ್ತ; ದೇಶಕ್ಕಾಗಿ ಪ್ರಾಣತೆತ್ತ ಸೈನಿಕರಿಗೆ ಅಮರತ್ವವನ್ನು ನೀಡಿ ಅವರಿಗೆ ಮರುಜನ್ಮವಿದೆ ಎಂದು ಸಾರಿ ಹೇಳಿದ್ದಾರೆ. 'ವೀರಧರ್ಮಸಾರ ಅಮೃತವೆಂದು ಬೆಳೆಯುವಾ| ವೀರವನ್ನು ನೆನೆದು ನೆನೆದು ವೀರರಾಗಿಯುಳಿಯುವಾ' ಎಂದು ಹೇಳಿ ಆ ಅಮೃತಮಯ ಅಮರ ಜೀವಿಗಳಿಂದ ನಾವು ವೀರರಾಗುವೆವು ಎಂದಿದ್ದಾರೆ. ಆ ಅಮರ ವೀರರ ಭೂತದ ವೀರ ಶಕ್ತಿ ಭವಿಷ್ಯತ್ತಿನಲ್ಲಿ ಬರುವುದು ಈಗಲೇ ಕೈಗೂಡುತ್ತಿದೆ ಎಂದು ಹೇಳಿದ್ದಾರೆ. ಗತಿಸಿ ಹೋದ ವೀರರ ಸಾಹಸವನ್ನು ವರ್ತಮಾನಕ್ಕೆ ತಂದು ಅವರಿಗೆ ಅಮೃತತ್ವವನ್ನು ತಮ್ಮ ಕಾವ್ಯದಲ್ಲಿ ನೀಡಿದ್ದಾರೆ. ಈ ಕಾವ್ಯವು ಈ ನಾಡಿನ ಶೂರ ಧೀರ ಸೈನಿಕರಿಗೆ ವರಕವಿ ದ.ರಾ. ಬೇಂದ್ರೆ ನೀಡಿದ ಅಮರಗಾಥೆಯಾಗಿದೆ.

ಬರುವರೋ
ಬರುವರೋ
ಬರುತಲಿಹರು
ಅವರು ನಮ್ಮ ಗರುವರು
ನಾಡ ನೊಗವ ಹೊರುವರು
ದ್ವೇಷವನ್ನು ಹರುವರು
ನಮಗೆ ಕೀರ್ತಿ ತರುವರು
ಬರುವರುಃ ಬರುವರುಃ ಬಂದೆ ಬರುವರುಃ.

**- 'ಬರುವರು ಬರುವರು' (ನಮನ)**

**ಶಾಂತಿ ಚಂದನಾ**

ಭಾರತ ಮತ್ತು ಪಾಕಿಸ್ತಾನಕ್ಕೆ ಯುದ್ಧವಾದಾಗ ಅದನ್ನು ಧೈರ್ಯದಿಂದ ಎದುರಿಸಿದ ಪ್ರಧಾನಮಂತ್ರಿ ಲಾಲಬಹದ್ದೂರ್ ಶಾಸ್ತ್ರೀ ಅವರನ್ನು ನೆನೆಸುತ್ತ ಬೇಂದ್ರೆಯವರು ಅವರಿಗೆ 'ಸಹಸ್ರ-ವಂದನ'[51] ಎಂದು ಕಾವ್ಯವಂದನೆ ಸಲ್ಲಿಸಿದ್ದಾರೆ. 'ಇಂಥಾ ಜನರಽ ಇಲ್ಲಾ ಅನಬ್ಯಾಡ್ರೀ, ಬಂದಾಗಾದ್ರೂ ಕಣ್ಣು ತೆರೆದು ನೋಡ್ರಿ' ಎಂದು ಜನಕ್ಕೆ ಹೇಳುತ್ತ 'ವಾಮನ ಮೂರಽ ಹೆಜ್ಜಿ ಹಾಕಿದ್ಹಾಂಗ | ಬಂದಾ ಬಹಾದ್ದೂರ' ಎಂದು ಹೆಮ್ಮೆಯಿಂದ ಹಾಡಿ ಶಾಸ್ತ್ರಿಯವರಿಗೆ ವಂದನೆಯನ್ನು ಈ ರೀತಿ ಸಲ್ಲಿಸಿದ್ದಾರೆ:

'ಭಾರತಮಾತೆಗೆ ತೊಡದಿ ಅಪ್ಪಾ !
ಶಾಂತಿ ಚಂದನಾ
ರಕ್ತದ ಯುದ್ಧಾ ಮಾಡಬಹುದು
ಶಾಂತಿ ಯುದ್ಧಾ ಬಹಳ ಕಷ್ಟಾ
ಭಪ್ಪರೆ ಬಹಾದ್ದೂರ ! ನಿನಗೆ ಸಾವಿರದೊಂದನಾ.'

**ಅನೃತರಂಗದ ಮೇಲೆ ಸತ್ಯನೃತ್ಯ**

ಬೇಂದ್ರೆಯವರು ರಾಷ್ಟ್ರಪಿತ ಮಹಾತ್ಮಾ ಗಾಂಧಿಯನ್ನು ಕುರಿತು ಹಲವಾರು ಕವನಗಳನ್ನು ರಚಿಸಿದ್ದಾರೆ. ಭಾರತಮಾತೆ ಎಂದರೆ ಅಲ್ಲಿಯ ಮಣ್ಣು, ತರುಲತೆ, ಪ್ರಾಣಿ-ಪಕ್ಷಿ ಹಾಗೂ ರಾಷ್ಟ್ರವನ್ನು ರೂಪಿಸಿದ ಹಿರಿಯ ಚೇತನಗಳು! ಬೇಂದ್ರೆಯವರು ಅದರ ಪ್ರಕೃತಿಯನ್ನು ವರ್ಣಿಸಿ ಸಂತೋಷಪಟ್ಟಂತೆ ರಾಷ್ಟ್ರವನ್ನು ರೂಪಿಸಿದ ಗಾಂಧಿಯನ್ನು ನೆನೆದು 'ಶ್ರದ್ಧಾಂಜಲಿ', 'ಅಮರಮರಣ', 'ಜಯಜಯಾ ಗಾಂಧಿ ಮೋಹನಾ', 'ನೂರುವರ್ಷಾತು' (ಶಕಪುರುಷನ ಶತಮಾನ), 'ಪೂತಾತ್ಮ-ಹೂತಾತ್ಮ, ಹುತಾತ್ಮ -ಮಹಾತ್ಮ', 'ಗಾಂಧಿಸತ್ಯ' ಎಂಬ ಹಲವಾರು ಕವನಗಳನ್ನು ರಚಿಸಿದ್ದಾರೆ.

'ಹಿಂಸೆ ಕೊನೆಗಹಿಂಸೆಯನ್ನು ಗುಂಡುಹಾಕಿ ಕೊಂದಿತೋ?
ತನ್ನ ಕೊಲೆಯ ಕೊನೆಗಾಣಿಸೆ ಇವಗೆ ಶರಣು ಬಂದಿತೋ?'[52]

☆ ☆

'ಹರಿಜನರ ಬಳಗ ಉಳಿದವರ ಒಳಗೆ ಬಳಸಿದೆಯೊ ನಾಡತಂದೆ
ಮಾನವತೆ ಒಂದು, ಭಾರತೀಯರೆಲ್ಲ ಒಂದಲ್ಲವೇಕೆ ಎಂದೆ.'[53]

ಆ ಗಾಂಧಿಯ ಸತ್ಯ, ಅಹಿಂಸೆ, ಶಾಂತಿ ಈ ನೆಲದಲ್ಲಿ ಉಳಿಯುತ್ತದೆ ಎಂದು ಕವಿ ಆಶಿಸಿದ್ದಾರೆ. ಆ ಚಿರಂತನ ಸತ್ಯಗಳು ಗಾಂಧಿಯಂತಹವರಿಂದ ಹೊಮ್ಮಿ ಬಂದು 'ಎತ್ತಲೂ ತುಂಬಿದವ, ಸುತ್ತಲೂ ಹರುಹಿದವ | ನನ್ನಲ್ಲು ನಿನ್ನಲು ಒಳಗೆ ಇರನೇ?' ಎಂದು ಪ್ರತಿ ವ್ಯಕ್ತಿ ಆತ್ಮಶೋಧ ಮಾಡಿಕೊಳ್ಳುವ ಪ್ರಶ್ನೆ ಹಾಕಿದ್ದಾರೆ. ಅದು ಹೌದು ಹೌದೆನ್ನುವಂತೆ ಸತ್ಯ ಇರುವುದನ್ನು ಕಾವ್ಯದಲ್ಲಿ ಹೊಮ್ಮಿಸಿದ್ದಾರೆ. ಆ ಗಾಂಧಿಸತ್ಯ ನಮ್ಮ ಬದುಕಿನಲ್ಲಿ ಬೆಳೆಯುತ್ತಿದೆ ಎಂದು ಹೀಗೆ ನುಡಿದಿದ್ದಾರೆ :

'ಸಾವಿನಾ ದಂಡೆಯಲಿ ಬಾಳ ಹೊಳೆ ಹರಿಯುವುದು
ಅನೃತರಂಗದ ಮೇಲೆ ಸತ್ಯನೃತ್ಯ
ಕತ್ತಲೆಯ ಬಯಲಲ್ಲಿ ಬೆತ್ತಲೆಯ ಬೆಳಕೆ ಇದೆ
ಬದುಕಿನಲೆ ಬೆಳೆಯಲಿದೆ ಗಾಂಧಿ ಸತ್ಯ.'

ಬೇಂದ್ರೆಯವರ ಮರಣೋತ್ತರದಲ್ಲಿ ಪ್ರಕಟವಾದ ಕವನ ಸಂಕಲನಗಳಲ್ಲಿ ಭಾರತವನ್ನು, ಭಾರತೀಯರನ್ನು ಕುರಿತ ಚಿಂತನೆಯ ಕವನಗಳಿವೆ:

'ಭಾರತೀಯರು ಭಾಗ್ಯವಂತರು
ಭದ್ರಕಾಯರು ಪ್ರತಿಭರೂss
ಅಭಯದಾಯಕರಾಗಿ ಬಾಳಲಿ
ಪ್ರಾತಿಭರೂ ಅಪ್ರತಿಮರೂ.[54]

☆ ☆

ಕವಿತಾ ಕಪ್ಪು ಮಶೀಲೆ ಬರೀತಾರ
ಯುದ್ಧ ಕೆಂಪರಕ್ತದಿಂದ ಕೊರೀತಾರ
ಒಂದು ಇತಿಹಾಸ! ಒಂದು ಪುರಾಣಾ!
'ವೇದ'ನೇ ಇಲ್ಲದಲ್ಲಿ ಏನು ಮಾಡೀತು ಕುರಾಣಾ?[55]

ಬೇಂದ್ರೆಯವರು ತಮ್ಮ ಕೊನೆಯ ದಿನಗಳಲ್ಲಿ - ಭಾರತವು ಬರೀ ರಾಜಕೀಯ ವ್ಯವಸ್ಥೆಯಷ್ಟೇ

ಆಗದೆ; ಬಲಗೊಂಡು ಸತ್ವಶಾಲಿ ರಾಷ್ಟ್ರವಾಗಬೇಕೆಂದು ಆಲೋಚಿಸುತ್ತಿದ್ದರು. ಅವರು ಈ ರಾಷ್ಟ್ರ ರಾಜಕಾರಣದಲ್ಲಿ ಉತ್ತಮರಿಗೂ ಸ್ಥಳವಿರಬೇಕು, ಅವರು ರಾಷ್ಟ್ರವನ್ನು ರೂಪಿಸುವಂತಾಗಬೇಕು ಎಂದು ಆಶಿಸಿದ್ದರು. ಅವರು ಕನ್ನಡ ಪ್ರೇಮಿಯಾದಂತೆ ರಾಷ್ಟ್ರಪ್ರೇಮಿಯೂ ಆಗಿದ್ದರು. ಅವರು ಕನ್ನಡಮಾತೆ ಮತ್ತು ಭಾರತಮಾತೆಯನ್ನು ಸಮವಾಗಿ ಆರಾಧಿಸುತ್ತಿದ್ದರು. ಅವರು ನಾಡಿನ, ರಾಷ್ಟ್ರದ ಉದ್ಧಾರದಲ್ಲಿ ಜನದ ಉದ್ಧಾರವಿದೆ ಎಂದು ತಿಳಿದು ಅದನ್ನು ಸದೃಢವಾಗಿ ಕಟ್ಟಲು ನೆರವಾದ ರಾಷ್ಟ್ರಕವಿಗಳು. ಅವರು ನಿಧನರಾಗುವ ಎರಡು ತಿಂಗಳ ಮೊದಲು ೨೯.೮.೧೯೮೧ ರಲ್ಲಿ ರಚಿಸಿದ ಕವನ ಅವರ ರಾಷ್ಟ್ರಪ್ರೇಮದ ತುಡಿತವನ್ನು ಸಾರುತ್ತಿದೆ:

> 'ಸಚ್ಚಾ ಜನರು ಏನೂ
> ಗಾಂಧೀ ಟೊಪ್ಪಿಗಿ ಹಾಕಬೇಕಾಗಿಲ್ಲಾ.
> ಭಾರತ ಅಂಬೋ ಹೆಸರು -
> ಹೆಸರಾಗಬೇಕು;
> ಅದು ಕಡ್ಡೀ ಕಸಾ ಅಲ್ಲಾ.'[55]

**ಭೂಮಿತಾಯಿ**

ಭೂಮಿ ಚಲನಶೀಲವಾಗಿ, ಬೆಳಕು ಕತ್ತಲನ್ನು ತಾನು ಹೊಂದಿದ್ದು, ತನ್ನ ಒಡಲಜೀವಗಳನ್ನು ಕಾಪಾಡುವ ಅಪರೂಪದ ಭೌತವಸ್ತುವಾಗಿದೆ. ಬೇಂದ್ರೆಯವರು ಅದನ್ನು ತಾಯಿ ಎಂದು ಕರೆದು ಅದರ ಕ್ರಿಯಾಶೀಲತೆ, ಶಾಂತಿ, ಪ್ರೀತಿ, ಸಹನೆ, ಮೌನದಲ್ಲಿ ಎಲ್ಲವನ್ನೂ ನುಂಗಿ ತನ್ನ ಒಡಲ ಕುಡಿಗಳನ್ನು ಕಾಪಾಡುವ ಒಂದು ಶಕ್ತಿಯನ್ನು ಕಂಡಿದ್ದಾರೆ. ಅವರು ಅದೇ ಭೂಮಿಯ ಈ ಮೌನ ಸೃಜನಶೀಲ ಗುಣವನ್ನು ಕಂಡು ಅದರ ಮೇಲೆ ದಾಳಿ ನಡೆಸುತ್ತಿರುವ ಮಾತು ಬಲ್ಲ, ಬುದ್ಧಿಜೀವಿಯಾದ ಮಾನವನ ದೌರ್ಜನ್ಯ, ಹಿಂಸೆ, ದ್ವೇಷ, ಕಬಳಿಕೆ, ಅಸಹನೆಯಿಂದ ಕೂಡಿದ ವರ್ತನೆಯನ್ನು ಖಾರವಾಗಿ ಖಂಡಿಸಿದ್ದಾರೆ. ಸ್ವಾರ್ಥದ ಲಾಲಸೆಯ ಮಾನವ, ನಿಸ್ವಾರ್ಥದಿಂದಿರುವ ಪಶುಪಕ್ಷಿ, ತರುಲತೆಯ ಸಂಕುಲವನ್ನು ನಾಶಪಡಿಸುತ್ತಿರುವುದರ ಸಿಟ್ಟು ಅವರ ಭೂಮಿತಾಯಿಯನ್ನು ಕುರಿತ ಕಾವ್ಯದಲ್ಲಿದೆ. ಮನುಷ್ಯ ರಾಕ್ಷಸನಂತಾದಾಗ ತನ್ನ ಅಳಿವನ್ನು ಹೇಗೆ ಆಹ್ವಾನಿಸಿಕೊಳ್ಳುತ್ತಾನೆ ಎಂಬ ಅವನ ಕ್ರೂರ ಮುಖದ ಚಿತ್ರಣವೂ ಅಲ್ಲಿದೆ. ಜೊತೆಗೆ ಭೂಮಿ ತಾಯಿಯಾದುದರಿಂದ ತನ್ನನ್ನು ಹಿಂಸಿಸುವ ಮಾನವನು - ತನ್ನ ಒಡಲಜೀವಿಗಳನ್ನೂ, ಚರಾಚರ ವಸ್ತುಗಳನ್ನು ನಾಶಪಡಿಸಿ ತಾನೂ ನಾಶಹೊಂದುವನಲ್ಲ ಎಂಬ ನೋವಿದೆ. ಹೀಗಾಗಿ ಮನುಕುಲದ ಕಥೆಯ ವ್ಯಥೆಯಂತೆ ಬೇಂದ್ರೆಯವರ ಭೂಮಿತಾಯಿ ಕವನಗಳಿವೆ. ಆ ಕವನಗಳ ಆಳದಲ್ಲಿ ಭೂಮಿತಾಯಿಯು ಸದಾ ಬೆಳಕನ್ನು ಬೆಳೆಯನ್ನು ಜೀವಪ್ರಾಣವನ್ನು ತರುವಂತೆ ತನ್ನ ಉತ್ತಮ ಸೃಷ್ಟಿಯಾದ ಮಾನವನು ಬಾಳಬೇಕು ಎಂಬ ಚಿಂತನೆಯಿದೆ.

ರಾಬರ್ಟ್ ಬ್ರಿಫಾಲ್ಟನು " 'The mother and the soil are alike', is a principle of Roman jurisprudence. In ancient India, at the wedding ceremony, the woman was called a 'seed-field', and the priest exhorted the bridegroom, saying 'sow her with your seed.'

Thus it is that in many religious man is stated to have been created out of the earth. In Vedic hymns the earth is the mother of man; in Persia also. The

word 'homo' is a derivative of humus, and Adam was fashioned from the earth. Lucretious declares that 'animals cannot have fallen from the sky, nor the inhabitants of earth have issued out of lagoons of salt water; rightly has the earth been called 'mother', for out of the earth all things have been created'[57] ಎಂದು ಭೂಮಿಯನ್ನು ರೋಮನ್ನರು, ಭಾರತೀಯರು, ಪರ್ಶಿಯನ್ನರು 'ತಾಯಿ' ಎಂದು ಕರೆದಿರುವುದನ್ನು ತಿಳಿಸಿದ್ದಾನೆ. ಮಹಾಭಾರತದ ಯಕ್ಷಪ್ರಶ್ನೆಯ ಪ್ರಸಂಗದಲ್ಲಿ ಯಕ್ಷ ಕೇಳುತ್ತಾನೆ - 'ಪೃಥ್ವಿಗಿಂತ ಯಾರು ಹೆಚ್ಚು?' ಧರ್ಮರಾಜ ಉತ್ತರಿಸುತ್ತಾನೆ - 'ಪೃಥ್ವಿಗಿಂತ ಜನ್ಮಕೊಟ್ಟ ತಾಯಿ ಹೆಚ್ಚು.' ಎಲ್ಲ ದೇಶದ ಶ್ರೇಷ್ಠ ಚಿಂತಕರು ಮಾತೃತತ್ತ್ವಕ್ಕೆ ಕೊಟ್ಟ ಮೌಲ್ಯ ಗಮನಾರ್ಹವಾಗಿದೆ.

**ಕಣ್ಣು ತಿಳಿ ಅದರs ಎಲ್ಲಾ ತಿಳಿ**

ಭೂಮಿ ನಮಗೆ ತಾಯಿಯೇ ಆಗಿದ್ದಾಳೆ. ಆದಕಾರಣ ಬೇಂದ್ರೆ 'ಭೂಮಿತಾಯಿಯ ಮೈಯ ಹಿಡಿಮಣ್ಣು ಗುಡಿಕಟ್ಟಿ | ನಿಂತಂಥ ಮೂರ್ತಿ ನಾನು' ಎಂದು ಹೇಳಿಕೊಂಡಿದ್ದಾರೆ. ಈ ಭೂಮಿಯಲ್ಲಿ:

'ಭೂಮಿ ತಿರುಗತಾ ಇರತsದ
ಬೆಳಕು ತಿರುಗದs ಬರತsದ.'[58]

ಆ ಬೆಳಕಿನಲ್ಲಿ ರಸವಿದೆ, ಸೃಜನಶಕ್ತಿ ಇದೆ. ಅದು ಜೀವ-ಸ್ಪರ್ಶವನ್ನು ಹೊಂದಿದೆ. ಉಷೆಯ ಮುಖದಿಂದ ಅರಳಿ ಪ್ರಾಣಾತ್ಮನಾದ ಜೀವಹರ್ಷನಾದ ಬೆಳಕು ಬರುತ್ತಾನೆ ಎಂದು ಬೇಂದ್ರೆಯವರು:

'ಬೆಳಕಿಗಿಹುದು ರಸ, ಬೆಳಕೆ ಅಹುದು ರಸ
ಬೆಳಕೆ ಜೀವ-ಸ್ಪರ್ಶ
ಆ ಉಷಾವದನೆ ಬಿರಿದುಬರುವ ಪ್ರಾ-
ಣಾತ್ಮ ಜೀವಹರ್ಷ'[59]

ಎಂದು ಹೇಳಿದ್ದಾರೆ. ಅವರು 'ಕಣ್ಣು ತಿಳಿ ಅದರs ಎಲ್ಲಾ ತಿಳಿ'[60] ಎಂಬ ಕವನದಲ್ಲಿ ಬೆಳಕನ್ನು ಅರಸುವ ಮನಸ್ಸಿನವರಾಗಬೇಕು ಎಂದು ಹೇಳುತ್ತ, ವ್ಯಕ್ತಿಗೆ ಅರಿವು ಬೆಳಕಿನಿಂದ. ಬೆಳಕಿನಿಂದ ಕಣ್ಬಿಟ್ಟು ಜಗತ್ತನ್ನು ತಿಳಿಯುವ ವ್ಯಕ್ತಿಯ ಕಣ್ಣುಗಳು ತಿಳಿಯಾಗಬೇಕು, ಶುದ್ಧವಾಗಬೇಕು. ಅವನು ತಿಳಿಗಣ್ಣನು ಅಂದರೆ ಒಳಗಣ್ಣು ತಿಳಿಯಾದವನು. ಅಂತಹವನಿಗೆ ಜಗವೆಲ್ಲವೂ ತಿಳಿಯುತ್ತದೆ. ಅವನಲ್ಲಿ ಶಾಂತಿ ನೆಮ್ಮದಿ ನೆಲಸುತ್ತದೆ. 'ಗಂಗೆ ಹರಿದಷ್ಟೂ ತಿಳಿಯುತ್ತಾ ತಿಳಿಯುತ್ತಾ ಹೋಗುತ್ತದೆ ! ತಿಳಿಯಾಗುತ್ತದೆ. ಎಷ್ಟು ತಿಳಿಯಾಗುತ್ತದೆ ಎಂದರೆ, ತಿಳಿಹೋಗಿಸುವಂಥ, ಕದಡುಮಾಡುವಂಥ ಕ್ರಿಮಿಗಳು ಅದರಲ್ಲಿ ಬದುಕಲಾರವು.[61] 'ತಿಳಿಗೇಡಿತನದ ಕತ್ತಲೆಯು ನಮ್ಮನ್ನು ಗುಡ್ಡದಂತೆ ಅಡ್ಡಗಟ್ಟಬಹುದು; ಆದರೆ ತಿಳಿವಿನ ಬೆಳಕು ಬೆಟ್ಟ ಬೆಟ್ಟವಾಗಿ ತನ್ನ ಧವಲಗಿರಿ ಶೃಂಗವನ್ನೆತ್ತಿ ಅದಕ್ಕೂ ಮೇಲೆ ಬೆಳಗುವದು, ಬೆಳಗಬೇಕು ಎಂಬುದನ್ನು ನಾವು ಮರೆಯಬಾರದು'[62] ಎಂದು ಬೇಂದ್ರೆಯವರು ನುಡಿದಿದ್ದಾರೆ. ಅಂತಹ ತಿಳಿವನ್ನು ನೀಡುವುದು ಬೆಳಕು. ಆ ಬೆಳಕನ್ನು ನೀಡುವವಳು ಭೂಮಿತಾಯಿ.

'ಬೆಳಕಿಗೆ ಬೆನ್ನ ತೋರಿಸಿದರs
ಕತ್ತಲೀ ಮಾರಿ ನೋಡಬೇಕು'[63]

ಆದಕಾರಣ ಮನುಷ್ಯನಿಗೆ ಬೇಂದ್ರೆಯವರು ಭೂಮಿತಾಯಿ ಸಾರುವ ಹಿರಿತತ್ತ್ವವನ್ನು ನುಡಿಯುತ್ತಾರೆ:

'ಆ ಬೆಳಕಿನ್ಯಾಗ ಹೋಗಿ ಕೂಡ್ರಿ

ಬೆಳಕಿನ ಬಾಳಾಗಬೇಕು
ಕತ್ತಲಿ ಹಾಳಾಗಬೇಕು.'

**ಒಡವ್ಯಲ್ಲೊ ಮಗನೆ ಉಸಿರಿದ್ದೊಡಲಂತಾಳೋ**

ಭೂತ, ವರ್ತಮಾನ ಮತ್ತು ಭವಿಷ್ಯತ್ತುಗಳನ್ನು ಅಖಂಡವಾಗಿ ಕಾಣಬಲ್ಲ ವಿಶಿಷ್ಟ ಕವಿಶಕ್ತಿಗೆ ಕ್ರಾಂತಶಕ್ತಿ ಎಂದು ಹೆಸರು. ಹಿಂದಿನ ಋಷಿಮುನಿಗಳು ಈ ಬಗೆಯ ಕ್ರಾಂತದರ್ಶಿತ್ವವನ್ನು ಪಡೆದವರಾಗಿದ್ದರು. 'ನಾನೃಷಿಃ ಕುರುತೇ ಕಾವ್ಯಂ' ಋಷಿಯಲ್ಲದವನು ಕವಿಯಾಗಲಾರ ಎಂಬುದು ಈ ಮಾತಿನ ಅರ್ಥ. ಅಂದರೆ ಕವಿಯು ಋಷಿಗೆ ಸಮಾನಸ್ಕಂದನಾದವನು ಎಂಬುದು ಇಲ್ಲಿನ ಹಿರಿಮೆ. ಈ ಕಾರಣಕ್ಕಾಗಿಯೇ ಅವನು ಕ್ರಾಂತದರ್ಶಿ. ಕ್ರಾಂತ ದೃಷ್ಟಿ ಹೊಂದಿದ ಕವಿಗೆ ದರ್ಶನವಿರುತ್ತದೆ ಎಂಬುದಕ್ಕೆ 'ಚಿಗರಿಗಂಗಳ ಚೆಲುವಿ'[64] ಕವನ ಸಾಕ್ಷಿಯಾಗಿದೆ. ಸಮಾಜದ ಶಾಂತಿ ನೆಮ್ಮದಿಗೆ ಈ ಭೂಮಿಯ ಮೇಲಿರುವ ಎಲ್ಲ ಗಿಡ ಮರಗಳು, ಪಕ್ಷಿ, ಪಶು ಮಾನವರ ಉಳಿವಿಗೆ ಪರಿಸರ ಸಂರಕ್ಷಣೆ ಮುಖ್ಯ ಎಂದು ಸಾರುವ ಕವನ ಇದಾಗಿದೆ.

ಕವಿಯು ಮೊದಲ ಚರಣದಲ್ಲಿ ಸೌಂದರ್ಯ, ಪ್ರೀತಿ, ಸ್ನೇಹ, ಆಹ್ಲಾದದ ಸಂಕೇತವಾದ ಪ್ರಕೃತಿ ಸೃಷ್ಟಿಯನ್ನು 'ಹೊಳಿಹಳ್ಳ ತೊರೆದಾವೋ | ಗೆಣೆಹಕ್ಕಿ ಬೆರೆದಾವೋ' ಎಂದು ಕರೆದಿದ್ದಾರೆ. ಅದು ಸುಖದಾಟ, ಆನಂದದ ಕ್ರಿಯೆ. ಆ ಆನಂದವನ್ನು ಸಹಿಸದ ಸುಖ, ಶಾಂತಿ, ನೆಮ್ಮದಿಯನ್ನು ಕಲಕುವ ಇದೇ ನೆಲದ ಸೃಷ್ಟಿಯಾದ ಕ್ರೂರ ಮಾನವ; ತನ್ನ ಅಸೂಯೆ, ದ್ವೇಷ, ಸಂಗ್ರಹ ಗುಣದಿಂದ ಆಕ್ರಮಣ ಪ್ರವೃತ್ತಿಯನ್ನು ಹೊಂದಿ ಅವನು 'ಅಗದವರ ಹೊಟ್ಟೆ ಉರದಾವೋ | ಗೆಣೆಯಾ ಉರದಾವಽ' ಎಂಬಂತೆ ದ್ವೇಷದಿಂದ ಉರಿಯುತ್ತಿದ್ದಾನೆ. ಅವನು ಅಸೂಯೆಯಿಂದ ಈ ಭೂಮಂಡಲವೆಂಬ 'ಮನಿ ಮುರಿಯುವ' ಕೆಲಸವನ್ನು ಮಾಡುತ್ತಿದ್ದಾನೆ. ಅದನ್ನು ನೋಡಿ ಚಿಗರಿಗಂಗಳ ಚೆಲುವಿಯಾದ ಭೂಮಿತಾಯಿಯು:

'ಅದನ ತಾ ಕಂಡು ಕೊರಗ್ಯಾಳೊ
ಮರುಗ್ಯಾಳೋ
ಸೊರಗ್ಯಾಳೋ'

ಎಂದು ಅವಳು ಹಾಗೆ ಕೊರಗಲು ಕಾರಣವೇನೆಂದರೆ ಅವಳ ವನದಲ್ಲಿ ಅಂದರೆ ಭೂಮಿಯಲ್ಲಿ ಎಲ್ಲರೂ ತಿಂದು ಸುಖಪಡುವಷ್ಟು 'ಹೂ ಕಾಯಿ ಹಣ್ಣು ತುಂಬಿದೆ.' ಆದರೆ ಮಾನವನ ದ್ವೇಷದ ಉರಿಯಿಂದ ಅಸಹಾಯಕ ಪಶು ಪ್ರಾಣಿ ಬದುಕಲಾಗದಂತಾಗಿದೆ. ಈ ಮನೆ ಮುರಿದುಬೀಳುತ್ತಿದೆ. ಈ ಕಾವ್ಯದಲ್ಲಿ ಈ ಬಗೆಯ ಪರಿಸರವನ್ನು ಕುರಿತ ಚಿಂತನೆಯನ್ನು ಬೇಂದ್ರೆಯವರು ಐವತ್ತು ವರ್ಷಗಳ ಹಿಂದೆಯೇ ನೀಡಿದ್ದಾರೆ. ಅವರು ಕ್ರೂರ ಮಾನವನಿಂದ ಹಾಡೇಹಗಲಿನಲ್ಲಿ ನಡೆಯುವ ಜೀವದ ಬೇಟೆಯಿಂದ ಈ ನೆಲದ ಮೇಲಿರುವ ಎಲ್ಲವೂ ನಡುಗಿ ತತ್ತರಿಸುವುದನ್ನು 'ಹಸುಜೀವ ಬೆದರ್ಯಾವೋ| ಗಳಗಳನೆ ಗಿಡದೇಲಿ ಉದರ್ಯಾವೋ | ಗೆಣೆಯಾ ಉದರ್ಯಾವಽ| ದಿನ್ನಿ ಮಡ್ಡಿ ಗುಡ್ಡ ಅದರ್ಯಾವ' ಎಂದು ಅಸಹಾಯಕ ಜೀವಗಳ ನಡುಗುವಿಕೆ, ಸಾಯುವಿಕೆಯನ್ನು ಸಾದೃಶ್ಯಗಳ ಮೂಲಕ ನೀಡಿದ್ದಾರೆ. ಈ ರೀತಿ ಬೇಟೆ ನಡೆದಾಗ ಆ ತಾಯಿ ನೊಂದು ನುಡಿಯುತ್ತಾಳೆ:

'ಅದನ ತಾ ಕಂಡು ನೊಂದಾಽಳೊ
ಬೆಂದಾಽಳೊ

ಅಂದ್ಯಾಽಳೊ
ಇದು ಎಂಥಾ ಜೀವದ ಬ್ಯಾಟೀ ಹಾಡೆ ಹಗಲುಽ

ಮೂರನೇ ಚರಣದಲ್ಲಿ ಇಡೀ ಪಶು ಪಕ್ಷಿ, ಸಸ್ಯರಾಶಿ ನಾಶ ಮಾಡಿದ ಮನುಷ್ಯ ತನ್ನ ಜಾತಿಯ ಇತರ ಮನುಷ್ಯನನ್ನೇ ನಾಶ ಮಾಡುವ ಹೇಯತನಕ್ಕೆ ಇಳಿಯುವ ಚಿತ್ರ ನೀಡಿದ್ದಾರೆ. ಇಲ್ಲಿ 'ಆಳುವವರಿಗೆ ಆಟ' ಎಂಬುದು ಆಳ್ವಿಕೆ ಮಾಡುವವರ ಶೋಷಕರ ದರ್ಪದಾಟವನ್ನು ಸೂಚಿಸುತ್ತದೆ. ಅವರಿಗೆ ತಮ್ಮ ಹಿತವಲ್ಲದೆ ಬೇರೆಯೇನೂ ಇರುವುದಿಲ್ಲ. ಆದರೆ ಆಳುಗಳಿಗೆ ಅಂದರೆ ಶೋಷಣೆಗೆ ಒಳಗಾದ ಕೂಲಿ ಕಾರ್ಮಿಕರಿಗೆ ಬದುಕೆ ಒಂದು ಹೋರಾಟವಾಗಿರುತ್ತದೆ. ಅವರು ಆಳುವವರ ಕೈಗೆ ಸಿಕ್ಕಿ ವಿಲಿ ವಿಲಿ ಒದ್ದಾಡುತ್ತಿರುತ್ತಾರೆ. ಶೋಷಕರು ರಚಿಸುವ ಜಾಲಕ್ಕೆ ಶೋಷಿತರು ಸಿಗುವ ರೀತಿಯನ್ನು ಬೇಂದ್ರೆಯವರು ' ಗಾಳಕ್ಕೆ ಸಿಕ್ಕ ಮೀನದ ಗೋಳಾಟ' ಎಂಬ ರೂಪಕದಿಂದ ಸಮರ್ಥವಾಗಿ ಧ್ವನಿಸಿದ್ದಾರೆ. ಇಲ್ಲಿ ಕವಿ 'ಆಳು' ಎಂಬ ಪದವನ್ನು - ಒಂದು ಮುಖದಲ್ಲಿ ಶೋಷಕನನ್ನಾಗಿಯೂ, ಇನ್ನೊಂದು ಮುಖದಲ್ಲಿ ಶೋಷಿತನನ್ನಾಗಿಯೂ ಚಿತ್ರಿಸಿ ಮನುಷ್ಯ ಜೀವಿಯು ಇಬ್ಬಗೆಯಾಗಿ ಬದುಕಿ ತನ್ನ ನಾಶವನ್ನು ತಾನೇ ಸೃಷ್ಟಿಸಿಕೊಳ್ಳುವುದನ್ನು ಸಮರ್ಥವಾಗಿ ಧ್ವನಿಸಿದ್ದಾರೆ. ಆ ವ್ಯವಸ್ಥೆಯನ್ನು 'ಗೆದ್ದವರ ಇದ್ದವರ ಹಾರಾಟ' ಎಂದಿದ್ದಾರೆ. ಅಸಹಾಯಕ ಶೋಷಿತರು ಸಾವು ನೋವಿನಲ್ಲಿ - ಸಾವಿನ ಗಡಿಯಲ್ಲಿದ್ದು, ಸಾಯಲಾಗದ, ಅರೆಸತ್ತ ಜೀವಿಗಳಾಗಿ ಅಳುತ್ತಾ ಕೊಳೆಯುವುದನ್ನು ಹುಳಿತಾಗುವುದನ್ನು ಕಂಡು - ಭೂಮಿತಾಯಿ ನೊಂದು ನಿರಾಶಳಾಗಿ ಸಾವನ್ನೇ ಆಹ್ವಾನಿಸಿಕೊಳ್ಳುವಂತೆ ರೋಧಿಸುತ್ತಾಳೆ. ತಾನು ಹೆತ್ತದ್ದು ಈ ಜೀವಿಗಳೆಲ್ಲ ಬದುಕಲು, ಆದರೆ ಈ ಕ್ರೂರ ಮಾನವನಿಂದ ಅದು ತಿರುಗಮುರುಗಾಗುತ್ತಿದೆ ಎಂದು ದುಃಖಿಸುತ್ತಾಳೆ. ನೋವಿನ ಝಳದಲ್ಲಿ ಅವಳು ನುಡಿವ ನುಡಿ 'ಹಸುಗೂಸು ತಿರುಗಿ ಹೊಟ್ಟ್ಯಾಗ ಹುಗಿದ್ಹಾಂಗ' ಎಂಬುದು ಅವಳ ಎಲ್ಲ ತಳಮಳವನ್ನೂ ಧ್ವನಿಸುತ್ತದೆ. ಈ ಕವನವನ್ನು ಕುರಿತು ಡಿ.ಆರ್. ನಾಗರಾಜ ಅವರು 'ಭೂಮಿತಾಯಿಯ ಹೃದಯದ ಅಳಲೇ ಈ ಕವನದ ವಸ್ತು. ಪ್ರೀತಿಯೇ ಮೂರ್ತಿವೆತ್ತಂತಿರುವ ಭೂಮಿತಾಯಿ ಹಿಂಸೆಯಿಂದ ತತ್ತರಿಸಿಹೋಗಿದ್ದಾಳೆ ಎಂಬುದು ಕವನದ ಆಶಯ"[65] ಎಂದು ನುಡಿದಿದ್ದಾರೆ.

ಅವಳು ದ್ವೇಷದ ಕಿಚ್ಚಿನ ಕ್ರೂರಿ ಮಾನವನ ಮುಂದೆ ನಿಸ್ಸಹಾಯಕಳು. ಅವಳ ನೋವು ದಿಕ್ಕೆಟ್ಟ ಹೆಣ್ಣಿನ ರೀತಿ ಸುತ್ತುವುದಾಗಿ, ಬೆಳಕನ್ನು ಕಾಣಲು ಬೆಳಕಿನ ಬೆನ್ಹತ್ತುತ್ತ, ಉಳಿಯಲು ಸಾಹಸಪಡುತ್ತ, ಸದಾ ಒಂದು ಕೂಸನ್ನು ತನ್ನ ಬಗಲಲ್ಲಿ ಹೊತ್ತು ಅದಾದರೂ ಉಳಿಯಲಿ ಎಂಬ ಭಾವವನ್ನು ಹೊಂದಿ (ಈ ಭೂಮಿ ನಾಶವಾದರೆ ಚಂದ್ರ ಉಳಿಯಬಹುದು, ಅಲ್ಲಿ ಜೀವರಾಶಿ ಬದುಕಬಹುದು ಎಂಬ ಆಶಯ) ಉಕ್ಕುಕ್ಕುವ ದುಃಖವನ್ನು ಒಳಗೊತ್ತಿಕೊಂಡಿದ್ದಾಳೆ. ಇದು ವೈಜ್ಞಾನಿಕ ಸತ್ಯದಂತೆ ಭಾವನಾತ್ಮಕ ಸತ್ಯವೂ ಆಗಿದೆ. ಇಂತಹ ಉಮ್ಮಳದಲ್ಲಿ ಚಿಗರಿಗಂಗಳ ಚೆಲುವಿ ತನ್ನ ಒಡಲಕುಡಿ ಮಾನವನನ್ನು ಪ್ರಾರ್ಥಿಸುತ್ತಾಳೆ:

'ನಿಂತ ನೆಲವೆಂದು ಕಡಿಲಾಽಕೊ
ಹಡಿಲಾಽಕೊ
ಒಡಿಲಾಽಕೊ
ಒಡವ್ಯಲ್ಲೋ ಮಗನೆ ಉಸಿರಿದ್ದೊಡಲಂತಾಽಳೊ.'

ಮನುಷ್ಯನ ಹೃದಯ ಪರಿವರ್ತನೆಯಾಗಿ, ಪರಿಸರ ಉಳಿಸದ ಹೊರತು ಅವನೂ ಉಳಿಯುವುದಿಲ್ಲ, ಈ ನೆಲವೂ ಉಳಿಯುವುದಿಲ್ಲ ಎಂಬ ತೀವ್ರ ಸಾಮಾಜಿಕ ಪ್ರಜ್ಞೆಯನ್ನು, ವೈಜ್ಞಾನಿಕ ಚಿಂತನೆಯನ್ನು ಈ ಕವನ ತನ್ನ ಒಡಲಿನ ಕಣಕಣದಲ್ಲಿ ಹೊಂದಿದೆ. ಇದು ಅದ್ಭುತ ಚಿತ್ರಕಶಕ್ತಿಯಿಂದ ತೀವ್ರ ಸಂವೇದನೆಯನ್ನು

ಅಭಿವ್ಯಕ್ತಿಸುವ ಪರಿಸರದ ಬಗೆಗಿನ ಒಂದು ಸಶಕ್ತ ಕವನವಾಗಿದೆ. ನಿಸರ್ಗ ಕವನಗಳಿಗೆ ಹಿರಿಮೆಯ ಮಾದರಿ - ಚಿಗರಿಗಂಗಳ ಚೆಲುವಿ !

**ಮೊದಲಗಿತ್ತಿಯಂತೆ ಮೆರೆಯುತಿಹೆ**

ಬೇಂದ್ರೆಯವರು ಭೂಮಿತಾಯಿಯನ್ನು ಮೊದಲಗಿತ್ತಿ ಎಂದು ಕರೆದಿರುವುದು ಅರ್ಥಪೂರ್ಣವಾಗಿದೆ. ಕುಂಬಾರಗಿತ್ತಿ ಕುಂಬಾರಿಕೆಯ ಕಲೆಯನ್ನು ಅರಿತವಳಂತೆ, ಈ ಜೀವಸೃಷ್ಟಿಯ ಕಲೆಯನ್ನು ಅರಿತವಳು ಮೊದಲಗಿತ್ತಿ. ಇದು ಬೇಂದ್ರೆ ಪದಸೃಷ್ಟಿ! ಅವರು 'ಮೊದಲಗಿತ್ತಿ'[66] ಎಂಬ ಕವನದಲ್ಲಿ ಸಕಲ ಸೃಷ್ಟಿಗೆ ಕಾರಣಳಾದವಳನ್ನು 'ಮೊದಲಗಿತ್ತಿಯಂತೆ ಮೆರೆಯುವಿಯೇ ತಾಯಿ' ಎಂದಿದ್ದಾರೆ. ಈ ಕವನದಲ್ಲಿ ಭೂಮಿಯ ಪೋಷಕ ಮತ್ತು ಮಾರಕ ತತ್ತ್ವವಿದ್ದು, ಅದನ್ನು ಅಮೂರ್ತ ಕಲ್ಪನೆಗಳಿಂದ ಚಿತ್ರಿಸದೆ, ಐತಿಹಾಸಿಕ ಘಟನೆಗಳಿಂದ ಮೂರ್ತಗೊಳಿಸಿರುವುದರಿಂದ ನಿಜದ ದನಿ ಕೇಳಿದಂತಾಗಿ ವಾಸ್ತವತೆಯ ಸ್ಪರ್ಶವಾಗುತ್ತದೆ. ಬೇಂದ್ರೆಯವರ ಜೀವನ ಸಿದ್ಧಾಂತ-ಸಮರಸತತ್ತ್ವ. ಅದು ಒಮ್ಮೆಲೆ ಆವಿರ್ಭವಿಸಿದ ಕಲ್ಪನಾಲಹರಿಯಲ್ಲ. ಅದು ಭೂಮಿತತ್ತ್ವದಂತೆ ಒಳಿತು ಕೆಡಕನ್ನು ಹೊಂದಿರುವ, ರಸದಿಂದ ಹುಟ್ಟಿ ಫಲದಾಯಕವಾಗಿಸಿಕೊಳ್ಳದೆ ವಿರಸದಲ್ಲಿ ನಾಶವನ್ನು ಹೊಂದುವ ಸೃಷ್ಟಿಯನ್ನು ಮತ್ತೆ ಅರಳಿಸಿ ಸಮರಸತತ್ತ್ವವಾಗಿಸಲು ಮಂಗಲ ದೇವಗರ್ಭ ಧರಿಸುವ ಮೌಲಿಕ ಚಿಂತನೆಯಾಗಿದೆ. ಅವರು ಈ ಚಿಂತನೆಗೆ ತಮ್ಮ ಬದುಕನ್ನೇ ಆಧರಿಸಿ ಕಾವ್ಯ ರಚಿಸಿದ್ದರೂ, 'ಮೊದಲಗಿತ್ತಿ' ಯಲ್ಲಿ ಅದನ್ನು ವಿಶಾಲ ಭಿತ್ತಿಯಲ್ಲಿ ಬಣ್ಣಿಸಿದ್ದಾರೆ.

ಮಣ್ಣಿನ ಗೊಂಬೆಯಾದ ಮಾನವ ಮಹತ್ವಾಕಾಂಕ್ಷೆಯಿಂದ ತಾಯಿಯನ್ನು ಆಳುವೆನೆಂದು ಅತ್ಯಾಚಾರಿಯಾದರೆ, ತಾಯಿಗಂಡನಾದರೆ ಅಂಥವರನ್ನು ನಾಶಪಡಿಸಿ ಆ ಕ್ರೂರಿಯನ್ನೂ ತನ್ನ ಒಡಲಿನಲ್ಲಿ ಹುದುಗಿಸಿಕೊಳ್ಳುವ ವಾತ್ಸಲ್ಯಮೂರ್ತಿ ಎಂದು ಭೂಮಿತಾಯಿಯ ಪ್ರೀತಿ, ಕ್ರೌರ್ಯ ಮತ್ತು ವಾತ್ಸಲ್ಯದ ವಿವಿಧ ಮುಖಗಳನ್ನು ಈ ರೀತಿ ಬಣ್ಣಿಸಿದ್ದಾರೆ:

'ಹಿಂಡಾಗಿ ಪುಂಡರು ಅಂಡಲೆಯಲು ನಿನ್ನ
ನೆತ್ತರು ಒರೆಹಚ್ಚಿ ನೋಡಿರುವೆ
ಪಾತಾಳ ಕಂಡರು, ಕೆಲ ತಾಯಿಗ್ಗಂಡರು
ಅವರನ್ನೂ ಮಡಿಲಾಗ ಮಡಗಿಸಿಹೆ.'

ಈ ಬಗೆಯ ಕಾವ್ಯಸೃಷ್ಟಿ ಸತ್ಯವನ್ನು ಮೂರ್ತಕಲ್ಪನೆಯಲ್ಲಿ ಮೂರ್ತೀಭವಿಸಿದಂತಿದೆ. ಇದೇ ಸತ್ಯವನ್ನು 'ಬಿಡಿಮುತ್ತು'[67] ಕವನದಲ್ಲಿ :

'ಮಣ್ಣೆಂದು ಜರೆಯುವದು !
ಏನು ಮಣ್ಣೋ ಕಾಣೆ?
ಮಣ್ಣು ಬೆಳೆ, ಮಣ್ಣು ಕಳೆ, ಮಣ್ಣುಗಂಪು.
ಒಡೆಯಬಿಟ್ಟರು, -
ಒಡಲು ಬಿಡದು ಮಣ್ಣಿನ ನೆರೆಯ
ಬೂದಿಯಾದರು ಬದುಕು,
ಮಣ್ಣೆ ತಂಪು.'

ಎಂದು ವರ್ಣಿಸಿ ಭೂಮಿತಾಯಿಯ ತುಂಬು ಪ್ರೀತಿಯನ್ನು ದರ್ಶಿಸಿದ್ದಾರೆ. ಆದರೆ ಅವಳ ಸೃಷ್ಟಿಯಾದ

ಮಾನವ ದುರಾಸೆಯಿಂದ, ದೌರ್ಜನ್ಯದಿಂದ ವರ್ತಿಸಿ ಇತರರ ಪ್ರೀತಿಯ ರಕ್ತವನ್ನು ಚಲ್ಲುವ ಬಗೆಯನ್ನು ಕಂಡು ನೊಂದಿದ್ದಾಳೆ. ಬೇಂದ್ರೆಯವರು " 'ಇಳೆ' ಎಂದರೆ ಬರಿ ಮಣ್ಣಲ್ಲ"[68] ಎಂಬ ಕವನದಲ್ಲಿ ಈ ಪ್ರಶ್ನೆಯನ್ನು ಎತ್ತಿದ್ದಾರೆ:

'ಅಣ್ಣ ತಮ್ಮಂದಿರು ತಮ್ಮ ತಮ್ಮೊಳಗೆ ಕಾದಾಡಲು ಬೇಕೆ?
ನಲುಮೆಯ ನೀರನು ಕೆನ್ನೀರೆನ್ನುತ ಚೆಲ್ಲಾಡುವಿರೇಕೆ?

ಬೇಂದ್ರೆಯವರಿಗೆ ಭೂಮಿತಾಯಿಯು ಮಾಯಕಾರತಿಯಾಗಿ ಕಂಡಿದ್ದಾಳೆ. 'ಯಾವೂರಾಕಿ ನೀ ಮಾಯಕಾರತೀ'[69] ಎಂಬ ಕವನದಲ್ಲಿ ಅವಳು ತನ್ನ ಬಗ್ಗೆ ತಾನೇ ಹೇಳಿಕೊಂಡಂತಿರುವ ಭಾಗದಲ್ಲಿ ಹೀಗೆ ನುಡಿದಿದ್ದಾಳೆ:

'ಅಸರಂತ ತಿರುಗೋ ಆಕಿಗೆ
ಯಾವೂರಂತ ಏನ ಕೇಳ್ತೀ
ನನ್ನ ಬೆನ್ನೀಲೆ ತಿರುಗ್ಯಾವ ಕಲ್ಲೂ ಮರಾ.
ಸ್ಥಿರಾ ಅಂದ್ರೆ ಸ್ಥಿರಾ ನಾನು
ಚರಾ ಅಂದ್ರೆ ಗೋಃಚರಾ
ನಿದ್ದಿ ಕೂಡ ಇಲ್ಲಾ, ಒಂದ ಜರಾ.
ಎಚ್ಚರಾಗಿ ಸಾಲಿಗೆ ಸಾಲು ನಡದೈತಿ ಸೂರ್ಯನ ಯಾತ್ರಿ
ಗ್ರಹಚಾರ ಎಲ್ಲಾ ಗರಗರಾ.'

ಅದೇ ಕವನದಲ್ಲಿ ಸದಾ ಕ್ರಿಯಾಶೀಲಳಾಗಿರುವ ಭೂಮಿತಾಯಿಯು, ತಾನು ಭೂಪತಿ ಎಂದು ವರ್ತಿಸಿದ ರಾಜರನ್ನು ಹರಾಜು ಹಾಕಿ ಮಣ್ಣುಗೂಡಿಸಿದ ಚಿತ್ರವಿದೆ.

'ರಾಜರ ಮುಕುಟಮಣಿ ನೆತ್ತಿಗಾಗಿ ಬುಗುಡಿಗಾಗಿ
ಯಾವ್ಯಾವದೋ ಸಂತ್ಯಾಗ ಮಾರತಿ

☆ ☆

ಭುಜಬಲ, ಕುಜಬಲ, ನಾಭಲಾ ನೀಭಲಾ
ತಾಯಿಗ್ಗಂಡರ ಕತ್ತನ್ನ ಮುರಿದೀ. '[255]

ಇದು ಭೂಮಿತಾಯಿಯು, ತನ್ನ ಪುತ್ರನಾಗಿ ಹುಟ್ಟಿ ಮಗನಂತೆ ವರ್ತಿಸದೆ ತಾಯಿಗಂಡನಾದ ಹುಲುಮಾನವನನ್ನು ಶಿಕ್ಷಿಸುವ ರೀತಿಯಾಗಿದೆ. ಈ ಬಗೆಯ ಭೂಮಿತಾಯಿ ಮತ್ತು ಅವನ ಮಕ್ಕಳನ್ನು ಚಿತ್ರಿಸಿರುವ ಬೇಂದ್ರೆ ದೃಷ್ಟಿಯಲ್ಲಿ ಮನುಷ್ಯ ಕಾಮ ಮತ್ತು ಕ್ರೌರ್ಯದಿಂದ ವರ್ತಿಸಿ ತನ್ನಂತಹ ಇತರ ಮಾನವರಿಗೆ ಹಾಗೂ ಎಲ್ಲ ಜೀವಜಂತುವಿಗೆ ವಿನಾಶಕಾರಿಯಾಗಿರುವ ನೋವು ಇದೆ. ಅದಕ್ಕೆ ಪ್ರತಿಫಲವೆಂಬಂತೆ ಅವನ ನಾಶವೂ ಆಗುತ್ತದೆ. ಅವನು ತನ್ನ ಮಿತಿ ಅರಿತು ಬಾಳಬೇಕು, ಭೂಮಿ ತಾಯಿಯ ಮೇಲೆ ಆಕ್ರಮಣ ನಡೆಸಬಾರದು, ಅದರಿಂದ ಅವನ ಸರ್ವನಾಶ ಎಂಬ ಜೀವಧರ್ಮದ ಚಿಂತನೆಯಿದೆ.

ಮೊದಲಗಿತ್ತಿಗೆ 'ನೆತ್ತರ ಮೀಯಿಸುವ ಕೆಂಚರ ಕೈಯಿಳಿಸಿ | ಮೊದಲಗಿತ್ತಿಯೆ ನೀನು ಮೆರೆಯುತಿಹೆ' ಎಂದು ಹೇಳುವ ಕವಿ, ಭೂಪತಿಯಾಗದೆ ಭೂಮಿಯ ಮಗನಾಗುವ ವ್ಯಕ್ತಿ ಹುಟ್ಟಿ ಬರಲಿ ಎಂದು ಆಶಿಸಿದ್ದಾರೆ.

'ಹಾಲಿನ ಹೃದಯಕೆ ಕುಬ್ಬುಸವನು ತೊಡಿಸಿ
ಹೂ ಮುಡಿಸಿಕೊಂಡೆಂದು ನೀನಲಿವೆ?
ಬಸಿರು ತುಂಬಲು ಹಸಿರುಡಿಗೆಯನುಟ್ಟೆಂದು
ವನವಾಸ ನವಮಾಸ ತೀರಿಸುವೆ?'

ಇದನ್ನು ಕೀರ್ತಿನಾಥ ಕುರ್ತಕೋಟಿಯವರು 'ಭೂಮಿಯ ಮೇಲೆ ಮಕ್ಕಳ ರಾಜ್ಯವಾಗಬೇಕಾದರೆ, ಮನುಷ್ಯ ಮತ್ತು ಭೂಮಿಯ ಸಂಬಂಧ ನಿಜವಾದ ಅರ್ಥದಲ್ಲಿ ತಾಯಿ ಮಕ್ಕಳ ಸಂಬಂಧವಾಗಬೇಕು'[70] ಎಂದಿದ್ದಾರೆ. ಹೀಗೆ ಭೂಮಿತಾಯಿಯ ಕವನಗಳಲ್ಲಿ 'ಅಂಬಿಕಾತನಯ'ನ ತಾಯಿ ತತ್ತ್ವದ ಸೃಷ್ಟಿ, ಸ್ಥಿತಿ, ಲಯಕಾರಕ ಮುಖಗಳ ದರ್ಶನವಾಗುತ್ತದೆ.

**ಬೆಳಕಾಗಲೆಮ್ಮ ಬದುಕು**

ಬೇಂದ್ರೆಯವರಿಗೆ ಭೂಮಿಯು ಪಶು-ಪಕ್ಷಿ ಮಾನವರಿಗೆ ಜೀವ ಕೊಟ್ಟು- ತನ್ನ ಇಡೀ ದೇಹವನ್ನೇ ಆಹಾರದ ನೆಲೆಯಾಗಿ ಮಾಡಿಕೊಂಡು ಕಾಪಾಡುತ್ತಿರುವ ತಾಯಿಯಾಗಿದ್ದಾಳೆ. ಪಾತ್ರಕ್ಕೆ ತಕ್ಕಂತೆ ಅವರಿಗೆ ಪೋಷಕದ್ರವ್ಯ ನೀಡಿ, ಕೂಸಾದ ಮಾನವನನ್ನು ಇತರ ಎಲ್ಲ ಪಶು ಪ್ರಾಣಿ ಜೀವಜಂತುಗಳನ್ನು, ಜಡ ಚೇತನಗಳನ್ನು ರಕ್ಷಿಸುತ್ತಿದ್ದಾಳೆ. ಅದನ್ನು ಬೇಂದ್ರೆಯವರು 'ಭೂಮಿತಾಯಿ'[71] ಎಂಬ ಕವನದಲ್ಲಿ:

'ಮೈತುಂಬ ಬಾಯಿ ನೀನು
ತುಟಿ ಮುದ್ದು ನನ್ನ ಪಾಲು
ಎದೆಯಾಳ ಮೊಲೆಯು ನೀನು
ಮೈತುಂಬ ನನಗೆ ಹಾಲು'

ಎಂದು ನುಡಿಯುತ್ತ ಕೂಸಾದ ಮಾನವನನ್ನು ಅವಳು 'ಬಾನಗಲ ತೊಟ್ಟಿಲಲ್ಲಿ ತೂಗುತ್ತಿರುವಳು' ಎಂದು ಭೂಮಿಯ ವಿರಾಟ್ ಶಕ್ತಿಯನ್ನು ಪರಿಚಯಿಸಿದ್ದಾರೆ. ಜೊತೆಗೆ ಅವಳು ನಕ್ಷತ್ರಗಳ ಕಟ್ಟುಗಳನ್ನು ಕಟ್ಟಿರುವುದನ್ನು ಕಂಡು, ಆ ನಕ್ಷತ್ರಗಳಂತೆ ಅವನು ಬೆಳಗಲು ಆಶಿಸಬೇಕು, ಅವನ ಚೈತನ್ಯ ಪ್ರಕಾಶವಾಗಬೇಕು ಎಂಬುದು ಭೂಮಿಯ ಅಪೇಕ್ಷೆ ಎಂದು ಸಾರಿದ್ದಾರೆ:

'ಬಾನಗಲ ತೊಟ್ಟಿಲಲ್ಲಿ
ನೀ ತೂಗುತಿರಲು ನನ್ನ;
ಕಟ್ಟಿರಲು ಚಿಕ್ಕೆ ಕಟ್ಟಿ
ನಾ ಮರೆವುದೆಂತು ನಿನ್ನ?'

ಹೀಗೆ ವ್ಯಕ್ತಿ ವಿಕಾಸವಾಗುತ್ತ ಬೆಳಕಾಗಲು ಭೂಮಿತಾಯಿಯೇ ಕಾರಣಳಾಗುತ್ತಾಳೆ. ಆ ಶಕ್ತಿ ಅವಳೇ ನೀಡಿದ್ದಾಳೆ. ಆ ತಾಯಿಯನ್ನು ಬರಿ ನೆಲ, ಆಧಾರ ಎಂದಷ್ಟೆ ತಿಳಿದರೆ ಸಾಲದು. ಆಕೆ ನೀಡುವ ಬೆಳಕಿನಿಂದ ತಾವು ಬೆಳಕಾಗಬೇಕು, ವಿಕಾಸ ಪಥವನ್ನು ಕಾಣಬೇಕು ಎಂದು ಬೇಂದ್ರೆ ನುಡಿದಿದ್ದಾರೆ.

'ಓ ತಾಯಿ ನೆಲವೆ ! ನಿಲವೆ!
ತಮ್ ಬೆಳಕು ಹೊಮ್ಮಲಿನ್ನು.
ನಮ್ ಮೈಯ್ಯ ಬೆಳಕುದುಂಬೆ
ನೀನಾಗನಲಿವೆ ಗೆಲುವೆ.'

ಹಾಗೆ ಬೆಳಕಾಗುವ ಮಾನವರೆಲ್ಲ ಒಂದೆ ಎಂದು ಈ ಕವನ ಸಾರುತ್ತ, ವಿಶ್ವಮಾನವ ತತ್ತ್ವ ಈ ಭೂಮಿಯ

ಗುಣ ಎಂದು ಸಾರಿದೆ. ಅದನ್ನು ಅರ್ಥ ಮಾಡಿಕೊಂಡು ಭ್ರಾತೃಭಾವದಿಂದ ವಿಶ್ವದ ಜನತೆ ಬದುಕಿದಾಗ ಪ್ರತಿ ವ್ಯಕ್ತಿ ಪೂರ್ಣ ವ್ಯಕ್ತಿತ್ವವನ್ನು ಹೊಂದುತ್ತಾನೆ ಎಂದು ಬೇಂದ್ರೆ ನುಡಿದಿದ್ದಾರೆ.

'ಯಾ ಬಣ್ಣವಿದ್ದರೇನು
ಯಾಕಣ್ಣ ಅದರ ಮಾತು?
ಬೆಳಕಾಗಲೆಮ್ಮ ಬದುಕು
ಬಂದೀತು ಜೀವ ಹೂತು.'

ಇದನ್ನು ವಾಮನ ಬೇಂದ್ರೆಯವರು 'ವರ್ಣ ದ್ವೇಷ ಅಳಿಯದೆ ಮಾನವನಲ್ಲಿ ಪ್ರಗತಿ ಅಸಾಧ್ಯ ಎಂಬ ಮಾತು ಈ ರೂಪಕದಲ್ಲಿದೆ. ಹಾಲು, ಬೆಳಕು, ಸುಖ, ಹಾಡು, ಅರಿವು ಮತ್ತು ಹಗಲು ಎಲ್ಲವುಗಳ ಬಣ್ಣ ಬಿಳಿದು. ಇದು ಜ್ಞಾನದ ಸಂಕೇತ. ಮನುಷ್ಯನಿಗೆ ಭೂಮಿತಾಯಿಯ ಬಗ್ಗೆ ಇರುವ ಎಲ್ಲ ಅಜ್ಞಾನದ ಪರದೆಗಳು ಸರಿಯಲಿ ಎಂಬ ಹಾರೈಕೆ ಈ ಕವನದ ಮೂಲಸತ್ತ್ವ. ತಮ್ ಬೆಳಕು ಮತ್ತು ನಮ್ ಮೈಯು ಈ ಶಬ್ದಪುಂಜವು ಸುಖಸ್ಪರ್ಶ ದ್ಯೋತಕವಾಗಿದೆ'[72] ಎಂದು ವಿಮರ್ಶಿಸಿದ್ದಾರೆ.

ಬೇಂದ್ರೆಯುವರ ಕಾವ್ಯದಲ್ಲಿ ಅವರ ಪಾಡು ಹಾಡಾಗಿ ಹರಿದಿದೆ. ಅದು ಅವರ ಭೂಮಿತಾಯಿಯನ್ನು ಕುರಿತ ಕವನಗಳಲ್ಲಿ ವಿಕಾಸಗೊಂಡು ಅರಿವು, ನಗುವಾಗಿ ಬೆಳಕನ್ನು ತರುವುದಾಗಿದೆ.

'ಯಾ ಪಾಡು ತೋಡಿಯೇನು?
ಈ ಹಾಡು ಬೇಕು ನಮಗೆ
ಅರಿವಾಗಿ ಹೀಗೆ ನಗಲು
ಬಾಳುದ್ದ ಒಂದೆ ಹಗಲು.'

**ಪ್ರಕೃತಿಮಾತೆ**

ಬೇಂದ್ರೆಯವರಿಗೆ ಪ್ರಕೃತಿ ಬೇರೆಯಲ್ಲ, ತಾಯಿ ಬೇರೆಯಲ್ಲ. ತನ್ನ ಒಡಲ ಹುಟ್ಟಿಗೆ ಕಾರಣಳಾದ ತಾಯಿಯೇ ಪ್ರಕೃತಿ. ಅವಳಿಂದ ತನಗೆ ಬೆಳಕು ಮತ್ತು ಅರಿವು. ಅವಳ ಪ್ರತಿಭೆಯ ಕಣ ತಾನು ಎಂಬುದು ಬೇಂದ್ರೆ ಭಾವ.

'ಹಸಿರುಟ್ಟ ಬಸುರಿಯ ಹಾಂಗ
ನೆಲ ಹೊಲಾ ಹ್ಯಾಂಗ
ಅರಿಸಿಣ ಒಡೆಧಾಂಗ
ಹೊಮ್ಮತಾವ| ಬಂಗಾರ ಚಿಮ್ಮತಾವ'

ಎಂಬುದು ಬೇಂದ್ರೆ ಪ್ರಕೃತಿಯಲ್ಲಿ ಕಾಣುವ ತಾಯಿತನ. ಅವರಿಗೆ 'ಚಿಗರಿಗಂಗಳ ಚೆಲುವಿ', 'ಮೊದಲಗಿತ್ತಿ', 'ಚಳಿಯಾಕೆ', 'ನನ್ನವಳು', 'ಶ್ರಾವಣ', 'ಧಾರವಾಡದ ತಾಯಿ', 'ಕರ್ನಾಟಕ ಮಾತೆ', 'ಭಾರತಮಾತೆ', 'ವಿಶ್ವಮಾತೆ' ಪ್ರಕೃತಿಯೇ ಆಗಿದ್ದಾರೆ.

ಬೇಂದ್ರೆಯವರಿಗೆ ಪ್ರಕೃತಿಯ ವೈಭವವೆಂಬುದು ಶ್ರಾವಣ ವೈಭವ. ಅವರು ಶ್ರಾವಣಮಾಸದಲ್ಲಿ ಕಂಡ ಪ್ರಕೃತಿಯನ್ನು ಬಣ್ಣಿಸಿರುವುದೇ ಪ್ರಕೃತಿಮಾತೆಯ ಚಿತ್ರಣವಾಗಿದೆ. ಪ್ರಕೃತಿಯಲ್ಲಿ ಜಡ ಜೀವವೆಂಬ ಭೇದವಿಲ್ಲ. ಜಡವೇ ಜೀವರೂಪ ಪಡೆದು ನಲಿದು ನರ್ತಿಸಿ ಜಡವಾಗಿ ಹೋಗುತ್ತದೆ. ಹೀಗೆ ಜಗದೆಲ್ಲ ಜೀವಜಂತು, ಮಾನವರನ್ನು ಸೃಷ್ಟಿಸಿ, ಪೋಷಿಸಿ, ನಲಿಸಿ, ನಲಿದು ಸಂತಸಪಡುವವಳು ಬೇಂದ್ರೆಯವರ

ಪ್ರಕೃತಿಮಾತೆಯಾಗಿದ್ದಾಳೆ. ಆ ಪ್ರಕೃತಿಯಲ್ಲಿ ರುದ್ರ ಭಯಂಕರತೆ, ನೋವು ದುಃಖದ ಎಳೆಯೂ ಇದೆ. ಹೀಗೆ ರಸ, ವಿರಸ, ಸಮನ್ವಿತವಾದ ಸಮರಸರೂಪಿ ಪ್ರಕೃತಿ ಅವಳಾಗಿದ್ದಾಳೆ. ಅವರಿಗೆ ಪ್ರಕೃತಿಯೆಂದರೆ ಹಸಿರು. ಅದು ಜೀವಸಂಜೀವಿನಿ. ಜೀವವಿಕಾಸದ ಮೊದಲ ಹಂತ ಹಸಿರು ಪಾಚಿಯಿಂದ ಉಂಟಾದುದು ಎಂಬುದು ವೈಜ್ಞಾನಿಕ ಸತ್ಯ. ಅದೇ ಹಸಿರು ಜೀವಪೋಷಕವಾಗಿ ಕವಿಗೆ ಆಹ್ಲಾದದ ಚೇತನಶ್ರೀಯಾಗಿದೆ. ಅದನ್ನು ಬೇಂದ್ರೆಯವರು 'ಶ್ರಾವಣದ ವೈಭವ'[73] ಕವನದಲ್ಲಿ :

'ಏನು ಹಸಿರು! ಏನು ಹಳದಿ!
ಸುತ್ತು-ಮುತ್ತು ನೋಡು ಕೆಳದಿ!
ಹುಲ್ಲ ಹೂವು ಆದರೇನು;
ಹಬ್ಬದುಬ್ಬಿನಲ್ಲಿವೆ;
ದಿಬ್ಬಗಳನು ತಬ್ಬಲೆಂದು
ಎಲ್ಲ ನೆಲಕು ಹಬ್ಬಿವೆ'

ಎಂದು ಹೇಳುತ್ತ ಅದೇ ಹಸಿರು ವಿಕಾಸ ಹೊಂದಿದ್ದನ್ನು ಸೂಚಿಸಿದ್ದಾರೆ. ಅದೇ ಜೀವವಿಕಾಸವನ್ನು ರೂಪಕ ಶೈಲಿಯಲ್ಲಿ ಚಿತ್ರಿಸುತ್ತ:

'ಹುಡಿಯು ಅರಳಿ ಹೂವು ಆಗೆ?
ಹುಳಕೆ ರೆಕ್ಕೆ ಒಡೆದವು;
ಮುಸುಕು ಹರಿದು ಪಕ್ಕ ತೆರೆದು
ಚಿಟ್ಟೆ ಮುಕ್ತಿ ಪಡೆದವು.'

ಎಂದು ಹೇಳಿ, ಅದು ಪ್ರಕೃತಿಮಾತೆಯ ಹಿಗ್ಗಿನಿಂದ ಆದುದು, ಅವಳ ನಯದ ಭಾವವೇ ಹೀಗೆ ಸೃಷ್ಟಿಶೀಲವಾಗಿದೆ ಎಂದಿದ್ದಾರೆ, ಆ ಹುಳು ವಿಕಾಸವಾಗುತ್ತ ದೇವತಾಸ್ತ್ರೀಯರಾದುದನ್ನು ಪ್ರತಿಮಾತ್ಮಕವಾಗಿ :

'ರೆಕ್ಕೆ ಹುಳಗಳಲ್ಲ ಇವೂ
ಚಿಕ್ಕ ರೂಪ ತಾಳಿದ
ಚೊಕ್ಕ ಅಪ್ಸರಿಯರೇ
ನಕ್ಕು ನಲಿಯುತಿರುವರು'

ಎಂದು ಸಾರಿದ್ದಾರೆ. ಇದು ಸೃಷ್ಟಿಶೀಲವಾಗುವುದು ಪ್ರಣಯದಾಟದಿಂದ, ಅದೇ ಈ ಜೀವಿಗಳಿಗೆ ಮುಕ್ತಿ ಸೋಪಾನ ಅಂದರೆ ಅವುಗಳ ವಿಕಾಸ ಎಂಬುದನ್ನು 'ಇಂದ್ರಜಾಲದಿಂದ ಬಂದ ಸುಂದರಿಯರು' ಎಂದಿದ್ದಾರೆ. ಹೀಗೆ 'ಪ್ರಕೃತಿಮಾತೆ' ಸೃಜನಶೀಲಳಾಗುವುದು ಕವಿಯ ಸೃಜನಶೀಲತೆಯನ್ನು ಎಚ್ಚರಿಸಿದಂತಿದೆ. ಕವಿ ಮತ್ತು ಪ್ರಕೃತಿ ಬೇರೆಬೇರೆಯಲ್ಲ ಎಂಬಂತೆ ಪ್ರಕೃತಿಯನ್ನು ಕುರಿತ ಕವನಗಳಿವೆ. ಜಡ, ಜೀವ ಬೇರೆಬೇರೆಯಲ್ಲ, ಅದು ಒಂದೇ ಎಂಬುದು ಇಲ್ಲಿ ಕಾವ್ಯವಾಗಿದೆ.

'ಒಂದನೊಂದು ತಬ್ಬಿ ಮುತ್ತಿ
ಏಕ ಜೀವವಾಗಿವೆ.
ಜಡವು ಜೀವವೆಂದು ಸುಳ್ಳೆ
ಎರಡು ರೂಪವಾಗಿವೆ.'

**ಚಿಗತsದ ನಸುಕಿನ ಚಿಗುರು**

ಪ್ರಕೃತಿಮಾತೆಯೆಂದರೆ ಬೆಳಕು ಹಾಗೂ ಜ್ಞಾನದ ಸಂಕೇತ. ಆದಕಾರಣ ಬೇಂದ್ರೆಯವರು ಇಡೀ ಮನುಕುಲವನ್ನು 'ಸೂರ್ಯನ ಹೊಳಿ'[74] ಎಂಬ ಕವನದಲ್ಲಿ ಬೆಳಕು ಮತ್ತು ಜ್ಞಾನದಲ್ಲಿ ಮೀಯಲು ಆಹ್ವಾನಿಸಿದ್ದಾರೆ.

'ಬಂದsದ ಸೂರ್ಯನs ಹೊಳೀ
ನಡೀ ಮೈತೊಳಿ, ನೀರಿನ್ಯಾಗಿಳಿ,
ಬಾ ಗೆಣೆಯಾ ಯಾಕ ಮೈಛಳೀ ||

☆ ☆

ಚಿಗತsದ ನಸುಕಿನಾ ಚಿಗುರು
ಘುಮಘುಮ ಅಗುರು-
ಗಂಧದsತಿಗುರು-
ಅರಳ್ಯsದ ಹೊತ್ತ ಹೂ ಹಗುರು
ಕೇಳಿಸ್ತಾವ ಯಾರವೀಗೆ ಗೆಜ್ಜಿ
ಗಾಳಿಯೊಳು ಹೆಜ್ಜಿ, ನಿದ್ದಿಯs ಜಜ್ಜಿ
ಕುಣಿತಾವ ಎಚ್ಚರಾ ಉಜ್ಜಿ.'

ಬೇಂದ್ರೆಯವರು ಪ್ರಕೃತಿಯ ಗಂಧ, ನಾದ, ಎಚ್ಚರವನ್ನು ಕಾವ್ಯವಾಗಿಸಿದ್ದಾರೆ. ಅವರು ಪ್ರಕೃತಿಯ ಸೃಷ್ಟಿಯಾದ ಈ ಮಾನವ ಪ್ರಾಣಿಯನ್ನು ಪೂರ್ಣನನ್ನಾಗಿ ಮಾಡಲು ಪ್ರಕೃತಿಮಾತೆಯನ್ನೇ ಪ್ರಾರ್ಥಿಸಿರುವ ರೀತಿ ಇಡೀ ಮನುಕುಲದ ಪ್ರಾರ್ಥನೆಯಂತಿದೆ.

'ಈ ಮಣ್ಣಿನ ಒಡಲಲ್ಲಿ
ಈ ಗಾಳಿಯ ಎಳೆಯಲ್ಲಿ
ಈ ಮಿಂಚಿನ ಸುಳಿಯಲ್ಲಿ
ನಿನ್ನ ಮಗುವೊಂದು ತನ್ನ ಜೀವವನ್ನೆ ಕಣ್ಣಾಗಿ ಮಾಡಿ
ನಿನ್ನನ್ನೇ ನೋಡುತ್ತಿದೆ, ನಿನ್ನನ್ನೇ ಬೇಡುತ್ತಿದೆ.
ಈ ವಿಕಲ ಪ್ರಾಣಿಯನ್ನು
ಸಕಲ ಜೀವನಕ್ಕಾಗಿ ಸಿದ್ಧ ಮಾಡು ಎಂದು.'[75]

ಆ ಪ್ರಕೃತಿಮಾತೆಗೆ ಈ ಜೀವಗಳು ವಿಕಸಿಸಿ ಕಂಪು ಬೀರಿ ನಳನಳಿಸುವುದೇ ಅವು ಸಲ್ಲಿಸುವ ಪೂಜೆ. ಈ ಜಗದ ಸೃಷ್ಟಿಯ ಜಡ, ಚೇತನ ಎಲ್ಲವೂ ಅವಳಿಗೆ ಋಣಿಯಾಗಿವೆ. ಅದನ್ನು ಬೇಂದ್ರೆಯವರು 'ನಕ್ಷತ್ರ'[76] ಕವನದಲ್ಲಿ ರೂಪಕಶೈಲಿಯಲ್ಲಿ ಹೀಗೆ ಬಣ್ಣಿಸಿದ್ದಾರೆ:

'ಮರಮರವು ಬಾನಿಗೋ ಕೈಮುಗಿವ ರೀತಿ,
ಹೃದಯವೇ ಸುಪ್ತ - ಜಪ - ವಿನಯ ನೀತಿ.
ಗಂಧವ ನೀಡಿದ ಮಣ್ಣಿಗೆ ತಾನೇ
ಬಾಡಿದ ಹೂವಿನ ಪೂಜೆ.'!

ಹೀಗೆ ಪ್ರಕೃತಿಮಾತೆಗೆ ವಿನಯದಿಂದ ನಡೆದುಕೊಂಡು ನೀತಿಯುಕ್ತವಾಗಿ ಬಾಳಿದರೆ ಅದು ಅವಳಿಗೆ ತೋರಿಸುವ ಕೃತಜ್ಞತೆ ಎಂದಿದ್ದಾರೆ. ಇದು ಮಾನವಕೃತ ಯಂತ್ರದಂತಲ್ಲ. ಅದಕ್ಕೆ ಅದರದೇ ಗತ್ತು ತನ್ನದೇ ಆದ ಮೋಡಿ ಇದೆ. ಅದನ್ನು ಅರಿತು ಮಾನವ ಬಾಳಬೇಕು ಎಂಬ ಕಿವಿಮಾತನ್ನು 'ವಚನಗಳು'[77] ಎಂಬ ಕವನದಲ್ಲಿ ಮಾನವಕೋಟಿಗೆ ಹೇಳಿದ್ದಾರೆ :

> 'ಪ್ರಕೃತಿ ಯಂತ್ರಕೃತ ಒಡವೆಯಲ್ಲ
> ಈ ಒಡೆಯನ ಒಡನಾಡಿ
> ಅದರ ಗತ್ತು ಓ ಈ ಜಗತ್ತು ತಾನ್
> ಅದೇ ಗಾಡಿ ಮೋಡಿ.'

ಬೇಂದ್ರೆಯವರ ಪ್ರಕೃತಿಕಾವ್ಯವನ್ನು ಕುರಿತು ಎಚ್.ಎಸ್. ರಾಘವೇಂದ್ರರಾವ್ ಅವರು "ಭೂಮಿಯ ಇತಿಹಾಸಮುಖ ಮತ್ತು ಪ್ರಕೃತಿಮುಖಗಳ ನಡುವಿನ ಸಾಮ್ಯ ವೈಷಮ್ಯಗಳ ವೈಚಾರಿಕವಾದ ಆದರೂ ಕಾವ್ಯಾತ್ಮಕವಾದ ಪರಿಶೀಲನೆ ಬೇಂದ್ರೆಯವರ ಪ್ರಕೃತಿಕಾವ್ಯದ ಬಹುಮುಖ್ಯವಾದ ನೆಲೆ"[78] ಎಂದು ಹೇಳಿದ್ದಾರೆ. ಬೇಂದ್ರೆಯವರಿಗೆ ಭೂಮಿ ಮತ್ತು ಪ್ರಕೃತಿ ವೈಚಾರಿಕತೆಯನ್ನು ಬೆಳೆಸುವ ನೆಲೆಯಾಗಿದ್ದರೂ ಅವು ಅವರ ಭಾವನಾವಲಯದಲ್ಲಿ ಮಾತೆಯಾಗಿ ವಿಜೃಂಭಿಸಿ ಪೋಷಕ ದ್ರವ್ಯಗಳಾಗಿವೆ. ಕೀರ್ತಿನಾಥ ಕುರ್ತಕೋಟಿಯವರು ಹೇಳುವಂತೆ "೧೯೨೪ರಲ್ಲಿ ತಾಯಿಯನ್ನು ಕಳೆದುಕೊಂಡ ಬೇಂದ್ರೆಯವರಿಗೆ ಮುಂದಿನ ಜೀವನದಲ್ಲಿ ತಾಯಿ ಅರ್ಥಪೂರ್ಣವಾದ ಪ್ರತೀಕವಾದಳು. ಧಾರವಾಡ, ಕರ್ನಾಟಕ, ಭಾರತ, ವಿಶ್ವ, ಲಲಿತಾ, ಗಾಯತ್ರಿ, ಪಾಂಡಿಚೇರಿಯ ಮದರ್, ಗಂಗೆ - ಇವೆಲ್ಲ ತಾಯ್ತನದ ಸೃಜನ ಮತ್ತು ಧಾರಣಾಶಕ್ತಿಯ ವಿವಿಧ ಪ್ರತಿಮೆಗಳಾಗಿವೆ"[79].

**ವಿಶ್ವಮಾತೆ**

ಬೇಂದ್ರೆಯವರು 'ನಾನು' ಎಂಬ ಕವನದಲ್ಲಿ ತನ್ನನ್ನು 'ವಿಶ್ವಮಾತೆಯ ಗರ್ಭಕಮಲಜಾತ ಪರಾಗ| ಪರಮಾಣು ಕೀರ್ತಿ ನಾನು' ಎಂದು ಹೇಳಿಕೊಂಡಿದ್ದಾರೆ. ಅವರ ಐದು ಐದೆಯರಲ್ಲಿ ಪ್ರಥಮಳು ವಿಶ್ವಮಾತೆ. ಅವರು "ಕನ್ನಡ, ಭಾರತ, ಜಗತ್ತು, ಇವು ಹೇಳಲಿಕ್ಕೆ ಮೂರು ಮಾತು; ಆದರೆ ಮಾನವ ಕುಲಕ್ಕೆ ಏಕ ಭೂಮಿ."[80] "ಪೃಥ್ವಿಗೆ ಬೇಕಾಗಿರುವುದು ಜೀವಂತ ಇರುವುದರ ಅಭ್ಯಾಸ. ಜೀವದಿಂದ ಜೀವಕ್ಕೆ ಹೋಗುವುದರ ಅಭ್ಯಾಸ. ಇಳೆಯ ಮಕ್ಕಳೆಲ್ಲ ಒಂದಾಗಿ ಬಾಳುವ ವಿದ್ಯೆ"[81] ಎಂದು ವಿಶ್ವಚಿಂತನೆಯನ್ನು ನಡೆಸಿದ್ದಾರೆ. ವೇದಕಾಲದ ಋಷಿಗಳು ವಿಶ್ವಮಾತೆಯನ್ನು 'ಅದಿತಿ' ಎಂದು ಕರೆದಿದ್ದು ನಮಗೆ ಈಗಾಗಲೇ ತಿಳಿದಿದೆ.

ಬೇಂದ್ರೆ ಕಾವ್ಯದಲ್ಲಿರುವ ವಿಶ್ವತತ್ತ್ವವನ್ನು ಕುರಿತು ಶಂಕರ ಮೊಕಾಶಿ ಪುಣೇಕರ ಅವರು "ಬೇಂದ್ರೆಯವರಿಗೆ ವಿಶ್ವ ಒಂದು ಜೀವಂತ ತತ್ತ್ವ. ತನ್ನ ಅರ್ಥವನ್ನು ಹೇಳಿಕೊಡಲು ಆಸೆಬಿಟ್ಟು ನಿಂತುಕೊಂಡ ಅಶ್ವ, 'ಘುರ್ರೆ ಘುರೆ ಘೋಟಕಾ ನಡೆ ಅಂತಃಸ್ಫೋಟಕಾ', 'ಒಡವ್ಯಲ್ಲೊ ಮಗನೆ ಉಸಿರಿದ್ದೊಡಲು' ಎಂದು ಹೇಳುವ ಭೂಮಿ ತಾಯಿಯು ಅವರ ಜೀವಂತ ಅನುಭವ ಸೃಷ್ಟಿಯ ಪಾತ್ರವು. "ಈ ಸೃಷ್ಟಿ ಭಗವತ್ ದೃಷ್ಟಿ! ಇದರಂದವೇ ಭವಬಂಧ ಬರಿ ವಿಸರ್ಜನವಲ್ಲ." ಹೀಗೆಂದು 'ಸೌಭಾಗ್ಯದರ್ಶನ'ದಲ್ಲಿ ಹೇಳಿ, ಭೂಮಿ ಬರಿ ಮಣ್ಣೆಂದು ಭೂಮಿಗೀತವನ್ನು ಹಾಡುವವರಿಗೆ ಉತ್ತರ ಕೊಟ್ಟಿದ್ದಾರೆ. ಅದೇ ವಿಚಾರವನ್ನೇ 'ಇಳೆಯೆಂದರೆ ಬರಿ ಮಣ್ಣಲ್ಲ!' ಎಂಬ ಕವನದಲ್ಲಿಯೂ ಹೇಳಿದ್ದಾರೆ. ಈ ಸಾರ್ವದೈವಿಕತ್ವವು (Pantheism) ವರ್ಡ್ಸ್‌ವರ್ಥ್ ಇಲ್ಲವೆ ಶೆಲ್ಲಿ ಕವಿಗಳಂತೆ ಕೇವಲ ಕ್ಷಣಿಕ

ಕಾವ್ಯಾನುಭವವಾಗದೆ ಭಾರತೀಯ ಸಂಸ್ಕೃತಿಯ ಹಾಗೂ ಜೀವನದ ಸಾಮಾನ್ಯ ರಸಾಯನವಾಗಿ ಬರುತ್ತದೆ"[82] ಎಂದು ಹೇಳಿದ್ದಾರೆ.

**ಶಿವೆಯ ಮೂಲಕ ಶಿವ ಈಶನಾದ**

ಶ್ರೀ ಶಂಕರಾಚಾರ್ಯರ 'ದೇವಿ ಕ್ಷಮಾಪನ ಸ್ತೋತ್ರ' ಬೇಂದ್ರೆಯವರಿಗೆ ಅತ್ಯಂತ ಪ್ರಿಯವಾಗಿ ಅದು ಅವರ ನಿತ್ಯಪಠನದಲ್ಲಿತ್ತು. ಆ ಸ್ತೋತ್ರದ ಕನ್ನಡ ಅನುವಾದ ನಮನ ಕವನ ಸಂಗ್ರಹದಲ್ಲಿ ಪ್ರಕಟವಾಗಿದೆ. ಅದರಲ್ಲಿಯ ಕೆಳಗಿನ ಸಾಲುಗಳು ಗಮನಾರ್ಹ.

ಕ್ಷಮಿಸು ಜನನಿ ಶಿವೆ ಸಕಲರನ್ನು ನೀ ಕೃಪೆಯದೋರಿ ಕಾಯಿ |
ಹುಟ್ಟ ಬಹುದಲಾ ಕೆಟ್ಟ ಮಗುವು ಇರಲಾಸ ಕೆಟ್ಟ ತಾಯಿ ||

☆ ☆

ಬಿಡಬೇಡ ಕೈಯ, ಅದು ತಕ್ಕುದಲ್ಲ ಕೇಳವ್ವ ಶಿವನ ಜಾಯೆ |
ಕೆಟ್ಟ ಮಗುವು ಹೋ! ಹುಟ್ಟಬಹುದು ಇರಬಹುದೆ ಕೆಟ್ಟ ತಾಯೆ ||

☆ ☆

ಜನನಿ ನಿನ್ನ ಜಪಮಹಿಮೆಯರಿಯದವ ಹೌದು ತೀರ ಬಡವ ||

☆ ☆

ಮೈಯ ತುಂಬ ಸುಡುಗಾಡ ಬೂದಿ, ವಿಷದೂಟ ಬಯಲನುಟ್ಟ |
ಜಡೆಯ ಕಟ್ಟಿ, ಹಾವನ್ನು ತೊಟ್ಟು ಪಶುಪತಿಯೆ ಆಗಿ ಬಿಟ್ಟ ||
ತಲೆಯ ಬುರುಡೆ ಕೈಯಲ್ಲಿ ಭೂತಗಣ, ಸುತ್ತಿಕೊಂಡೆ ಇರುವ |
ನಿನ್ನ ಕೈಯ ಹಿಡಿದಿರುವ ಪುಣ್ಯದಲಿ ಈಶನಾಗಿ ಮೆರೆವ ||
ಮೋಕ್ಷದಾಸೆ ನನಗಿಲ್ಲ ವೈಭವದ ಆಸೆಯಿಲ್ಲನೆವಕೆ |
ವಿಜ್ಞಾನದಾಸೆ ಸುಖದಾಸೆ ಕೂಡ ಇನಿಸಿಲ್ಲ ಇಂಥ ಸ್ತವಕೆ ||
ಅಂತೆ ನಿನ್ನ ಬೇಡುವೆನು ನಾನು ಆಮರಣ ತಪಿಸುತಿರಲಿ |
ಓ ಭವಾನಿ ರುದ್ರಾಣಿ ಶಿವ ಶಿವೇ ಎಂದು ಜಪಿಸುತಿರಲಿ ||[83]

ಇಲ್ಲಿಯ ಉಕ್ತಿಗಳು ಬೇಂದ್ರೆಯವರ ಜೀವನ ದೃಷ್ಟಿಯನ್ನು ರೂಪಿಸಿದವು. ತಾನು ಕೆಟ್ಟ ಮಗನಾಗಬಾರದು. ಜನ್ಮಕೊಟ್ಟ ತಾಯಿ ಎಲ್ಲಕ್ಕಿಂತ ಶ್ರೇಷ್ಠ. ಅವಳು ಭವಾನಿ, ರುದ್ರಾಣಿ, ಶಿವಶಿವೇ, ಪಾರ್ವತಿಗೆ ಸಮ. ಶಿವೆಯ ಮೂಲಕ ಶಿವ ಈಶನಾದ.

ಅಂಥ ಮಾತೆಯ ಜಪ ಬೇಂದ್ರೆ ಜೀವನ. ಅದೇ ಸ್ತೋತ್ರದಲ್ಲಿ :

ಆಪತ್ತಿನಲ್ಲಿ ನಾ ಮಗ್ನನಾಗಿ ಸ್ಮರಿಸುವೆನು ನಿನ್ನನೊಂದೇ |
ಹೇ ದುರ್ಗೆ ನೀನು ಕಾರುಣ್ಯಪೂರ್ಣೆ ನಿನ್ನೆಡೆಗೆ ಅಂತೆ ಬಂದೆ ||

☆ ☆

ಓ ತಾಯಿ ನಿನ್ನ ಕೃಪೆಸಾಕು, ಉಳಿದವರು ಹಿಡಿಯಲೆನ್ನ ಬಿಡಲಿ |
ಆಧಾರವಿರದೆ, ನಾನಾರ ನಂಬಿ ಈ ಬಗೆಯ ಮೊರೆಯನಿಡಲಿ ||

ಎಂದು ಬೇಂದ್ರೆಯವರು ಪ್ರಶ್ನಿಸಿದ್ದಾರೆ. ಬಂಗಾಲದಲ್ಲಿ ದುರ್ಗಾಮಾತೆ ಪೂಜೆಗೆ ಅತ್ಯಂತ ಮಹತ್ತ್ವ. ಆದುದರಿಂದ ಶ್ರೀ ಅರವಿಂದರಿಗೆ ದುರ್ಗಾ ಸ್ತೋತ್ರ ಪ್ರಿಯ. ಬೇಂದ್ರೆಯವರು ಧಾರವಾಡದ

ದುರ್ಗಾಮಾತೆಯನ್ನು ಧಾರವಾಡದ ತಾಯಿ ಎಂದು ನಂಬಲು ಇದೇ ಕಾರಣ.

ಶ್ರೀ ಶಂಕರಾಚಾರ್ಯರ ಸೌಂದರ್ಯಲಹರಿ ಸ್ತೋತ್ರವು ಶಿವನಿಗಿಂತ ಶಕ್ತಿಗೆ - ಪಾರ್ವತಿಗೆ ಮಹತ್ತ್ವ ಕೊಡುತ್ತದೆ. ಆ ಸ್ತೋತ್ರದ ಪ್ರಾರಂಭದ ಅನುವಾದ ಬೇಂದ್ರೆ ಮಾಡಿರುವುದು ಹೀಗಿದೆ :

'ಶಿವನು ಶಕ್ತಿಯುತನಾದರೇಯೆ ಜಗ ಪಡೆಯಲಾಪನವನು |
ಇಲ್ಲದಿರಲು ಮಿಡುಕಾಟ ಕೂಡ ಅವನಿಗಿಲ್ಲ ಅವನು ಶಿವನು ||
ಹರಿಗೆ ಹರಗೆ ಬ್ರಹ್ಮಾದಿಗಳಿಗೆ ನೀ ಪೂಜ್ಯೆ, ಪುಣ್ಯವಿರದೆ |
ಯಾವನವನು ಪೊಡಮಡುವನವ್ವ, ಹೊಗಳುವನು ಹಾಡಿ ಬರಿದೆ' ||[84]

ಈ ಶಿವೆ-ಪಾರ್ವತಿಯೇ ವಿಶ್ವಮಾತೆ! ಇವಳ ಅರ್ಧಾಂಗ ಸಂಪರ್ಕದ ಮೂಲಕ ಶಿವ ಜಗತ್ತನ್ನು ಆಳಲು ಶಕ್ತ. ಇವಳು ಹರಿ, ಹರ, ಬ್ರಹ್ಮರಿಂದ ಪೂಜೆ ಪಡೆದವಳು. ಆದುದರಿಂದ ಬೇಂದ್ರೆಯವರಿಗೂ ವಿಶ್ವಮಾತೆಯ ಆರಾಧನೆ ಪ್ರಥಮ ಕರ್ತವ್ಯವಾಗಿ ತೋರಿತು.

**ಪಾರ್ವತಿ ನೀನೇ ಸಲಹು**

ವಿಶ್ವಬಾಂಧವ್ಯ, ವಿಶ್ವಪ್ರೇಮ, ವಿಶ್ವಶಾಂತಿ, ವಿಶ್ವಕಲ್ಯಾಣಕ್ಕಾಗಿ ಬೇಂದ್ರೆಯವರು ಸಲ್ಲಿಸಿದ ಪ್ರಾರ್ಥನೆಯಲ್ಲಿ ಕನ್ನಡ ಮತ್ತು ಭಾರತದ ಮೇಲಿನ ಭಕ್ತಿ ಅಡಗಿದೆ. ಅದು ಕನ್ನಡಿಗರ ಹಾಗೂ ಭಾರತೀಯರ ಕಲ್ಯಾಣಕ್ಕಾಗಿ ಸಲ್ಲಿಸಿದ ಪ್ರಾರ್ಥನೆಯೂ ಆಗಿಬಿಡುತ್ತದೆ. ಈ ಪ್ರಾರ್ಥನೆ ಪ್ರಾಮಾಣಿಕತೆ ಹಾಗೂ ಸಾಮರ್ಥ್ಯ ಜನ್ಮ ಕೊಟ್ಟ ತಾಯಿಯ ಭಕ್ತಿಯ ಫಲ ಎಂಬುದು ಬೇಂದ್ರೆ ಶ್ರದ್ಧೆ. ಆದುದರಿಂದ ಬೇಂದ್ರೆಯವರು 'ಪಾರ್ವತಿ ನೀನೇ ಸಲಹು'[85] ಎಂಬ ಕವನದಲ್ಲಿ:

'ಈಶ್ವರ ನಿರ್ಮಿಸಿದೀ ಸೃಷ್ಟಿಯನು
ಪಾರ್ವತಿ ! ನೀನೇ ಸಲಹು.
ನಿನ್ನದೆ ಈ ನೆಲ, ನಿನ್ನದೆ ಈ ಜಲ
ನಿನ್ನದೆ ಕನ್ನಡ ಗೆಲಹು

✩ ✩

ಬಡಗಣ, ತೆಂಕಣ, ಪಡುವಣ, ಮೂಡಣ
ನಡುವಣ ಕನ್ನಡ ಪಂಚಶಿಖ
ಪರಮೇಶ್ವರನೊಲು ಪ್ರಪಂಚ ಪ್ರಕಟಿಸಿ
ಮೈದೋರಿತು ಇಗೊ ಪಂಚಮುಖ.

✩ ✩

ಈಶ್ವರನೊಲುಮೆಗೆ ಶ್ರದ್ಧೆಯೆ ಮೂಲ
ಅವನೊಡಗೂಡಲು ಶಕ್ತಿಬಲ.
ಆತ್ಮದಿ ಶ್ರದ್ಧೆಯು ಪ್ರಸಾದ ಪಡೆಯಲು
ಬೇಕಾಗಿರುವುದು ವೀರ ಛಲ'

ಎಂದಿದ್ದಾರೆ. ವಿಶ್ವಮಾತೆಯಾದ ಪಾರ್ವತಿಯೇ ಕನ್ನಡದ ಕಲ್ಯಾಣ ಮಾಡಬಲ್ಲಳು. ಕನ್ನಡಿಗರು ಕನ್ನಡ ಪ್ರೇಮ ಎಂಬ ಸ್ವಧರ್ಮವನ್ನು ಎಂದೂ ಕಳೆದುಕೊಳ್ಳಬಾರದು ಎಂಬುದಾಗಿ ಸೂಚಿಸಿದ್ದಾರೆ.

ವಿಶ್ವಮಾತೆಯಾದ ಪಾರ್ವತಿ, ಗಂಗೆಗೆ ಪ್ರಾಧಾನ್ಯ ಕೊಟ್ಟಿದ್ದಾಳೆ. ಗಂಗೆ ಶಿವನ ತಲೆ ಏರಿ ಮಂಡಿಸಿದ್ದಾಳೆ. ಅವಳಲ್ಲಿ ಬೇಂದ್ರೆ ಪ್ರಾರ್ಥನೆ ಸಲ್ಲಿಸುವುದು ಹೀಗೆ:

'ಕೊಳೆಯ ತೊಳೆವವರು ಇಲ್ಲ ಬಾ
ಬೇರೆ ಶಕ್ತಿಗಳು ಹೊಲ್ಲ ಬಾ
ಹೀಗೆ ಮಾಡದಿರು, ಅಲ್ಲ ಬಾ
ನಾಡ ನಾಡಿಯನು ಸುತ್ತ ಬಾ
ನಮ್ಮ ನಾಡನ್ನೆ ಸುತ್ತ ಬಾ
ಸತ್ತ ಜನರನ್ನು ಎತ್ತ ಬಾ''[86]

ಗಂಗೆ ಕನ್ನಡಿಗರಲ್ಲಿ ಚೈತನ್ಯವನ್ನು, ಕ್ರಿಯಾಶಕ್ತಿಯನ್ನು ಜಾಗೃತಗೊಳಿಸದಿದ್ದರೆ ಅವರೆಲ್ಲ ಸತ್ತ ಜನರಾಗುತ್ತಾರೆ, ಹಾಗಾಗಬಾರದು ಎಂಬ ದೃಷ್ಟಿಯಿಂದ ಅಂಬಿಕಾತನಯದತ್ತರು ಗಂಗೆಯನ್ನು ಒಲಿಸಿಕೊಳ್ಳಲು ಪ್ರಾರ್ಥಿಸಿದ್ದಾರೆ. ಶಿವನು ಈಶ್ವರನಾಗಿ ನಿರ್ಮಿಸಿದ ಸೃಷ್ಟಿಯನ್ನು ಕಾಪಾಡುವ ಭಾರ ಪಾರ್ವತಿಯದು ಹಾಗೂ ಚೈತನ್ಯ ತುಂಬಿ ಕ್ರಿಯಾಶೀಲರನ್ನಾಗಿ ಮಾಡುವುದು - ಗಂಗೆಯ ಕೃಪೆ ಎಂದಿದ್ದಾರೆ ಬೇಂದ್ರೆ.

ಪೃಥ್ವಿ, ಅಪ್, ತೇಜ, ವಾಯು ಮತ್ತು ಆಕಾಶ ಎಂಬ ಪಂಚಮಹಾಭೂತಗಳ ಸ್ತುತಿಯನ್ನು ಋಷಿಗಳು ಮಾಡಲು ಅವುಗಳ ವಿಶ್ವವ್ಯಾಪಕತೆಯೆ ಕಾರಣ. ಅಂಬಿಕಾತನಯದತ್ತರೂ ಈ ಪಂಚತತ್ತ್ವಗಳನ್ನು ಕುರಿತು ಅನೇಕ ಕವನಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಬೆಳಕು ಅತ್ಯಂತ ಮಹತ್ತ್ವದ ತತ್ತ್ವ. ಇದು ಬರೀ ಬೆಳಗಲ್ಲ. ಶಾಂತಿ ಹಾಗೂ ಪ್ರೀತಿ ರಸಸ್ವರೂಪವನ್ನು ತಾಳಿ ನರ-ನಾರಿಯರಲ್ಲಿ ಜೀವಂತಿಕೆಯನ್ನು ಚಿಮ್ಮಿಸುವ ಶಕ್ತಿ ಎಂಬ ಬೇಂದ್ರೆ ದೃಷ್ಟಿಕೋನ ಅವರ ಬೆಳಗು ಕವನದ ಬೆನ್ನೆಲುಬಾಗಿದೆ.

**ಎಲ್ಲಿರುವೆ ಅಲ್ಲೆ ಇರು ಅಲ್ಲಿ ನಾನೆ ಬರುವೆ**

ಈ ಪ್ರೇಮ, ಕನ್ನಡ ಬಾಂಧವ್ಯ, ಭಾರತ ಬಾಂಧವ್ಯ ಹಾಗೂ ವಿಶ್ವಬಾಂಧವ್ಯದ ಆದರ್ಶವನ್ನಿಟ್ಟು ಕೊಂಡಾಗ ಮಾತ್ರ 'ಜಗದೇಳಿಗೆಯಾಗುವದಿದೆ ಕರ್ನಾಟಕದಿಂದ' ಆಗಲು ಸಾಧ್ಯ ಎಂಬ ಕನಸನ್ನು ಅಂಬಿಕಾತನಯದತ್ತ ಕಂಡಿದ್ದಾರೆ. ಜಗದ ಏಳಿಗೆ - ಸಾಧ್ಯ, ಗುರಿ; ಕರ್ನಾಟಕದ ಐಕ್ಯ-ಸಾಧನೆ, ಮಾಧ್ಯಮ ಎಂಬುದು ಬೇಂದ್ರೆ ದೃಷ್ಟಿ. ಕನ್ನಡಿಗರಿಗೆ ವಿಶ್ವವ್ಯಾಪಕ ಅರಿವು ಹಾಗೂ ಇರವು ಇರದಿದ್ದರೆ ಅದು ಅವರ ಅಲ್ಪತನ. ಅಲ್ಪತನಕ್ಕೆ ಶಾಶ್ವತ ಸುಖವಿಲ್ಲ - ನಾಲ್ಪೇ ಸುಖಮಸ್ತಿ. ಈ ಮಂತ್ರದ ಜಾಗೃತಿ ಮತ್ತು ಉತ್ಥಾನ ಕನ್ನಡಿಗರಲ್ಲಾಗಲಿ ಎಂಬುದಾಗಿ ಬೇಂದ್ರೆ ಪ್ರಾರ್ಥಿಸಿದರು. ಇದನ್ನೇ ವಿವೇಕಾನಂದರು ವಿಶ್ವಸಂದೇಶವಾಗಿ ಸಾರಿದ್ದರು. ಚಿಕಾಗೋ ಉಪನ್ಯಾಸದಲ್ಲಿ ವಿವೇಕಾನಂದರು ಸಹೋದರ ಸಹೋದರಿಯರೆ ಎಂದು ಸಂಬೋಧಿಸಿದ್ದು ನಿರ್ಮಿಸಿದ ರೋಮಾಂಚನ ಎಲ್ಲರಿಗೂ ಮಾರ್ಗದರ್ಶಕ. ಈ ರೋಮಾಂಚನದ ಸಾತತ್ಯ ಎಲ್ಲರ ಅಪೇಕ್ಷೆಯಾಗಬೇಕು. ವಿಶ್ವ ಎಂಬುದು ಅಖಂಡದ ತತ್ತ್ವ. ಕರ್ನಾಟಕ ಎಂಬುದು ಅದರ ಒಂದು ಭಾಗ. ಒಂದು ಭಾಗದ ಜಾಗೃತಿ ಅಖಂಡತೆಯ ಬಲದಲ್ಲಿ ಮಹತ್ತ್ವ ಪಡೆಯುತ್ತದೆ. ವಿಶ್ವಬಾಂಧವ್ಯದ ತತ್ತ್ವ ಸಕ್ಕರೆಯಂತೆ ರುಚಿ. ಸಕ್ಕರೆ ಇದ್ದಲ್ಲಿ ಇರುವೆ ಬರಬೇಕು. ಅವು ಬರದಿದ್ದರೆ ಸಕ್ಕರೆಯೆ ಇರುವೆ ಇದ್ದಲ್ಲಿ ಹೋಗಬೇಕಾಗುತ್ತದೆ. ಈ ವಿಚಾರ ಬೇಂದ್ರೆಯವರ 'ನಾಲ್ಪೇ ಸುಖಮಸ್ತಿ' ಕವನದ ಜೀವಾಳ. ಅದು ಹೀಗೆ:

'ಓ ಇರುವೆ ! ಎಲ್ಲಿರುವೆ?
ನಾನು ಸಕ್ಕರೆ; ಕರೆವೆ .........

ಏನೆಂದೆ?........
ಕರೆದ ಮೇಲೆಯೆ ಬರುವೆ, ಭಲೆ ಇರುವೆ!
ಎಲ್ಲಿರುವೆ ಅಲ್ಲೆ ಇರು -
ಅಲ್ಲಿ ನಾನೇ ಬರುವೆ '[87]

ಆದುದರಿಂದ ಬೇಂದ್ರೆಯವರು ೧೯೧೮ರಿಂದ ೧೯೮೧ರವರೆಗೆ ಜನರಿದ್ದಲ್ಲಿ ತಾವೇ ಹೋಗಿ ಕರ್ನಾಟಕದ ಐಕ್ಯದ ಮೂಲಕ ವಿಶ್ವದ ಐಕ್ಯದ ವೈಚಾರಿಕ ಬುದ್ಧಿಯನ್ನು ಅನೇಕ ಕವನಗಳ ವಾಚನದಿಂದ ಜಾಗೃತಗೊಳಿಸಿದರು.

**ಪ್ರೇಮಬೀಜ ಮೂಲ ನನಗೆ**

ಪ್ರೇಮದ ಬೀಜವನ್ನು ಬಿತ್ತದೆ ಐಕ್ಯವೃಕ್ಷ ಬೆಳೆಯದು. ಆ ವೃಕ್ಷದಿಂದ ಪರಿಪಕ್ವ ಫಲ ತೊಟ್ಟು ಬಿಟ್ಟು ಬಿದ್ದಾಗ ಅದರ ಹೊಟ್ಟೆಯೊಳಗಿನ ಪ್ರೇಮಬೀಜವೇ ಮುಂದಿನ ಐಕ್ಯಕ್ಕೆ ನಾಂದಿ. ಈ ವಿಚಾರ ಕವನರೂಪ ತಾಳಿದ್ದು ಹೀಗೆ:

'ಇಳೆಯ ಮಕ್ಕಳೆಲ್ಲ ಬನ್ನಿ
ತಾಯ ತವರು ಮನೆಗೆ
ಭೇದ ಬಲಿಸಿ ಬಳಲ ಬೇಡಿ
ಎಂದು - ನನಗೆ ನಿನಗೆ.
ಇದು ಬಿಳಿವೂ ಇದು ಕರಿವೂ
ಹಗಲು ಇರುಳು ಬಣ್ಣಾ
ಕೆಂಪನಿವ ಹಳದಿಯವಾ
ಅಂದ ಚೆಂದ ವಣ್ಣಾ.
ಎದೆಯಾಳದ ರಕ್ತದಲ್ಲಿ
ಭಾವದ ಅನುರಕ್ತಿಯಲ್ಲಿ
ಕಾವಿನ ಚಿತ್‌ಶಕ್ತಿಯಲ್ಲಿ
ಕಂಡ ಶಾಂತಿಗೀತ
ಕರೆದು ಜನ್ಮ ಮರಣಗಳಿಗೆ
ತಾರಕರಾ ಚರಣಗಳಿಗೆ
ಜೀವಾಂತಃಕರಣಗಳಿಗೆ
ನೀಡಿತು ಸುಪ್ರೀತ.
ಪ್ರೇಮಬೀಜ ಮೂಲ ನನಗೆ
ಪ್ರೇಮಬೀಜ ಫಲದ ಗೊನೆಗೆ'[88]

ಬಿಳಿ ಕಪ್ಪು - ಹಗಲಿಗೆ ರಾತ್ರಿಗೆ ಮಾತ್ರ ಸಂಬಂಧವಾಗಿರಲಿ. ಹಳದಿ, ಕೆಂಪು ಜನಾಂಗವಾಚಕವಾಗಿರಲಿ. ಇದು ವರ್ಣದ್ವೇಷದ ರೂಪ ತಾಳಬಾರದು. ವರ್ಣದ್ವೇಷವು ವಿಶ್ವಶಾಂತಿಯನ್ನು ಹಾಳುಮಾಡುತ್ತದೆ. ಇಳೆಯ ಮಕ್ಕಳೆಲ್ಲ ಒಂದು ಎಂಬ ಭಾವ - ಅನುರಾಗವಾಗಿ, ಚಿತ್‌ಶಕ್ತಿಯಾಗಿ ಬೆಳೆಯುವುದು ಅವಶ್ಯ ಎಂಬ ಮೌಲಿಕ ವಿಚಾರವನ್ನು ಬೇಂದ್ರೆಯವರು ಪ್ರತಿಪಾದಿಸಿದ್ದಾರೆ.

ಇದು ಆಗುವುದು ಸುಲಭಸಾಧ್ಯವಲ್ಲ. ಇದು ಆಗಬೇಕಾದರೆ ಕ್ರಿ.ಶ. ೨೨೭೨ ರವರೆಗೆ ಕಾಯಬೇಕಾಗುತ್ತದೆ ಎಂಬುದು ಶ್ರೀ ಅರವಿಂದರ ದರ್ಶನ. ಈ ಕಾರ್ಯ ಶ್ರೀ ಅರವಿಂದರ ಜನ್ಮದಿನವಾದ ೧೫ ಆಗಸ್ಟ್ ೧೮೭೨ ರಂದು ಪ್ರಾರಂಭವಾಗಿದೆ. ಇದರ ಫಲ ಕ್ರಿ.ಶ. ೨೨೭೨ರಂದು ಎಂದು ಸಾರಿ ಶ್ರೀ ಅರವಿಂದರು ಕೃತಯುಗಕ್ಕಾಗಿ ತಪಸ್ಸನ್ನು ಆರಂಭಿಸಿದರು. ಹೊಸಯುಗ ಖಂಡಿತವಾಗಿ ಪ್ರಾರಂಭವಾಗುತ್ತದೆ. ಆಗ ಮಾನವನಲ್ಲಿಯ ಪಶುತ್ವ ಇಂಗಿ, ದೇವತ್ವ ಉದ್ಭವಿಸುತ್ತದೆ.

'ಎಂತು ಬಂತೊ ಜಡದಿಂದ ಪ್ರಾಣ ಉದ್ಬಿಜ್ಯ ಸ್ವೇದವಾಗಿ
ತರುಮರವು ಆಗಿ, ಕ್ರಿಮಿಕೀಟವಾಗಿ, ಪಶುಪಕ್ಷಿ ಭೇದವಾಗಿ?
ಪಾಶವಿಕ ಗ್ರಂಥಿ ಬಿಡಿಸಿತ್ತು ಎಂತೊ ಮಾನವ್ಯದೊಂದು ರೀತಿ
ಮಾನವನ ಹೃದಯವನೆ ಯೋನಿಗೊಳಿಸಿ ಬರಲಿಹುದು ದೇವಜಾತಿ.'[89]

ಈ ದೇವ ಜನಾಂಗದ ಜೀವನ ಸಂಪೂರ್ಣವಾಗಿ ಅಧ್ಯಾತ್ಮ ಜೀವನವಾಗಿ ಅವರು ಅಧ್ಯಾತ್ಮ ಜೀವಿಗಳೇ ಆಗುತ್ತಾರೆ ಎಂಬ ಭವಿಷ್ಯ ಶ್ರೀ ಅರವಿಂದರು ನುಡಿದಿದ್ದಾರೆ. ಅಲ್ಲಿಯವರೆಗೆ 'ಅಲ್ಲದುದಹುದೆಂಬ ಅಜ್ಞಾನಿಯೊಡನಾಟ ಕಲ್ಲು ಹಾಯ್ದಂತೆ' (ಮಧುವಾತಾಋತಾಯತೆ) ಎಂದಿದ್ದಾರೆ. ಇನ್ನೂ ಮೂರು ನೂರು ವರ್ಷ ನಾವು ಸುಮ್ಮನಿರಬೇಕೆ? ಇಲ್ಲ. ಇದು ಸಾಧನೆಯ ಅವಧಿ. ಸದ್ಯದ ಪರಿಸ್ಥಿತಿಯ ಚಿತ್ರಣವನ್ನು ಅಂಬಿಕಾತನಯದತ್ತರು ಕೊಟ್ಟದ್ದು ಹೀಗೆ :

'ಎಲ್ಲೊ ಗಲಾಟೆ, ಖೂನು ದರೋಡೆ,
ಚಕ್ರಬಂಧದ ಒಗಣಿ, ರಾಶಿಭವಿಷ್ಯ, ಲೂಟಿ, ಲಾಟರಿ,
ಪಾನ ನಿರ್ಬಂಧ ಬಂಧಿತರ ಕೈಬಿಸಿಯಾಟ
ಚುನಾವಣೆ, ಅಧ್ಯಕ್ಷ, ಇಲಿ-ಬಲೀ-ಸಾಹೇಬ
ಬೂಟು ಹ್ಯಾಟಿನ ಸೂಟು ಒರಸಿಲ್ಲ; ಅದೆ ಥೇಟು;'[90]

ಇದು ಇಂದಿನ ವಿಶ್ವರಾಜಕಾರಣದ ನೈಜಚಿತ್ರ. ಪತ್ರಿಕೆಗಳು ಪ್ರತಿದಿನ ವರದಿ ಮಾಡುವುದರ ಸಾರ. ದಾಸ್ಯ ನಮ್ಮ ಮನೋಲೋಕದಿಂದ ಅಸ್ತವಾಗಿಲ್ಲ. ಸೂಟು ಬೂಟಿನ ಸಾಮ್ರಾಜ್ಯಶಾಹಿಗಳ ಕಪಿಮುಷ್ಟಿಯಲ್ಲಿಯೇ ಭಾರತವು ಇಂದಿಗೂ ಉಸಿರಾಡುತ್ತಿದೆ.

"ಸಾರ್ವಭೌಮರಾ ನೆತ್ತಿಯ ಕುಕ್ಕಿ ಹಾರುವ ಹಕ್ಕಿ" ಬೇಂದ್ರೆ ದರ್ಶನ. ಅದು ಆಗಿಲ್ಲ ಎಂಬ ಬೇಂದ್ರೆ ವಿಚಾರ ಇಂದಿಗೂ ಪ್ರಸ್ತುತ.

'ಫ್ರೂಡು, ಮಾರ್ಕ್ಸು, ಆಡ್ಲರು, ಜುಂಗು, ಮೇಲೀಗ ಐನಸ್ಟೀನು,
'ಕ್ಯಾಪಿಟಲ್ಲು' ಏನು? ಆಟಮ್ಮು ಬಾಂಬು, ತಲೆತುಂಬ ತಿಂಡಿ, ಹೇನು!
ಬಾಯಲ್ಲಿ ಶಾಂತಿ, ತಲೆಯಲ್ಲಿ ಭ್ರಾಂತಿ, ಸಂಕ್ರಾಂತಿ ಎದೆಯ ತುಂಬ.
ಚಂಡಮುಂಡರಾ ಹಳೆಯ ದಂಡು ಅಭಿನವ ನಿಕುಂಭ ಕುಂಭ.'[91]

- ಎಂಬ ನುಡಿಯಲ್ಲಿ ವಿಶ್ವಶಾಂತಿಗಾಗಿ ಕ್ರಿಯಾಚರಣೆ ಇಲ್ಲ ಎಂಬುದನ್ನು ಬೇಂದ್ರೆಯವರು ಅತ್ಯಂತ ಖಾರವಾಗಿ ಪ್ರತಿಪಾದಿಸಿದ್ದಾರೆ. ಬುದ್ಧಿವಾದಿ ರಾಜಕಾರಣಿಗಳ ತಲೆಯಲ್ಲಿ ಹೇನು ತುಂಬಿವೆ, ಭ್ರಮೆ ತುಂಬಿವೆ, ವಿಶ್ವವಿನಾಶದ ಕೆಟ್ಟ ಯೋಚನೆ ತುಂಬಿವೆ ಎಂದಿದ್ದಾರೆ ಬೇಂದ್ರೆ. ಈ ಕವನಕ್ಕೆ ಭಾವಸಂದರ್ಭ ಕೊಟ್ಟದ್ದು ಹೀಗೆ : "ನವಯುಗವು ಅನಿವಾರ್ಯವಾಗಿ ಬಂದಂತೆ ತೋರಿದರೂ ಒಳಗೆ ಸಿದ್ಧತೆ ಇರದೆ

ಹೊರಗೆ ಪಾತ್ರ ಬರಲಾರದು. ಒಳಗೆ ಬರಿಯ ಕ್ಷೋಭವಿದ್ದರೆ ಹೊರಗೂ ಅದೇ ಫಲ." ವಿಶ್ವಮಾತೆಯ ಉಪಾಸನೆಯೇ ಸಿದ್ಧತೆಯ ಮಾರ್ಗ.

'ಬ್ರಹ್ಮಸಾಕ್ಷಿ, ಜಗದ್ವಿಷ್ಣು, ಶಿವಕ್ಕಿಲ್ಲ ಬಂಧವು
ಶಕ್ತಿ ಮಾತೆ, ಭಕ್ತಿದಾತೆ
'ನಾ' 'ನಿನ್ನ' ಬಂಧುವು.'

**ಇಳಾ-ಮಹಿ-ಸರಸ್ವತಿ**

ಬೇಂದ್ರೆಯವರು ಸಾಹಿತ್ಯದ ವಿರಾಟ್‌ಸ್ವರೂಪದಲ್ಲಿ "ಇಳಾ-ಮಹಿ-ಸರಸ್ವತಿ' ಈ ಮೂರು ದೇವಿಯರನ್ನು ವೈದಿಕ ಋಷಿಗಳು ಮತ್ತೆ ಮತ್ತೆ ಆವಾಹನ ಮಾಡುತ್ತಾರೆ. ಸಂಭಾವ್ಯ ಸತ್ಯಗಳ ವ್ಯೂಹವನ್ನೇ ಸಾಕ್ಷಾತ್ಕರಿಸಿಕೊಂಡವಳು ಶ್ರೀ ಅರವಿಂದರ **'ಮಹಿ'**; ಯಾವ ಸಂಭಾವ್ಯದ ಲಬ್ಧಿಕಾಲ ಫಲಿಸುವ ಕಾಲವು ವಿಚಾರಾಚಾರಗಳ ಯಾವ ವಾಹಿನಿಯಿಂದ ಹೇಗೆ ಬರುವದೆಂದು ತೆರೆದು ತೋರಿಸುವಳು ಅವರ **'ಸರಸ್ವತಿ'**; ಅವರ **'ಇಳಾ'** ವಾಣಿಯು ಇಳೆಯ ಮೇಲೆ, ಮನದಾಚೆಯಿಂದ ಏನು, ಯಾವ ಸೋಪಾನದಿಂದ ಇಳಿಯಲಿದೆ ಎಂದು ಘೋಷಿಸುವಳು. ಇವರು ಮೂವರಿಂದ ಸಜ್ಜಾದವಳು ಅವರ ಸಾವಿತ್ರಿಯ 'ದಕ್ಷಿಣಾಭಾರತಿ !....' 'ಗುರು-ಶಾಸ್ತ್ರ-ಕಾಲ-ಉತ್ಸಾಹ' ಈ ನಾಲ್ಕೆ ಸಾಧಕನ ಸಾಧನಗಳು. ಶ್ರೀ ಅರವಿಂದ ಮಾರ್ಗದ ವೀರ ಸಾಧಕನು ಅಖಂಡೋತ್ಸಾಹಿ, ಅವನು ಕಾಲನಿಗೆ ದಣಿಯುವುದಿಲ್ಲ ಮಣಿಯುವುದಿಲ್ಲ; ಅವನ ಗುರು ಹೃದಯಸ್ಥ; ಅವನ ಅಂತರ್ವಾಣಿಯೇ ಶಾಸ್ತ್ರ. ತ್ವಷ್ಟಾರನ ಒಂದು ಪಾತ್ರದಲ್ಲಿ ನಾಲ್ಕು ಕಂಡ 'ಋಭು'ಗಳು ದೇವ ಜನ್ಮ ಪಡೆದರೆಂದು ವೇದ ಹೇಳುವದು. ಈ ನಾಲ್ಕರ ಸುಳಿವು ಕನ್ನಡದ ಪ್ರತಿ ದರ್ಶನದಲ್ಲಿದೆ. ಅವುಗಳ ಹೊಂದಿಕೆ ಕಾಣುವುದು, ಪಡೆಯುವುದು ಮುಂದಿನ ಮಾರ್ಗ.

'ಓಂ ನಮೋ ದೇವಾಯ ಜನ್ಮನೇ.
'The superman shall wake in mortal man
And manifest the hidden demi-god
Or grow into the God-Light and God-force
Revealing the secret deity in the cave'[92]

**- Savitri**

-Savitri[92] ಭೂಲೋಕದ ಈ ಮರ್ತ್ಯ ಮಾನವನ ಹೃದಯಗುಹೆಯಲ್ಲಿ ಅಡಗಿರುವ ಅರ್ಧ, ಅಪೂರ್ಣ ದೇವನು ಪೂರ್ಣದೇವನಾಗಿ - ಪ್ರಕಾಶವಾಗಿ - ದೇವಶಕ್ತಿಯಾಗಿ ಬೆಳೆದು ಸಾಕ್ಷಾತ್ಕಾರದ ದರ್ಶನ ಮಾಡಿಸಿ ಜೀವನ ರಹಸ್ಯದ ಅನಾವರಣಗೊಳಿಸುವನು ಎಂದು ಅರವಿಂದರು ಹೇಳಿದ್ದಾರೆ.

"ಮನ-ವಿಜ್ಞಾನಗಳ ಮಧ್ಯೆ ನಾಲ್ಕು ಸೋಪಾನಗಳಿವೆ - ಉನ್ಮನ, ಜ್ಯೋತಿರ್ಮನ, ಸ್ವಯಂಸಾಕ್ಷಿಮನ, ಉತ್ತರೋತ್ತರ ಮನ. ಅದರಾಚೆಗಿದೆ ಸತ್‌ಚಿತ್ ಆನಂದ ವಿಜ್ಞಾನ"[93] ಈ ಎಲ್ಲದರ ಸ್ಪಷ್ಟ ತಿಳಿವಳಿಕೆಗಾಗಿ -ಅದಿತಿಮಾತೆ ವಿಶ್ವಮಾತೆ; ಮಹೇಶ್ವರಿ - ಕಲ್ಯಾಣಕಾರಕ; ಮಹಾಕಾಳಿ-ಶಕ್ತಿದಾಯಕ; ಲಕ್ಷ್ಮೀ-ಸಂಪತ್ತುದಾಯಕ ಮತ್ತು ಮಹಾಸರಸ್ವತಿ-ಸಕಲ ವಿದ್ಯಾವರ್ಧಿನಿ ಎಂಬುವರ ಉಪಾಸನೆ ಅವಶ್ಯ ಎಂಬುದಾಗಿ ಶ್ರೀ ಅರವಿಂದರು ಅನೇಕ ಮುಖವಾಗಿ ಪ್ರತಿಪಾದಿಸಿದ್ದಾರೆ. ಬೇಂದ್ರೆಯವರ ಶಕ್ತಿ ಉಪಾಸನೆಗೆ ಶ್ರೀ ಅರವಿಂದರೇ ಕನ್ನಡಿ.

"ವ್ಯಷ್ಟಿ-ಸಮಷ್ಟಿ ಪರಸ್ಪರರ ಪೋಷಕ, ಪೂರಕ, ಪೂರ್ಣದಿಂದ ಪೂರ್ಣದತ್ತ ಪರಿವರ್ಧಿಸುವ

ಸಂಬಂಧ ಎಂದು ಆಗದಿದ್ದರೆ ಜೀವನವೇ ವಿಕೃತಿಯಾಗುತ್ತದೆ. ಈ ಎಚ್ಚರವನ್ನು ನನಗೆ ಮೊದಲು ತಂದುಕೊಟ್ಟ ಸಾಹಿತಿ ರವೀಂದ್ರನಾಥ ಟಾಗೋರರವರು. ಟಾಗೋರರ ಶಿಶು ಕಾವ್ಯ, ಪ್ರಣಯಗೀತೆಗಳು, ಸಣ್ಣಕಥೆಗಳು, ನಾಟಕದೊಳಗಿನ ಮುದುಕರು... ನನಗೆ ವಿವಿಧ ಬೋಧ ತಂದಿವೆ ...... ನನ್ನ ತಾಯಿಯ ಎಚ್ಚರ ನನಗೆ ತಂದದ್ದು ರವೀಂದ್ರರ ಶಿಶುಕಾವ್ಯ, ಗಂಗಾಲಹರಿ, ಸೌಂದರ್ಯಲಹರಿ ಮೂಕಪಂಚಾಶತಿಗಳ ಸರಣಿ ತೀರ ಬೇರೆ."[94] ಎಂಬುದಾಗಿ ಬೇಂದ್ರೆಯವರು ಸಾಹಿತ್ಯದ ವಿರಾಟ್‌ಸ್ವರೂಪದಲ್ಲಿ ಸ್ಪಷ್ಟಪಡಿಸಿದ್ದಾರೆ. ಬೇಂದ್ರೆಯವರು ತಮ್ಮ ಅನೇಕ ಗುರುಗಳಲ್ಲಿ ವಿಶ್ವಕವಿ ರವೀಂದ್ರ ಮತ್ತು ಪೂರ್ಣಯೋಗಿ ಶ್ರೀ ಅರವಿಂದ ಅವರಿಗೆ ಹೆಚ್ಚು ಮಹತ್ತ್ವ ಕೊಟ್ಟು "ಎರಡು ಕಣ್ಣು ಒಂದು ನೋಟ; ರವಿ ಉದಯದಿಂದ ಅರವಿಂದ ಅರಳಿತು" ಎಂದಿದ್ದಾರೆ. ಬೇಂದ್ರೆಯವರ ಮಾತೃಭಕ್ತಿಯ ಶಿಖರ - ವಿಶ್ವಮಾತೆಯ ಉಪಾಸನೆಯ ಸಾತತ್ಯ ಎಂದು ಹೇಳಬಹುದು.

ಈ ವಿಷಯದ ವಿಸ್ತಾರಕ್ಕಾಗಿ 'ಅರಳು ಮರಳು' ಕವನ ಸಂಗ್ರಹದೊಳಗಿನ - 'ನಾಲ್ವರು ತಾಯಂದಿರು', 'ಇಂದ್ರಜಾಲ', 'ಸುದರ್ಶನದಲ್ಲಿ', 'ವಿಶ್ವ ಒಂದು ಅಶ್ವ' ಹಾಗೂ 'ನಾಕುತಂತಿ' ಯೊಳಗಿನ - 'ವಿವೇಕಾನಂದ ಶಿಖರ ಪ್ರಗಾಥ', 'ಮತ್ತೆ ಶ್ರಾವಣಾ', 'ಮತ್ತೆ ಶ್ರಾವಣಾ ಬಂದಾ,' 'ಇಂದ್ರಪಟ್ಟ', 'ಕೇಳಿನುಡಿ-ನುಡಿಯ ಕೇಳಿ' ಅಭ್ಯಾಸ ಮಾಡಬೇಕು.

**ವಿದ್ಯುತ್ ಪುತ್ರನ ಅವತಾರ**

ವಿಶ್ವಮಾತೆಯ ಉಪಾಸಕನು, ವಿಶ್ವಕಲ್ಯಾಣ ಚಿಂತಕನು ವಿಶ್ವದ ಪ್ರತಿಯೊಬ್ಬನಲ್ಲಿಯೂ ಪರಿವರ್ತನೆಯನ್ನು ಅಪೇಕ್ಷಿಸುತ್ತಾನೆ. ದೇಹಬುದ್ಧಿ (ಪಶು ಜೀವನ) ಅಳಿಯಬೇಕು, ಆತ್ಮಬುದ್ಧಿ (ಅಧ್ಯಾತ್ಮ ಜೀವನ) ಬೆಳೆಯಬೇಕು ಎಂದೇ ಸತತವಾಗಿ ತಪಸ್ಸು ಮಾಡುತ್ತಾನೆ. ಶ್ರೀ ಅರವಿಂದರು ಪ್ರತಿಪಾದಿಸಿರುವ ಪೂರ್ಣಯೋಗ, ಸುಪ್ರಮಾನಸದ ಅವತರಣಗಳ ಮೂಲಕ ಭೂಲೋಕದ ಜೀವನದಲ್ಲಿಯೇ ಬದಲಾವಣೆ ಆಗುತ್ತದೆ ಎಂದು ಸಾರಿದ್ದಾರೆ. ನಾಳಿನ ಮಗು ದೈವಲೀಲೆಯನ್ನು ತಿಳಿದುಕೊಂಡು ಬಾಳಬೇಕು ಎಂದು ಅಪೇಕ್ಷಿಸುತ್ತದೆ. ('ವಿದ್ಯುತ್ ಪುತ್ರನ ಅವತಾರ' - ಅರಳು ಮರಳು. ಪು. - ೨೪೭). ನಾಳಿನ ಮಗುವಿನ ನಡತೆಯನ್ನು ಶ್ರೀ ಅರವಿಂದರು ವರ್ಣಿಸಿದ್ದನ್ನು ಬೇಂದ್ರೆ ಅನುವಾದಿಸಿದ್ದು ಹೀಗೆ :

'ಫಲದ ನಿರ್ಣಯವು ಏನು ಆದರೂ ಕ್ಷುಬ್ಧನಾಗನವನು
ನೇರಾದ ರೀತಿ ರುಜು ಅವನ ನೀತಿ, ಸಿದ್ಧಿಸದೆ ಇದ್ದರೂನು
ತನ್ನ ಯೋಗ್ಯತೆಗೆ ತಕ್ಕ ರೀತಿಯಲಿ ಕರ್ಮಕುಶಲನಾಗಿ
ಸತ್ಯವನ್ನೇ ಸಾರುವನು ಜಗಕೆ ನಿರ್ಭೀತ ಧೀರನಾಗಿ'.[95]

ಕರ್ನಾಟಕ, ಭಾರತ, ಜಗತ್ತು, ಸತ್ಯ; ಸೂರ್ಯ, ಚಂದ್ರ, ನಕ್ಷತ್ರ ಸತ್ಯ; ಪಂಚಮಹಾಭೂತಗಳು ಸತ್ಯ; ತರುಲತೆ, ಕಲ್ಲು, ಪ್ರಾಣಿ ಪ್ರಪಂಚ, ಗಂಡು-ಹೆಣ್ಣು ಸತ್ಯ. ಸತ್ಯ ಪ್ರತಿಪಾದನೆಗೆ ಶಕ್ತಿಯ ಉಪಾಸನೆ ಅವಶ್ಯ. ಇದು ಅನುಭಾವ ಮಾರ್ಗ. ಆದುದರಿಂದ ಬೇಂದ್ರೆಯವರು ಗಂಗಾವತರಣದಲ್ಲಿಯ 'ಸರಸ್ವತಿ ಸೂಕ್ತ', 'ಅಗ್ನಿಸೂತ್ರ', 'ಲಲಿತಾ', 'ಯಾವದೇವನಿವನು', 'ಗಾಳಿಗಡಲಿನಲ್ಲಿ', 'ಕಣ್ಣಕಾಣಿಕೆ', 'ಏಲಾಗೀತೆ', 'ತುಂಬಿ', 'ಪ್ರಾರ್ಥನೆ' ಎಂಬ ಪದ್ಯಗಳನ್ನು ಅನುಭಾವಗೀತಗಳಾಗಿ ವಿಭಜಿಸಿದ್ದಾರೆ. ಮರ್ಯಾದೆ ಕವನ ಸಂಗ್ರಹದೊಳಗಿನ 'ನೀನಾದಿನೀ' - (ದೇವತಾ ಸರಸ್ವತಿ), ಮತ್ತು 'ಶಾಂಭವಿ' ಅನುಭಾವ ಗೀತಗಳಾಗಿವೆ. ಉಪಾಸನೆಯ ಫಲ - ಅನುಭಾವ ಮಾರ್ಗದ ದರ್ಶನ.

'ಆಗ ಬಯಲೆ ಆವು ಆಗೆ
ಅದುವೆ ಹಾಲು ಕರೆದ ಹಾಗೆ
ಸುತ್ತು ಹಾಲು ಕರೆದಿತು
ಗಾಳಿ ಮೇರೆ ವರಿದಿತು'

**- ಸರಸ್ವತಿ ಸೂಕ್ತ**

'ಓ ಗೊಂಬೆ! ಏನೆಂಬೆ ಕಾಣೆನೆಂಬೆ
ದೇವಿ! ಮಾದೇವಿ! ಮಾಮಾಯಿ ಲಲಿತೇ|
ಒಳಗನುದ್ದೀಪಿಸುತ ಒಳಗೆ ಕುಳಿತೆ!'

☆ ☆

'ಈಗೆನ್ನ ಮೈಕಟ್ಟಿ, ಕೈ ತಟ್ಟಿ, ಮನ ಮುಟ್ಟಿ
ಕಲ್ಪಿಸುವ ಶಿಲ್ಪಿ ನೀನಾಗಬೇಕು
ನಿನ್ನಿಂದ ನನ್ನೊಳಿತಾಗ ಸಾಕು|'

**- ಲಲಿತೆ**

'ತಾಯಿಗಣ್ಣು ತುಳುಕುತಿಹುದು ಚಂದ್ರ ಬಿಂಬದಲ್ಲಿ
ಚುಕ್ಕೆ ಅಣ್ಣ-ತಮ್ಮನಂತೆ ಕರೆವವಿರುಳಿನಲ್ಲಿ
ದಾರಿದೋರಿ ತೆರೆಯುತಿಹವು ಸೂರ್ಯಕಿರಣವೆಲ್ಲಿ?'

**- ಗಾಳಿಗಡಲಿನಲ್ಲಿ**

'ಎದೆಯ ತೊರಿಸಿ, ಕಣ್ಣ ತೆರಿಸಿ, ಹೋದ ಮಾಟ ನೋಟ
ಮರಳಿ ಬಂದು ಕಣ್ಣ ಕೊಟ್ಟು ಹೃದಯ ಜೀವಕೂಟ
ಸೃಷ್ಟಿಯನ್ನೆ ನಡೆಸುತಿಹುದು ಆಗಿ ಆಟ ಪಾಟ'

- ಕಣ್ಣ ಕಾಣಿಕೆ

'ಬಾ ಅಮ್ಮಾ ತಮ್ಮಾ ಬಾ ಬಾರೆ ಜಗದಂಬಾ
.......................
ನರನರಗಳಲಿಂಗಿಗೀ ನರನಾಳದೆ ತಂಗಿs
ಲಾಸ್ಯದಿ ಹಾಸ್ಯವ ಮಿಂಚಿಸಿ, ಪರಶಿವನರ್ಧಾಂಗಿss
ತಾಲದಿ ಕಾಲವ ಸೊಲ್ಲಿಸುವಂತಿದೆ ಈ ಭಂಗಿ'

- ಏಲಾಗೀತೆ

'ಗುರುವಿಂದ ತುಂಬಿ, ಅರವಿಂದ ತುಂಬಿ, ತುಂಬುರುವಿನಿಂದ ತುಂಬಿ
ತಾಯೆಂದು ತುಂಬಿ, ತಂದೆಂದು ತುಂಬಿ, ಕಂದನ್ನ ತನ್ನ ತುಂಬಿ
ಅಂಬಿಕೆಯ ತುಂಬಿ, ನಂಬಿಕೆಯ ತುಂಬಿ, ಕಣ್ಗೊಂಬೆ ರಂಭೆ ತುಂಬಿ
ಶ್ರೀಮಾತೆ ತುಂಬಿ ಈಮಾತೆ ತುಂಬಿ ತಂತಾನೆ ಬಂತು ತುಂಬಿ ||

**- ತುಂಬಿ**

'ಜೀವಾಜಿನೀ| ವಾಜಿನೀವತೀ| ಸರಸ್ವತೀ|

ರಸಸಾರಸ| ಹಂಸೀ| ತಮಧ್ವಂಸೀ|
ಉತ್ತಮಾ| ಆದಿಮಾ| ಮಾ| ಅದಿತೀ
ಸಂವದತಿ| ಉನ್ಮಾನಿನೀ| ನೀನಾ| ನಾನಾ|'

**- ನೀನಾದಿನೀ (ದೇವತಾ ಸರಸ್ವತಿ) (ಮರ್ಯಾದೆ)**

'...... ವೈದೇಹಿ | ದೇಹೀ
ಕುಶಲವ ಮಾತಾ ..................
................ ಶಾಂಭವೀ
ಭೋ| ಭೋ| ಭಿಕ್ಷಾಂದೇಹಿ.'

**- ಶಾಂಭವಿ (ಮರ್ಯಾದೆ)**

ಮೊದಲಾದ ಪದ್ಯಗಳಲ್ಲಿ ಬೇಂದ್ರೆಯವರು ಅನೇಕ ದೇವತೆಗಳಲ್ಲಿ ವ್ಯಷ್ಟಿಯ ಉನ್ನತಿ ಬಯಸಿದ್ದಾರೆ. ಅವರು ವಿಶ್ವಮಾತೆಯಲ್ಲಿ ಬೇಡಿಕೊಂಡದ್ದು:

'ಕೂಡಿ ಬೆಳೆದು ಬೆಳಗೋಣ ದೇವರೊಲು ಕೂಡಿ, ಕೂಡಿ, ಕೂಡಿ'

**- ಪ್ರಾರ್ಥನೆ (ಗಂಗಾವತರಣ)**

'ಮನಿ ಮುರುಕರ ತಳಿ ಹೋಗಿ
ಬಾಳೇ ಮತಿವಂತರಾಗಿ
ಸಂಸಾರದs ಕತೀ ಆಗ್ಲಿ
ಸತಿಪತಿ ಸಮರಸಾ'

**- ಕಲ್ಲಾಗಿದ್ದೆನೇನೋ (ಮುಗಿಲ ಮಲ್ಲಿಗೆ)**

'ಮುತ್ತುಹವಳ ಬಂಗಾರ ನೀಲಮಣಿ ಸ್ಫಟಿಕ ಛಾಯೆಯಾಕೆ
ಕಣ್ಣನಡುವೆ ಒಳಗಣ್ಣ ತೆರೆಯುವಾ ದಿವ್ಯ ಮಾಯೆಯಾಕೆ
ಬೆಳೆವ ಚಂದ್ರಕಳೆ ಮುಕುಟದವಳೆ ತಂತನದ ಬಣ್ಣದಾಕೆ
ವರದ ಅಭಯ ಕರವಿರುವ ತಾಯಿ ಬಾ ಬೇರೆ ಕರೆಯ ಬೇಕೆ?'

**- ಗಾಯತ್ರಿ ಸೂಕ್ತ (ಹಾಡು-ಪಾಡು)**

ವೇದಗಳ ಸಾರ ಓಂಕಾರ. ಅದರ ಸಾರವು ಭೂಃ ಭುವಃ ಸುವಃ ಎಂಬ ವ್ಯಾಹೃತಿಗಳು. ಅದರ ಸಾರವೇ ಗಾಯತ್ರಿ. ಗಾಯತ್ರಿ ಮಂತ್ರದಿಂದ ಬುದ್ಧಿಗೆ ಪ್ರಚೋದನೆ ಸಿಗಲಿ ಎಂಬ ಪ್ರಾರ್ಥನೆ ಇದೆ. ಇದರೊಂದಿಗೆ ಬೇಂದ್ರೆಯವರು ಸಕಲರ ಒಳಗಣ್ಣು- ಜ್ಞಾನನೇತ್ರದ ಉನ್ಮೀಲನವಾಗಲಿ ಎಂಬ ಪ್ರಾರ್ಥನೆಯನ್ನು ಸೂರ್ಯನಲ್ಲಿ, ಗಾಯತ್ರಿ ದೇವಿಯಲ್ಲಿ ಮಾಡಿಕೊಂಡಿದ್ದಾರೆ.

'ಮನೀ ಮನೀಗೆ ಒಳ್ಳೇದಾಗಲಿ

☆ ☆

ಒಳ್ಳೇದಾಗಲಿ, ಒಳ್ಳೇದಾಗಲಿ, ಒಳ್ಳೇದಾಗಲಿ
ಪ್ರೀತಿ ಒಲವಾದರ, ದೈವ ಗೆಲವಾಗ್ತದ
ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ ||'

**- ಶುಭೇಚ್ಛೆ-ಸ್ವಸ್ತಿವಾಚನ (ತಾಲೆಕ್ಕಣಿಕೆ ತಾದೌತಿ)**

ರುದ್ರನ ಸಂಗತಿ
ಅಗತಿ ಅಲ್ಲ ತಿಳಿಯೋ
ಶಿವನಲ್ಲಿ ಉಳಿಯೋ ಶಕ್ತಿಯಾಗಿ

- ಅರವತ್ತೊಂಬತ್ತು (ಬಾಲಬೋಧೆ)

ಬೇಂದ್ರೆಯವರು ವಿಶ್ವದ ಪ್ರತಿಯೊಬ್ಬನಲ್ಲಿ-ಗಂಡಿರಲಿ, ಹೆಣ್ಣಿರಲಿ-ಬುದ್ಧಿಯ ಸಾಮರಸ್ಯ ಮತ್ತು ಭಾವದ ಸಾಮರಸ್ಯ ಉಂಟಾಗಲಿ ಎಂದೇ ಪ್ರಾರ್ಥಿಸಿದ್ದಾರೆ. ಭಾವ ಸಾಮರಸ್ಯಕ್ಕೆ ಭಕ್ತಿ-ಉತ್ಕಟಪ್ರೇಮ-ಒಂದೇ ಸುಲಭಮಾರ್ಗ. ಮಗುವಿನ ಭಕ್ತಿಗೆ ಒಲೆಯುವಳು-ತಾಯಿ-ಮಾತೆ. ಗರ್ಭಧಾರಣೆಯ ಕಾಲದಿಂದ ಕೊನೆಯವರೆಗೂ ಮಗುವಿಗೆ ತಾಯಿಯೇ ಪಾಲಕಳು, ಪೋಷಕಳು ಹಾಗೂ ರಕ್ಷಕಳು. ಅವಳಲ್ಲಿ ಭಿಕ್ಷಾಂದೇಹಿ ಎಂದು ಬೇಡಿಕೆ ಸಲ್ಲಿಸಿದವನ ಇಚ್ಛಾ ಪೂರ್ತಿ ಖಂಡಿತವಾಗಿ ಆಗುತ್ತದೆ ಎಂಬ ನಿಷ್ಠೆಯಿಂದ ಅಂಬಿಕಾತನಯದತ್ತರು ವಿಶ್ವಶಾಂತಿ ಮತ್ತು ವಿಶ್ವಕಲ್ಯಾಣಕ್ಕಾಗಿ ಅನೇಕ ಬಗೆಯಲ್ಲಿ ಪ್ರಾರ್ಥಿಸಿದ್ದಾರೆ.

'ಜಯ ಜಯ ಜಯ ಹೃದಯಕ್ಕೆ
ಇಷ್ಟೇ ಎನ್ನು ಅದು ಸಾಕು
ಅದನ್ನೇ ಸಾಕು'

**ಹಾರ್ದಿಕ ಮೈತ್ರಿಗೆ ಜಯವಾಗಲಿ (ಚತುರೋಕ್ತಿ ಮತ್ತು ಇತರ ಕವನಗಳು)**

- ಎಂದು ಜನತೆಯಲ್ಲಿ ಪ್ರಾರ್ಥಿಸಿ, ವಿಜ್ಞಾನ ವೇದ್ಯ, ಮಾನವ ಹೃದಯ, ಸ್ಥಾಯೀ ಮೈತ್ರಿಯ ಕ್ಷೇತ್ರವಾಗಲಿ ಎಂಬ ಬೇಡಿಕೆಯನ್ನು ವಿಶ್ವಮಾತೆಯಲ್ಲಿ ಸಲ್ಲಿಸಿದ್ದಾರೆ. ವಿಶ್ವ ಮಾತೆ ವಿಶ್ವದ ಜನರಲ್ಲಿ ಕರ್ಮ ಕೌಶಲ್ಯ ಪ್ರಾಪ್ತವಾಗುವಂತೆ ಮಾಡಲಿ. ಗಾಳಿಯಲ್ಲಿ ಮತ್ತು ನೀರಿನಲ್ಲಿ ಮಾಧುರ್ಯವನ್ನು ನಿರ್ಮಿಸಿ ಮಾಲಿನ್ಯವನ್ನು ಸಂಹರಿಸಲಿ. ಮೈತ್ರಿ, ಪ್ರೇಮ, ಧೈರ್ಯ, ಸಮಾನತೆಯ ಮೌಲ್ಯಕ್ಕೆ ನ್ಯಾಯ ಲಭಿಸಿ ವಿಶ್ವಕಲ್ಯಾಣ ಹಾಗೂ ವಿಶ್ವಶಾಂತಿಯ ಸತ್ಯ ಉದ್ಭವಿಸಲಿ ಎಂಬುದೇ ಬೇಂದ್ರೆ ಸಮಗ್ರ ಕಾವ್ಯದ ವಿಶ್ವ ಸಂದೇಶವಾಗಿದೆ.

ಬೇಂದ್ರೆಯವರು ತಮ್ಮ ಇಳಿವಯಸ್ಸಿನಲ್ಲಿಯೂ 'ಮಾನವ ಜಾತಿಯ ಆತ್ಮಹತ್ಯೆ ತಪ್ಪಲಿ | ಕನ್ನಡವು ಭಾರತವು ಜಗವೆಲ್ಲವು ಒಂದೇ' ಆಗಲಿ[96] ಎಂದು ಆಶಿಸಿ ವಿಶ್ವತತ್ತ್ವವನ್ನು ಸಾರಿದ್ದಾರೆ. ವಿಶ್ವಮಾತೆಯ ಆರಾಧನೆಯು ಅವರ ಧಾರವಾಡದ ತಾಯಿ, ಕನ್ನಡತಾಯಿ, ಭರತಮಾತೆ, ಪ್ರಕೃತಿಮಾತೆಯನ್ನು ಕುರಿತು ರಚಿಸಿದ ಕವನಗಳಲ್ಲಿಯ ಅಂತರಾಳದಲ್ಲಿದೆ. ಅವರಿಗೆ ವಿಶ್ವಮಾತೆ ಎಂದರೆ ಜೀವಶಕ್ತಿಯ ದಿವ್ಯತೆಯ ಬೆಳಕು. ಆದ್ದರಿಂದ ಅವರು ಅದಿತಿಯನ್ನು ಹೀಗೆ ಪ್ರಾರ್ಥಿಸಿದ್ದಾರೆ:

'ಹೊಳೆದು ನಮ್ಮನ್ನು ತೊಳೆದು ನಾಡಿಗೆ, ಇಳೆಗೆ ಇಡಿ ಇಳೆಗೆ
ಇಳಿದು ಬಾ, ಎಬ್ಬಿಸಲು ಬಾ, ದಿವ್ಯತೆಯ ಬೆಳೆ ಬೆಳೆಗೆ
ಬಾರೆ ಭಗವತಿ ನಮ್ಮ ಜಗವತಿ ಕಾತರಿಸುತಿಹುದು
ನಿನ್ನನ್ನೇ ನೆನೆನೆನೆದು ಜೀವವು ಚೇತರಿಸುತಿಹುದು.'[97]

## ಸಂಖ್ಯಾ ಟಿಪ್ಪಣಿಗಳು

1. ಎ.ಬಿ. ಬೋಸ್, The Call of the Vedas, ಭಾರತೀಯ ವಿದ್ಯಾಭವನ, ಬಾಂಬೆ, 1960, ಪು. 215
2. ರಾಬರ್ಟ್ ಬ್ರಿಫಾಲ್ಟ್, The Mothers, ಜಾರ್ಜ್ ಅಲೆನ್ ಅಂಡ್ ಅನ್‌ವಿನ್ ಲಿ., ಲಂಡನ್, 1959, ಪು. 362.

3. ಲೆವಿಸ್ ಮಮ್‌ಫೋರ್ಟ್, The transformations of Man, ಜಾರ್ಜ್ ಅಲೆನ್ ಅಂಡ್ ಅನ್‌ವಿನ್ ಲಿ., ಲಂಡನ್, 1957,ಪು. 90.
4. ಶಂಕರ ಮೊಕಾಶಿ ಪುಣೇಕರ, ಸಾಹಿತ್ಯ ಮತ್ತು ಅಭಿರುಚಿ, ಮಿತ್ರ ಪ್ರಕಾಶನ, ಮೈಸೂರು, 1981, ಪು. 148, 149.
5. ಎ.ಬಿ.ಬೋಸ್, The Call of the Vedas, ಪೂರ್ವೋಕ್ತ, ಪು. 199.
6. ದ.ರಾ.ಬೇಂದ್ರೆ, ಅರಳುಮರಳು, ಶ್ರೀಮಾತಾ ಪ್ರಕಾಶನ, ಧಾರವಾಡ, 1995, ಪು. 165.
7. ರಂ.ಶ್ರೀ ಮುಗಳಿ, ಬೇಂದ್ರೆ ಕಾವ್ಯ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, 1986, ಪು. 39.
8. ದ.ರಾ.ಬೇಂದ್ರೆ, 'ಸಾಹಿತ್ಯ ಮತ್ತು ಸಾರ್ಥಕತೆ' ಬೇಂದ್ರೆ ಜೀವನ ಪರಿಚಯ, ವಾಮನ ಬೇಂದ್ರೆ, ಶ್ರೀಮಾತಾ ಪ್ರಕಾಶನ, ಧಾರವಾಡ, 1998, ಪು. 90, 91.
9. ದ.ರಾ.ಬೇಂದ್ರೆ, ಗಂಗಾವತರಣ, ಶ್ರೀಮಾತಾ ಪ್ರಕಾಶನ, 1989, ಪು. 10.
10. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ, 1974, ಪು. 50.
11. ದ.ರಾ.ಬೇಂದ್ರೆ, 'ಆತ್ಮಕಥನ' ಪುಟಬಂಗಾರ (ಸಂಪುಟ ಐದು) ಶ್ರಾವಣ ಪ್ರತಿಭೆ, ಜಿ.ಬಿ. ಜೋಶಿ ಮತ್ತು ಕೆ.ಡಿ. ಕುರ್ತಕೋಟಿ (ಸಂ.), ಮನೋಹರ ಗ್ರಂಥಮಾಲಾ, ಧಾರವಾಡ, 1987, ಪು. 440.
12. ದ.ರಾ.ಬೇಂದ್ರೆ, ಯಕ್ಷ-ಯಕ್ಷಿ, ಪ್ರತಿಭಾ ಗ್ರಂಥಮಾಲೆ, ಧಾರವಾಡ, 1962, ಪು. 53.
13. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಪೂರ್ವೋಕ್ತ, ಪು. 52.
14. ದ.ರಾ.ಬೇಂದ್ರೆ, ಸಖೀಗೀತ, ಶ್ರೀಮಾತಾ ಪ್ರಕಾಶನ, ಧಾರವಾಡ, ಪು. 1990, ಪು. 97.
15. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಪೂರ್ವೋಕ್ತ, ಪು. 937, 938.
16. ದ.ರಾ.ಬೇಂದ್ರೆ, ಅರಳುಮರಳು, ಪೂರ್ವೋಕ್ತ, ಪು. 426.
17. ಅದೇ, ಪು. 427, 428.
18. ದ.ರಾ.ಬೇಂದ್ರೆ, ಸಖೀಗೀತ, ಶ್ರೀಮಾತಾ ಪ್ರಕಾಶನ, 1990, ಪು. 11.
19. ದ.ರಾ.ಬೇಂದ್ರೆ, ಮಾತೆಲ್ಲ ಜ್ಯೋತಿ, ಮಣಿಪಾಲ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ (ಲಿ. ) ಮಣಿಪಾಲ, 1972, ಪು. 72.
20. ದ.ರಾ.ಬೇಂದ್ರೆ, ಹಾಡುಪಾಡು, ಪು. 40.
21. ಶಂಕರ ಮೊಕಾಶಿ ಪುಣೇಕರ, ಬೇಂದ್ರೆ ಕಾವ್ಯ ಮೀಮಾಂಸೆ, ಸಾಹಿತ್ಯ ಭಂಡಾರ, ಬೆಂಗಳೂರು, ಪು. 50.
22. ದ.ರಾ.ಬೇಂದ್ರೆ, ಗಂಗಾವತರಣ, ಪೂರ್ವೋಕ್ತ, ಪು. 8.
23. ದ.ರಾ.ಬೇಂದ್ರೆ, ಮುಗಿಲ ಮಲ್ಲಿಗೆ, ಪ್ರತಿಭಾ ಗ್ರಂಥಮಾಲೆ, ಧಾರವಾಡ, 1961, ಪು.23.
24. ದ.ರಾ.ಬೇಂದ್ರೆ, ಗಂಗಾವತರಣ, ಪೂರ್ವೋಕ್ತ, ಪು. 10.
25. ಶ್ರೀಧರ ಖಾನೋಳಕರ, ಗೆಳೆಯ ಬೇಂದ್ರೆ, ಚುಳಕಿ ಗೋವಿಂದರಾಯರು (ಸಂ.), ಕವಿವರ ಬೇಂದ್ರೆ, ಲಲಿತಾ ಸಾಹಿತ್ಯ ಮಾಲೆ, ಧಾರವಾಡ, 1946, ಪು. 15, 16.
26. ಸಿಂಪಿ ಲಿಂಗಣ್ಣ, 'ನಾನೂ ಶ್ರೀ ಬೇಂದ್ರೆ ಅವರೂ', ಅದೇ, ಪು. 51-52.
27. ದ.ರಾ.ಬೇಂದ್ರೆ, ನಾದಲೀಲೆ, ಶ್ರೀಮಾತಾ ಪ್ರಕಾಶನ, ಧಾರವಾಡ, 1989, ಪು. 92.
28. ಅದೇ, ಪು. 82.
29. ದ.ರಾ.ಬೇಂದ್ರೆ, ಗರಿ, ಶ್ರೀಮಾತಾ ಪ್ರಕಾಶನ, ಧಾರವಾಡ, ಪು. 34.

30. ದ.ರಾ.ಬೇಂದ್ರೆ, ಉಯ್ಯಾಲೆ, ಸಮಾಜ ಪುಸ್ತಕಾಲಯ, ಧಾರವಾಡ, 1980, ಪು. 27.
31. ದ.ರಾ.ಬೇಂದ್ರೆ, ಗಂಗಾವತರಣ, ಪೂರ್ವೋಕ್ತ, ಪು. 37.
32. ಅದೇ, ಪು. 35.
33. ಜೀವಿ ಕುಲಕರ್ಣಿ, ನಾ ಕಂಡ ಬೇಂದ್ರೆ : ಜೀವನ ಮತ್ತು ಸಾಹಿತ್ಯ, ಹರ್ಷವರ್ಧನ ಪ್ರಕಾಶನ, ಮುಂಬಯಿ, 1997.
34. ಶಂಕರ ಮೊಕಾಶಿ ಪುಣೇಕರ, ಬೇಂದ್ರೆ ಕಾವ್ಯ ಮೀಮಾಂಸೆ, ಪೂರ್ವೋಕ್ತ, ಪು. 13.
35. ದ.ರಾ.ಬೇಂದ್ರೆ, ಅರಳುಮರಳು, ಪೂರ್ವೋಕ್ತ, ಪು. 409.
36. ಅದೇ, ಪು. 417.
37. ದ.ರಾ.ಬೇಂದ್ರೆ, ಸಮರಸವೇ ಜೀವನ (ಆಯ್ದ ಕವನಗಳ ಸೈದ್ಧಾಂತಿಕ ಸಂಗ್ರಹ), ಶ್ರೀಮಾತಾ ಪ್ರಕಾಶನ, ಧಾರವಾಡ, 1996, ಪು. 112.
38. ದ.ರಾ.ಬೇಂದ್ರೆ, ಅರಳುಮರಳು, ಪೂರ್ವೋಕ್ತ, ಪು. 80.
39. ದ.ರಾ.ಬೇಂದ್ರೆ, ನಮನ, ಪ್ರತಿಭಾ ಗ್ರಂಥಮಾಲೆ, ಧಾರವಾಡ, 1958, ಪು. 90.
40. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಪೂರ್ವೋಕ್ತ, ಪು. 149.
41. ಅದೇ, ಪು. 149.
42. ದ.ರಾ.ಬೇಂದ್ರೆ, ಮುಗಿಲಮಲ್ಲಿಗೆ, ಪ್ರತಿಭಾ ಗ್ರಂಥಮಾಲೆ, ಧಾರವಾಡ, ಪು. 31.
43. ದ.ರಾ.ಬೇಂದ್ರೆ, ಯಕ್ಷ-ಯಕ್ಷಿ, ಪ್ರತಿಭಾ ಗ್ರಂಥಮಾಲೆ, ಧಾರವಾಡ, 1962, ಪು. 78.
44. ದ.ರಾ.ಬೇಂದ್ರೆ, ಶ್ರೀಮಾತಾ, ಸಮಾಜ ಪುಸ್ತಕಾಲಯ, ಧಾರವಾಡ, 1968, ಪು. 3.
45. ದ.ರಾ.ಬೇಂದ್ರೆ, ಗರಿ, ಪೂರ್ವೋಕ್ತ, ಪು. 64.
46. ಅದೇ, ಪು. 49.
47. ದ.ರಾ.ಬೇಂದ್ರೆ, ಶ್ರೀಮಾತಾ, ಪೂರ್ವೋಕ್ತ, ಪು. 1.
48. ದ.ರಾ.ಬೇಂದ್ರೆ, ಗಂಗಾವತರಣ, ಪೂರ್ವೋಕ್ತ, ಪು. 48.
49. ದ.ರಾ.ಬೇಂದ್ರೆ, ಮರ್ಯಾದೆ, ಸಮಾಜ ಪುಸ್ತಕಾಲಯ, ಧಾರವಾಡ, 1963, ಪು. 16.
50. ಅದೇ, ಪು. 18.
51. ಅದೇ, ಪು. 31.
52. ದ.ರಾ.ಬೇಂದ್ರೆ, ಅರಳುಮರಳು, ಪೂರ್ವೋಕ್ತ, ಪು. 13.
53. ಅದೇ, ಪು. 14.
54. ದ.ರಾ.ಬೇಂದ್ರೆ, ತಾ ಲೆಕ್ಕಣಿಕೆ ತಾ ದೌತಿ, ಶ್ರೀಮಾತಾ ಪ್ರಕಾಶನ, ಧಾರವಾಡ, 1983, ಪು. 37.
55. ಅದೇ, ಪು. 79
56. ದ.ರಾ.ಬೇಂದ್ರೆ, ಕಾವ್ಯ ವೈಖರಿ, ಶ್ರೀಮಾತಾ ಪ್ರಕಾಶನ, ಧಾರವಾಡ, ಪು. 55.
57. ರಾಬರ್ಟ್ ಬ್ರಿಫಾಲ್ಟ್, The Mothers, ಪೂರ್ವೋಕ್ತ, ಪು. 363.
58. ದ.ರಾ.ಬೇಂದ್ರೆ, ಚತುರೋಕ್ತಿ ಮತ್ತು ಇತರ ಕವನಗಳು, ಸಮಾಜ ಪುಸ್ತಕಾಲಯ, ಧಾರವಾಡ, 1978, ಪು. 2.
59. ದ.ರಾ.ಬೇಂದ್ರೆ, ಯಕ್ಷ-ಯಕ್ಷಿ, ಪೂರ್ವೋಕ್ತ, ಪು. 54.

60. ದ.ರಾ.ಬೇಂದ್ರೆ, ಮುಗಿಲಮಲ್ಲಿಗೆ, ಪೂರ್ವೋಕ್ತ, ಪು. 14.
61. ದ.ರಾ.ಬೇಂದ್ರೆ, ಮಾತೆಲ್ಲ ಜ್ಯೋತಿ, ಪೂರ್ವೋಕ್ತ, ಪು. 7.
62. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಪೂರ್ವೋಕ್ತ, ಪು. 308.
63. ದ.ರಾ.ಬೇಂದ್ರೆ, ಶ್ರೀಮಾತಾ, ಪೂರ್ವೋಕ್ತ, ಪು. 11.
64. ದ.ರಾ.ಬೇಂದ್ರೆ, ಸಖೀಗೀತ, ಪೂರ್ವೋಕ್ತ, ಪು. 94.
65. ಡಿ.ಆರ್.ನಾಗರಾಜ್, ಶಕ್ತಿ ಶಾರದೆಯ ಮೇಳ, ಅಕ್ಷರ ಪ್ರಕಾಶನ, ಸಾಗರ, 1987,ಪು.75.
66. ದ.ರಾ.ಬೇಂದ್ರೆ, ನಾದಲೀಲೆ, ಶ್ರೀಮಾತಾ ಪ್ರಕಾಶನ, ಧಾರವಾಡ, 1989, ಪು. 41.
67. ದ.ರಾ.ಬೇಂದ್ರೆ, ಅರಳುಮರಳು, ಪೂರ್ವೋಕ್ತ, ಪು.257.
68. ದ.ರಾ.ಬೇಂದ್ರೆ, ನಮನ, ಪೂರ್ವೋಕ್ತ, ಪು. 14.
69. ದ.ರಾ.ಬೇಂದ್ರೆ, ಪರಾಕಿ, ಪೂರ್ವೋಕ್ತ, ಪು. 3.
70. ಕೀರ್ತಿನಾಥ ಕುರ್ತಕೋಟಿ, ಪುಟಬಂಗಾರ (ಸಂಪುಟ ಐದು) ಶ್ರಾವಣ ಪ್ರತಿಭೆ, ಮನೋಹರ ಗ್ರಂಥಮಾಲಾ, ಧಾರವಾಡ, 1987, ಪು. 88.
71. ದ.ರಾ.ಬೇಂದ್ರೆ, ನಮನ, ಪೂರ್ವೋಕ್ತ, ಪು.17.
72. ವಾಮನ ಬೇಂದ್ರೆ, 'ಭೂಮಿತಾಯಿ' ಪುಟಬಂಗಾರ (ಸಂಪುಟ ಐದು) ಶ್ರಾವಣ ಪ್ರತಿಭೆ, ಪೂರ್ವೋಕ್ತ, ಪು. 206, 207.
73. ದ.ರಾ.ಬೇಂದ್ರೆ, ಸಖೀಗೀತ, ಪೂರ್ವೋಕ್ತ, ಪು. 71.
74. ದ.ರಾ.ಬೇಂದ್ರೆ, ಹಾಡುಪಾಡು, ಪೂರ್ವೋಕ್ತ, ಪು. 44.
75. ದ.ರಾ.ಬೇಂದ್ರೆ, ಅರಳುಮರಳು, ಪೂರ್ವೋಕ್ತ, ಪು. 165.
76. ದ.ರಾ.ಬೇಂದ್ರೆ, ಮುಗಿಲಮಲ್ಲಿಗೆ, ಪೂರ್ವೋಕ್ತ, ಪು. 75.
77. ದ.ರಾ.ಬೇಂದ್ರೆ, ಅರಳುಮರಳು, ಪೂರ್ವೋಕ್ತ, ಪು. 342.
78. ಎಚ್.ಎಸ್. ರಾಘವೇಂದ್ರರಾವ್, ಹಾಡೆ ಹಾದಿಯ ತೋರಿತು, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, 1995, ಪು. 302.
79. ಕೀರ್ತಿನಾಥ ಕುರ್ತಕೋಟಿ, ದ.ರಾ.ಬೇಂದ್ರೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, 1982, ಪು. 10.
80. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಪೂರ್ವೋಕ್ತ, ಪು. 729.
81. ದ.ರಾ.ಬೇಂದ್ರೆ, ಮಾತೆಲ್ಲ ಜ್ಯೋತಿ, ಪೂರ್ವೋಕ್ತ, ಪು. 59.
82. ಶಂಕರ ಮೊಕಾಶಿ ಪುಣೇಕರ, ಬೇಂದ್ರೆ ಕಾವ್ಯ ಮೀಮಾಂಸೆ, ಪೂರ್ವೋಕ್ತ, ಪು. 6, 7.
83. ದ.ರಾ.ಬೇಂದ್ರೆ, ನಮನ, ಸಮಾಜ ಪುಸ್ತಕಾಲಯ, ಧಾರವಾಡ, 1958, ಪು. 34, 35.
84. ದ.ರಾ.ಬೇಂದ್ರೆ, ಅರಳುಮರಳು, ಪೂರ್ವೋಕ್ತ, ಪು. 282.
85. ದ.ರಾ.ಬೇಂದ್ರೆ, ಅರಳುಮರಳು, ಪೂರ್ವೋಕ್ತ, ಪು. 113.
86. ದ.ರಾ.ಬೇಂದ್ರೆ, ಗಂಗಾವತರಣ, ಪೂರ್ವೋಕ್ತ, ಪು. 6.
87. ದ.ರಾ.ಬೇಂದ್ರೆ, ಸಂಚಯ, ಸಮಾಜ ಪುಸ್ತಕಾಲಯ, ಧಾರವಾಡ, 1959, ಪು. 15.
88. ದ.ರಾ.ಬೇಂದ್ರೆ, ಅರಳುಮರಳು, ಪೂರ್ವೋಕ್ತ, ಪು. 106.

89. ಅದೇ, ಪು. 134.
90. ಅದೇ, ಪು. 50.
91. ಅದೇ, ಪು. 51.
92. ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಪೂರ್ವೋಕ್ತ, ಪು. 113, 114.
93. ಅದೇ, ಪು. 115.
94. ಅದೇ, ಪು. 116, 117.
95. ದ.ರಾ.ಬೇಂದ್ರೆ, ಅರಳುಮರಳು, ಪೂರ್ವೋಕ್ತ, ಪು. 286.
96. ದ.ರಾ.ಬೇಂದ್ರೆ, ಕಾವ್ಯವೈಖರಿ, ಪೂರ್ವೋಕ್ತ, ಪು. 18.
97. ದ.ರಾ.ಬೇಂದ್ರೆ, ಅರಳುಮರಳು, ಪೂರ್ವೋಕ್ತ, ಪು. 140.

ಅಧ್ಯಾಯ ಐದು

# ಬೇಂದ್ರೆಯವರ ಇತರ ಕೃತಿಗಳಲ್ಲಿ ಸ್ತ್ರೀ

## ನಾಟಕಗಳು

ಬೇಂದ್ರೆಯವರು ಕವಿಯಾದಂತೆ ನಾಟಕಕಾರರೂ ಆಗಿದ್ದಾರೆ. ಅವರು ಸಮಾಜವನ್ನು ಸೂಕ್ಷ್ಮವಾಗಿ ಗಮನಿಸಿ - ಸಮಾಜದ ವಿವಿಧ ಬದುಕಿನ, ವಿವಿಧ ಮುಖದ ಜನಗಳ ಮಾತು, ಆ ಜನರ ವೃತ್ತಿ, ಪ್ರವೃತ್ತಿಯಂತೆ ರೂಪುಗೊಂಡ ಶಬ್ದಶಕ್ತಿಯನ್ನು ನಾಟಕವಾಗಿಸಿದ್ದಾರೆ. ಬೇಂದ್ರೆಯವರ ಕಾವ್ಯದಂತೆ ನಾಟಕವು ತನ್ನದೇ ಆದ ದೃಶ್ಯ, ಪ್ರಯೋಗ, ಮಾತಿನ ಜಾಲ, ಅರ್ಥವಿಸ್ತಾರ ಹೊಂದಿದ್ದು ಇತರರು ಅನುಕರಿಸುವ ಮನಸ್ಸಾದರೂ ಅನುಕರಿಸಲಾಗದ ಬೇಂದ್ರೆ ಮಾರ್ಗದಲ್ಲಿದೆ. ಆ ನಾಟಕಗಳಲ್ಲಿ ಬೇಂದ್ರೆಯವರ ಪಾತ್ರಗಳು ಜೀವಂತ ಜನರೇ ನುಡಿದಂತಿದ್ದು ಸಹಜತೆಯನ್ನು ಮೈಗೂಡಿಸಿಕೊಂಡಿವೆ. ಬೇಂದ್ರೆ ಮರೆಯಲ್ಲಿದ್ದು - ನಮ್ಮಂತೆ ನಾಟಕ ನೋಡಿ ಆನಂದಿಸುವ ಪ್ರೇಕ್ಷಕನಾಗಿರುವುದು - ಅವರ ನಾಟಕದ ವೈಶಿಷ್ಟ್ಯವಾಗಿದೆ. ಇದನ್ನು 'ಸಾಕ್ಷೀಭಾವ' ಎಂಬುದಾಗಿ ಶ್ರೀ ಅರವಿಂದರು ವಿವರಿಸಿದ್ದಾರೆ. ಅವರ ನಾಟಕಗಳಲ್ಲಿ ಹಾಸ್ಯ, ಮಾತಿನ ಜಾಣ್ಮೆಯ ಜೊತೆಗೆ ಜೀವನವಿದೆ. ಅವರ ನಾಟಕಗಳು ಆ ಕಾಲದ ವ್ಯಕ್ತಿಗಳ ಬಣ್ಣದ ಚಿತ್ರದಂತಿವೆ. ಅವರು ನಾಟಕವನ್ನು ಕುರಿತು 'ಪ್ರಾರ್ಥನೆ' ಎಂಬ ಕವನದಲ್ಲಿ:

> 'ಪ್ರೇಕ್ಷಕರ ಚಪ್ಪಾಳೆಗಾಗಿ ಪಾತ್ರದಿಂದ ಅಪಾತ್ರಕಾರ್ಯ
> ಮಾಡಿಸುವದು ವಿನೋದವಲ್ಲ.
> ಅಪಹಾಸ ಉಪಹಾಸವು ಪಾತ್ರವನ್ನೂ ಪ್ರೇಕ್ಷಕರನ್ನೂ
> ಇಬ್ಬರನ್ನೂ ಹಾದಿಗೆಡಿಸುವದು.'[1]

ಎಂದು ಹೇಳಿದ್ದಾರೆ. ನಾಟಕ ಅಪಹಾಸ್ಯವಾಗಬಾರದು; ಪ್ರೇಕ್ಷಕ ಹಾದಿಗೆಡಬಾರದು; ಪಾತ್ರ ಅಪಾತ್ರಕಾರ್ಯ ಮಾಡಬಾರದು ಎಂಬುದು ಅವರ ನಿಲುವಾಗಿತ್ತು. ಅವರು ನಾಟಕವನ್ನು ಕುರಿತು 'ನಾಟಕವು ಕಲೆಯಲ್ಲ; ವಿವಿಧ ಕಲೆಗಳ ಸಂಗಮ. ಕಲೆಗಳಿಂದಲೇ ರೂಪಿಸಿಕೊಂಡ ಒಂದು ನವೀನ ಪ್ರಪಂಚ, ಸರ್ವಕಲೆಗಳ ಸಫಲತೆಯು ನಾಟ್ಯದಲ್ಲಿದೆ. ಈ ಸಂಸಾರವನ್ನೆ ಒಂದು ವೇದವೆಂದು ಕಲ್ಪಿಸಿದರೆ ನಾಟಕವು ಅದರ ರಹಸ್ಯವನ್ನುದ್ಘಾಟಿಸುವ ಭಾಷ್ಯವೆಂದು ಹೇಳಬಹುದು'[2] ಎಂದು ನುಡಿದಿದ್ದಾರೆ. "ಸಂಸಾರ ಕೆಟ್ರೆ ನಾಟಕದಿಂದ ಸುಧಾರಿಸಬಹುದು; ನಾಟಕನೇ ಕೆಟ್ರೆ?" ಎಂದು ಬೇಂದ್ರೆಯವರು ಹೇಳುತ್ತಿದ್ದರು. ಈ ಮಾತಿಗೆ ವಿಶಿಷ್ಟವಾದ ಅರ್ಥವಿದೆ. ವರಕವಿ ಡಾ. ಬೇಂದ್ರೆಯವರ ದೃಷ್ಟಿಯಲ್ಲಿ ವ್ಯಕ್ತಿಜೀವನ, ಸಮಷ್ಟಿಜೀವನ, ನವಮಾನವನ ಆವಿರ್ಭಾವ, ನವಸಮಾಜದ ರಚನೆ ಮುಂತಾದ ಪ್ರಕ್ರಿಯೆಗಳಲ್ಲಿ ನಾಟಕಕ್ಕೆ

ಒಂದು ವಿಶೇಷವಾದ ಪಾತ್ರವಿದೆ. ಬೇಂದ್ರೆಯವರ ಕಲ್ಪನೆಯ ನಾಟಕ ಶಾಸ್ತ್ರದ ತತ್ತ್ವಮೀಮಾಂಸೆ ಸಾಹಿತ್ಯ ಸಿದ್ಧಾಂತಕ್ಕೆ ಒಂದು ಹೊಸ ಆಯಾಮವನ್ನೇ ರೂಪಿಸುವಂಥದು.

'Drama is a process to remove the unessential and cause the emergence of the essential. A dramatist, like a sculptor who removes unessential portions of the stone to carve the idol, remove the unessential in the society' ಈ ಸಿದ್ಧಾಂತದ ಪ್ರಯೋಗ ಡಾ. ದ.ರಾ.ಬೇಂದ್ರೆಯವರು ಬರೆದ ನಾಟಕಗಳು"[3] ಎಂದು ಕೆ.ಎಸ್. ಶರ್ಮಾ ಅವರು ಹೇಳಿದ್ದಾರೆ.

ಬೇಂದ್ರೆಯವರು ೧೯೨೦ ರಿಂದ ೧೯೮೦ ರವರೆಗೆ ಒಟ್ಟು ೧೪ ನಾಟಕಗಳನ್ನು ರಚಿಸಿದ್ದಾರೆ. ಗೋಲ್ (೧೯೨೦), ತಿರುಕರ ಪಿಡುಗು (೧೯೨೪), ಸಾಯೋ ಆಟ (೧೯೨೫), ನಗೆಯ ಹೊಗೆ (೧೯೩೧), ಜಾತ್ರೆ (೧೯೩೪), ಹಳೆಯ ಗೆಣೆಯರು (೧೯೩೬), ದೆವ್ವನ ಮನೆ (೧೯೩೬), ಉದ್ಧಾರ (೧೯೪೭), ಮಂದೀ ಮದಿವಿ ಮತ್ತು ಮಂದೀ ಮಕ್ಕಳು (೧೯೫೦), ಶೋಭನಾ (೧೯೫೮), ಆಥರಾ ಈಥರಾ (೧೯೬೮), ಮಕ್ಕಳು ಅಡಿಗಿ ಮನಿ ಹೊಕ್ಕರೆ (೧೯೭೬), ಮಂದೀ ಮನಿ (೧೯೮೦).

ಬೇಂದ್ರೆಯವರು ನಾಟಕದಲ್ಲಿ ಯಾವುದೇ ಕಲ್ಪನಾ ಆದರ್ಶಗಳಿಗೆ ಮೊರೆ ಹೋಗದೆ, ಮೂಢ ನಂಬಿಕೆಗಳನ್ನು ಧಿಕ್ಕರಿಸಿ, ಸಮಾಜದ ವಾಸ್ತವ ಚಿತ್ರಗಳನ್ನು ನೀಡಲು ಪ್ರಯತ್ನಿಸಿದ್ದಾರೆ. ಅವರು "ನಾಟಕಾದಿ ಕಲೆಗಳು ಸತ್ಯವನ್ನು ಪ್ರಿಯವಾಗುವಂತೆ ಹೇಳುವುದು ನಿಜವಿದ್ದ ಪಕ್ಷದಲ್ಲಿ ನಾಟಕಗಳಲ್ಲಿ ಪಕ್ಷಕಟ್ಟಿ ಹೋರಾಡುವುದಕ್ಕಿಂತ, ಪ್ರೇಕ್ಷಕರ ಅಂತಃಕರಣ ವಿವೇಕಗಳು ಜಾಗೃತವಾಗುವಂತೆ, ಪಕ್ಷ-ಪ್ರತಿಪಕ್ಷಗಳನ್ನು ಚಿತ್ರಿಸುವುದೊಳಿತು"[4] ಎಂದು ಹೇಳಿದ್ದಾರೆ. ಹೀಗೆ ಚಿತ್ರಿಸುವಾಗ ಸ್ತ್ರೀ ಪಾತ್ರಗಳಿರುವ ನಾಟಕಗಳನ್ನು ಮಾತ್ರ ಆಯ್ದುಕೊಂಡು ಬೇಂದ್ರೆಯವರ ದೃಷ್ಟಿಯಲ್ಲಿ ಸ್ತ್ರೀಪಾತ್ರಗಳು ಮೂಡಿಬಂದಿರುವುದನ್ನು ತಿಳಿಯಲು ಪ್ರಯತ್ನಿಸಿದ್ದೇನೆ.

**ತಿರುಕರ ಪಿಡುಗು**

ಬೇಂದ್ರೆಯವರು ೧೯೨೪ರಲ್ಲಿ 'ತಿರುಕರ ಪಿಡುಗು' ನಾಟಕವನ್ನು ರಚಿಸಿದರು. ಅದನ್ನು ಕುರಿತು ರಾಮಚಂದ್ರ ಕೊಟ್ಟಲಗಿಯವರು 'ತಿರುಕರ ಪಿಡುಗು' ನಾಟ್ಯತಂತ್ರದ ಹೊಸತನದಿಂದ ಏಕಪಾತ್ರಾಭಿನಯದ ರೀತಿಯಿಂದ ಸರ್ವಶ್ರೇಷ್ಠ ಕೃತಿಯೆಂದು ಹೇಳಬಹುದು"[5] ಎಂದು ನುಡಿದಿದ್ದಾರೆ. ಈ ನಾಟಕದಲ್ಲಿ 'ಲೇಖಕರ ನುಡಿ'ಯಾಗಿ ಬೇಂದ್ರೆಯವರು ಕವನರೂಪದಲ್ಲಿ ಹೀಗೆ ಹೇಳಿದ್ದಾರೆ.:

'ಬೇಡುವವರ ಮುಂದೆ,
ಕೊಡದವ,
ತಿರುಕ'

ಹೀಗಾಗಿ ಈ ನಾಟಕ ಧ್ವನ್ಯಾರ್ಥಕವಾಗಿ ನಾಟಕದ ಮುಖ್ಯಪಾತ್ರಧಾರಿ (ಏಕಪಾತ್ರಾಭಿನಯನದ ಏಕಪಾತ್ರಧಾರಿ) ಮಿ|| ನಾಯಕನನ್ನೂ ಒಳಗೊಂಡು ತಿರುಕರ ಪಿಡುಗನ್ನು ಚಿತ್ರಿಸಿದೆ. "ಶ್ರೀಮಂತರು ಹೃದಯಶ್ರೀಮಂತರಾಗಬೇಕು ಮತ್ತು ತಿರುಕರ ತಿರುಕತನ ಹೋಗಿ ಅವರು ಉದ್ಯೋಗಪ್ರಿಯರಾಗಬೇಕು ಎಂಬ ವಿಚಾರ ಈ ನಾಟಕ ರಚನೆಯ ಹಿನ್ನೆಲೆಯಲ್ಲಿ ಇದೆ"[6] ಎಂದು ವಾಮನ ಬೇಂದ್ರೆಯವರು ಹೇಳಿರುವ ನುಡಿ ಮನನೀಯವಾಗಿದೆ.

ಕಾಲವನ್ನು ನೂಕಲಾಗದ ಸಿರಿವಂತ ಮಿ|| ನಾಯಕ್ ಮತ್ತು ಕಾಲವನ್ನು ನೂಕಲು ಪ್ರಯತ್ನಿಸುವ

ಭಿಕ್ಷುಕರು ಇಲ್ಲಿದ್ದಾರೆ. ಭಿಕ್ಷುಕರು ಯಾರೂ ಇಲ್ಲಿ ಪ್ರತ್ಯಕ್ಷರಂಗದ ಮೇಲೆ ಬರದಿರುವುದರಿಂದ, ಮಿ|| ನಾಯಕರ ಏಕಪಾತ್ರಭಿನಯದಿಂದ ಭಿಕ್ಷುಕರು ಮತ್ತು ನಾಯಕರು ಪ್ರೇಕ್ಷಕರಿಗೆ ತಮ್ಮ ಸ್ಥಿತಿಗತಿಯನ್ನು ಪರಿಚಯಿಸಿ, ನಾಟಕ ಕ್ರಿಯಾಶೀಲವಾಗಲು ಕಾರಣವಾಗುವುದು ಈ ನಾಟಕದ ವೈಶಿಷ್ಟ್ಯವಾಗಿದೆ. ಬೆಳಿಗ್ಗೆ ೭.೩೦ರಿಂದ ೧೦.೩೦ರವರೆಗೆ ಕಾಲಪ್ರಜ್ಞೆಯ ತೀವ್ರತೆಯಿಂದ ಟೈಮ್‌ಟೇಬಲ್ ಪ್ರಕಾರ ತಯಾರಾಗಲು ಪ್ರಯತ್ನಿಸುವ ನಾಯಕ್ ಅವರಿಗೆ ತಡೆಯಂತೆ ತಿರುಕರಾದ ಆಚಾರ್ಯರು, ಬ್ರಾಹ್ಮಣ ವಿಧವೆ, ದಾಸಯ್ಯ, ಜೋಗಮ್ಮ, ದಾಸರು, ಜಂಗಮ, ವಾರದ ಹುಡುಗ, ದೇಶ ಸೇವಕರು, ಜೋಶಿಗ, ಮಾಧುಕರಿ ಹುಡುಗ ಮತ್ತು ಗೊಲ್ಲರಾಕಿ ಅನುಕ್ರಮವಾಗಿ ಬರುವರು. ಅದರಲ್ಲಿ ಸ್ತ್ರೀ ತಿರುಕರ ಬಗ್ಗೆ ನಾಯಕ್ ಅವರ ಪ್ರತಿಕ್ರಿಯೆಯನ್ನು ಈಗ ನೋಡೋಣ.

ಹೇರ್‌ಡ್ರೆಸಿಂಗ್‌ನ ಗಡಿಬಿಡಿಯಲ್ಲಿರುವ ಮಿ||ನಾಯಕ್‌ನ ವೇಳೆಗೆ ಒಬ್ಬ ಬ್ರಾಹ್ಮಣ ವಿಧವೆ ಮುದುಕಿ - ಗೋಪಾಳಾ ಹಾಕ್ರೆಪ್ಪಾ ಎನ್ನುತ್ತಾ ಶುಕ್ಲವೃತ್ತಿಗಾಗಿ ಬರುವಳು. ಆಗ ಮಿ|| ನಾಯಕ್ ನುಡಿಯುವ ನುಡಿ:

"ಬರ್ರಿ ಗಂಗಾಬಾಯ್ರ, ಭಾಗೀರಥಿ ಬಾಯ್ರ, ಗಂಗಾಭಾಗೀರಥಿಬಾಯ್ರ, ಬರ್ರಿ. ಮುಂಜಾನೆ ಎದ್ದು ಕೈಯಾಗ ತಂಬ್ಗಿ ತಗೊಂಡಾವ್ರು ಇತ್ಲಾಗ ಹೀಂಗS ಬಂದ್ರೇನು? ಏನ್ರಿ, ಹೀಂಗS ಜೀವಾ ಇಟಕೊಂಬೋದರಕಿಂತ ನಿಮ್ಮ ಯಜಮಾನ್ರ ಕೂಡ ಸುಟಗೊಂಡು ಸತ್ತಿದ್ರ ನಿಮಗೆಷ್ಟು ಪುಣ್ಯ ಬರತಿತ್ತು! ಮಂದಿಗೆಷ್ಟು ಛಲೋ ಆಗ್ತಿತ್ತು. ಸತಿ ನಿಲ್ಲಿಸಿ ಸರಕಾರ ಭಾಳ ತಪ್‌ಮಾಡ್ತು. ತಿರಕೋಳ್ಳೋರ ಸಂಖ್ಯಾ ಹೆಚ್ಚಾಗ್ಯದಂತ ಮ್ಯಾಲೆ ಬೊಬ್ಬಿ ಹೊಡೀತಾರ. ಮಾಡಿದವ್ರು ಉಣತಾರ ಮಣಿಯಂಥ ಕಡಬು.... ಈ ಶುಕ್ಲುರ್ತಿ ಬೇಡೋದರಕ್ಕಿಂತ ಸರಕಾರದ ಮ್ಯಾಲೆ ಪೋಟಗಿ ದಾವೆ ಮಾಡ್ರಿ, ದಾವೆ ಇಲ್ದಿದ್ರ, ಸತೀ ಹೋಗಲಿಕ್ಕೆ ಪರವಾನಿಗಿ ಕೊಡ್ರಿ ಅಂತ ಅನ್ರಿ, ನಮ್ಮಿದೂರ್ಗೆ ಅತ್ತೇನು ಮಾಡ್ತೀರಿ? ನಿಮ್ಮಳೋಣ ಸರಕಾರದ ಕಿವಿಗೆ ಬೀಳ್ಲಿ.

☆ ☆

'ಯಾಕುಲವೇ ಜೋಗಮ್ಮ' ಎನ್ನುತ್ತ ಜೋಗಮ್ಮ ಬಾಗಿಲೆಡೆಗೆ ಬಂದಾಗ ಮಿ|| ನಾಯಕ್ ಹೀಗೆ ನುಡಿಯುತ್ತಾನೆ:

ನಾಕ್‌ಸಾಲು ಓದೋದ್ರಾಗS ಹಾಜರ್ ಆಗ್ಯಾಳಲ್ಲ ಈ ಚಿರಮುತ್ತೈದಿ' (ಪುಸ್ತಕ ಮುಚ್ಚಿ) ಏನು ಯಾಕುಲದೇ | ಯಾಕುಲ್ದಾಕಿ ನೀನು? ತಿರಿಕಿ ಆಗ್ಯೂ ಮುರುಕ ಹೋಗಿಲ್ಲಾ ಇನ್ನೂ ಹಣೀ ಭಂಡಾರ ನೋಡ್ರಿ! ತಂಬುಲದ ತುಟಿ ನೋಡ್ರಿ! ಕುಬಸಾ ನೋಡ್ರೀ! ಸೀರೀ ನೀರಿಗೀ ನೋಡ್ರಿ!!! ಹುಬ್ಬೇನು ಹಾರಸ್ತೀ ಹುಬ್ಬು? ನೀವೇನು ತಿರುಕೊಳ್ಳಲಿಕ್ಕೆ ಬರತೀರೋ ಮತ್ತ್ಯಾತಕ್ಕಾರೂ ಬರತೀರೋ! ಸೂಳಿ ಮುಪ್ಪಾಗಿ ಜೋಗ್ತಿ ಆಗ್ತಾಳ ಅಂತಾರ; ಮೆಣಸು ಮುಪ್ಪಾದರೂ ಜೋಳಾದವೇನು?... ತಲೀಮ್ಯಾಲೊಂದು ಹಡಲಗಿ, ಕೊಳ್ಳಾಗ ಎಲ್ಲವ್ವನ ತಾಳಿ, ಕೈಯಾಗ ತಂಬಟ. ಹೊರಟರು ಊರೆಲ್ಲ ಮೋಜು ಮಾಡ್ಕೋತ ನೋಡ್ಕೋತ .... ಭಂಡಾರ ಮಂತ್ರಿಸಿಕೊಂಡು ಬಂದಿರತಾರೋ ಏನೋ? ಇಲ್ದಿದ್ರ ಇವರ ಹೊಟ್ಟಿ ತುಂಬುತ್ತಿತ್ತS ಹ್ಯಾಂಗ? .... ಇದು ತಿರಕೊಂಡು ತಿಂದ ಮೈಯ್ಯ? ಹರೇದವರ್ನ ಮುರಕೊಂಡು ತಿಂದ ಮೈ!... ಏನೂ ನೀಡೂದಲ್ಲ ಹೋಗು.

☆ ☆

ಮಿ|| ನಾಯಕ್ ಡ್ರೆಸ್ ಪೂರಾ ಮುಗಿಸಿಕೊಂಡಾಗ _ ಅನಂತರ ಅತ್ತಣಿಂದ. ಒಬ್ಬ

ಗೊಲ್ಲರಾಕಿಯು 'ಗೋವಿಂದಗ ಇಟು ನೀಡ್ರಮ್ಮೋ ಕಮಲಾಬಾಯಿ, ವಿಮಲಾಬಾಯಿ ... ಎಂದು ಕೂಗುತ್ತ ಕೈಯಲ್ಲಿ ಚಾಪಿ ಹೆಣೆಯುತ್ತ, ಒಂದು ಕರಿಮೋರೆಯ ಮಗುವನ್ನು ಎತ್ತಿಕೊಂಡು ಬರುವಳು. ಅವಳನ್ನು ಕಂಡು ಮಿ|| ನಾಯಕ್:

'ಎ ಬಾಯಿ, ಬಾಯೀ, ಬಾಯಿಮುಚ್ಚು ಬಾಯಿ ..... ಆಹಹಾ ಏನು ರೂಪಾ ! ....

ಏ ಗೊಲ್ಲರತಿಪ್ಪಿ! ಎಂಜಲತುಪ್ಪದ ಕೈಏನಾದರೂ ಎಂದಾರೆ ತಪ್ಪಿ ತಲೀಗೆ ಒರಸಿಕೊಂಡೀಯೇನು? ಆ ಬಟ್ಟೆಗೆ ಮುಕ್ಕಿದ ನೊಣಾ ನೋಡಿದರs ನೊಣದ ಬಟ್ಟೀನ ಉಟ್ಟಾಳೇನೋ ಅನಸ್ತದ. ಕೆಲಸಾ ನೋಡಿದರಾs! ಈಚಲ ಚಾಪಿ ಹೆಣೆಯೊ ವಯ್ಯಾರ ಯಾಕ ಬೇಕು? ಹುಂ. ಸರಿದೂರ, ಅಲ್ಲಿ ಕಾಲಿಡಬ್ಯಾಡಾ, ಕಲ್ಲು ಎಲ್ಲಾರೆ ಕೊಳತಾವು? ಏನು ಮೈ !! ಈ ವರ್ಷದಾಗ ಬೆವರಾದರೂ ಬಂದಾಗ ಮೈತಿಕ್ಕೊಂಡಿದ್ದೇನು? ಬಣ್ಣಾದರೂ ಏನು? ಇವಳ ಅವ್ವ ಬಸುರಿದ್ದಾಗ, ಅಮಾಸೀದಿನ, ಮಧ್ಯರಾತ್ರೀಯೊಳಗ, ಮುಸುಕು ಹಾಕ್ಕೊಂಡು, ಡಾಂಬರಿನೊಳಗ ಇದ್ದಲೀ ತೇಯ್ದು ಬಯಕೀ ತೀರಿಸಿಕೊಳ್ಳಲಿಕ್ಕೆ ಕುಡಧಾಂಗ ಕಾಣ್ತದ .... ಸಾಕಾಗ್ದಾ ಮೇಲೆ ಹಿಡೀ ಕರಿಬಟ್ಟೂ, ಹತ್ತುಕೇರೂ ತಿಂದಿರಬೇಕು! ಬಿಡು ಕತ್ತಲಾಬಿಡು. ಏನಾ ಯಾವದಾದರೂ ವಾಶಿಂಗ ಕಂಪನಿಯೊಳಗ ಡಬ್ಬಲ್‌ಚಾರ್ಜ್ ಕೊಟ್ಟು ಇಸ್ತ್ರೀ ಮಾಡಲಿಕ್ಕೆ ಕೊಡಲ್ಯೋ? ಅಲ್ಲ ಮತ್ತs ಇರ್ಲಿ ಹೋಗ ಪಂಟು ಬಡೀಬ್ಯಾಡಾ'.

ಬೇಂದ್ರೆಯವರ ನಾಟಕ ಭಾಷೆಯನ್ನು ಕುರಿತು ಎನ್ಕೆ ಅವರು ಹೀಗೆ ನುಡಿದಿದ್ದಾರೆ:

'.... ಶ್ರೀರಂಗರಿಗಿಂತ ಮೊದಲೆ ಧಾರವಾಡ ಸಾಹಿತ್ಯರಂಗದ ಮೇಲೆ, ರಂಗಸಾಹಿತ್ಯಕಾರರಾಗಿ ಕಾಣಿಸಿಕೊಂಡ ಬೇಂದ್ರೆ ಅವರು 'ಗೋಲ್', 'ತಿರುಕರ ಪಿಡುಗು', 'ನಗೆಯ ಹೊಗೆ' ಮೊದಲಾದ ನಗೆಯ ಹಾಗೂ ಹೊಗೆಯ ಎಂದರೆ ಅವಿದ್ಧ ನಾಟಕಗಳಲ್ಲಿ ಉತ್ತರ ಕರ್ನಾಟಕದ ಉತ್ತಮ ದೇಸಿಯ ಶೈಲಿಯನ್ನು ಸಂಭಾಷಣೆಗೆ ನೀಡಿದರು... ಕೈಲಾಸಂ ಹಾಗೂ ಬೇಂದ್ರೆ ಅವರದು ಆಯಾ ಸ್ಥಳೀಯ ಜನರಾಡುವ ತದ್ರೂಪ ಭಾಷೆ'[7].

ಬೇಂದ್ರೆಯವರು ಸೂಕ್ಷ್ಮಗ್ರಾಹಿಗಳಾಗಿ ಜನರ ಮಾತು ನಡೆನುಡಿಯನ್ನು ಗಮನಿಸಿರುವುದು ಈ ಮೂರು ತಿರುಕರ ನುಡಿಚಿತ್ರದಲ್ಲಿ ಸ್ಪಷ್ಟವಾಗಿ ಗೊತ್ತಾಗುತ್ತದೆ. ಭಿಕ್ಷುಕ ಮಹಿಳೆಯರನ್ನು ಕುರಿತು ಜನ ಲಘುವಾಗಿ ಮಾತನಾಡುವ ರೀತಿ, ಅವರನ್ನು ಬಣ್ಣಿಸಿ ತಮ್ಮ ಕ್ಷುಲ್ಲಕತನವನ್ನು ತೋರ್ಪಡಿಸಿಕೊಳ್ಳುವ ಬಗೆ ಇಲ್ಲಿದೆ. ಇಲ್ಲಿರುವ ತಿರುಕರು ಯಾರೂ ರಂಗದ ಮೇಲೆ ಪ್ರವೇಶಿಸುವುದಿಲ್ಲ. ಹಾಗಾಗಿ ಅವರುಗಳ ಮೌನ ಮತ್ತು ಶ್ರೀಮಂತ ಮಿ|| ನಾಯಕ್‌ನ ಮಾತು ಒಂದು ಬಗೆಯಲ್ಲಿ ಅಪರೂಪದ ಸಂಭಾಷಣೆಯಂತಿದೆ. ಬ್ರಾಹ್ಮಣ ವಿಧವೆಯ ನೋವು, ಜೋಗಮ್ಮನ ತಿರುಗಾಟ, ಗೊಲ್ಲತಿಯ ಹೀನಾಯ ಬದುಕನ್ನು ಬೇಂದ್ರೆಯವರು ಚಿತ್ರಿಸುತ್ತಾ, ನಮ್ಮ ನಾಡಿನ ಸ್ತ್ರೀಯರ ಬವಣೆಯನ್ನು ಆಗಿನ ಕಾಲಮಾನದಲ್ಲಿ ಅವರನ್ನು ಜನ ಕಾಣುತ್ತಿದ್ದ ರೀತಿಯನ್ನು ನುಡಿಚಿತ್ರದಲ್ಲಿ ಹಿಡಿದಿಟ್ಟಿದ್ದಾರೆ.

**ಸಾಯೋಆಟ**

ಬೇಂದ್ರೆಯವರು ೧೯೫೫ರಲ್ಲಿ ರಚಿಸಿದ 'ಸಾಯೋಆಟ' ಮತ್ತು ೧೯೬೪ರಲ್ಲಿ ರಚಿಸಿದ 'ಜಾತ್ರೆ' ನಾಟಕಗಳು ಅಸಂಗತ ನಾಟಕಗಳಾಗಿವೆ. 'ಬಿ.ವಿ. ಕಾರಂತ ಮೊದಲಾದವರು ಇದನ್ನು ಕನ್ನಡದ ಪ್ರಪ್ರಥಮ ಅಸಂಗತ ನಾಟಕವೆಂದು ಕರೆದಿದ್ದಾರೆ'[8] ಎಂದು 'ಸಾಯೋಆಟ' ಕುರಿತು ಜಿ.ಎಸ್. ಆಮೂರ ಅವರು ನುಡಿದಿದ್ದಾರೆ. ಈ ನಾಟಕಗಳು ಸಾರ್ವಕಾಲಿಕ ಸತ್ಯವನ್ನು ಒಳಗೊಂಡ ಕಾರಣ ಹಲವಾರು ಪ್ರಯೋಗಗಳನ್ನು ಕಂಡು ಜನರನ್ನು ನಕ್ಕು ನಗಿಸಿ ಇಂದಿಗೂ ಪ್ರಸ್ತುತವಾಗಿವೆ.* ವಾಮನ ಬೇಂದ್ರೆಯವರು 'ಮೈಸೂರಿನ

ಮಹಾರಾಜ ಸಂಸ್ಕೃತ ಕಾಲೇಜಿನ ವಿದ್ಯಾರ್ಥಿಗಳು ಈ ನಾಟಕದ ಸಂಸ್ಕೃತ ಅನುವಾದವನ್ನು ಮಾಡಿ ಅಭಿನಯಿಸಿದರು. ವಿಶ್ವಕನ್ನಡ ಸಾಹಿತ್ಯ ಸಮ್ಮೇಳನದ ಕಾಲಕ್ಕೆ ಸಾಯೋಆಟದ ಇಂಗ್ಲೀಷ್ ಅನುವಾದವನ್ನು ಪ್ರೊ|| ಗೋಪಾಲಕೃಷ್ಣ ಅಡಿಗರು ಮಾಡಿದರು'[9] ಎಂದು ಹೇಳಿದ್ದಾರೆ. 'ಸಾಯೋಆಟ' ನಾಟಕದಲ್ಲಿ ಸಮಾಜದಲ್ಲಿನ ವಿಪರ್ಯಾಸವನ್ನು ಹುಚ್ಚುದೊರೆ ಮತ್ತು ಹುಚ್ಚುದಿವಾನನ ಹುಚ್ಚಾಟವಾಗಿ ಚಿತ್ರಿಸಿದ್ದಾರೆ. ಈ ನಾಟಕದಲ್ಲಿನ ವಿವಿಧ ಪಾತ್ರಗಳು, ವಿವಿಧ ವೃತ್ತಿ ಪ್ರವೃತ್ತಿಯವರದಾಗಿದ್ದು ಅವರ ಸಹಜ ಆಡುನುಡಿಯಲ್ಲಿನ ಬಾಗು ಬಳುಕನ್ನು ಬಳಸಿ ಸಹಜ ಹಾಸ್ಯ ವಾತಾವರಣವನ್ನು ಬೇಂದ್ರೆ ಸೃಷ್ಟಿಸಿದ್ದಾರೆ. ನಾಟ್ಯಪ್ರಪಂಚಕ್ಕೆ ಅಂದು ಹೊಸತಾಗಿ ಬಂದ ಆ ಪಾತ್ರಗಳು ಇಂದೂ ನವನವೀನವಾಗಿ ನಿಂತಿರುವುದು ಬೇಂದ್ರೆಯವರ ಸಾರ್ವಕಾಲಿಕಗುಣದ ನಾಟಕ ರಚನಾ ಕೌಶಲ್ಯಕ್ಕೆ ದ್ಯೋತಕವಾಗಿದೆ.

ಈ ನಾಟಕದಲ್ಲಿರುವ ಎರಡು ಸ್ತ್ರೀ ಪಾತ್ರಗಳು ಕಳ್ಳನ ಹೆಂಡತಿ ಕಳ್ಳಿ ಮತ್ತು ಸೂಳೆ. ಅವರಿಬ್ಬರೂ ದೊರೆಯಲ್ಲಿ ನ್ಯಾಯ ಬೇಡುವ ರೀತಿ ಅವರ ಬೌದ್ಧಿಕ ಚತುರತೆಗೆ ಸಾಕ್ಷಿಯಾಗಿದೆ. ಹುಚ್ಚು ದೊರೆಯ ಕೈಗೆ ಸಿಕ್ಕ ಕೂಲಿ ದಿವಾಣರಿಗೆ ಕೈಬಿಸಿಮಾಡಿ ತಪ್ಪಿಸಿಕೊಂಡರೆ, ಈ ಹೆಣ್ಣುಗಳು ಅವನನ್ನು ಮಾತಿನಿಂದ ಗೆಲ್ಲುವುದು ಇಲ್ಲಿನ ವಿಶೇಷವಾಗಿದೆ. ಪ್ರಾಣಕ್ಕೆ ಪ್ರಾಣ ಎಂಬ ನ್ಯಾಯದಂತೆ ಶೂಲಕ್ಕೆ ಏರಿಸಲು ಕೊತವಾಲ ಸೂಳೆಯನ್ನು ಕರೆತರಲು, ಆಗ ಕಳ್ಳಿ ಮತ್ತು ಸೂಳೆ ಶೂಲದಿಂದ ತಪ್ಪಿಸಿಕೊಳ್ಳಲು ಪರಸ್ಪರ ಮಾತಾಡಿಕೊಂಡು ಅನಂತರ ನುಡಿಯುವ ನುಡಿ ಹೀಗಿದೆ:

ಸೂಳೆ : 'ಸತ್ತವನು ಗಂಡಸು; ಅವನಿಗಾಗಿ ಸಾಯುವವಳು ಹೆಂಗಸಾ.
ಇದೆಲ್ಲಿಯ ನ್ಯಾಯವೋ! ಈ ರಾಜ್ಯದಲ್ಲಿ ಸಾಯುವ
ಗಂಡಸರು ಸಿಗಬಾರದೇ? ಏನು ರಾಜ್ಯವಿದು!

ಬೇಂದ್ರೆಯವರು ಈ ನಾಟಕದಲ್ಲಿ ಸಾಮಾನ್ಯ ಪಾತ್ರಗಳಾದ ಕಳ್ಳಿ ಮತ್ತು ಸೂಳೆಯಿಂದ ಒಂದು ಶ್ರೇಷ್ಠ ನ್ಯಾಯ ತತ್ತ್ವವನ್ನು ಬಹಿರಂಗಪಡಿಸಿದ್ದಾರೆ. ಅನ್ಯಾಯ ಯಾರಿಗೇ ಆಗಲಿ ಅವರು ಅದರ ವಿರುದ್ಧ ದನಿ ಎತ್ತಲೇ ಬೇಕು ಎಂಬುದಾಗಿ ಇಲ್ಲಿ ಸೂಚಿಸಿದ್ದಾರೆ.

**ನಗೆಯ ಹೊಗೆ**

ಬೇಂದ್ರೆಯವರು 'ಸಮಾಜ ಹಾಗೂ ನಗೆಯ ಹೊಗೆ' ಎಂಬ ಲೇಖನದಲ್ಲಿ 'ಸುಖಾಸೀನರಾಗಿ ನಾವು ಪ್ರೇಕ್ಷಕರಂತೆ ಕುಳಿತಾಗ, ನಮ್ಮ ಹುಚ್ಚಾಟವು ನಮ್ಮ ಕಣ್ಣಿಗೆ ಬಿದ್ದರೆ, ನಮ್ಮ ದೃಷ್ಟಿಯು ಪಾವನವಾಗುವುದು. ನಾವು ದೋಷಿಗಳಾಗಿದ್ದುದಕ್ಕಾಗಿ ಒಳಗಿಂದೊಳಗೆ ಎದೆ ಕರಗುವುದು. ಕತ್ತಲೆಯೊಡೆದು ಬೆಳಕು ಹರಿಯುವುದು. ಅದಕ್ಕಾಗಿಯೆ ನಾಟಕವು 'ಕೃತುಂ ಚಾಕ್ಷುಷಂ' ಕಣ್ಣಯಜ್ಞವೆಂದು ಕರೆಯಲ್ಪಟ್ಟಿದೆ. ನಾಟಕವೆಂದರೆ ಕಣ್ಣಿನ ನಂಜು ಕಳೆಯುವ ಅಮೃತಾಂಜನವು' ಎಂದು ಹೇಳಿ ಮುಂದುವರಿದು 'ನಗೆಯ ಹೊಗೆ' ನಾಟಕವನ್ನು ಕುರಿತು 'ಸಮಾಜದಲ್ಲಿ ಕಂಡುಬರುವ ಅನೇಕ ಕುಂದುಕೊರತೆಗಳಿಗೆ 'ಸಮಾಜ'ವೇ ಕಾರಣವೆಂದು ನಾವು ಮೇಲಿಂದ ಮೇಲೆ ಎನ್ನುತ್ತೇವೆ. ಆದರೆ ಸಮಾಜವೇ ಹೇಗೆ ಕಾರಣವೆಂಬುದನ್ನು 'ಜನಸಂಘ'ದ ಜೀವನದಿಂದಲೇ ನಾಟಕಗಳಲ್ಲಿ ತೋರಿಸಿರುವುದಿಲ್ಲ. 'ನಗೆಯ ಹೊಗೆ'ಯೆಂಬ ಈ ಚಿಕ್ಕ ದೃಶ್ಯದಲ್ಲಿ ಹಾಗೆ ತೋರಿಸಲಾಗಿದೆ. ಮುಖ್ಯಪಾತ್ರವಾದ 'ಭಾಗೀರಥಿ'ಯು ಒಂದು ಮೂಕಬಲಿ'[11] ಎಂದು ನುಡಿದಿದ್ದಾರೆ. ಇಲ್ಲಿ ಸಮಾಜದ ವಿಧವೆಯರು ಗಂಡುಳ್ಳ ಗರತಿಯರು, ಭಾಗೀರಥಿಯ ತಂದೆ, ತಾಯಿ, ಇತರ ಗಂಡಸರು ರಂಗದ ಮೇಲೆ ಬಂದು

---

* ಈ ಲೇಖಕನು ಜಾತ್ರೆ ನಾಟಕವನ್ನು ನಿರ್ದೇಶಿಸಿ, ಧ್ವನ್ಯಾಲೋಕ, ಮೈಸೂರಿನಲ್ಲಿ ಪ್ರದರ್ಶಿಸಿದ್ದಾನೆ.

'ಬಾಲ್ಯ ವಿವಾಹ'ಕ್ಕೆ ಪೋಷಕವಾಗಿ ನುಡಿಯುವ ನುಡಿ 'ನಗೆಯ ಹೊಗೆ'ಯಾಗಿ ಏನೂ ಅರಿಯದ ಮೈನೆರೆದ ಮುಗ್ಧೆ ಭಾಗೀರಥಿ ಬೆಂಕಿ ಹೊತ್ತಿಸಿಕೊಂಡು ಸಾಯುವಂತೆ ಮಾಡುತ್ತದೆ. ಇದು ಸಮಾಜದಲ್ಲಿನ ಕೊರತೆ. ಆಕೆಯ ಸಾವಿಗೆ ಆ ಸಮಾಜವೆ ಕಾರಣವಾಗುತ್ತದೆ. ಹೀಗಾಗಿ ಸಾಮಾಜಿಕ ಸಮಸ್ಯೆಯ ನಾಟಕದಲ್ಲಿ ಸಮಾಜವೇ ಹೊಣೆ ಎಂದಾಗ ಅದರ ಮುಖವನ್ನು ಎಲ್ಲ ಕೋನಗಳಿಂದ ಚಿತ್ರಿಸಬೇಕು, ಸಮಸ್ಯೆಯ ಝಳ ಪ್ರೇಕ್ಷಕನಿಗೆ ತಟ್ಟುವಂತೆ ನಾಟಕ ರಚಿಸಬೇಕು ಎಂಬುದಕ್ಕೆ ಇದೊಂದು ಮಾದರಿಯಂತಿದೆ. ಬಾಲ್ಯವಿವಾಹ ಸಮಸ್ಯೆ ಇಂದು ಇಲ್ಲದಿದ್ದರೂ ಅಷ್ಟೇ ಕ್ರೂರವಾದ, ಜಟಿಲವಾದ ಇತರ ಸಮಸ್ಯೆಗಳಿದ್ದು ಅದನ್ನು ನಾಟಕವಾಗಿಸಲು ಹೋದ ನಾಟಕಕಾರನಿಗೆ ಈ ನಾಟಕ ಮಾರ್ಗದರ್ಶಿಯಂತಿದೆ. ಮುಗ್ಧೆ ಭಾಗೀರಥಿಯ ಸಾವಿಗೆ ಹೆಂಗಸರೇ ಕಾರಣವಾಗಿದ್ದಾರೆ. ಹೆಣ್ಣಿನ ನೋವನ್ನು ಹೆಣ್ಣು ಅರಿತಿಲ್ಲ ಎಂಬ ನೋವು ಬೇಂದ್ರೆಯವರಿಗಿದೆ. ಅದನ್ನು ಈ ನಾಟಕದಲ್ಲಿ ಚಿತ್ರಿಸಿದ್ದಾರೆ. ಈ ರೀತಿ ವರ್ತಿಸುವ ಹೆಂಗಸರು ಬದಲಾಗಬೇಕು ಎಂದು ಆಶಿಸಿದ್ದಾರೆ. ಅವರು 'ಹೆಂಗಸನ್ನು ಹುರುಪಳಿಸುವ ಮಾತಿನುರಿಯು ಹೆಂಗಸರ ನಾಲಿಗೆಯಿಂದಲೇ ಬರುವದೊಂದು ದೈವದುರ್ವಿಪಾಕವು. ಈ ಉರಿಯು ಆರುವ ದಿವಸವು ಸುದಿವಸ. ಅದು ಬರಲಿ'[12] ಎಂದು ಆಶಿಸಿದ್ದಾರೆ. ಈ ನಾಟಕವನ್ನು ಕುರಿತು ಕೀರ್ತಿನಾಥ ಕುರ್ತಕೋಟಿ ಅವರು 'ಈ ನಾಟಕದ ದೋಷವೆಂದರೆ ಕೇಂದ್ರಪಾತ್ರದ ಅಸಹಾಯಕತೆ. ಇದರಿಂದ ನಾಟಕದಲ್ಲಿ ಹೋರಾಟವೇ ಇಲ್ಲವಾಗಿದೆ. ಭಾಗೀರಥಿಯ ಸಾವು ಒಂದು ತಣ್ಣಗಿನ ಕೊಲೆಯಾಗುವುದರಿಂದ, ದುರಂತ ಸಹಿಸಲಸಾಧ್ಯವಾಗಿಬಿಡುತ್ತದೆ'[13] ಎಂದು ಹೇಳಿದ್ದಾರೆ. ಎನ್ಕೆಯವರು 'ಮುಚ್ಚುಮರೆಯಿಲ್ಲದ ವಾಸ್ತವ ಚಿತ್ರಣ ಇದು. ಈಗ ಐದಾರು ದಶಕದ ಹಿಂದಿನ ಸಂಪ್ರದಾಯಸ್ಥ ಮನೆತನಗಳಲ್ಲಿ ನಡೆಯುವ ಹೊಲಗೇರಿಯನ್ನು ಬಯಲಿಗೆಳೆಯುವ ದಿಟ್ಟತನದ ನಾಟಕ ಓದಿ, ನೋಡಿ ಮಡಿವಂತರು ನಡುಗಿ ಹೋದರು.'[14] ಎಂದು ಹೇಳಿದ್ದಾರೆ. ಅಂದಿನ ಸಮಾಜ ವ್ಯವಸ್ಥೆಯಲ್ಲಿ ಮುಗ್ಧ ಬಾಲೆಯು ಯಾವುದೇ ಹೋರಾಟ ಮಾಡಲು ಸಾಧ್ಯವಿಲ್ಲದ ಕಾರಣ ಅಂದಿನ ವಾಸ್ತವ ಸಮಾಜದ ಮುಖವನ್ನು ಬೇಂದ್ರೆ ಇಲ್ಲಿ ಬಿಂಬಿಸಿದ್ದಾರೆ ಎಂದು ಹೇಳಬಹುದು.

**ಹಳೆಯ ಗೆಣೆಯರು**[15]

ಈ ನಾಟಕದಲ್ಲಿ ಬುದ್ಧಿಯ ಅತಿರೇಕದಿಂದ ವರ್ತಿಸುವ ನಿವೃತ್ತರಾದ ಪದ್ಮನಾಭರಾಯ ಮತ್ತು ವಿಶ್ವಾಸರಾಯರಿದ್ದಾರೆ. ಅವರು :

'ಒಂದು ಕಡೆಗೆ
ತನ್ನ ದೋಷವನ್ನು ಒಳಗೆ ಅಡಗಿಸುವುದು;
ಇನ್ನೊಂದು ಕಡೆಗೆ
ಪರರ ದೋಷವನ್ನು ಇಣಿಕಿ ನೋಡುವುದು
ಮನುಷ್ಯನ ಸ್ವಭಾವವಾಗಿದೆ'

ಎಂದು ನಾಟಕಕಾರರು ನುಡಿದಂತೆ ಇದ್ದು, ವೇಷ ಬದಲಾಯಿಸಿಕೊಂಡು ತಮ್ಮ ಪೂರ್ವ ವೃತ್ತಿಧರ್ಮದಂತೆ ವರ್ತಿಸುವುದು ಅವರ ಕ್ಷುಲ್ಲಕತನವನ್ನು ತೋರಿಸುತ್ತದೆ. ಅವರಿಬ್ಬರಲ್ಲೂ ಅನೈತಿಕ ಸಂಬಂಧ ಹೊಂದಿದ್ದ ನರ್ಸ್ - ಸುಂದರಬಾಯಿ ಅಕಸ್ಮಾತ್ತಾಗಿ ಅವರಿದ್ದಲ್ಲಿಗೆ ಬಂದು ವಯೋಮಾನಕ್ಕೆ ತಕ್ಕಂತೆ ತಾನು ಬದಲಾದುದನ್ನು ತಿಳಿಸುತ್ತಾಳೆ. 'ಇಗೋ ನೋಡಿರಿ, ಜನ್ಮ ಮುಗಿಯುವ ಕಾಲ ಬಂತು. ಜನರಿದಿರಲ್ಲದಿದ್ದರೂ ಮನದಿದಿರಾದರೂ ನಿಜವನ್ನು ಒಪ್ಪಿಕೊಳ್ಳೋಣ' ಎಂದು ಗುರುವಿನಿದಿರು ತನ್ನ ತಪ್ಪು ಒಪ್ಪಿಕೊಂಡದ್ದನ್ನು ಹೇಳುತ್ತಾಳೆ. ಅವರಿಬ್ಬರೂ ಅವಳ ನೇರ ನುಡಿಯನ್ನು ಸಂಶಯ ಮನಸ್ಸಿನಿಂದ ಪ್ರಶ್ನಿಸಿದಾಗ 'ಎಲ್ಲ ಎಲ್ಲ,

ಪುಟ್ಟಪೂರಾ! ಮಲ ತೊಳೆದುಕೊಂಡು ನಿರ್ಮಲರಾಗುವ ಹೊತ್ತಿನಲ್ಲಿ ಅಡಗಿಸಿಟ್ಟು ಏನು ಉಪಯೋಗ?' ಎಂದು ನುಡಿದು ಶುದ್ಧಳಾಗಿ ಹೊರಟುಹೋಗುತ್ತಾಳೆ. ಬಾಹ್ಯದಲ್ಲಿ ವೇಷ ಮರೆಸಿ ಆಂತರ್ಯದಲ್ಲಿ ಹೊಲಸಿನಿಂದಿರುವ ಆ ಪುರುಷರು 'ಸೌಂದರ್ಯಲಹರಿ' ಓದುವ, 'ಗೋಪಿಗೀತ' ಹಾಡುವ ಚಾಪಲ್ಯದಲ್ಲಿಯೇ ನಾರುತ್ತಿರುತ್ತಾರೆ. ಹೀಗೆ ಈ ನಾಟಕದಲ್ಲಿ ಸ್ತ್ರೀಪುರುಷರ ವಿಭಿನ್ನ ಮುಖವನ್ನು ಪರಿಚಯಿಸುತ್ತ ಶುದ್ಧರಾಗಿ ಮಾರ್ಪಡುವ ವ್ಯಕ್ತಿಗಳು ಸ್ತ್ರೀಯರು ಎಂದಿದ್ದಾರೆ.

**ದೆವ್ವನ ಮನೆ**[16]

೧೯೩೦ರಲ್ಲಿ ರಚಿತವಾದ 'ದೆವ್ವನ ಮನೆ' ನಾಟಕ ಮೂಢನಂಬಿಕೆಗು ವಿರುದ್ಧದ ಒಂದು ಉತ್ತಮ ಧ್ವನಿಚಿತ್ರವಾಗಿದೆ. ಬೇಂದ್ರೆಯವರು ಆಧ್ಯಾತ್ಮಿಕ ಸಾಧನಾಮಾರ್ಗಿಗಳಾಗಿ ಮೂಢನಂಬಿಕೆಗಳ ಅಂಧಶ್ರದ್ಧೆಯ ವಿರುದ್ಧ ಧ್ವನಿ ಎತ್ತಿದವರು. ಈ ನಾಟಕವನ್ನು ಕುರಿತು ವಾಮನ ಬೇಂದ್ರೆಯವರು 'ಬೇಂದ್ರೆಯವರು ಪರಲೋಕವಾದಿಗಳಲ್ಲ. ಅಪರೋಕ್ಷ ಜೀವನ, ಗೃಹಸ್ಥ ಜೀವನ ಶ್ರೇಷ್ಠ ಎಂಬ ಭಾವನೆ ಈ ನಾಟಕದಲ್ಲಿ ಪ್ರತಿಬಿಂಬಿತಗೊಂಡಿದೆ'[17] ಎಂದು ಹೇಳಿದ್ದಾರೆ.

ಈ ನಾಟಕದ ಅತ್ತೆ-ಸೊಸೆಯರಾದ ಸೀತಮ್ಮ ಮತ್ತು ಸಾವಿತ್ರಿ ಜಗಳವಾಡುವುದಕ್ಕೆ - ಅವರ ಸಮಸ್ಯೆಗಳನ್ನು ಅರಿತು ಅದನ್ನು ಬಗೆಹರಿಸಲು ಪ್ರಯತ್ನಿಸದ ಮನೆಯ ಯಜಮಾನ ಸತ್ಯವಂತನೇ ಕಾರಣವಾಗಿದ್ದಾನೆ. ಅವನು ಹೆಸರಿಗೆ ಸತ್ಯವಂತನಾಗಿ ಸತ್ಯಶೋಧನೆಗೆ ಮನಸ್ಸು ಕೊಡದೆ ದೆವ್ವದ ಬೆನ್ನುಹತ್ತಿ ಮನೆಯನ್ನು 'ದೆವ್ವದ ಮನೆ' ಮಾಡಿಕೊಂಡಿದ್ದಾನೆ. ಅದಕ್ಕೆ ಮೂಢನಂಬಿಕೆಯ ಮೊರೆ ಹೊಕ್ಕು ಶಾಸ್ತ್ರಿ, ಮಂತ್ರೇಶ್ವರ, ಬಲಭೀಮ ಪಂಡಿತ, ಹಕೀಮ ಸಾಹೇಬ, ಕುಂಟಕಾಲಿನ ವೈದ್ಯರನ್ನು ಕರೆಸಿ ಪರಿಹಾರ ಹುಡುಕಲು ಯತ್ನಿಸುತ್ತಾನೆ. ಆಗ ಅವನ ಹಳೆಯ ಗೆಣೆಯ ಗುರುರಾಜ ಬಂದು ಮನೆಯ ಸಮಸ್ಯೆಯನ್ನು ಬಗೆಹರಿಸುತ್ತಾನೆ. ನಾಟಕದ ಪ್ರಾರಂಭದಲ್ಲಿ ಕೊಳ್ಳಿ ಹಿಡಿದ ಅತ್ತೆ ಸೀತಮ್ಮ, ಕಸಬರಿಗೆ ಹಿಡಿದ ಸೊಸೆ ಸಾವಿತ್ರಿ ಕಂಡುಬಂದರೆ; ಗೆಳೆಯ ಗುರುರಾಜನ ಸತ್ಯಶೋಧದಿಂದ ಆ ಕುಟುಂಬದಲ್ಲಿ ಹೊಂದಾಣಿಕೆಯಾಗಿ ನಾಟಕದ ಕೊನೆಯಲ್ಲಿ ಶಾಂತವಾದ ಓರಣದ ಮೋರೆಯ ಸಾವಿತ್ರಿ, ಜಪಮಾಲೆ ಹಿಡಿದ ಸೀತಮ್ಮ ಕಾಣುತ್ತಾರೆ. ಈ ನಾಟಕವನ್ನು ಕುರಿತು ನಾಟಕಕಾರರೇ ಹೇಳಿರುವ:

> 'ಹೆಣ್ಣಿಗೆ ಹೆಣ್ಣು ವೈರಿಯಾಗಬಾರದು
> ಇದನ್ನೆಲ್ಲ ತಪ್ಪಿಸಲು ನಾವು
> ಕುಂಟು ವೈದ್ಯರ ಸಂತೆಯನ್ನು ಸೇರಿಸಿ ಫಲವಿಲ್ಲ
> ಅರಿತು ಬಾಳಿದರೆ ದೇವರ ಮನೆ
> ಮರೆತು ಬಾಳಿದರೆ ದೆವ್ವನ ಮನೆ -
> ಇದು ಸಪ್ಪನ್ನ ಸತ್ಯವಂತರಿಗೆ ಕಾಣಬೇಕು.'

ಎಂಬುದು ಮನನೀಯವಾಗಿದ್ದು, ಸಂಸಾರದ ಮುಖ್ಯಸ್ಥರಾದ ಗಂಡಸರು ಇದನ್ನು ತಿಳಿದು ಬಾಳಬೇಕಾಗಿದೆ ಎಂಬುದೇ ಈ ನಾಟಕದ ಧ್ವನಿಯಾಗಿದೆ.

**ಹೊಸ ಸಂಸಾರ**[18]

ಬೇಂದ್ರೆಯವರ ಕಲ್ಪನೆಯಲ್ಲಿ ರಾಷ್ಟ್ರವೇ ಒಂದು ಸಂಸಾರ. ರಾಷ್ಟ್ರವು ಮಂದಿಗೆ ಸೇರಿದ್ದು, ಇದು ಮಂದಿಯ ಮನೆ. ಈ ಮನೆಯಲ್ಲಿ ಪ್ರತಿಯೊಂದು ಕುಟುಂಬವು ಸುಖೀ ಕುಟುಂಬವಾಗಬೇಕು ಎಂಬ ದೃಷ್ಟಿಯಿಂದ 'ಹೊಸ ಸಂಸಾರ' ಎಂಬ ಧ್ವನ್ಯಾರ್ಥದ ನಾಟಕವನ್ನು ರಚಿಸಿದ್ದಾರೆ. ಅವರು ಈ ನಾಟಕವನ್ನು

'ಮಂದಿ ಮದಿವೆ', 'ಮಂದಿ ಮಕ್ಕಳು' ಎಂದು ಎರಡು ಪ್ರತ್ಯೇಕ ಅಂಕಗಳಲ್ಲಿ ರಚಿಸಿದ್ದು ೧೯೫೦ರಲ್ಲಿ. ಸ್ವಾತಂತ್ರ್ಯಾನಂತರ ವಿಘಟನೆ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದ ಸ್ತ್ರೀಯರಲ್ಲಿ ಉಂಟಾದ ಸ್ವತಂತ್ರ ಮನೋಭಾವ, ವೈಚಾರಿಕ ಚಿಂತನೆ, ಗೃಹಿಣಿಯಾದ ಸ್ತ್ರೀ ಸಮಾಜಮುಖಿಯಾಗಿ ರಾಷ್ಟ್ರ ರಾಜಕಾರಣದಲ್ಲಿ ಭಾಗವಹಿಸಿದ ಸಂದರ್ಭ, ಹಿಂದೂ ಮುಸ್ಲಿಂ ದ್ವೇಷಾಸೂಯೆಯ ಕಾರಣದ ಹಿಂಸೆಯಿಂದ ಅನಾಥರಾದ ಜನ, ಅದಕ್ಕಾಗಿ ಸಮಾಜದ ಸ್ಥಿತಿವಂತರು, ವಿಚಾರವಂತರು ಮಾಡಬೇಕಾದ ಸೇವೆ - ಇದೆಲ್ಲದರ ನಡುವೆ ಕುಟುಂಬಶೀಲರಾಗಬೇಕಾದ ಜನತೆ - ಈ ಚಿಂತನೆಗಳೆಲ್ಲ ಇಲ್ಲಿ ನಾಟಕರೂಪವಾಗಿ ಹೊಮ್ಮಿವೆ.

ಇದೊಂದು ರಾಷ್ಟ್ರೀಯ ಚಿಂತನೆಯ ಹಾಗೂ ಕುಟುಂಬ ರೂಪಣದ ಅಪೂರ್ವ ನಾಟಕವಾಗಿದೆ. ಆ ವಿಘಟನೆಯ ಸಂದರ್ಭದಲ್ಲಿ ಜೀವನವಿಮುಖವಾದ ಜೀವಪರವಾದ ಆಲೋಚನೆ ಇಲ್ಲಿದ್ದು ಬೇಂದ್ರೆಯವರ ಸೃಷ್ಟಿಶೀಲ ಮನೋಭಾವಕ್ಕೆ, ಜೀವನಮೌಲ್ಯಕ್ಕೆ ಸಾಕ್ಷಿಯಂತಿದೆ. ಆ ಸಂದರ್ಭದಲ್ಲಿ ಹೊಸ-ಹೊಸ ಕುಟುಂಬಗಳು ಸೃಷ್ಟಿಯಾಗುತ್ತ ಅವರು ರಾಷ್ಟ್ರದ ಬೆಳವಣಿಗೆಯಲ್ಲಿ ಕ್ರಿಯಾಶೀಲರಾಗಿ ತೊಡಗಬೇಕಾದ ಕಾರಣ ಅವುಗಳಲ್ಲಿ ಐಕ್ಯತೆ ಇದ್ದು ಅವು ಸರ್ವೋದಯ, ಸಮರಸ ತತ್ತ್ವವನ್ನು ಆಧರಿಸಬೇಕೆಂಬ ಚಿಂತನೆಯಿದೆ. ಅದರ ಸಂಕೇತವೋ ಎಂಬಂತೆ ಬೇಂದ್ರೆಯವರು ೧೯೫೦ರಲ್ಲಿ ಎರಡು ಅಂಕಗಳನ್ನು ರಚಿಸಿದವರು, ೧೯೭೦ರಲ್ಲಿ ಇನ್ನೊಂದು ಅಂಕವನ್ನು ರಚಿಸಿ ಅದನ್ನು 'ಮಂದೀ ಮನಿ' ಎಂದು ಕರೆದಿದ್ದಾರೆ. ಹೀಗೆ ಕರೆಯುವಲ್ಲಿ ಈ ರಾಷ್ಟ್ರ ಮಂದಿಯ ಮನೆಯಾಗಬೇಕು ಎಂಬ ದೃಢ ಆಲೋಚನೆಯಿರುವುದು ಕಂಡುಬರುತ್ತದೆ. ಹೀಗಾಗಿ ಈ ನಾಟಕ ರಾಷ್ಟ್ರ ನಿರ್ಮಿಸುವ ಮೂಲಘಟಕವಾದ ಕುಟುಂಬಕ್ಕೆ ಮಾನ್ಯತೆ ಕೊಟ್ಟು; ಅದು ಅರಿವಿನ, ಶಾಂತಿಯ, ದುಡಿಮೆಯ, ಕಲೆಯ ನೆಲೆಯಾಗಬೇಕೆಂದು ಆಶಿಸಿದ್ದಾರೆ. ನಾಟಕಕಾರರ ಈ ಎಲ್ಲ ಚಿಂತನೆಗಳು ಎಲ್ಲಿಯೂ ಉಪದೇಶದಂತಿರದೆ, ಜೀವನಗತಿಯಲ್ಲಿ ಸಾಗಿದ ನಾಟಕದ ತಿರುವಿನಂತೆ ಅಚ್ಚರಿಯಾಗಿ ತಾನೇ ರೂಪುಗೊಂಡು ಕೃತಿರೂಪ ತಾಳಿದೆ. ಓದುಗ ಮತ್ತು ಪ್ರೇಕ್ಷಕನ ಅರಿವನ್ನು, ಹೊಣೆಗಾರಿಕೆಯನ್ನು, ಸಮರಸಭಾವವನ್ನು ಎಚ್ಚರಿಸುತ್ತ ಅವನು ಆಂತರಿಕವಾಗಿ ಬದಲಾಗುವಂತೆ ಮಾಡುತ್ತದೆ.

**ರಸ**

ಈ ನಾಟಕದ ಕೇಂದ್ರ ಪಾತ್ರ ಮಂದಾಕಿನಿ. ಆಕೆಯೆ ಧ್ವನ್ಯಾರ್ಥದ ಮಂದಿ. ಪೆನ್‌ಶನ್‌ದಾರನಾಗಿ ತೀರ್ಥಯಾತ್ರೆಯ ನೆಪದಿಂದ ಮನೆಯಿಂದ ದೂರಹೋದ ತಾತ ಗುಂಡಪ್ಪ, ನಾಟಕದ ಹುಚ್ಚು ಹೊತ್ತಿಸಿಕೊಂಡು ಕಲ್ಪನಾಲೋಕದಲ್ಲಿರುವ ತಂದೆ ಬಂಡೆಪ್ಪ, ಇವರ ಮಗಳು ಮಂದಾಕಿನಿ. ಆಕೆ ಈ ಜವಾಬ್ದಾರಿರಹಿತ ತಂದೆ, ತಾತರ ಮನೆಯನ್ನು ನಡೆಸುತ್ತ, ಧೈರ್ಯದ ಹೆಣ್ಣಾಗಿ ರಾಷ್ಟ್ರದ ಸೇವೆಗೆ ತನ್ನನ್ನು ಅರ್ಪಿಸಿಕೊಂಡು, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸೇವೆಯಲ್ಲಿದ್ದಾಗ ಭೇಟಿಯಾದ ಡಾಕ್ಟರ್ ರಂಗಪ್ಪನನ್ನು ಮೆಚ್ಚಿದ್ದಾಳೆ. ದೇಶದ ಸೇವೆಗೆ ಮನಸ್ಸು ಕೊಟ್ಟಂತೆ ವೈಯಕ್ತಿಕ ಬೆಳವಣಿಗೆಯ ಎಚ್ಚರವಿದ್ದು ತನ್ನ ಮನೆಯನ್ನು ಡಾಕ್ಟರರ ಹಣದ ಸಹಾಯದಿಂದ ಮಾರ್ಪಡಿಸಿದ್ದಾಳೆ. ಹೀಗಾಗಿ ಮಂದಿ ಈ ನಾಟಕದ ಕ್ರಿಯಾಶೀಲ ಸ್ತ್ರೀಯಾಗಿ ಕುಟುಂಬ ಪೋಷಣೆಯ ಸಂಕೇತವಾಗಿದ್ದಾಳೆ. ರಾಷ್ಟ್ರರೂಪಿಸುವ ಮಾತೆಯಾಗಿದ್ದಾಳೆ. ಅವಳ ಮನಸ್ಸನ್ನು ಅರಿತ ತಾತ ಗುಂಡಪ್ಪ ಅವಳು ಸಂಸಾರಿಯಾಗಲು ನಾಟಕದ ರೀತಿ ಕೂಡಿಬಂದ ಅಕ್ಕಿಕಾಳು, ಅರಿಷಿಣ, ಕುಂಕುಮವನ್ನು ಸೇರಿಸಿ ಅಕ್ಕಿಕಾಳು ಹಾಕಿ ಸರಳ ಮದುವೆ ಮಾಡಿಬಿಡುತ್ತಾನೆ. ಪ್ರೇಮವಿವಾಹ ಮತ್ತು ಸರಳ ಮದುವೆ ಈ ಕಾಲಮಾನದ ರೀತಿಯಾಗಬೇಕು ಎಂಬುದು

ಈ ನಾಟಕದ ತುಡಿತವಾಗಿದೆ. ವಿಪರೀತ ಘೋಷಣೆ, ಬಾಡಿಗೆ ಸಿದ್ಧಾಂತದ ಹೇರುವಿಕೆ ಇಲ್ಲದೆ ಒಲಿದ ಮನಗಳ ಒಂದುಗೂಡಿಕೆ ಇಲ್ಲಿ ಬೋಧಪ್ರದವಾಗುತ್ತದೆ.

ಡಾಕ್ಟರರನ್ನು ನಂಬಿ ಬಂದ ಹುಟ್ಟು ಕಳ್ಳನಾಗಿದ್ದ ಫಕೀರ ಮತ್ತು 'ಹುಡುಗಿ ಅಂದ್ರ ಹುಡಿಗ್ಯಲ್ಲ, ಹೆಂಗಸು ಅಂದ್ರ ಹೆಂಗಸಲ್ಲ' ಎಂಬ ಅನಾಥ ಸ್ತ್ರೀ ಅಂಬಕ್ಕ ಅವರೊಡನೆ ಉಳಿದು ಕುಟುಂಬ ರಸಮಯವಾಗುತ್ತದೆ.

**ವಿರಸ**

ಅನಾಥರ ಸೇವೆಯಲ್ಲಿ ತೊಡಗಿಕೊಂಡ ಪತಿ ಡಾಕ್ಟರ್ ರಂಗಣ್ಣ ಮತ್ತು ಆತನ ಸಹಾಯಕಿ ನಿರಾಶ್ರಿತ ಮುಗ್ಧೆ ಅಂಬಕ್ಕ ಅವರನ್ನು ಜನ ಮೆಚ್ಚಿ 'ಸುತ್ತ ಹತ್ತು ಗಾವುದಕ್ಕೆ ತಂದಿ-ತಾಯಿ ಇದ್ದಾಂಗ ಇದ್ದಾರ ಆ ಡಾಕ್ಟರು ಮತ್ತು ಅಂಬಕ್ಕ' ಎನ್ನುತ್ತಾರೆ. ಅನಾಥರ ಸೇವೆಯಲ್ಲಿ ತೊಡಗಿಸಿಕೊಂಡ ಡಾಕ್ಟರ್ - ಹೆಂಡತಿಯ ಬಗ್ಗೆ ಅಷ್ಟು ಗಮನ ಕೊಡಲಾಗುವುದಿಲ್ಲ. ಆಗ ಮಂದಾಕಿನಿ 'ಮಂದೀಯಾಗಿ ಇರೋ ತನಕ ಅವರಾಕೆ ಆಗಿದ್ದೆ. ಅವರಾಕಿ ಆದಮ್ಯಾಲ ಯಾರಾಕೀನೂ ಅಲ್ಲ' ಎಂದು ವಿರಸ ಸಂಸಾರದ ವಿರಸ ಭಾವವನ್ನು ತಾತ ಗುಂಡಪ್ಪನಿಗೆ ಹೇಳುವಲ್ಲಿ ಈ ಅಂಕ ನಾಯಕಿಯ ವಿರಸದ ಚಿತ್ರಣವನ್ನು ನೀಡುತ್ತದೆ. ಆಕೆಗೆ ಡಾಕ್ಟರ್ ಮತ್ತು ಅಂಬಕ್ಕನ ಬಗ್ಗೆ 'ಇಷ್ಟು ಹತ್ತರ ಹತ್ತರ ಆಗ್ಯಾರ ಅವರಿಬ್ಬರೂ'ಎಂದು ವೈಷಮ್ಯ ಉಂಟಾಗುತ್ತದೆ. ಆಗ ಸಮರಸದ ಹರಿಕಾರನಾದ ತಾತ ಗುಂಡಪ್ಪ ನಾಟಕೀಯವಾಗಿ ಅವಳ ಒಳಮನಸ್ಸಿನ 'ಮನೀಮಾನ ಕಾಯಬೇಕು, ಅತ್ತ ಮನಿಯವರ ಮಾನಾ ಕಾಯಬೇಕು' ಎಂಬ ನುಡಿ ಮತ್ತು ಒಪ್ಪಿ ಮದುವಿಯಾದ ಮಂದಾಕಿನಿ 'ಮನಸ್ಸಿಲೆ ಮಾಡಿಕೊಂಡ ಮದಿವಿಗೆ ಮಾತಿನ ಬೀಗ ಇರಬೇಕು' ಎಂದು ನುಡಿಸುವ ರೀತಿ ನಾಟಕ ರಚನೆಯ ಕುಶಲತೆಗೆ ಸಾಕ್ಷಿಯಾಗಿದೆ.

ಮಂದಾಕಿನಿಯ ತಂದೆ 'ಜೀವನ ಹಣ್ಣಾತು ಅಂದ್ರ ನಾಟಕ ಆಗತಾವ' ಎಂಬ ನುಡಿಗೆ ತಾತ - 'ನಾಟಕಕಾರ ಹಣ್ಣಾದಾ ಅಂದ್ರ, ಜೀವನಾ ಸರಿಮಾಡತಾನ' ಎಂಬ ಸಂವಾದ ಮಂದಾಕಿನಿ ವಿರಸದ ತಾಪದಲ್ಲಿ ಹಣ್ಣಾಗುವ ಅವಳ ಜೀವನ ಸರಿಯಾಗುವ ಸೂಚನೆಯಿದೆ. ಅವರು ಮಂದಾಕಿನಿಯ ವಿರಸಕ್ಕೆ ಕಾರಣವಾದ ಅಂಬಕ್ಕನನ್ನು ಅನಾಥಾಲಯದಿಂದ ಬಿಡಿಸುವ ತೀರ್ಮಾನ ಕೈಗೊಳ್ಳುವರು. ಆಗ ಬಂಡೆಪ್ಪ 'ಹೀಂಗ ಕೆಲಸದಿಂದ ತೆರವಾದ ಅಂಬಕ್ಕನನ್ನು ಅನಾಥ ಅಪ್ಪ ಅಜ್ಜಂದಿರ್ನ ನೋಡಿಕೊಳ್ಳಲಿಕ್ಕೆ ನಾವ್ಯಾಕ ಒಯ್ಯಬಾರದು? ಡಾಕ್ಟರ ಕೆಲಸ ಡಾಕ್ಟರತಿಗೆ ಇರಲಿ ಅಂಬಕ್ಕನ ಕೆಲಸ ಮತ್ತ ಅಂಬಕ್ಕಗ ಬರಲಿ' ಎಂದು ಅನಾಥ ಅಂಬಕ್ಕನಿಗೆ ಆಶ್ರಯ ನೀಡುವನು. ವಿನಾಕಾರಣ ಅಪವಾದಕ್ಕೆ ಈಡಾದ ನೋವಿನ ಅಂಬಕ್ಕ ಮಂದಾಕಿನಿಯನ್ನು ಕುರಿತು 'ನೀ ತಲೆಯೆತ್ತಿ ನಿಂತು ಸುತ್ತಲಿನ ಹತ್ತು ಸಂಸಾರ ನಿಲ್ಲಿಸೋ ಖಂಬ ಆಗು ನಮ್ಮವ್ವಾ' ಎಂದು ಹೇಳುವಳು. ಅವಳು ಮಂದಾಕಿನಿಯ ಮಗುವಿಗೆ ತಂದಿದ್ದ ಒಡವೆಯನ್ನು ತೆಗೆದಿಡುತ್ತ 'ಇವನ್ನ ಕೊಟ್ಟು ಹೋಗಬೇಕೂ ಅಂತ ಮಾಡಿದ್ದೆ. ಈಗ ಇಟ್ಟು ನೋಡಬೇಕು ಅಂತ ಅಪೇಕ್ಷಾ ಆಗೇದ. ಅದಕ್ಕ ನೀವು ಹುಂ ಅನ್ನಬೇಕು' ಎಂದು ಹೇಳುವ ಮಾತು ಸಮರಸ ಭಾವಕ್ಕೆ ನಾಂದಿಯಾಗುತ್ತದೆ.

**ಸಮರಸ**

೧೯೫೦ರಿಂದ ೧೯೮೦ಕ್ಕೆ ಮುವತ್ತು ವರ್ಷ ಕಳೆದಿದೆ. ಈ ದೀರ್ಘ ಅವಧಿಯ ನಂತರ ಬೇಂದ್ರೆಯವರು 'ಮಂದೀ ಮದಿವಿ', 'ಮಂದೀ ಮಕ್ಕಳು' ನಾಟಕವನ್ನು ಧ್ಯಾನಿಸುತ್ತ ಅದನ್ನು 'ಮಂದೀಮನಿ' ಎಂದು ಕರೆದು ಮೂರನೆಯ ಅಂಕವನ್ನು ಬರೆದಿರುವುದು ಅವರು ಈ ದೇಶದ ಜನರನ್ನು ಜೀವನವನ್ನು ಕುರಿತು ಸದಾ ಚಿಂತಿಸುತ್ತಿದ್ದುದರ ಪುರಾವೆಯಂತಿದೆ. ಅವರು ಈ ದೇಶ ಮಂದಿಯದಾಗಬೇಕು;

ಅನುಕೂಲಸ್ತರಾದವರು ಅಸಹಾಯಕರಿಗೆ, ಅನಾಥರಿಗೆ, ಕಲೆಗುಂಗು ಹಿಡಿಸಿಕೊಂಡವರಿಗೆ ಸಹಾಯಕರಾಗಿ ನಿಲ್ಲಬೇಕು. ಮಂದಿಯಲ್ಲಿ ಐಕ್ಯ ಮೂಡಬೇಕು, ಈ ದೇಶ ಮಂದಿ ಮನೆಯಾಗಬೇಕು, ಎಲ್ಲರೂ ಸಹಬಾಳ್ವೆ, ಸಮರಸತತ್ತ್ವದಿಂದ ಬಾಳಿ ಸರ್ವೋದಯವಾಗಬೇಕು ಎಂದು ಆಶಿಸಿದ್ದರು.

ನಾಟಕದಲ್ಲಿ ಮಂದಾಕಿನಿಗೆ ಗಂಡುಮಗ 'ಪುಟ್ಟ' ಜನಿಸಿ ಅವನು ತಾತ ಗುಂಡಪ್ಪನಿಗೆ ಆನಂದವನ್ನು ತಂದಿದ್ದಾನೆ. ಮಂದಾಕಿನಿ ಪ್ರೇಮಪೂರ್ಣ ದೃಷ್ಟಿಯಲ್ಲಿ ಎಲ್ಲರನ್ನೂ ನೋಡುವ ಹಂತ ತಲುಪಿದ್ದಾಳೆ. ಅವಳ ಜೀವನದಲ್ಲಿ ಸಮರಸ ಭಾವ ನೆಲೆಯಾಗಿದೆ. ಅವಳ ತಂದೆ ನಾಟಕದ ಬಂಡೆಪ್ಪ ಆದರ್ಶ ಭಾವದಿಂದ ಅನಾಥ ಹೆಂಗಸು ಅಂಬಕ್ಕನನ್ನು ರಿಜಿಸ್ಟರ್ಡ್ ಮದುವೆಯಾಗಿದ್ದಾನೆ. ಆಕೆಗೆ ಆಶ್ರಯ ನೀಡಿ ತಾನೂ ನೆಮ್ಮದಿಯಿಂದಿದ್ದಾನೆ. ಅದೇ ಕಾರಣವಾಗಿ ತನ್ನ ವಿವಾಹದ ಎರಡನೇ ವಾರ್ಷಿಕೋತ್ಸವಕ್ಕೆ ಎಲ್ಲರನ್ನೂ ಆಹ್ವಾನಿಸಿದ್ದಾನೆ. ಅಂದು ಆತ ಅದನ್ನು 'ಪಿತೃಪೂಜೆ' ಎಂದು ಆಚರಿಸಲು ತೀರ್ಮಾನಿಸಿರುವುದು ಕಿರಿಯರು ಹಿರಿಯರಿಗೆ ತೋರಿಸಬೇಕಾದ ಗೌರವವನ್ನು ಸೂಚಿಸುತ್ತಿದೆ. ಬಂಡೆಪ್ಪ ತಾನು ಆಶ್ರಯ ನೀಡಿದ್ದ ಅನಾಥ ಚೆನ್ನ ಚೆನ್ನಿಯರನ್ನು ತನ್ನ ಮಕ್ಕಳು ಎಂದು ಕರೆಯುವುದು ಅವನ ವಿಶಾಲ ಮನಸ್ಸನ್ನು ತೋರಿಸುತ್ತದೆ. ಅವರನ್ನು ಅಕ್ಕಿಕಾಳು ಹಾಕಿ ಆಶೀರ್ವದಿಸಿ ವಧುವರರನ್ನಾಗಿಸುವ ಗುಂಡಪ್ಪ ಅದೇ ಸಂದರ್ಭದಲ್ಲಿ ಗಂಡು ಹೆಣ್ಣಿನಂತೆ ಸಜ್ಜಾಗಿ ಬಂದುನಿಂತಿದ್ದ ಫಕೀರ ಫಕೀರಿಯರ ಮೇಲೆ ಅಕ್ಕಿಕಾಳು ಹಾಕಿ ಆಶೀರ್ವದಿಸುವನು. ಮಂಗಲಮಯ ವಾತಾವರಣ 'ಮಂದೀಮನೆ'ಯಲ್ಲಿ ಉಂಟಾದಂತೆ ತೃಪ್ತನಾದ ಗುಂಡಪ್ಪ ಮರಣ ಹೊಂದುವನು. ಹೀಗೆ ತೃಪ್ತಿಯ ಅಲೆ ಅಲ್ಲಿ ನೆಲಸಿ ಸಮರಸಭಾವ ನಾಟಕದಲ್ಲಿ ಬೆಳಗುತ್ತದೆ. ಈ ನಾಟಕದ ಸ್ತ್ರೀ ಪಾತ್ರವಾದ ಮಂದಾಕಿನಿ ಮಾತಿನಿಂದ, ಅಂಬಕ್ಕ ಮೌನದಿಂದ ಪುರುಷರನ್ನು ರೂಪಿಸುವ ಚೇತನಗಳಾಗಿದ್ದಾರೆ. ಈ ನಾಟಕದಲ್ಲಿ ಮಂದಾಕಿನಿಯ ಜೀವನ ಸಮರಸ ತತ್ತ್ವ ಸಾಧನೆಯತ್ತ ರೂಪುಗೊಂಡು ಕ್ರಿಯೆ ಮೊದಲು ರಸಮಯವಾಗಿ ಸೃಷ್ಟಿಗೊಂಡು, ವಿರಸದಲ್ಲಿ ಮಾಗಿ, ಬದುಕಿನ ಸತ್ಯಾನ್ವೇಷಣೆಯ ಅರಿವಿನಲ್ಲಿ ಸಮರಸವಾಗಿದೆ.

**ಶೋಭನಾ**[19]

'ಶೋಭನಾ' ಏಕಾಂಕ ಪ್ರಹಸನವಾಗಿದೆ. ಶೋಭನಾವನ್ನು ಕುರಿತು ವಾಮನ ಬೇಂದ್ರೆಯವರು "ವಿವಾಹೋತ್ತರ ದಂಪತಿಗಳ ಪ್ರಥಮ ಸಮಾಗಮದ - ಗರ್ಭಾದಾನದ ಪವಿತ್ರ ಸಂಸ್ಕಾರಕ್ಕೆ ಭಾರತೀಯ ಸಂಸ್ಕೃತಿಯಲ್ಲಿ ಮಹತ್ತ್ವದ ಸ್ಥಾನವಿದೆ. ಸಂತಾನ ಎಂಬುದು ನಗೆಚಾಟಿಕೆಯ, ಬಹಿರಂಗ ಕುತ್ಸಿತ ಚರ್ಚೆಯ ವಿಷಯವಾಗಬಾರದು. ಹೊಸ ಕಾಲದ ತರುಣ-ತರುಣಿಯರು ತಾವು ಸುಧಾರಿಸಿದವರು ಎಂಬ ಮಬ್ಬಿಗೆ ಬಿದ್ದು ಪವಿತ್ರ ಸಂಸ್ಕಾರಗಳತ್ತ ದುರ್ಲಕ್ಷ್ಯ ಮಾಡುವದು ಭಾರತೀಯತ್ವದ ಅವನತಿ ಎಂಬ ಧ್ವನಿ ಈ ನಾಟಕದ್ದು" ಎಂದು ಹೇಳಿದ್ದಾರೆ. ಶೋಭನಾ ಒಂದು ಗೌಪ್ಯ ಕ್ರಿಯೆ. ಅದು ಸಾಮಾಜಿಕ ವಿಷಯವಾಗಿ ಚರ್ಚಿತವಾದಾಗ ಕುಟುಂಬದ ಸಹಸದಸ್ಯರು ನೆರೆಹೊರೆಯವರು, ಸ್ನೇಹಿತರು ನಡೆದುಕೊಳ್ಳುವ ರೀತಿ ಅವರ ನುಡಿಯಲ್ಲಿಯೇ ಅವರ ಗುಣಾವಗುಣಗಳನ್ನು ಪರಿಚಯಿಸುತ್ತದೆ. ಹೀಗಾಗಿ ಸಮಾಜದ ಚಿತ್ರಣ - ನಾಟಕದಲ್ಲಿ ರೂಪುಗೊಳ್ಳುವ ರೀತಿಗೆ 'ನಗೆಯ ಹೊಗೆ'ಯಂತೆ ಇದೂ ಒಂದು ವಿಶಿಷ್ಟ ರೀತಿಯ ನಾಟಕವಾಗಿದೆ. ಹೊಸದಾಗಿ ವಿವಾಹವಾದ ಗಂಡು ಹೆಣ್ಣಿನ ಶೋಭನದ ವಿಷಯ ನಾಟಕದಲ್ಲಿದ್ದರೂ ಹೊಸ ಹೆಣ್ಣು ಶೋಭನಾಳೇ ಅವಳ ಅತ್ತೆ ಜೀಪೂಬಾಯಿಯ ಕಟಕಿ ಮಾತಿಗೆ ಈಡಾಗುವುದು ಈ ಸಮಾಜದ ಒಂದು ವಿಪರ್ಯಾಸವಾಗಿದೆ. ಸಮಾಜ ಬದಲಾದಂತೆ ಹೊಸ ಪೀಳಿಗೆಯು ಶೋಭನದ ದಿನ ಸಿನಿಮಾಗೆ ಹೋಗುವ

ವಿಷಯವೇ ಇಲ್ಲಿ ಬದಲಾವಣೆಯ ಗಾಳಿಯಾಗಿ ಅದರ ಚರ್ಚೆ ನಾಟಕವನ್ನು ವಿನೋದಮಯವಾಗಿಸಿದರೂ ಆ ವಿನೋದ ಅಷ್ಟು ಆರೋಗ್ಯಪೂರ್ಣವಲ್ಲ ಎಂದು ಹೇಳಬಹುದು.

**ಆಥರಾ-ಈಥರಾ**[20]

೧೯೬೮ರಲ್ಲಿ ರಚಿತವಾದ 'ಆಥರಾ-ಈಥರಾ' ಬೇಂದ್ರೆಯವರು ರಚಿಸಿದ ಕೊನೆಯ ನಾಟಕ. ಈ ನಾಟಕದ ನಾಯಕ ಡಾಕ್ಟರ್ ವಸಂತನು ತನ್ನ ನರ್ಸಿಂಗ್‌ಹೋಂಗೆ ಹಣ ಕೂಡಿಸಲು ಆಡಲಿಚ್ಛಿಸುವ ನಾಟಕದಲ್ಲಿ ಕಾಲೇಜ್ ದಿನಗಳಲ್ಲಿ ನಾಟಕದಲ್ಲಿ ಪಾತ್ರ ವಹಿಸುತ್ತಿದ್ದ ಹೆಂಡತಿ ವಾಸಂತಿಗೆ - ತನ್ನ ಸೂಳೆಯಂತೆ ಪಾತ್ರ ವಹಿಸಲು ಕೇಳಿಕೊಳ್ಳುತ್ತಾನೆ. ಆಗ ಆಕೆ : 'ಲಗ್ನ ಆದಮ್ಯಾಲೆ ಗಂಡಾ-ಹೆಂಡ್ತಿ ಕೂಡಿ ಒಳ್ಳೇ ಸಂಸಾರ ಮಾಡಬೇಕು. ನಾಟಕ ಮಾಡಬಾರದು. ಸಂಸಾರ ನಾಟಕ ಆಗಬಾರದು. ನಾಟಕಾನS ಸಂಸಾರ ಆಗಬಾರದು' ಎಂದು ಹೇಳುತ್ತಾಳೆ. ಇದು ನಾಟಕಕಾರ ಕುಟುಂಬವತ್ಸಲರಿಗೆ ಈ ನಾಟಕದ ಮುಖಾಂತರ ಹೇಳಿರುವ ಸಂದೇಶವಾಗಿದೆ. ಪತ್ನಿ ವಸಂತಳ ಅಭಿಪ್ರಾಯ ಒಪ್ಪಿದ ಡಾಕ್ಟರ್ ವಸಂತನು ತನ್ನ ಹೆಂಡತಿಯ ಪ್ರೇಮವನ್ನು ಅರಿತು ತಾನು ನಾಟಕವಾಡುವ ಹುಚ್ಚು ಬಿಡುವನು. ಆಗ ಆಕೆ 'ಇದS ನನ್ನ ಭಾಗ್ಯ. ನನ್ನ ನಿಮ್ಮ ಮನಸ್ಸು ಒಂದ ಆತು. ಇವತ್ತ ಖರೇ ಲಗ್ನ ಆಧಾಂಗ ಆತು' ಎಂದು ತಮ್ಮ ವಿವಾಹದ ವಾರ್ಷಿಕೋತ್ಸವ ಆಚರಿಸುತ್ತಾಳೆ. ಹೀಗೆ 'ಆಥರಾ-ಈಥರಾ' ಪಾತ್ರಗಳ ಭಾವಗಳನ್ನು ಪರಿಚಯಿಸುತ್ತ ಆ ಪತಿ ಪತ್ನಿಯ ಒಳಮುಖವನ್ನು ದರ್ಶಿಸುವಲ್ಲಿ ಈ ನಾಟಕ ಯಶಸ್ವಿಯಾಗಿದೆ. ಈ ನಾಟಕದ ಸ್ತ್ರೀ ಪಾತ್ರವಾದ ವಾಸಂತಿ - ಅವಳ ಗುರು ಹಾಗೂ ಗಂಡನ ಸ್ನೇಹಿತನಾದ ನಾಟಕ ರಚನಾಕಾರ ಮಾಧವ ಮತ್ತು ಗಂಡ ವಸಂತನಿಗಿಂತ - ಹೆಚ್ಚು ವಿವೇಕಶಾಲಿಯಾಗಿರುವುದು ಬೇಂದ್ರೆಯವರ ಸ್ತ್ರೀಪರ ನೋಟಕ್ಕೆ ಸಾಕ್ಷಿಯಾಗಿದೆ.

**ಅಲಿಖಿತ ನಾಟಕದೊಳಗಿನ ಗೀತಗಳು**

'ಬೇಂದ್ರೆ ಅವರ ಒಂದು ಸ್ವಭಾವ ಗುಣವೆಂದರೆ ಕಾವ್ಯವೆ! ಅವರ ಸಹಜ ಧರ್ಮವಾಗಿ ಗದ್ಯ ರಚನೆ (ನಾಟಕಗಳನ್ನು ಒಳಗೊಂಡು) ವಿಲಂಬಿಸಿತು. ತಮ್ಮ ವಿಚಾರಗಳನ್ನು ಅವರು ವಾಕ್ ಮಾಧ್ಯಮದಿಂದ ಅಭಿವ್ಯಕ್ತಿಸಿದಷ್ಟೂ ಲಿಖಿತರೂಪದಲ್ಲಿ ಹೊರಹಾಕುತ್ತಿರಲಿಲ್ಲ. ಗೆಳೆಯರ ಜೊತೆಗೆ ಮಾತಾಡಿದ ಹಾಗೆ ಮೂಕ ಕಾಗದದ ಜೊತೆಗೆ ಮಾತನಾಡುವುದು ತಮಗಾಗದು ಎಂದು ಅವರೇ ಹೇಳುತ್ತಿದ್ದರು. ಹೀಗಾಗಿ ಅನೇಕ ನಾಟಕಗಳ ಹೊಳಹು ಅವರ ತಲೆಯಲ್ಲೇ ಉಳಿದು ಆಯಾ ನಾಟಕದ ಸನ್ನಿವೇಶಗಳಿಗೆ ಸಂಬಂಧಿಸಿದ ಗೀತಗಳು ಮಾತ್ರ ರಚಿತವಾಗಿ ಬೇರೆ ಬೇರೆ ಕವನಸಂಕಲನಗಳಲ್ಲಿ ಅಡಕವಾಗಿವೆ'[21] ಎಂದು ಎನ್ಕೆ ಅವರು ಹೇಳಿದ್ದಾರೆ. ಹಾಗೆ ಅವರು ಕಲ್ಪಿಸಿಕೊಂಡು ಬರೆಯದೆ ಇರುವ ನಾಟಕಗಳ ಗೀತಗಳು ಉತ್ತಮವಾಗಿದ್ದು, ಅವು ಸ್ತ್ರೀಯನ್ನು ಕುರಿತ ಗೀತಗಳಾಗಿರುವುದರಿಂದ ಅದನ್ನು ಇಲ್ಲಿ ಅಧ್ಯಯನಕ್ಕೆ ತೆಗೆದುಕೊಂಡಿದ್ದೇನೆ.

'ಕಲ್ಯಾಣದ ಕಲ್ಯಾಣಿ' ಎಂಬ ಅಲಿಖಿತ ನಾಟಕದ ಹಾಡು ಜನಪದ ಧಾಟಿಯ 'ರಸಿಕಾ ಪೇಳೋ![22] ಆಗಿದೆ. ಕಲ್ಯಾಣಿ ನಾಯಕನಾದ ಮುದ್ದಯ್ಯನಿಗೆ ತನ್ನ ಪ್ರೀತಿ ಡೊಂಕೆ ಎಂದು ಹಲವಾರು ಸಾದೃಶ್ಯಗಳನ್ನು ನೀಡಿ ಪ್ರಶ್ನಿಸುತ್ತ ಕೊನೆಯಲ್ಲಿ 'ವಿಧಿಯಿತ್ತ ಕುಲ ಡೊಂಕು. ನನ್ನ ಪ್ರೀತಿಯು ಡೊಂಕೆ? ರಸಿಕಾ ಪೇಳೋ!' ಎಂದು ನುಡಿಯುವ ನುಡಿ ಅವಳ ಮನದ ಒಲವಿನ ಪ್ರತಿಬಿಂಬದಂತಿದೆ.

**ಸತಿ**

ಬೇಂದ್ರೆಯವರು ಹೆಣ್ಣಿನ ಶೋಷಣೆಯ ಎಲ್ಲ ಮಗ್ಗಲುಗಳನ್ನು ತಮ್ಮ ಕಾವ್ಯದಲ್ಲಿ ಧ್ವನಿಪೂರ್ಣವಾಗಿ ಹೇಳಿ, ಸ್ತ್ರೀ ಶೋಷಣೆಯ ಹಾಗೂ ಪುರುಷಕೇಂದ್ರಿತ ಸಮಾಜದ ವಿರುದ್ಧ ಕೆಂಡ ಕಾರಿದ್ದಾರೆ. 'ಸತಿ' ಎಂಬ ಅರ್ಧಲಿಖಿತ ನಾಟಕದೊಳಗಿನ ಎರಡು ಗೀತಗಳು. ಪಾಟಲೀಪುತ್ರದ ರಾಜನೊಬ್ಬ,

ಮುನ್ನೂರು ಹೆಣ್ಣು ಮದುವೆಯಾಗಿ, ವೈಶಾಲಿಯ ವಿರಕ್ತ ಶ್ರೇಷ್ಠಿ ಧ್ಯಾನಗುಪ್ತನ ಹೆಂಡತಿ-ಸತಿಯನ್ನು ಅರಮನೆಗೆ ಆಮಂತ್ರಿಸುತ್ತಾನೆ. ಅರಮನೆಯ ಸೆರೆಮನೆಯಲ್ಲಿ ಇದ್ದ ಆ ಮುನ್ನೂರು ಹೆಂಗಳೆಯರು ರಾತ್ರಿಗೀತ, ಉದಯಗೀತಗಳಾಗಿ ಹೇಳುವ ಎರಡು ಹಾಡುಗಳು ಇವು'[23] ಎಂದು ಭಾವ ಸಂದರ್ಭ ನೀಡಿ 'ಮರೆಯುವೆಯೋ, ಅರಿಯುವೆಯೋ!' ಮತ್ತು 'ಎಲ್ಲಿರುವೆ ರಾಜ ಗಂಭೀರ' ಎಂಬ ಎರಡು ಕವನಗಳನ್ನು ರಚಿಸಿದ್ದಾರೆ. ಆ ಹೆಣ್ಣುಗಳ ನೋವಿನ ಧ್ವನಿ ಮಡುಗಟ್ಟಿದಂತೆ ಆ ಕವನಗಳಲ್ಲಿದೆ.

'ತನ್ನ ಒಡವೆಯೆ ತನಗೆ, ಎರವಾಗಿ ಹೊರತಾಗೆ
ನಿರ್ಜೀವವೀ ಜೀವಾ,
ಇಲ್ಲಿ ರಂಭೆಯರೆಲ್ಲಾ, ನಂಬಿ ಕುಳಿತಿಹರಲ್ಲೋ
ಎಲ್ಲಿರುವ ರಾಜಗಂಭೀರಾ - ನೀರಾ'[24]

**ಹೇಳಿ ಬರೆಸಿದ ನಾಟಕಗಳು**

ಬೇಂದ್ರೆಯವರು ಕಿರಿಯರಿಗೆ ತಾವೇ ನಾಟಕದ ಕಥೆ ಹೇಳಿ ನಾಟಕವನ್ನು ಬರೆಯಲು ಪ್ರೋತ್ಸಾಹಿಸುತ್ತಿದ್ದರು. ಹಾಗೆ ಪ್ರೋತ್ಸಾಹಗೊಂಡ ಎನ್ಕೆ ಅವರು " ೧೯೩೫ ರಲ್ಲಿ ನಾನಿನ್ನೂ ಕಾಲೇಜ್ ವಿದ್ಯಾರ್ಥಿಯಾಗಿದ್ದಾಗ ಒಂದು ಸಂಸ್ಥೆಯ ವಾರ್ಷಿಕೋತ್ಸವಕ್ಕಾಗಿ ಬರೆಯ ಬೇಕಿದ್ದ 'ತಾಯಿಯಗುಡಿ' ಎಂಬ ಒಂದು ನಾಟಕದ ರೂಪರೇಷೆಯನ್ನು ನನಗೆ ಹೇಳಿ ನನ್ನಿಂದ ಆ ನಾಟಕ ಬರೆಸಿದರು. ಅದು ಸುಣ್ಣಬಣ್ಣ ಹಚ್ಚಿಕೊಂಡು ರಂಗಭೂಮಿಯ ಬೆಳಕಿಗೂ ಬಂತು. ಆದರೆ ಪುಸ್ತಕ ರೂಪದಲ್ಲಿ ಬರಲಿಲ್ಲ. ಅದರ ಹಸ್ತ ಪ್ರತಿಯೂ ನನ್ನಲ್ಲಿ ಉಳಿಯಲಿಲ್ಲ. ಅದರಂತೆಯೆ 'ಕರಿ ಹೆಂಡತಿ' ಎಂಬ ವಿಡಂಬನಾತ್ಮಕವಾದ ಮಾರ್ಮಿಕವಾದ ಕ್ರಾಂತಿಕಾರಿ ಕೊನೆಯುಳ್ಳ ನಗೆ ಕಂಬನಿಗಳ ಮಿಶ್ರಣ ಎನ್ನಬಹುದಾದ ಮೂರಂಕಿನ ನಾಟಕ ರಚಿಸಲು ಪ್ರೇರೇಪಿಸಿದರು ..... ಆ ನಾಟಕದ ಜೀವಾಳ ಹೀಗಿದೆ : 'ಕರಿಯ ಹೆಂಡತಿ ಅಂತ ಕರಕರಿ ಮಾಡ ಬ್ಯಾಡ| ಹರಕೊಳ್ಳೊ ನಿನ್ನ ಗುಳದಾಳಿ ರೈತರ ಮಗಳಾಗಿ ಇರತೀನಿ"[25] ಈ ನಾಟಕದ ವಿಷಯವೂ ಹೆಣ್ಣಿನದಾಗಿದ್ದು ಒಂದು ತಾಯಿಯನ್ನು ಇನ್ನೊಂದು ಹೆಂಡತಿಯನ್ನು ಕುರಿತದ್ದಾಗಿರುವುದು ಅವರ ಮನಸ್ಸು ಸದಾ ಸ್ತ್ರೀಪರ ಚಿಂತನೆಯಲ್ಲಿದ್ದುದನ್ನು ಸಾರುತ್ತದೆ.

'ಡಾ|| ದ.ರಾ. ಬೇಂದ್ರೆಯವರು ಕಲ್ಪಿಸಿದ ಪ್ರೊ|| ಕೆ.ಎಸ್. ಶರ್ಮಾ ರಚಿಸಿದ 'ಮಿಸ್‌ಫಾರ್ಚ್ಯೂನ್' ನಾಟಕ ಬೇಂದ್ರೆಯವರಿಂದ ಬರೆಸಲ್ಪಟ್ಟ ನಾಟಕವಾಗಿ, ಮುದ್ರಿತವಾಗಿದೆ. ೧೯೮೩ ರಲ್ಲಿ ಮಹಾರಾಷ್ಟ್ರ ಮಂಡಲವು ಬಹುಭಾಷಾ ಏಕಾಂಕ ನಾಟಕಗಳ ಸ್ಪರ್ಧೆಯನ್ನು ಏರ್ಪಡಿಸಿದಾಗ ಈ ನಾಟಕಕ್ಕೆ ಪ್ರಥಮ ಬಹುಮಾನ ಬಂದಿದೆ. ಕೆ. ಎಸ್. ಶರ್ಮಾರವರು "ಬೇಂದ್ರೆಯವರು ನನಗೆ ನಾಟಕ ಶಾಸ್ತ್ರದ ತತ್ತ್ವ ಮಿಮಾಂಸೆಯ ಬಗ್ಗೆ ಅವರ ಕಲ್ಪನೆಗಳನ್ನು ಬೋಧಿಸಿದ್ದರು. ಅದೇ ಕಾಲಕ್ಕೆ ಅವರು 'ಮಿಸ್ ಫಾರ್ಚ್ಯೂನ್', 'ಪೋಕಳ್‌ಪ್ರದರ್ಶನ್', 'ಕಾಂಚಾಲೂ ರಸ್ತಾ ಬಂದ್', 'Fall', 'Gratitude', ಮುಂತಾದ ತಮ್ಮ ಕಲ್ಪನೆಯ ನಾಟಕಗಳನ್ನು ವಿವರಿಸಿದ್ದರು"[26] ಎಂದು ಹೇಳಿದ್ದಾರೆ.

**ಬಾನುಲಿ ರೂಪಕಗಳು**

ಬೇಂದ್ರೆಯವರು ನಾಟಕಗಳ ಜೊತೆಗೆ ೧೧ ಬಾನುಲಿ ರೂಪಕಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಪ್ರಕಟಿತರೂಪಕಗಳು : ಯಕ್ಷ-ಯಕ್ಷಿ, ಉತ್ತರಾಯಣ. ಅಪ್ರಕಟಿತರೂಪಕಗಳು : ಧನ್ಯ ವೃಂದಾವನ, ದಾಸಾನು ನಾರೀ ನಾರಾಯಣಿ, ಸಂತಸಮಾಗಮ, ರಂಗವಿಠ್ಠಲ, ರಾಮನವಮಿ, ದಾಸ ಕನಕದಾಸ, ದಯವೇ ಧರ್ಮದ ಮೂಲ, ಇದು ಗೋಕುಲಾಷ್ಟಮಿ ಮತ್ತು ಬೆನಕನ ಪೂಜೆ.

ಬೇಂದ್ರೆಯವರು ಹೀಗೆ ನಾಟಕ ರಚಿಸಿ, ನಾಟಕ ಬರೆಸಿ, ನಾಟಕದ ಹುಚ್ಚು ಹಿಡಿಸಿ, ನಾಟಕದ ಗುಂಗಿನಲ್ಲಿದ್ದುದು ಅವರಿಗೆ ಕಾವ್ಯದಂತೆ ನಾಟಕವು ಪ್ರಿಯವಾಗಿತ್ತು ಎಂಬುದನ್ನು ತಿಳಿಸುತ್ತದೆ. ಅವರು ನಾಟಕಕ್ಕಾಗಿ ರಚಿಸಿದ ಗೀತೆಗಳು ತಾವೇ ಸ್ವತಂತ್ರವಾಗಿ ಅತ್ಯುತ್ತಮ ಗೀತವಾಗಿರುವುದು ಅವರ ಚಿಂತನ ಶಿಸ್ತಿಗೆ ಸಾಕ್ಷಿಯಾಗಿದೆ. ಬೇಂದ್ರೆಯವರು ತಮ್ಮ ನಾಟಕಗಳಲ್ಲಿ ಸ್ತ್ರೀಯ ವೈಯಕ್ತಿಕ ನೋವು, ಸಮಾಜ ಅವಳನ್ನು ಕಾಣುವ ದೃಷ್ಟಿಯನ್ನು ವೈಯಕ್ತಿಕ ನೆಲೆಯಿಂದ ಸಾರ್ವತ್ರೀಕರಣಗೊಳಿಸುತ್ತ ಸಮಾಜ ಇದರ ಬಗ್ಗೆ ಯೋಚಿಸುವಂತೆ ಮಾಡಿರುವುದು ಕಂಡು ಬರುತ್ತದೆ. ಸ್ತ್ರೀ ಪುರುಷನಂತೆಯೇ ಒಬ್ಬ ವ್ಯಕ್ತಿ, ಅವಳನ್ನು ಪುರುಷ ತನ್ನ ಸಮನಾಗಿ ಕಾಣಬೇಕು. ಅವಳ ವೈಯಕ್ತಿಕ ನೋವು, ನಲಿವು, ಸಹಜ ಆಸೆ ಆಕಾಂಕ್ಷೆಯು ತನ್ನದರಂತೆಯೇ ಇರುವುದು ಎಂದು ಅವನು ತಿಳಿದು ವರ್ತಿಸಬೇಕು. ಅವಳ ಸಮಸ್ಯೆಗಳತ್ತ ಅವನು ಗಮನ ಹರಿಸಬೇಕು ಎಂಬ ನಿಲುವಿನಲ್ಲಿ ನಾಟಕ ರಚಿಸಿ, ಸ್ತ್ರೀಯನ್ನು ಪುರುಷ ಪಾತ್ರಕ್ಕಿಂತ ಒಂದು ಕೈ ಮಿಗಿಲಾಗಿ ರಚಿಸಿರುವುದು ಕಂಡು ಬಂದಿದೆ.

## ಸಣ್ಣ ಕತೆಗಳು

### ನಿರಾಭರಣ ಸುಂದರಿ

ಬೇಂದ್ರೆಯವರು ರಚಿಸಿರುವ ಒಟ್ಟು ಕತೆಗಳು ೮. ಅವರು ಅನುವಾದಿಸಿರುವ 'ಚೀನದ ಬಾಳು ಬದುಕು' ಕತೆಗಳು ೮. ಅವರು ಹೇಳಿದ ಕತೆಗಳನ್ನು 'ಮಾನಸಕತೆಗಳು' ಎಂದು ವಾಮನ ಬೇಂದ್ರೆಯವರು ಬರೆದಿರುವುದು ೩. ಇದು ಬೇಂದ್ರೆಯವರ ಒಟ್ಟು ಕಥಾ ಸಾಹಿತ್ಯ. ನಾನು ಅವರ ಕಥಾಸಂಕಲನವಾದ 'ನಿರಾಭರಣ ಸುಂದರಿ'ಯಲ್ಲಿರುವ ಎಂಟು ಕತೆಗಳನ್ನು ಮಾತ್ರ ಈ ಅಧ್ಯಯನದಲ್ಲಿ ಆಯ್ಕೆ ಮಾಡಿಕೊಂಡು, ಅದರಲ್ಲಿರುವ ಸ್ತ್ರೀ ಪಾತ್ರಗಳನ್ನು ಅಭ್ಯಾಸಮಾಡಿದ್ದೇನೆ. ಬೇಂದ್ರೆಯವರು 'ನಮುನಮುಗೆ ಬಂದು ಬಡೆದುಕೊಂಡ ಕತೆಗಳಿಂದ ಬಿಡಿಸಿಕೊಳ್ಳಬೇಕಾದರೆ ಆಡಿತೋಡಿಕೊಳ್ಳುವುದೇ ಹಾದಿ' ಎಂದು ಕತೆಗಳನ್ನು ರಚಿಸಿದ್ದಾರೆ.

### ಮಲ್ಲಿ

ಕವಿಯಾದ ಬೇಂದ್ರೆಯವರು 'ನಿರಾಭರಣ ಸುಂದರಿ' ಕತೆಯನ್ನು ಧ್ವನ್ಯಾರ್ಥದಲ್ಲಿ ರಚಿಸಿದ್ದಾರೆ. ನಾಗಶ್ರೀಯು ತನ್ನ ಗಂಡ ಪದ್ಮ ತದೇಕ ಚಿತ್ತದಿಂದ ಚಿತ್ರರಚಿಸುವುದನ್ನು ಕಂಡು ಮಧ್ಯರಾತ್ರಿಯಲ್ಲಿ ಕುತೂಹಲದಿಂದ ಎಚ್ಚರಗೊಳ್ಳುವುದರೊಂದಿಗೆ ಕಥೆ ಪ್ರಾರಂಭವಾಗುತ್ತದೆ. ಆ ಕುತೂಹಲ ಅವಳ 'ಅರೆತೆರೆಸಿದ ಕಣ್ಣುಗಳನ್ನು ಒಂದಿಷ್ಟು ಅರಳಿಸಿತು' ಎಂದಿದೆ. ಚಿತ್ರಗಾರ ಪದ್ಮನನ್ನು 'ಅವನ ಚಿತ್ತದೊಳಗಿನ ಮೂರ್ತಿಯು ಚಿತ್ರದಲ್ಲಿ ಮೂಡಿದಂತೆ, ಅವನ ಮುಖದಲ್ಲಿ ತೃಪ್ತಿಯು ತುಂಬುತ್ತಿತ್ತು, ಕಣ್ಣಿನಿಂದ ಬಣ್ಣವೇರುತ್ತಿತ್ತು' ಎಂದು ಕತೆಗಾರರು ಬಣ್ಣಿಸಿದ್ದಾರೆ. ಅವನ ಬಳಿ ಸಾಗಿದ ನಾಗಶ್ರೀಯ ಭಾವವನ್ನು 'ಹೆರಿಗೆಯಂತೆ ಕೃತಿಯ ಜನ್ಮಕ್ಕೂ ಏಕಾಂತವು ಬೇಕೆಂಬುದನ್ನು ಅವಳು ಬಲ್ಲಳು. ಆದರೂ ತಾನು ಹತ್ತಿರ ಹೋಗುವದು ಆಪ್ತಳಂತೆ, ಸೂಲಗಿತ್ತಿಯಂತೆ ಎಂದುಕೊಂಡಳು' ಎಂದು ಬಣ್ಣಿಸಿದ್ದಾರೆ.

ಪದ್ಮ ಆ ಚಿತ್ರ ರಚನೆಯಲ್ಲಿ ತಲ್ಲೀನನಾದುದನ್ನು ಕತೆಗಾರರು 'ಪದ್ಮನ ಚಿತ್ತಲೋಕದಲ್ಲಿ ಕಾಲನ ಹೆಜ್ಜೆಗುರುತು ಇರಲೇ ಇಲ್ಲ ..... ಅವನು ಚಿತ್ರವನ್ನು ಕಾಣುತ್ತಿದ್ದುದು ಚಂದ್ರ ಸೂರ್ಯರ ಬೆಳಕಿನಲ್ಲಲ್ಲ; ಚಿತ್ತದ ಆಕಾಶದಲ್ಲಿ, ಬುದ್ಧಿಯ ಪ್ರಕಾಶದಲ್ಲಿ..... ಚಿತ್ರವು ಚಿತ್ರಕನನ್ನೇ ನುಂಗಿದಂತಿತ್ತು. ಅವನಿಗೆ ತನ್ನರಿವೂ ಇರಲಿಲ್ಲ' ಎಂದಿದ್ದಾರೆ.

ಆ ಚಿತ್ರವನ್ನು ನೋಡಿದ ನಾಗಶ್ರೀಗೆ 'ಏನೀ ಚಿತ್ರ! ಸೆರಗಿಲ್ಲದ ತೋಳು; ಮುಸುಕಿಲ್ಲದ ಎದೆ,

ಮರೆಯಿಲ್ಲದ ಕಿಬ್ಬಸಿರು; ಸೀರೆಯಿಲ್ಲದ ತೊಡೆ! ಅವಳಿಗೆ ಎಲ್ಲವೂ ವಿಕಾರ ವಿಕಾರವಾಗಿ ತೋರಿತು.' ಅಲ್ಲಿಯವರೆಗೂ ಮೌನದಿಂದಿದ್ದ ಅವಳು ಪದ್ಮನನ್ನು ಮಾತಾಡಿಸುವಳು. ಅವನು ಮಾರ್ನುಡಿಯದೆ ಆ ಚಿತ್ರವನ್ನು ಕಳೆಗಟ್ಟಿಸಲು ತೊಡಗಿದಾಗ ಅವಳಿಗೆ ಅವನ 'ಸಂಭ್ರಮವೆಲ್ಲ ದುಗ್ಗಾಣಿಯ ಗೊಂಬೆಗೆ ಬಂಗಾರದ ಮಂಟಪ ಕಟ್ಟುವಂತೆ ಹಾಸ್ಯಾಸ್ಪದವಾಗಿ ತೋರಿತು.'

ಪದ್ಮ ಚಿತ್ರಕಾರನಾದಂತೆ, ನಾಗಶ್ರೀ ಕವಯಿತ್ರಿ. ಅವರು ಚಿತ್ರವನ್ನು ಕುರಿತು ಮುಕ್ತವಾಗಿ ಸಂಭಾಷಿಸುವರು. ಆ ಸಂಭಾಷಣೆ ಅವಳ ಸಂಶಯಗಳ ನಿವಾರಣೆಯಾಗಲು ಸಹಾಯಕವಾಗಿ, ಆ ಚಿತ್ರದ ಆತ್ಮವನ್ನು ಪ್ರಕಾಶಿಸುತ್ತದೆ.

ಪದ್ಮ : ಹೌದು ಚಿತ್ರ ಶಿಲ್ಪಿಗೂ, ಎಲ್ಲ ಕಲಾ-ಬ್ರಹ್ಮರಂತೆ, ಸೃಷ್ಟಿಕರ್ಮ ಜಾಲವೆಲ್ಲವೂ, ಇರಬೇಕಾಗುವದು, ಚಿತ್ರಕನು ಸಾಕ್ಷಿಮಾತ್ರ.

ನಾಗಶ್ರೀ : ಅದೆಲ್ಲವೂ ಸರಿಯೆ! ಆದರೆ, ಆ ಅಪಾರ ಸೃಷ್ಟಿಯೊಳಗಿಂದ ಒಂದು ರೂಪವನ್ನು ಆಯ್ದೆತ್ತುವದರಲ್ಲಿ, ಶಿಲ್ಪಿಯ ವ್ಯಕ್ತಿತ್ವವು ಮುಳುಗಿ ಅವನ ವ್ಯಕ್ತಿತ್ವದ ರುಚಿಯೇ ಮೂಡಿ, ಎದ್ದು ಕಾಣುವುದಿಲ್ಲವೇಕೆ?

ಪದ್ಮ : ಅವನ ವ್ಯಕ್ತಿತ್ವ ಮೂಡಿದರೆ, ಅವನ ಸಾಕ್ಷಿತ್ವವೇಕೆ ಮುಳುಗಬೇಕು? ಸಾಕ್ಷಿತ್ವವುಳಿದೂ ವ್ಯಕ್ತಿತ್ವ ಬೆಳಗದೇ?

ನಾಗಶ್ರೀ : ನಿಮ್ಮ ಸಾಕ್ಷಿತ್ವ ನಿಮಗಿರಲಿ! ಅದಲ್ಲ ನನ್ನ ಪ್ರಶ್ನೆ. ಆದರೆ ಈ ಚಿತ್ರದಿಂದ ಧ್ವನಿತವಾಗುವ ನಿಮ್ಮ ವ್ಯಕ್ತಿತ್ವದ ವ್ಯಂಗ್ಯಾರ್ಥವಾದರೂ ಏನು?

ಪದ್ಮ : ಈ ಚಿತ್ರದ ವಾಚ್ಯಾರ್ಥವನ್ನಾದರೂ ಅವಯವಗಳನ್ನು ಅನ್ವಯಿಸಿ ತಿಳಿದು ಕೊಂಡೆಯಾ? ಚಿತ್ರವನ್ನು ಇನ್ನೊಮ್ಮೆ ನಿಟ್ಟಿಸಿ ನೋಡು.

ಪದ್ಮನ ಆ ನುಡಿಕೇಳಿ ಚಿತ್ರವನ್ನು ಸೂಕ್ಷ್ಮವಾಗಿ ನೋಡತೊಡಗಿದ 'ನಾಗಶ್ರೀಯ ನಿರ್ದ್ವಗಣ್ಣು ಈಗ ನಿಚ್ಚಳವಾಗಿದ್ದವು.' ಅವಳಿಗೆ ಆ ಚಿತ್ರವು ಉಂಟು ಮಾಡಿದ ಭಾವವನ್ನು ಕತೆಗಾರರು 'ನಾಗಶ್ರೀ ತನ್ನ ಮೈಯ ಬಟ್ಟೆಗಳಚಿ, ತೊಗಲ ಪೊರೆ ಉಚ್ಚಿ, ಮನದ ಮಾಸ ಸುಲಿದು, ಸತ್ತ್ವದ ಸುಳಿಬಿಚ್ಚಿ, ತೇಜದ ಹೊರಳಿಯೊಳಗಿಂದ ಉರುಳಿಬಂದ ತನ್ನ ಜೀವ - ಜೀವಾಳದ ನಿರಂಜನ ಪ್ರಕೃತಿಯೆ ಆಕಾರ ತಾಳಿದಂತೆ ಹೊಳೆದಾಗ ಅವಳು ಸ್ತಂಭಿತಳಾದಳು, ಕಣ್ಣಲ್ಲಿ ನೀರುದುರಿತು ಮೈಮುಳ್ಳಿಟ್ಟಿತು.' ಎಂದು ಬಣ್ಣಿಸಿದ್ದಾರೆ. ಆಗ 'ನಾಗಶ್ರೀಯು ತನ್ನನ್ನೆ ತಾನು ಹುಡುಕಿ ಅರಿತುಕೊಂಡವಳಂತೆ ಕಣ್ಣು ಅರಳಿಸಿದಳು; ಮೆಲ್ಲಗೆ ಎದ್ದಳು; ಚಿತ್ರಪಟವನ್ನು ಎತ್ತಿ ಮುದ್ದಿಟ್ಟಳು, ಕಣ್ಣಿಗೊತ್ತಿ ಎದೆಗಪ್ಪಿಕೊಂಡು 'ಪದ್ಮ ಇದು ಆಟದ ಚಿತ್ರವಲ್ಲ, ಮಾಟದ ಗೊಂಬೆ!' ಎಂದಳು'.

ಈ ಎಚ್ಚರ ಬಂದ ನಂತರ ನಾಗಶ್ರೀ ಮತ್ತು ಪದ್ಮರ ಸಂಭಾಷಣೆ ಹೀಗಿದೆ :

ನಾಗಶ್ರೀ : ಯಾವದೋ ಜಿನ ಯೋಗಿಯ ಆತ್ಮ ಬಿಂಬದಂತಿಲ್ಲವೆ ಈ ಗೊಂಬಿ?

ಪದ್ಮ : ಏನೋ!

ನಾಗಶ್ರೀ : ಇದಕ್ಕೆ ಹೆಸರೇನು?

ಪದ್ಮ : ಮಲ್ಲಿ, ಅದು ತಾನೆ ತನ್ನ ಹೆಸರನ್ನು ಕನಸಿನಲ್ಲಿ ಹೇಳಿತ್ತೊಮ್ಮೆ.*

ಪದ್ಮನು ತನ್ನ ಚಿತ್ರಕ್ಕೆ 'ಮಲ್ಲಿ' ಎಂದು ಹೆಸರಿಟ್ಟಿದ್ದಾನೆ. ನಾಗಶ್ರೀ ಮತ್ತು ಪದ್ಮ ಜೈನರ ಹೆಸರುಗಳಾಗಿವೆ. ಚಿತ್ರಕಾರ ಪದ್ಮ ನುಡಿದ 'ಮಲ್ಲಿ' ೧೯ನೆಯ ತೀರ್ಥಂಕರಳ ಹೆಸರಾಗಿದೆ. ಆ ಯೋಗಿಣಿಯನ್ನು ಕನಸಿನಲ್ಲಿ ಕಂಡು ಮನದಲ್ಲಿ ರೂಪಿಸಿಕೊಂಡು ಬಣ್ಣದಲ್ಲಿ ಮೂಡಿಸುವ ಹೊತ್ತಿಗೆ ಪದ್ಮ ಆ ಯೋಗಿಣಿಯ ಶಾಂತಿಯನ್ನು ತನ್ನದಾಗಿಸಿಕೊಂಡಿರುವುದು ಕಂಡುಬಂದಿದೆ. ಅವನ ಮಡದಿಯಾದ ನಾಗಶ್ರೀಗೆ ಅದನ್ನು ತಿಳಿಯುವ ಅರ್ಹತೆಯಿದ್ದು 'ಅರೆತೆರೆದ ಕಣ್ಣುಗಳನ್ನು ಒಂದಿಷ್ಟು ಅರಳಿಸುತ್ತ' ವಿಕಾಸ ಹೊಂದುತ್ತಾಳೆ. ಆ ಚಿತ್ರವನ್ನು ಸರಿಯಾಗಿ ವೀಕ್ಷಿಸದೆ ಮೊದಲು ಅಸಹ್ಯ ಭಾವವನ್ನು ಹೊಂದಿ, ಅನಂತರ ಅದನ್ನು ಸವತಿ ಮತ್ಸರವಾಗಿಸಿ 'ಈ ಮನಸಿನ ಮಡದಿ ಕನಸಿನ ಕೆಳದಿಯಾಗಿ ಕುಣಿದಾಡದಿರಲಿ' ಎನ್ನುತ್ತಾಳೆ. ಪತಿಯೊಡನೆ ಆ ಚಿತ್ರವನ್ನು ಕುರಿತು ಚರ್ಚಿಸಿ ಅವನ ಒತ್ತಾಯದಂತೆ ನಿದ್ದೆಗಣ್ಣು ಬಿಟ್ಟು ನಿಚ್ಚಳವಾಗಿ ನೋಡುತ್ತಾಳೆ. ವಾಚ್ಯದ ಹಿಂದಿರುವ ವ್ಯಂಗ್ಯಾರ್ಥ ಹೊಳೆದಂತೆ ಅದನ್ನು ಸೂಕ್ಷ್ಮವಾಗಿ ಗಮನಿಸಿದಂತೆ, ಉದ್ದೀಪಕವಲ್ಲದ ಶಾಂತ ತೇಜಸ್ಸಿನ ಮೂರ್ತಿ ಗೋಚರವಾಗುತ್ತದೆ. ಆ ಚಿತ್ರದ ವಾಚ್ಯಾರ್ಥದ ಹಿಂದಿರುವ ವ್ಯಂಗ್ಯಾರ್ಥ ತಿಳಿದಂತೆ ಅದು ತನ್ನ 'ಜೀವ-ಜೀವಾಳದ ನಿರಂಜನ ಪ್ರಕೃತಿ' ಎಂದು ಅದನ್ನು ಮುದ್ದಿಡುತ್ತಾಳೆ. ಇದು 'ನಿರಾಭರಣ ಸುಂದರಿಯ' ತೇಜಸ್ವಿ ಪ್ರಭೆ.

ಆ ದಂಪತಿಗಳ ಸಂವಾದ ಸಂಸಾರಿಗಳ ಆತ್ಮಶ್ರೀಮಂತಿಕೆಯನ್ನು ದರ್ಶಿಸುತ್ತಿದೆ. ಅವರು ಕುಟುಂಬ ವತ್ಸಲರಾಗಿ ನಿರಂಜನತ್ವವನ್ನು ಪಡೆಯುವ ಸಾಧಕ ದಂಪತಿಗಳಾಗಿ ಚಿತ್ರಿತರಾಗಿದ್ದಾರೆ. ನಾಗಚಂದ್ರನ ಮಲ್ಲಿನಾಥ ಪುರಾಣವನ್ನು ಅಭ್ಯಾಸಮಾಡಿ ಸವಿದ ಬೇಂದ್ರೆಯವರು ಮಲ್ಲಿನಾಥನನ್ನು ಜೈನರ ಒಂದು ಪಂಗಡದವರು ಹೆಣ್ಣೆಂದೂ, ಇನ್ನೊಂದು ಪಂಗಡದವರು ಗಂಡೆಂದೂ, ಆರಾಧಿಸುವ ಹಿನ್ನೆಲೆಯಲ್ಲಿ ಈ ಕಥೆಯನ್ನು ಒಂದು ಗದ್ಯಕಾವ್ಯದಂತೆ ರಚಿಸಿದ್ದಾರೆ.

'Mallinatha the nineteenth Tirthankara, was a princess according to the Shwetambara Jaina canans. She was the daughter of Kumbha, the ruler of the Mithila (Modern Bihar), and was exceedingly beautiful and learned.[28] ಎಂದು ಉಮಾಕಾಂತ ಪ್ರೇಮಾನಂದ ಶಾ ಅವರು ಹೇಳಿದ್ದಾರೆ. 'ನಾಗಚಂದ್ರನ ಮಲ್ಲಿನಾಥ ಪುರಾಣವನ್ನು'[29] ಸಂಶೋಧನಾ ದೃಷ್ಟಿಯಿಂದ ಅಧ್ಯಯನ ಮಾಡಿ 'ರಾಮಚಂದ್ರಚರಿತ ಪುರಾಣವು ಸಾವಿರ ಕಂಬದ ಬಸದಿಯನ್ನು ಕಟ್ಟಿದಂತೆ. ಮಲ್ಲಿನಾಥವು ಮೂರ್ತಿಶಿಲ್ಪ, ಚರಿತಪುರಾಣವು ವಾಸ್ತು ಶಿಲ್ಪ'[30] 'ಮಲ್ಲಿನಾಥ ಪುರಾಣ ಮಹಾಕಾವ್ಯವು ಸೌಂದರ್ಯ ಸೂಕ್ತ. ಸಮ್ಯಗ್ಜ್ಞಾನದಿಂದ ಉಂಟಾದ ಸಮತ್ವದಲ್ಲಿ ಬೆಳೆಯುವ ಶಾಂತ - ತಮಸ್ಸು ರಜಸ್ಸುಗಳಾಚೆಗಿನ ಆ ಬೆಳಕು, ಕವಿದರ್ಶನಕ್ಕೂ ಕವಿವರ್ಣನಕ್ಕೂ ಯೋಗ್ಯವಾದ ಲೋಕ. ಇಲ್ಲಿಯೇ ಕವಿಯು ಋಷಿಯಾಗುವನು'[31] ಎಂದು ಹೇಳಿದ್ದಾರೆ. ಆ ಚಿಂತನೆಯೆ ಅವರ 'ನಿರಾಭರಣ ಸುಂದರಿ'ಯ ಕಥೆಯಲ್ಲಿ ಪಲ್ಲವಿಸಿದೆ. ಈ ಕಥೆಯನ್ನು ಕುರಿತು 'ಅತ್ಯಂತ ತಾತ್ವಿಕವಾದ ವಸ್ತುವನ್ನೆತ್ತಿಕೊಂಡೂ ಅದನ್ನು ನಾಟ್ಯೀಕರಿಸುವಲ್ಲಿ ಬೇಂದ್ರೆಯವರ ಕತೆಗಾರಿಕೆ ಇಲ್ಲಿ ದುಡಿದಿದೆ'[33] ಎಂದು ಜಿ.ಎಸ್.ಆಮೂರ ಅವರು ಹೇಳಿದ್ದಾರೆ. ಕೀರ್ತಿನಾಥ ಕುರ್ತಕೋಟಿಯವರು 'ನಿರಾಭರಣ ಸಂದರಿ'ಯ ವಸ್ತು, ಸಮಸ್ಯೆ, ಶೈಲಿಗಳು ಬುದ್ಧಿ ಭಾವಗಳ ಸೂಕ್ಷ್ಮ ಅಂಗಗಳಿಗೆ ಮಾತ್ರ ಗೋಚರವಾಗುವಂತೆ ಬರೆಯಲ್ಪಟ್ಟಿವೆ. ಅದರ ಶೈಲಿ ಚಿತ್ರದ ಬಣ್ಣಗಾರಿಕೆಯನ್ನೂ ಸಂಗೀತದ ನಾದ ಲೋಲುಪತೆಯನ್ನೂ ಪಡೆದುಕೊಂಡು ಶ್ರೀಮಂತವಾಗಿದೆ''[35] ಎಂದು ಬಣ್ಣಿಸಿದ್ದಾರೆ.

ಸ್ತ್ರೀಪುರುಷರೆಂಬ ಭೇದ ಈ ನೆಲದ್ದು ಎಂದು ಶ್ರೀಮಾತಾ ಅವರು ಹೇಳಿರುವುದನ್ನು ಈಗಾಗಲೇ

ತಿಳಿದಿದ್ದೇವೆ. ಸ್ತ್ರೀಪುರುಷ ಚೇತನದಲ್ಲಿರುವವರ ಆತ್ಮ ಒಂದೇ ಆಗಿದೆ. ಅದಕ್ಕೆ ಭೇದವಿಲ್ಲ ಎಂದು ಅದರ ನಿರಂಜನತೆಯನ್ನು ಪ್ರಕಾಶಿಸಿ, ಅದರ ಅನುಭಾವದಲ್ಲಿ ಮುಳುಗಿದ ಪದ್ಮ ಮತ್ತು ನಾಗಶ್ರೀ ಕನ್ನಡ ಕಥಾ ಸಾಹಿತ್ಯದಲ್ಲಿಯೇ ಅಪರೂಪದ ಪಾತ್ರಗಳಾಗಿವೆ. ಹೀಗೆ ಜಿನಯೋಗಿಣಿ 'ಮಲ್ಲಿ'ಯನ್ನು ಕಥೆಯ ಕೇಂದ್ರವಾಗಿಸಿ ಕಡೆದ ಈ ಕತೆ ಕನ್ನಡ ಕಥಾಸಾಹಿತ್ಯದಲ್ಲಿಯೇ ವಿಶಿಷ್ಟವಾಗಿದೆ ಎಂದು ಹೇಳಬಹುದು.

**ಹಿರಿದ ಕತ್ತಿ.**

ಈ ಕಥೆಯಲ್ಲಿ ಮೂರು ಹೆಂಡಂದಿರು ತೀರಿಕೊಂಡಿದ್ದರೂ ಮದುವೆಯಾಗುವ ಉತ್ಸಾಹದಲ್ಲಿರುವ ಮುದುಕ ದೇಸಾಯಿ ಮತ್ತು ಗಂಡು ಮಗುವನ್ನು ಪಡೆಯುವ ಆಸೆಯಿಂದ ಮರುವಿವಾಹವಾಗಲು ಆಶಿಸಿರುವ ನರಸಿಂಗರಾಯರು ಇದ್ದು ಅವರ ಹೆಣ್ಣಿನ ಆಸೆ, ಕ್ರೌರ್ಯ ಸಣ್ಣತನ ಚಿತ್ರಿತವಾಗಿವೆ. ನರಸಿಂಗರಾಯನು ಗೊತ್ತಿದ್ದೂ ತನ್ನ ಮಗಳು ಕುಸುಮಾಳನ್ನು ದೇಸಾಯಿಗೆ ಮದುವೆ ಮಾಡಿಕೊಡಲು ಮನಸ್ಸು ಮಾಡುವನು. ಹೆಂಡತಿ ಮತ್ತು ಮಗಳು ಒಪ್ಪದಿರಲು ಮಗಳನ್ನು ಕೋಣೆಯಲ್ಲಿ ಕೂಡಿ ಹಾಕಿ ಕೋಣೆಯಲ್ಲಿ ತೂಗುತ್ತಿರುವ ಒಂದು ಕತ್ತಿಯ ಒರೆಯನ್ನು ಹಿರಿದು ತೆಗೆದು ಬೆದರಿಸುವನು. ಅದರಿಂದ ಭಯಭೀತಳಾದ ಮಗಳು ಜ್ವರಪೀಡಿತಳಾಗುವಳು. ಅಷ್ಟರಲ್ಲಿ ದೇಸಾಯಿಯ ಊರಿನವರಿಂದ ಬಂದ ಒಂದು ಸಹಿ ಇಲ್ಲದ ಕಾಗದ "ದೇಸಾಯರೆಂದರೆ ಹಿರಿದ ಕತ್ತಿಯಿದ್ದಂತೆ. ಅದಕ್ಕೇಕೆ ಮಗಳನ್ನು ಬಲಿ ಕೊಡುವಿರಿ? ಮಗಳು ಹೆಚ್ಚಾಗಿದ್ದರೆ ನಿಮ್ಮೂರ ಕೆರೆಯಲ್ಲಿ ನುಗಿಸಿರಿ. ನಮ್ಮೂರಿಗೆ ಅಪವಾದ ಕೊಡಬೇಡಿರಿ" ಎಂದಿರುವುದನ್ನು ಓದಿ ನರಸಿಂಗರಾಯ ಬದಲಾಗುತ್ತಾನೆ. ಅಂದಿನ ಸಮಾಜದ ಸಿರಿವಂತರ ದರ್ಪ, ಬಾಲ್ಯವಿವಾಹ, ಮೃದುಹೃದಯದ ಮುಗ್ಧ ಬಾಲಕಿಯರ ನೋವು, ಅಸಹಾಯಕ ತಾಯಿಯರ ಸಂಕಟ ಇಲ್ಲಿ ಕಥೆಯಾಗಿದೆ.

**ಮಗುವಿನ ಕರೆ**

ಈ ಕಥೆಯಲ್ಲಿ ಕಿರಿದಾದ ಅಸ್ತವ್ಯಸ್ತವಾಗಿರುವ ನೀರಿನ ಕೊಡವಿಡಲೂ ಜಾಗವಿಲ್ಲದ ಶಾಸ್ತ್ರಿಗಳ ಮನೆ, ಅಲ್ಲಿ ಮೀಸಲು ನೀರು ಚೆಲ್ಲಿಹೋಗಲು, ಕುಡಿಯುವ ನೀರನ್ನು ತರಲು ಶಾಸ್ತ್ರಿಯವರ ಸೊಸೆ ಮಟಮಟ ಮಧ್ಯಾಹ್ನದಲ್ಲಿ ಭಾವಿಗೆ ಹೋಗುವ ಚಿತ್ರಣವಿದೆ. 'ಬಡವರ ಸೊಸೆಗೆ ನಾಲಿಗೆ ಸಡಿಲು ಬಿಡಬಲ್ಲವರೆಲ್ಲ ಅತ್ತೆಗಳೇ!' ಎಂಬಂತೆ ಬಾಯಿಗೆ ಬಂದಂತೆ ಮಾತಾಡುವ ಊರಿನವರ, ರೋಗಿಯಾದ ಗಂಡನ, ಉಸಿರುಗಟ್ಟುವ ಮನೆಯ ವಾತಾವರಣದಿಂದ ಅವಳು ಭಾವಿಗೆ ಬಿದ್ದು ಪ್ರಾಣ ಬಿಡಲು ತೊಡಗುವಳು. ಆದರೆ ಅವಳಿಗೆ 'ತನ್ನ ಕೂಸಿನ ದನಿ ಕಿವಿದುಂಬಿತ್ತು. ವಾತ್ಸಲ್ಯವು ಎದೆದುಂಬಿಬಂದಿತ್ತು'. ಆದಕಾರಣ ಅವಳು ನೀರುಸೇದಿ ಕೊಡಹೊತ್ತು ಬರುವಳು. ಆ ಮಗುವಿನ ಕರೆ ಅವಳು ಮನಸ್ಸನ್ನು ಬದಲಾಯಿಸಲು ಕಾರಣವಾಯಿತು. ಅದು ಕರುಳ ಕೂಗು. ಆದಕಾರಣ ಅವಳು ನೀರು ಸೇದಿ ಕೊಡ ಹೊತ್ತು ಬರುವಳು. ಅವಳು ಬಂದಾಗ ಅತ್ತೆ ಪ್ರೀತಿಯಿಂದ 'ಬಾ ತಾಯಿ, ಬಿಸಿಲಲ್ಲಿ ಹೋಗಿದ್ದಿ ಭಾವಿಯ ಮೇಲೆ ಯಾರಿರತಾರ? ನಾನೇ ಕಳಿಸಬಾರದಿತ್ತು.' ಎಂದು ಹೇಳುವ ನುಡಿ ಅವಳಿಗೆ ತನ್ನ ಕರುಳಿನ ಪ್ರೀತಿಯ ಫಲವಾಗಿರುತ್ತದೆ. ತನಗಾಗಿ ಅಳುತ್ತಿರುವ 'ಒಂದು ಜೀವ ಜಗತ್ತು'ಮಗುವನ್ನು ಕಂಡು ತಾನು ಜೀವಕ್ಕೆರವಾಗುತ್ತಿದ್ದುದು ತಪ್ಪು ಎಂದೆನಿಸುತ್ತದೆ. ಅವಳ ಮನಸ್ಸು ಬದಲಾಗಿ, ಮನೆಯ ಜನ ಬದಲಾಗಿ, ಅವಳು ನಲಿಯುತ್ತಾಳೆ. ಬಡ ಕುಟುಂಬದ ಜೀವನದಲ್ಲಿ ನಿರಾಶೆ ಹೊಂದಬಾರದು. ತಾಳ್ಮೆ, ಪ್ರೀತಿ, ಸತತ ದುಡಿಮೆಯಿಂದ ಇಡೀ ವಾತಾವರಣವನ್ನು ಬದಲಾಯಿಸಲು ಸಾಧ್ಯ. ಸಾವು ಮುಖ್ಯವಲ್ಲ ಬದುಕು ಮುಖ್ಯ ಎಂಬ ತತ್ತ್ವವನ್ನು ಈ ಪುಟ್ಟ ಕಥೆಯಲ್ಲಿ ಬೇಂದ್ರೆ ಸಾರಿದ್ದಾರೆ.

'ಇಡೀ ಸಂಗ್ರಹದಲ್ಲಿಯೇ ಶ್ರೇಷ್ಠವಾಗಿರುವ 'ಮಗುವಿನ ಕರೆ' ಓದುಗರ ಇಂದ್ರಿಯ, ಬುದ್ಧಿ,

ಮನಸ್ಸುಗಳನ್ನು ವ್ಯಾಪಿಸುತ್ತ ಆತ್ಮವನ್ನು ಕಲಕುತ್ತದೆ,'[34] ಎಂದು ಕೀರ್ತಿನಾಥ ಕುರ್ತಕೋಟಿಯವರು ಹೇಳಿದ್ದಾರೆ. ಕತೆಯ ನಾಯಕಿ ತನಗಾಗಿ ಅಳುತ್ತಿರುವ ಒಂದು ಜೀವಂತ ಜಗತ್ತು, ತನ್ನ ಜೀವಕುಡಿ ಮಗುವನ್ನು ಕಂಡು ತಾನು ಜೀವಕ್ಕೆರವಾಗುತ್ತಿದ್ದದ್ದು ತಪ್ಪು ಎನಿಸುತ್ತದೆ. ಮನೆಯ ಜನ ನಲಿದಾಗ ಅವಳು ನಲಿಯುತ್ತಾಳೆ. ಹೀಗೆ ಜೀವನಮುಖಿ ಚಿಂತನೆಯನ್ನು ಈ ಕಥೆ ಹೊಂದಿದೆ.

**ಏಕಾಕಿನೀ**

ಇದೊಂದು ಹೆಣ್ಣಿನ ವ್ಯಥೆಯ ಕಥೆ. ಆದಕಾರಣ ಬೇಂದ್ರೆಯವರು ಆಕೆಗೆ ಹೆಸರಿಡದೆ 'ಏಕಾಕಿನೀ' ಎಂದು ಕರೆದಿದ್ದಾರೆ. ಆಕೆ ಮದುವೆಯಾದ ಮೇಲೆ ಒಂದೆರಡು ವರ್ಷಗಳಲ್ಲಿ ಅವಳ ಗಂಡ ಯಾತ್ರೆಗೋ ಎಲ್ಲಿಗೊ ಹೋದವನು ಪತ್ತೆಯಿಲ್ಲವಾಗಿದ್ದಾನೆ. ಅವಳ ಒಂಟಿ ಬಾಳು - ಅತ್ತೆ ಮಾವನಿಗೆ ನೆರೆಹೊರೆಯವರಿಗೆ ಅಂಜಿ ಸಾಗುತ್ತಿರುವಾಗ - ಸಂಜೆ ನೀರಿಗೆ ಹೋದವಳು ಹಾದಿಯಲ್ಲಿದ್ದ ಬಲಭೀಮನ ಗುಡಿಯಲ್ಲಿ ಹೊಸದಾಗಿ ಬಂದಿದ್ದ ಬೈರಾಗಿಗೆ ಕೈತೋರಿಸಿ 'ನನಗೆ ಮಕ್ಕಳಾಗುವವೆ?' ಎಂದು ಪ್ರಶ್ನೆ ಕೇಳಿ, ತಾನು ಪ್ರಶ್ನೆ ಕೇಳಿದ್ದೇ ತಪ್ಪೆಂದು ದಡಬಡಿಸಿ ಹೊರಟುಹೋಗುವಳು. ಅಂತಹ ಸುಶೀಲೆ ಏಕಾಕಿನೀ.

ಅದೇ ದಿನ ತನ್ನ ಗಂಡ ಕೇಶವಭಟ್ಟ ಊರಿಗೆ ಬಂದಿರುವನೆಂದು ನೆರೆಯವರು ಅತ್ತೆಗೆ ತಿಳಿಸಿದಾಗ, ಅತ್ತೆಗೂ ಊರಿಗೂ ಅದು ಕುತೂಹಲದ ಉತ್ಸಾಹದ ವಿಷಯವಾದಾಗ ಏಕಾಕಿನಿ ನಿರ್ಲಿಪ್ತಳಂತಿರುತ್ತಾಳೆ. ಹನ್ನೆರಡು ವರ್ಷದ ನಂತರ ಬಂದ ಪತಿಯ ಕಾಲೊತ್ತುತ್ತ ರಾತ್ರಿ ಕುಳಿತಿರಲು 'ನಿನ್ನೆ ಹಾಳುಗುಡಿಯ ಬೈರಾಗಿಗೆ ನೀನು ಕೈ ಕೊಟ್ಟದ್ದು ನಾನು ನೋಡಿದ್ದೇನೆ' ಎಂದು ನುಡಿದ ಅವನು - ಅವಳನ್ನು ಅಶುದ್ಧಳೆಂದು ಜರೆದು ಹೊರಟುಹೋಗುತ್ತಾನೆ. ಅವಳಿಗೆ ಊರಿನವರು ಮತ್ತೆ ಜರೆಯುತ್ತಾರೆ. ಏಕಾಕಿನಿ ತನ್ನ ಹಣೆಬರಹಕ್ಕೆ ತಲೆ ಚಚ್ಚಿಕೊಳ್ಳುತ್ತಾಳೆ. ಈ ಕಥೆಯನ್ನು ಕುರಿತು ಜಿ.ಎಸ್. ಆಮೂರ ಅವರು 'ಕತೆ ಒಂದು ಆಕಸ್ಮಿಕ ಘಟನೆಯ ಮೇಲೆ ನಿಲ್ಲುವುದರಿಂದ ದುರ್ಬಲವಾಗಿದೆ. ಏಕಾಕಿನಿಯ ಮನೋವ್ಯಾಪಾರಗಳನ್ನು ಚಿತ್ರಿಸುವಲ್ಲಿ ಕತೆಗಾರನು ಅದ್ಭುತವಾದ ಯಶಸ್ಸನ್ನು ಪಡೆದಿದ್ದರೂ ಒಟ್ಟಿನಲ್ಲಿ ಕತೆ ಸೋಲುತ್ತದೆ ಎಂದೆನಿಸುತ್ತದೆ'[35] ಎಂದು ಹೇಳಿದ್ದಾರೆ.

ಈ ಕಥೆಯಲ್ಲಿ ತವರಿನ ಆಸರೆಯಿಲ್ಲದ ಗಂಡನನ್ನೇ ನಂಬಿ ಬಂದ ಹೆಣ್ಣು ಮೌನಿಯಾಗಿ ನೋವನ್ನು ಅನುಭವಿಸುವ, ಶುದ್ಧಳಿದ್ದರೂ ಅಶುದ್ಧಳೆಂದೆನಿಸಿಕೊಳ್ಳುವ ಒಬ್ಬ ಹೆಣ್ಣು ಒಂದು ಕಡೆಗಿರುವಳು. ತಾನೇ ಬೈರಾಗಿಯಾಗಿ ತನಗೆ ತನ್ನ ಹೆಂಡತಿ ಕೈತೋರಿಸಿ ಮಕ್ಕಳ ಫಲ ಕೇಳಿರುವುದನ್ನು 'ಒಬ್ಬ ತಿರುಕನಿಗೆ' ಕೈತೋರಿಸಿದೆ ಎಂದು ಜರೆದು ಓಡಿಹೋಗುವ ಪಲಾಯನವಾದಿ ತಿರುಕನಾದ ಪುರುಷ ಇನ್ನೊಂದು ಕಡೆ ಇರುವನು. ಸಮಾಜ ಪುರುಷಪರವಾಗಿ ವರ್ತಿಸಿ ಬೈರಾಗಿಯಾದವನನ್ನು ಕ್ಷಮಿಸಿ, ಒಪ್ಪಿ ಆದರಿಸುತ್ತದೆ. ಸುಶೀಲೆಯೂ ಸಂಪನ್ನಳೂ ಆದ ಹೆಣ್ಣನ್ನು ದೂಷಿಸಿ ಸಂತಸಪಡುತ್ತದೆ. ಹೀಗೆ ಸಮಾಜ ಪುರುಷಪರವಾಗಿ ಸ್ತ್ರೀವಿರೋಧಿಯಾಗಿರುವುದನ್ನು ಹೇಳುತ್ತ - ಓದುಗರು ಅದನ್ನು ವಿರೋಧಿಸುವ ಮನೋಭಾವದವರಾಗುವಂತೆ ಮಾಡುವುದು ಈ ಕಥೆಯ ವೈಶಿಷ್ಟ್ಯವಾಗಿದೆ. ಬೇಂದ್ರೆಯವರ ಕಥೆಗಳನ್ನು ಕುರಿತು ಸ.ಸ. ಮಾಳವಾಡ ಅವರು: "....... ಹಳ್ಳಿಯ ಸಮಾಜದಲ್ಲಿಯ ಕಿರುಕುಳ, ಒಟ್ಟು ಕುಟುಂಬದಲ್ಲಿಯ ಹೆಣ್ಣಿನ ಬಾಳುವೆಯ ವೈಷಮ್ಯ, ಅವಳ ಅಂತರಾಳದ ನಿಸರ್ಗಸಹಜ ಮನದಾಸೆಗಳು, ಅತೃಪ್ತಿಯ ಭೀಕರ ಪ್ರತಿಕ್ರಿಯೆ, ಅನಿರೀಕ್ಷಿತ ಸನ್ನಿವೇಶದ ಕಹಿಯಾದ ಪರಿಣಾಮ, ಹೆಂಡತಿಯ ಮೇಲೆ ಹೆಂಡತಿಯನ್ನು ಸಾಯಹೊಡೆದು ಮತ್ತೆಮತ್ತೆ ಮದುವೆಗೆ ಸಿದ್ಧವಾಗುವ, ಹಿರಿದ ಕತ್ತಿಯ ಹಿಂದಿನ ಕಾಲದ ವತನದಾರರು ಇತ್ಯಾದಿ ಸೃಷ್ಟಿಯನ್ನು ಬೇಂದ್ರೆಯವರ ಸಣ್ಣ ಕಥೆಗಳಲ್ಲಿ ನಾವು ಕಾಣುತ್ತೇವೆ. ಇಂತಹ

ಪ್ರಪಂಚದ ಚಿತ್ರಣದಲ್ಲಿದ್ದ ಜೀವನ ದರ್ಶನವು ಬಾಳಿಗೆ ಪಥ ಪ್ರದರ್ಶನ ಮಾಡುತ್ತಿದೆ; ರಸಪರಿಪಾಕವನ್ನು ಒದಗಿಸುತ್ತಿದೆ. ಮಾನವನ ಮೂಲಭೂತ ಭಾವನೆಗಳನ್ನು ರೂಪಿಸುವುದರ ಜೊತೆಗೆ ಕಣ್ಮರೆಯಾಗುತ್ತಿರುವ ಹಳೆಯ ಬಾಳಿನ ಕೆಲವು ಅಂಶಗಳ 'ರೆಕಾರ್ಡ್' ಒದಗಿಸುತ್ತಿದೆ."[36] ಎಂದು ಹೇಳಿದ್ದಾರೆ.

'ಹರಿದಕತ್ತಿ', 'ಏಕಾಕಿನೀ' ಕಥೆಗಳಲ್ಲಿ ಬೇಂದ್ರೆಯವರು ಸ್ತ್ರೀಯ ಅಸಹಾಯಕತೆ, ನೋವು, ಸಮಾಜ ಅವಳನ್ನು ಕಾಣುವ ದೃಷ್ಟಿ ಮತ್ತು ಪುರುಷಪರವಾದ ಸಾಮಾಜಿಕ ವ್ಯವಸ್ಥೆ, ಸ್ತ್ರೀಯನ್ನು ಶೋಷಿಸುವ ರೀತಿಯನ್ನು ಸಮರ್ಥವಾಗಿ ಚಿತ್ರಿಸಿದ್ದಾರೆ. 'ಮಗುವಿನ ಕರೆ' ಕಥೆಯಲ್ಲಿ ಸ್ತ್ರೀಯ ತಾಳ್ಮೆ, ಸಹನೆ, ವಾತ್ಸಲ್ಯದಿಂದ ಜೀವನವನ್ನು ಎದುರಿಸಬೇಕು. ಸಾವು ಹೆಚ್ಚಲ್ಲ ಬದುಕು ಹೆಚ್ಚು ಎಂಬುದನ್ನು ಧ್ವನಿಸುತ್ತದೆ. 'ನಿರಾಭರಣ ಸುಂದರಿ'ಯಲ್ಲಿ ಸ್ತ್ರೀ ಅಧ್ಯಾತ್ಮಸಾಧಕಳಾಗಿ ಪುರುಷನಿಗೆ ಸಮಾನವಾದ ನೆಲೆಯಲ್ಲಿ ನಿಲ್ಲಬಲ್ಲಳು, ಅದನ್ನು ತಿಳಿಯುವ ಮನಸ್ಸು ಬೇಕು ಎಂಬ ಆಲೋಚನೆಯಿದೆ. ಈ ಕಥೆಯಿಂದ ಬೇಂದ್ರೆಯವರು ಸ್ತ್ರೀಯನ್ನು ಕಾಣುತ್ತಿದ್ದ ಔನ್ನತ್ಯದ ನೆಲೆ ಪರಿಚಯವಾಗುತ್ತದೆ.

**ಸಂಖ್ಯಾ ಟಿಪ್ಪಣಿಗಳು**

1) ದ.ರಾ.ಬೇಂದ್ರೆ, ಅರಳು ಮರಳು, ಶ್ರೀ ಮಾತಾ ಪ್ರಕಾಶನ, ಧಾರವಾಡ, 1995, ಪು. 164.
2) ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ, 1974, ಪು. 287.
3) ಕೆ.ಎಸ್.ಶರ್ಮಾ, 'ಮಿಸ್‌ಫಾರ್ಚ್ಯೂನ್' : ಬೆಳಕಿಗೆ ಬಂದ ಬಗೆ, ಮಿಸ್‌ಫಾರ್ಚ್ಯೂನ್, ಪುರೋಗಾಮಿ ಸಾಹಿತ್ಯ ಪ್ರಕಾಶನ, 1983, ಪು. 3.
4) ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಪೂರ್ವೋಕ್ತ, ಪು. 285.
5) ರಾಮಚಂದ್ರ ಕೊಟ್ಟಲಗಿ, 'ನಾಟಕಕಾರ ಬೇಂದ್ರೆ', ಬುದ್ದಣ್ಣ ಹಿಂಗಮಿರೆ (ಸಂ.) ಇಳಿದು ಬಾ ತಾಯಿ, ಸಮಾಜ ಪುಸ್ತಕಾಲಯ, ಧಾರವಾಡ, 1977, ಪು. 224.
6) ವಾಮನ ಬೇಂದ್ರೆ, 'ಸಂಪಾದಕರ ನುಡಿ', ದ.ರಾ.ಬೇಂದ್ರೆ, ತಿರುಕರ ಪಿಡುಗು, ಶ್ರೀ ಮಾತಾ ಪ್ರಕಾಶನ, ಧಾರವಾಡ, ಪು. 3.
7) ಎನ್ಕೆ ಕುಲಕರ್ಣಿ, ಕನ್ನಡ ನಾಟಕ ಸಾಹಿತ್ಯದಲ್ಲಿ ದ.ರಾ. ಬೇಂದ್ರೆಯವರ ಸ್ಥಾನ-ಮಾನ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1991, ಪು. 18.
8) ಜಿ.ಎಸ್.ಆಮೂರ, ಭುವನದ ಭಾಗ್ಯ, ಸ್ನೇಹ ಪ್ರಕಾಶನ, ಬೆಂಗಳೂರು, 1991, ಪು. 217.
9) ವಾಮನ ಬೇಂದ್ರೆ, 'ಸಂಪಾದಕರ ನುಡಿ' ದ.ರಾ.ಬೇಂದ್ರೆ, ಜಾತ್ರೆ, ಶ್ರೀ ಮಾತಾ ಪ್ರಕಾಶನ, ಧಾರವಾಡ, 1990, ಪು. 4, 5.
10) ದ.ರಾ.ಬೇಂದ್ರೆ, ನಗೆಯ ಹೊಗೆ, ಶ್ರೀಮಾತಾ ಪ್ರಕಾಶನ, ಧಾರವಾಡ, 1991.
11) ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಪೂರ್ವೋಕ್ತ, ಪು. 396.
12) ಅದೇ, ಪು. 297.
13) ಕೀರ್ತಿನಾಥ ಕುರ್ತಕೋಟಿ, ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, 1983, ಪು. 157.
14) ಎನ್ಕೆ ಕುಲಕರ್ಣಿ, ಕನ್ನಡ ನಾಟಕ ಸಾಹಿತ್ಯದಲ್ಲಿ ದ.ರಾ.ಬೇಂದ್ರೆಯವರ ಸ್ಥಾನಮಾನ, ಪೂರ್ವೋಕ್ತ, ಪು. 13.

15) ದ.ರಾ.ಬೇಂದ್ರೆ, ಹಳೆಯ ಗೆಣೆಯರು, ಶ್ರೀಮಾತಾ ಪ್ರಕಾಶನ, ಧಾರವಾಡ, 1995.
16) ದ.ರಾ.ಬೇಂದ್ರೆ, ದೆವ್ವನ ಮನೆ, ಶ್ರೀಮಾತಾ ಪ್ರಕಾಶನ, ಧಾರವಾಡ, 1996.
17) ವಾಮನ ಬೇಂದ್ರೆ, 'ಸಂಪಾದಕರ ನುಡಿ' ಅದೇ, ಪು. 3.
18) ದ.ರಾ.ಬೇಂದ್ರೆ, ಹೊಸ ಸಂಸಾರ, ಶ್ರೀಮಾತಾ ಪ್ರಕಾಶನ, ಧಾರವಾಡ, 1995.
19) ದ.ರಾ. ಬೇಂದ್ರೆ, ಶೋಭನಾ, ಶ್ರೀಮಾತಾ ಪ್ರಕಾಶನ, ಧಾರವಾಡ, 1992.
20) ದ.ರಾ.ಬೇಂದ್ರೆ, ಆಥರಾ ಈಥರಾ, ಶ್ರೀಮಾತಾ ಪ್ರಕಾಶನ, ಧಾರವಾಡ, 1995.
21) ಎನ್ಕೆ ಕುಲಕರ್ಣಿ, ಕನ್ನಡ ನಾಟಕ ಸಾಹಿತ್ಯದಲ್ಲಿ ದ.ರಾ. ಬೇಂದ್ರೆಯವರ ಸ್ಥಾನ-ಮಾನ, ಪೂರ್ವೋಕ್ತ, ಪು. 2.
22) ದ.ರಾ.ಬೇಂದ್ರೆ, ಗರಿ ಶ್ರೀಮಾತಾ ಪ್ರಕಾಶನ, ಧಾರವಾಡ, 1989, ಪು. 33.
23) ದ.ರಾ.ಬೇಂದ್ರೆ, ನಾದಲೀಲೆ, ಶ್ರೀಮಾತಾ ಪ್ರಕಾಶನ, ಧಾರವಾಡ, 1989, ಪು. 33.
24) ಅದೇ, ಪು. 52.
25) ಎನ್ಕೆ ಕುಲಕರ್ಣಿ, ಕನ್ನಡ ನಾಟಕ ಸಾಹಿತ್ಯದಲ್ಲಿ ದ.ರಾ. ಬೇಂದ್ರೆಯವರ ಸ್ಥಾನ - ಮಾನ, ಪೂರ್ವೋಕ್ತ, ಪುಟ 3.
26) ಕೆ.ಎಸ್. ಶರ್ಮಾ, 'ಮಿಸ್‌ಫಾರ್ಚ್ಯೂನ್ : ಬೆಳಕಿಗೆ ಬಂದ ಬಗೆ.' ಮಿಸ್‌ಫಾರ್ಚ್ಯೂನ್, ಪೂರ್ವೋಕ್ತ, ಪು. 3, 4.
27) ದ.ರಾ.ಬೇಂದ್ರೆ, ನಿರಾಭರಣ ಸುಂದರಿ, ಮನೋಹರ ಗ್ರಂಥಮಾಲಾ, 1983.
28) ಉಮಾಕಾಂತ ಪ್ರೇಮಾನಂದ ಶಾ 'Great Women in jainism', ಸ್ವಾಮಿ ಮಾಧವಾನಂದ ಮತ್ತು ರಮೇಶ ಚಂದ್ರ ಮಜುಂದಾರ್ (ಸಂ.), Great Women of India, ಅದ್ವೈತ ಆಶ್ರಮ, ಆಲ್ಮೋರ, 1953, ಪು. 277.
29) ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಪೂರ್ವೋಕ್ತ, ಪು. 402.
30) ಅದೇ, ಪು. 404.
31) ಅದೇ ಪು. 441.
32) ಜಿ.ಎಸ್. ಆಮೂರ, ಭುವನದ ಭಾಗ್ಯ, ಪೂರ್ವೋಕ್ತ, ಪು. 346.
33) ಕೀರ್ತಿನಾಥ ಕುರ್ತಕೋಟಿ, ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಪೂರ್ವೋಕ್ತ, ಪು. 216.
34) ಅದೇ, ಪು. 216.
35) ಜಿ.ಎಸ್. ಆಮೂರ, ಭುವನದ ಭಾಗ್ಯ, ಪೂರ್ವೋಕ್ತ, ಪು. 345.
36) ಸ.ಸ. ಮಾಳವಾಡ, 'ಬೇಂದ್ರೆಯವರ ಕತೆ - ಹರಟೆ', ಬುದ್ದಣ್ಣ ಹಿಂಗಮಿರೆ (ಸಂ.), ಇಳಿದು ಬಾ ತಾಯಿ, ಸಮಾಜ ಪುಸ್ತಕಾಲಯ, ಧಾರವಾಡ, 1977, ಪು. 270, 271.

ಅಧ್ಯಾಯ ಆರು

# ಸಮಾರೋಪ

'ಒಲವೆ ನಮ್ಮ ಬದುಕು' ಎಂಬುವುದು ಬೇಂದ್ರೆಯವರ ಜೀವನ ವ್ಯಾಖ್ಯೆ. ಬೇಂದ್ರೆಯವರಿಗೆ 'ನಲ್' ಎಂಬುದು ವೇದದ 'ಮಧು' ಶಬ್ದಕ್ಕಿಂತಲೂ ಮೇಲ್ಮೈ ಹೊಂದಿದ, ಪ್ರಿಯವಾದ ಕನ್ನಡನುಡಿ; ನಲ್ಮೆ, ಕರುಳು, ಹದುಳು, ಹಿಗ್ಗು, ಒಲ್ಮೆ ಎಲ್ಲವೂ ತಾಯಿಯ ಮಮತೆಯಂತೆ, ವಾತ್ಸಲ್ಯದಂತೆ ಜೀವಪೋಷಕವಾದುವು. ಬೇಂದ್ರೆಯವರು ಪ್ರೇಮಚಿಂತನೆಯಲ್ಲಿಯೇ ಬದುಕಿನ ಚಿಂತನೆಯನ್ನು ಕಂಡು 'ಒಲವಿನಲ್ಲಿ ಬೆಳಿ, ಒಲವಿನಲ್ಲಿ ಉಳಿ, ಒಲವೆ ಬಾಳ ಚೆಲುವು' ಎಂದು ನುಡಿದರು. ಅವರಿಗೆ ಪ್ರೇಮದ ಪೂರ್ಣರೂಪ ತಾಯಿ. ತಾಯಿ ಬಾಲ್ಯದಲ್ಲಿ 'ಹೆಣ್ಣು ಎನ್ನುವ ಮಾತು ತಾಯಿ ಎನ್ನುವ ಮಾತು ಎರಡಲ್ಲ ಒಂದೆಂದು' ತಿಳಿಸಿದ ನುಡಿ ಅವರಲ್ಲಿ ಬೆಳೆಯುತ್ತ ಸ್ತ್ರೀಪರ ಚಿಂತನೆಯನ್ನು ಬೆಳೆಸಿತು. ಅವರು ಸೃಜನ ಶಕ್ತಿಯ ತಾಯಿ ಮತ್ತು ಕಾವ್ಯ ಎರಡೂ ಒಂದೇ ಎಂದು ತಿಳಿದು ಸ್ತ್ರೀಯ ಹಲವು ಮುಖಗಳನ್ನು ತಮ್ಮ ಕಾವ್ಯದಲ್ಲಿ ಬಣ್ಣಿಸಿದ್ದಾರೆ.

ಬೇಂದ್ರೆಯವರು ತಮ್ಮ ಸಾಹಿತ್ಯದಲ್ಲಿ ಸ್ತ್ರೀಯನ್ನು ತಾಯಿಯಾಗಿ, ಪ್ರೇಯಸಿಯಾಗಿ, ಮಡದಿಯಾಗಿ, ಮಗಳಾಗಿ, ಸಾಹಿತ್ಯ ಸಹೋದರಿಯಾಗಿ, ವಿಧವೆಯಾಗಿ, ಬಸವಿಯಾಗಿ, ಭಿಕ್ಷುಕಿಯಾಗಿ ಕಂಡ ವಿವಿಧ ಮುಖಗಳನ್ನು ಹಿಂದಿನ ಅಧ್ಯಾಯಗಳಲ್ಲಿ ನಾನು ಸವಿಸ್ತಾರವಾಗಿ ವಿಶ್ಲೇಷಿಸಿದ್ದೇನೆ. ಬೇಂದ್ರೆಯವರ ಕಾವ್ಯದ ವೈಚಾರಿಕ ನಿಲುವಿರುವುದು ಅವರ ಪ್ರೇಮತತ್ತ್ವದಲ್ಲಿ. ಪ್ರೇಮ ಸ್ವರೂಪಿಯಾದ ತಾಯಿ, ಅಜ್ಜಿಯರ ಪ್ರೀತಿಯ ಮಗನಾಗಿ ಬೆಳೆದ ಬೇಂದ್ರೆಯವರಿಗೆ ವೈಯಕ್ತಿಕ ನೆಲೆಯ ಪ್ರೇಮ ವಿಶ್ವವ್ಯಾಪಿಯಾಗಿ ಗೋಚರಿಸಿದ್ದು "ಬೆಳಕೆ ಬೆಳಕಿದ್ದು ಕತ್ತಲೆಯು ತುಂಬಿತು ಹೇಗೆ?" ಎಂಬ ಪ್ರಶ್ನೆಯಲ್ಲಿ. ಅವರು ಪ್ರೇಮ ಮತ್ತು ಬೆಳಕನ್ನು ಆರಾಧಿಸಿದರು. ಪ್ರೇಮ, ಬೆಳಕು ಜಗದ ಜನರಿಗೆ ಹಾಗೂ ಜಗತ್ತಿಗೆ ಶಾಂತಿಯನ್ನು ತರುತ್ತದೆ ಎಂಬ ನಿಲುವಿಗೆ ಬಂದರು. ಬೆಳಕು ಸದಾ ನಮಗೆ ಗೋಚರವಾಗುತ್ತದೆ. ಬೆಳಕೇ ಅರಿವು. ಅದು ನಮ್ಮಲ್ಲಿಯೇ ಇದೆ. ಅದನ್ನು ತಿಳಿಯಬೇಕು. 'ಶಾಂತೀರಸವೇ ಪ್ರೀತಿಯಿಂದಾ ಮೈದೋರಿತಣ್ಣಾ! ಇದು ಬರಿ - ಬೆಳಗಲ್ಲೋ ಅಣ್ಣಾ' ಎಂದು ಬೆಳಕಿನಲ್ಲಿರುವ ಶಾಂತಿ ಮತ್ತು ಪ್ರೇಮವನ್ನು ಆರಾಧಿಸಿದರು. ಅದು ಪ್ರಾಕೃತಿಕ ಪ್ರಕಾಶವಲ್ಲ, ಪ್ರಜ್ಞೆಯ ಉನ್ಮೀಲನದ ಬೆಳಕು ಎಂದು ಬೆಳಕಿನ ವಿಶ್ವವ್ಯಾಪಕತ್ವವನ್ನು ಅವರು ಪ್ರತಿಪಾದಿಸಿದರು. ಶಾಂತಿ ಜೀವನ ಪ್ರೀತಿಯಲ್ಲಿದೆ ಎಂಬುದನ್ನು ಕಂಡುಕೊಂಡ ಅವರು, ಅದು ಎಲ್ಲಿಯೋ ಹೊರಗಿನಿಂದ ಬರುವಂತಹದಲ್ಲ ಅದು ನಮ್ಮ ಬದುಕಿನಲ್ಲಿಯೇ ಇದೆ. ಅದರ ಎಚ್ಚರ ಬೇಕು ಎಂದು ತಮ್ಮ ಕಾವ್ಯದಲ್ಲಿ ಸಾರಿದರು.

ಬೇಂದ್ರೆಯವರು ಮಾನವರೂಪದ ನಾವು ಅರ್ಧನಾರೀ ನಟೇಶ್ವರರು ಎಂದು ಹೇಳಿದರು. ಶ್ರೀಮಾತಾ ಅವರು ಹೇಳುವಂತೆ ಸ್ತ್ರೀ ಪುರುಷ ಭೇದ ಈ ನೆಲದ್ದು. ಮೂಲದಲ್ಲಿ ಸ್ತ್ರೀ ಪುರುಷ ಭೇದವಿಲ್ಲ. ನಾವು ಗಂಡಸು ಹೆಂಗಸರು ಪತಿಪತ್ನಿಯರಾಗಿ ಬಾಳ್ವೆ ಮಾಡತೊಡಗಿದಾಗ ಸಮಾನತ್ವದ, ಹೊಂದಾಣಿಕೆಯ, ಸಮರಸಭಾವದಲ್ಲಿ ಜೀವನ ನಡೆಸಿದಾಗ ಪ್ರೀತಿಯು ಪ್ರೇಮವಾಗಿ ಸಾಕ್ಷಾತ್ಕಾರವಾಗುವುದು. ಪತಿ ಪತ್ನಿಯರಿಂದೊಡಗೂಡಿದ ಕುಟುಂಬ ಈ ಜಗತ್ತಿನ ಮೂಲ ಘಟಕ. ಅವರು ಪ್ರೇಮಸ್ವರೂಪಿಗಳಾಗಿ ಇತರರ ಬಾಳಿಗೆ ಆಶ್ರಯದಾತರಾದಾಗ ಈ ಜಗತ್ತಿನಲ್ಲಿ 'ಹೊಸ ಸಂಸಾರ' ರೂಪುಗೊಳ್ಳುತ್ತದೆ. 'ಹೊಸ ಸಂಸಾರ'ದ ಮಂದಿ ಅರಿತು ಬಾಳುವವರಾಗಿ ಜಾತಿ ಮತ ಪಂಥವನ್ನು ಬದಿಗೊತ್ತಿ ತಾವೆಲ್ಲ ಒಂದಾದಾಗ ದೇಶದಲ್ಲಿ ಶಾಂತಿ ನೆಲಸಿ ಲೋಕಕಲ್ಯಾಣವಾಗುತ್ತದೆ. ಜಗದ ಹದುಳಕ್ಕೆ ಪ್ರೇಮವೇ ಮೂಲ ಎಂಬ ಸಿದ್ಧಾಂತವನ್ನು ಅವರು ತಮ್ಮ ಸಾಹಿತ್ಯದಲ್ಲಿ ನೀಡಿದರು.

☆ ☆

ಬೇಂದ್ರೆಯವರು ತನ್ನನ್ನು 'ಅರ್ಧನಾರಿಯಾದವ' ಎಂದು ಕರೆದುಕೊಂಡು ಸ್ತ್ರೀ ಪುರುಷರು ಸಮ ಎಂದು ಸಾರಿದರು. ತನ್ನ ವ್ಯಕ್ತಿತ್ವದಲ್ಲಿಯೇ 'ದ್ವಿಲಿಂಗತ್ವವಿದೆ' ಎಂದು ಹೇಳಿದರು. ಅವರು ಮಗುವನ್ನು 'ಅರ್ಧನಾರಿ-ನಟೇಶ್ವರ' ಎಂದು ಕರೆದು ವ್ಯಕ್ತಿತ್ವದ ದ್ವಿಲಿಂಗತ್ವಕ್ಕೆ ಮಾನ್ಯತೆ ನೀಡಿದರು. ಮಗುವನ್ನು ಹೆರುವ ಚೇತನವನ್ನು, ಧಾರಣಾಶೀಲತೆಯನ್ನು ಸೃಜನಶಕ್ತಿಯನ್ನು ಹೊಂದಿರುವುದರಿಂದ ಸ್ತ್ರೀಯು ಪುರುಷನಿಗಿಂತ ಹೆಚ್ಚು. ಅವಳು ಮೃಗವನ್ನು ಮಾನವನನ್ನಾಗಿ ಮಾಡಿದವಳು, ಸಂಸ್ಕೃತಿಯನ್ನು ಪ್ರಾರಂಭಿಸಿದವಳು, ಮನುಷ್ಯನನ್ನು ನಾಗರಿಕನನ್ನಾಗಿ ಮಾಡಿದವಳು ಎಂಬ ಚಿಂತನೆಯನ್ನು ತಮ್ಮ ಕಾವ್ಯದಲ್ಲಿ ನೀಡಿದರು. ಪುರುಷ ಮತ್ತು ಸ್ತ್ರೀ ಎಂಬುದು ದೇಹಭೇದ. ಇದು ನಿಸರ್ಗನಿಯಮ. ಇದರಲ್ಲಿ ಬದಲಾವಣೆ ಅಸಾಧ್ಯ. ಗುಣಗಳಲ್ಲಿ ಸ್ತ್ರೀಪುರುಷರಲ್ಲಿ ಭೇದ ಅಥವಾ ಆತಂಕವಿಲ್ಲ. ಪುರುಷನ ವ್ಯಕ್ತಿತ್ವದಲ್ಲಿ ಸ್ತ್ರೀಯ ಮೃದುತ್ವ ಇರಲು ಹೇಗೆ ಸಾಧ್ಯವೊ ಹಾಗೆಯೇ ಸ್ತ್ರೀಯ ವ್ಯಕ್ತಿತ್ವದಲ್ಲಿ ಪುರುಷನ ಗಡಸುತನ ಇರುವ ಸಾಧ್ಯತೆಯಿದೆ. ಈ ಜಗತ್ತಿನ ಸ್ತ್ರೀಪುರುಷರಲ್ಲಿ ಪ್ರತಿಯೊಬ್ಬರ ವ್ಯಕ್ತಿತ್ವದಲ್ಲಿಯೂ ಇನ್ನೊಂದು ಲಿಂಗದ ಗುಣವಿದ್ದು; ಸಂಸ್ಕೃತಿಯನ್ನು ರೂಪಿಸುವಲ್ಲಿ ಇಬ್ಬರದೂ ಸಮಪಾಲಿದ್ದು; ಈಗ ರೂಪುಗೊಂಡಿರುವ ಸಂಸ್ಕೃತಿಯಲ್ಲಿ ದ್ವಿಲಿಂಗತ್ವವಿದೆ ಎಂದು ಬೇಂದ್ರೆಯವರು ಹೇಳಿದ್ದಾರೆ. ಇದು ಮನೋವೈಜ್ಞಾನಿಕವಾಗಿಯೂ ಸತ್ಯವಾಗಿದೆ. ಪಾಶ್ಚಾತ್ಯ ಸ್ತ್ರೀಚಿಂತನೆಯಲ್ಲಿ ಪುರುಷಪ್ರಾಬಲ್ಯವನ್ನು ಹತ್ತಿಕ್ಕಿ ಸ್ತ್ರೀಪ್ರಾಬಲ್ಯವನ್ನು ಸ್ಥಾಪಿಸುವ ನಿಲುವನ್ನು ಕಾಣುತ್ತೇವೆ. ಈ ಪ್ರಕ್ರಿಯೆಯಲ್ಲಿ ಪುರುಷ ಸ್ತ್ರೀ ಎಂಬ ಪ್ರತ್ಯೇಕ ಭಾವವಿದೆ. ಬೇಂದ್ರೆಯವರ ಸ್ತ್ರೀ ಚಿಂತನೆಯಲ್ಲಿ - ಸ್ತ್ರೀ ತನ್ನತನವನ್ನು ಹೊಂದಬೇಕಾದರೆ ಪುರುಷನ ವ್ಯಕ್ತಿತ್ವವನ್ನು ನಾಶಮಾಡದೆ; ತನ್ನ ವ್ಯಕ್ತಿತ್ವವನ್ನು ಬೆಳೆಸಿಕೊಂಡು; ಒಬ್ಬರಿಗೊಬ್ಬರು ಹೊಂದಾಣಿಕೆ ಮಾಡಿಕೊಂಡು; ಅವನನ್ನೂ ಉಳಿಸಿ ತಾನೂ ಉಳಿಯಬೇಕು ಎಂಬ ಸಾಮರಸ್ಯ ಭಾವವಿದೆ. ಎರಡು ಲಿಂಗಿಗಳ ಪ್ರತ್ಯೇಕತೆಯನ್ನು ನಾಶಮಾಡದೆ ಅದನ್ನು ಉಳಿಸುತ್ತ; ವಿಪರೀತಕ್ಕೊಯ್ಯದೆ other is other but is also ours ಎಂಬ ಚಿಂತನೆಯನ್ನು ಬೇಂದ್ರೆ ನೀಡಿದ್ದಾರೆ. ಆ ಚಿಂತನೆಯನ್ನು ಹೊಂದಿದ ಸಮರಸತತ್ತ್ವವನ್ನು ತಮ್ಮ ಕಾವ್ಯದಲ್ಲಿ ಸಿದ್ಧಾಂತವಾಗಿಸಿದ್ದಾರೆ.

☆ ☆

ಮನುಷ್ಯನ ಜೈವಿಕ ಸ್ವರೂಪವನ್ನು ಬಿಟ್ಟು ವ್ಯಕ್ತಿತ್ವದ ವಿಕಾಸಕ್ಕೆ ಮಾನ್ಯತೆ ನೀಡಿದ ಬೇಂದ್ರೆಯವರು ಆ ಬಗೆಯ ಚಿಂತನೆಯನ್ನು ತನ್ನನ್ನು ಹೆತ್ತು ಸಾಕಿ ಬೆಳೆಸಿದ ತಾಯಿ ಮತ್ತು

ಅಜ್ಜಿಯರಿಂದ ರೂಢಿಸಿಕೊಂಡಿದ್ದರು. ತನ್ನ ಅಜ್ಜಿಯನ್ನು 'ಸ್ತ್ರೀಮಾತ್ರ ಛಾಯೆಯು ಪುರುಷಾರ್ಥ ಕೆತ್ತಿದ ಮೂರ್ತಿಯದು' ಎಂದು ಬಣ್ಣಿಸುತ್ತ ವ್ಯಕ್ತಿತ್ವದ ವಿಕಾಸಕ್ಕೆ ಮಾನ್ಯತೆ ನೀಡಿ ಪುರುಷಾರ್ಥದ ಮರ್ಮದ ಪರಿಕಲ್ಪನೆಯನ್ನು ಮನಗಾಣಿಸಿದರು. ಸಾಮಾನ್ಯವಾಗಿ ಪುರುಷಪ್ರಧಾನ ಧೋರಣೆಯ ತಂದೆಯ ಹದ್ದಿನಲ್ಲಿ ಬೆಳೆದ ವ್ಯಕ್ತಿ ಶಿಸ್ತಿನಿಂದ ಬೆಳೆಯುವವನು ಎಂಬ ಒಂದು ಅಭಿಪ್ರಾಯವಿದೆ. ಅದಕ್ಕೆ ಭಿನ್ನವಾಗಿ ಬೇಂದ್ರೆಯವರು 'ಹುಲಿಯ ಹಾಲನು ಕುಡಿಸಿ| ತಂತಿಯಲಿ ನಡೆಸಿ' ಶಿಸ್ತನ್ನು ಕಲಿಸಿದ ಅಜ್ಜಿಯ ಹದ್ದು ಬಸ್ತಿನಲ್ಲಿ ಬೆಳೆದು ಜೀವನದಲ್ಲಿ ಶಿಸ್ತನ್ನು ಬೆಳೆಸಿಕೊಂಡು ಆದರ್ಶವನ್ನು ಮೈಗೂಡಿಸಿಕೊಂಡರು. ಅದೇ ಚಿಂತನೆಯನ್ನು ತಮ್ಮ ಸಾಹಿತ್ಯದಲ್ಲಿ ನೀಡಿದರು. ಜೈವಿಕ ಮೂಲವನ್ನು ಆಧರಿಸಿ ಸ್ತ್ರೀಯನ್ನು ಪ್ರತ್ಯೇಕಿಸಿ ಅವಳನ್ನು ಬಾಲ್ಯವಿವಾಹದಲ್ಲಿ ಬಂಧಿಸಿ, ವಿಧವಾ ವಿವಾಹವನ್ನು ಮಾಡದೆ ಅಪಮೌಲ್ಯಗೊಳಿಸಿದ ಸಮಾಜವನ್ನು ಧಿಕ್ಕರಿಸಿ ಅದರ ಹೇಯ ಮುಖವನ್ನು ಕಾವ್ಯದಲ್ಲಿ ಬಯಲುಗೊಳಿಸಿದರು. ಆ ಕೆಟ್ಟ ಪದ್ಧತಿಯನ್ನು ವಿರೋಧಿಸುವ ಆಲೋಚನೆಯು ಜನಮನದಲ್ಲಿ ಮೂಡುವಂತೆ ಮಾಡಿದರು. ಅಂದಿನ ಸಮಾಜದ ಹೀನ ದೃಷ್ಟಿಯನ್ನು ತಪ್ಪೆಂದು ಸಾಧಿಸಲು ಅಂದಿನ ವ್ಯವಸ್ಥೆಯನ್ನು ಶಿಥಿಲಗೊಳಿಸಲು ನಮ್ಮ ಪರಂಪರೆಯ ವೇದ ಉಪನಿಷತ್ತಿನ ಕಾಲದ ಚಿಂತನೆಯಲ್ಲಿ ತೊಡಗಿದರು. ವೇದಕಾಲದ ದಾಂಪತ್ಯ, ವಿವಾಹ, ಸ್ತ್ರೀ ಸಮಾನತೆಯಂತಹ ಮೌಲಿಕ ವಿಚಾರಗಳನ್ನು ತಂದು; ಉಪನಿಷತ್ತಿನ ಕಾಲದ ಸ್ತ್ರೀಯ ಬೌದ್ಧಿಕ ಔನ್ನತ್ಯವನ್ನು ತನ್ನ ಕಾವ್ಯಚಿಂತನೆಯಲ್ಲಿ ಬೆಸೆದು ಸ್ತ್ರೀಪುರುಷರು ಸಮಾನರು ಎಂಬುದನ್ನು ತಮ್ಮ ಕಾವ್ಯ ಚಿಂತನೆಯನ್ನಾಗಿಸುವಲ್ಲಿ ಯಶಸ್ವಿಯಾದರು.

☆ ☆

ಬೇಂದ್ರೆಯವರು ಸ್ತ್ರೀಯ ವ್ಯಕ್ತಿತ್ವ ವಿಕಾಸಗೊಳ್ಳಬೇಕೆಂಬ ಚಿಂತನೆಯನ್ನು ಹೊಂದಿದ್ದರು. ಸ್ತ್ರೀಯು ತನ್ನ ಬೌದ್ಧಿಕ ಕುಶಲತೆಯಿಂದ, ತನ್ನಲ್ಲಡಗಿರುವ ಕಲಾಚಾತುರ್ಯದಿಂದ 'ತಲೆವಾಕೆ, ಪಡೆವಾಕೆ, ಮಿಂಚಿನ ತಂತಿಯ ಮೇಲೆ ನಡೆವಾಕೆ' ಯಾಗಿ ಡೊಂಬರ ಕಲೆಯಲ್ಲಿ ಪರಿಣತಳಾದ ಹೆಣ್ಣಿನಂತೆ ಆಗಬೇಕು. ಕಲೆಯನ್ನು ಆಧರಿಸಿ ಬುದ್ಧಿವಂತಿಕೆಯಿಂದ ಬಾಳ್ವೆ ಮಾಡಬೇಕು. ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳಬಾರದು. ಅವಳು-ರಾಕಾಸುಂದರಿಯಾಗಬೇಕು ಎಂದು ಹೇಳಿದರು. ಅವರು ಗೊಲ್ಲತಿ-ಭಿಕ್ಷುಕಿಯನ್ನು ಅವಳ ಜೀವನ ರೀತಿಯನ್ನು ಸಾಮಾಜಿಕ-ಆರ್ಥಿಕ ತಜ್ಞನಂತೆ ಅಧ್ಯಯನ ಮಾಡಿದರು. ಅವಳು ಚಾಪೆ ಹೆಣೆಯುತ್ತ; ತನ್ನ ಭಿಕ್ಷೆಯ ಅನ್ನ, ಬಕ್ಕರಿಯನ್ನು ಉಳಿಸಿ ಸಂಸಾರ ಶೀಲೆಯಾಗಿ ಬದುಕುವ ರೀತಿಯನ್ನು ಚಿತ್ರಿಸಿ-ಸಮಾಜದ ಅತಿ ಕೆಳಸ್ತರದ ಸ್ತ್ರೀ ವ್ಯಕ್ತಿತ್ವವನ್ನು ತಿಳಿದು ಅವರ ಬದುಕಿನ ಶೀಲವನ್ನು ವಿಶ್ಲೇಷಿಸಿದರು. ಅಂತಹವರ ಜೀವನದಲ್ಲಿ ಪುರುಷನನ್ನು ಮೀರಿಸುವ ಸ್ತ್ರೀಗುಣವನ್ನು ಸೂಕ್ಷ್ಮವಾಗಿ ಅರಿತು ನುಡಿದದ್ದು ಬೇಂದ್ರೆಯವರ ಸ್ತ್ರೀ ಸಮುದಾಯ ಪರವಾದ ಚಿಂತನೆಗೆ ಪುರಾವೆಯಾಗಿದೆ.

ಸ್ತ್ರೀಯು ಎಲ್ಲ ರಂಗದಲ್ಲಿ ಯಶಸ್ವಿಯಾಗಬೇಕೆಂಬ ಚಿಂತನೆಯನ್ನು ಹೊಂದಿದ ಬೇಂದ್ರೆಯವರು ಸ್ತ್ರೀಯರನ್ನು ಜಾಗೃತಿಗೊಳಿಸುವ ವಿಚಾರವನ್ನು ತಮ್ಮ ಲೇಖನ, ಚಿಂತನಾ ವಿಧಾನಗಳಲ್ಲಿ ವ್ಯಕ್ತಪಡಿಸಿದರು. ಸ್ತ್ರೀಯು ತನ್ನ ವೈಯಕ್ತಿಕ ನೋವನ್ನು ಪ್ರಕಟವಾಗಿ ಹೇಳುತ್ತ ಅದನ್ನು ಸಾರ್ವತ್ರಿಕಗೊಳಿಸಬೇಕು. ಅವಳು ಸಾರ್ವತ್ರಿಕ ಬದುಕಿನಲ್ಲಿ ತನ್ನನ್ನು ಗುರುತಿಸಿಕೊಳ್ಳಬೇಕು ಎಂಬ ಮನೋಭಾವವನ್ನು ಹೊಂದಿದ್ದ ಅವರು ಅಂತಹ ಸಮಾಜಪರ

ಚಿಂತನೆಯ ಲೇಖಕಿಯರನ್ನು ಪ್ರೋತ್ಸಾಹಿಸಿದರು. ಅವರಿಗೆ ಸಹೋದರಿಯರಿಲ್ಲದಿದ್ದರೂ ಸಾಹಿತ್ಯಸಹೋದರಿಯರನ್ನು ಪಡೆದು, ಆದರಿಸಿದರು. ಆ ಸಹೋದರಿಯರ ಪ್ರತಿಭೆ, ಉನ್ನತ ಬೌದ್ಧಿಕ ನೆಲೆಯನ್ನು ಕಂಡು ಮೆಚ್ಚಿ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಸಾಹಿತ್ಯಸಹೋದರಿತ್ವದ ಭಾವಕ್ಕೆ ನಾಂದಿ ಹಾಡಿದರು.

☆ ☆

ಬೇಂದ್ರೆಯವರು ಪ್ರತಿಯೊಬ್ಬ ವ್ಯಕ್ತಿಯ ವ್ಯಕ್ತಿತ್ವ ವಿಕಾಸವಾದಾಗಲೇ ಸಮಾಜದ ವಿಕಾಸ ಎಂದು ನಂಬಿದ್ದರು. ಅವರ ಪ್ರಕಾರ ವ್ಯಕ್ತಿತ್ವ ವಿಕಾಸವೆಂಬುವುದು ಇನ್ನೊಬ್ಬರ ವ್ಯಕ್ತಿತ್ವವನ್ನು ಗೌರವಿಸಿ ತಾನು ಬೆಳೆಯುವುದು, ಉಳಿಯುವುದು ಎಂಬುದಾಗಿತ್ತು. ಅವರ ಜೀವನದ ಮತ್ತು ಕಾವ್ಯದ ಸಿದ್ಧಾಂತ ಸಮರಸ ಸಿದ್ಧಾಂತವಾಗಿದೆ. 'ರಸವೆ ಜನನ| ವಿರಸ ಮರಣ| ಸಮರಸವೇ ಜೀವನ'' ಎಂಬ ಅವರ ಜೀವನ ವ್ಯಾಖ್ಯೆ-ಜೀವದ, ವ್ಯಕ್ತಿಯ ವಿಕಸನ ಪಥವನ್ನು ದರ್ಶಿಸುತ್ತದೆ. ಅದರ ಜೀವ ವಿಕಾಸವನ್ನು ಹೀಗೆ ಅರ್ಥೈಸಬಹುದು; ರಸರೂಪಿಯಾದ ತಂದೆತಾಯಿಯಿಂದ ಹುಟ್ಟಿದ ಮಗು, ಸ್ತ್ರೀಪುರುಷ ಎಂಬ ಭಿನ್ನ ಭಾವದಲ್ಲಿ ಪ್ರತ್ಯೇಕವಾದವನು, ಭಿನ್ನ ಲಿಂಗಿಯ ವಿರಸವನ್ನು ಬಿಟ್ಟು -ಪರಸ್ಪರರು ಸಮಾನವೆಂದು ಭಾವಿಸಿ ಸಮರಸದ ಕೂಡುವಿಕೆಯಲ್ಲಿ ಮತ್ತೆ ಪೂರ್ಣವಾಗುವ-ಜೀವನವನ್ನು ಬೆಳಗುವ ಚಿಂತನೆ. ಇದು ಸ್ತ್ರೀ ಪುರುಷ ಸಮಾನತೆಯ ಚಿಂತನವಾಗಿ ಅದೇ ಜೀವನ ಎಂಬುವುದಾಗಿದೆ. ಅದರ ವ್ಯಕ್ತಿ ವಿಕಸನದ ಅರ್ಥ ಹೀಗಿದೆ: ಸ್ತ್ರೀ ಪುರುಷರು ಬಾಳ್ವೆ ಮಾಡುವಾಗ ರಸರೂಪಿಗಳಾಗಿ ಸಖಸಖೀ ಭಾವದಿಂದ ಕೂಡಿರುತ್ತಾರೆ. ಜೀವನದ ಹಲವಾರು ಸಮಸ್ಯೆ ಭಿನ್ನಾಭಿಪ್ರಾಯಗಳಲ್ಲಿ ವಿರಸ ಭಾವ ಉಂಟಾಗಲು, ಅವರು ಅದರ ಕಾರಣವನ್ನು ಶೋಧಿಸುತ್ತ ನಿಜದ ನೆಲೆ ಅರಿಯಲು ಪ್ರಯತ್ನಿಸುತ್ತಾರೆ. ಆ ಶೋಧದಲ್ಲಿ ಹೊಂದಾಣಿಕೆಯ ಸಮರಸ ತತ್ತ್ವವನ್ನು ಅರಿತು ಒಬ್ಬರನ್ನೊಬ್ಬರು ತಿಳಿದು ಬಾಳುವುದು ಅವರ ಬಾಳ್ವೆಯ ಪೂರ್ಣ ವಿಕಾಸವಾದಂತೆ. ಆ ವಿಕಸನವೇ ಜೀವನ. ರಸದಿಂದ ವಿರಸವನ್ನು ಮೀರಿ ಸಮರಸವನ್ನು ಸಾಧಿಸುವುದೇ ಬೇಂದ್ರೆಯವರ ಸಿದ್ಧಾಂತವಾಗಿದೆ. ಈ ಚಿಂತನೆಗೆ ಅವರ ಸಖೀಗೀತ ಕಾವ್ಯವೇ ಪುರಾವೆಯಾಗಿದೆ.

ಬೇಂದ್ರೆಯವರು ವಿವಾಹಿತರಾಗಿ ಬಾಳ್ವೆ ಮಾಡಲು ತೊಡಗಿದನಂತರ ಹೆಂಡತಿಯನ್ನು ತನ್ನ ಗೆಳತಿ ಎಂದು ಭಾವಿಸಿ ಸಖೀ ಎಂದು ಕರೆದು ಸಮಾನ ಭಾವದಿಂದ ನೋಡಿದ್ದಾರೆ. ತಮ್ಮ ಆತ್ಮಕಥೆಯನ್ನು ಕಾವ್ಯದಲ್ಲಿ ನೀಡುತ್ತ ಅದನ್ನು 'ಸಖೀಗೀತ' ಎಂದು ಕರೆದಿದ್ದಾರೆ. ಅಲ್ಲಿ ಆದರ್ಶ ಜೀವಿಯಾದ ಕವಿ - ಬದುಕಿನಲ್ಲಿ ಸೋತಾಗ ಅವನ ಬದುಕನ್ನು ಎತ್ತಿ ಹಿಡಿದು ಅವನು ಬಾಳುವಂತೆ ಮಾಡಿದ ಪತ್ನಿ ಲಕ್ಷ್ಮಿಬಾಯಿಯನ್ನು ವಾಸ್ತವದ ನೆಲೆಯಲ್ಲಿ ಕಂಡು ತನ್ನ ದೋಷವನ್ನು ಒಪ್ಪಿಕೊಳ್ಳುತ್ತ ಸಾಗಿರುವುದು ಅವರ ಆತ್ಮಶೋಧಕ್ಕೆ ಸಾಕ್ಷಿಯಾಗಿದೆ. ಅವರಲ್ಲಿ ಮೂಡಿಬಂದ ವಿರಸ ಭಾವವನ್ನು ಕಂಡು ಅದಕ್ಕೆ ಕಾರಣವನ್ನು ಹುಡುಕುತ್ತ ಅದರ ನಿವಾರಣೆಗೆ ಪ್ರಯತ್ನಿಸಿ ಸಮರಸ ಬಾಳಿನತ್ತ ಸಾಗಿರುವುದು ಕಂಡುಬಂದಿದೆ. ಬೇಂದ್ರೆಯವರಿಗೆ ಜೀವನವೇ ಕಾವ್ಯ ಹಾಗೂ ಕಾವ್ಯವೇ ಜೀವನವಾಗಿದ್ದು, ಜೀವನ ಹಾಗೂ ಕಾವ್ಯಗಳಲ್ಲಿ ಸಾಮರಸ್ಯವನ್ನು ಸಾಧಿಸುವ ಸಿದ್ಧಿಯನ್ನು ಕಾಣುತ್ತೇವೆ. ಹೀಗಾಗಿ ಬೇಂದ್ರೆಯವರ ಜೀವನ ಮತ್ತು ಕಾವ್ಯಸಿದ್ಧಾಂತ ಸಮರಸ ಸಿದ್ಧಾಂತವಾಗಿದೆ.

☆ ☆

ಗಂಡ ಹೆಂಡತಿ ಜೀವ ಸೃಷ್ಟಿ ಕ್ರಿಯೆಯ ಸರಿಸಮನಾದ ಪಾಲುಗಾರರು. ಹಾಗೆಯೇ ಬಾಳಿನಲ್ಲಿಯೂ ಹೊಂದಾಣಿಕೆ, ಸಮರಸಭಾವದಿಂದಿದ್ದು ಜೀವನವನ್ನು ಅರ್ಥಪೂರ್ಣವಾಗಿಸಿಕೊಳ್ಳಬೇಕು. ಅವರಲ್ಲಿ

ಯಾರೂ ಹೆಚ್ಚಿಲ್ಲ, ಯಾರೂ ಕಡಿಮೆಯಿಲ್ಲ. ಪುರುಷ ತಾನೇ ಮೇಲು ಎಂಬುದು ಒಂದು ಭ್ರಮೆ ಎಂದು ಬೇಂದ್ರೆಯವರು ಆ ವಾದವನ್ನು ಶಿಥಿಲಗೊಳಿಸುತ್ತ 'ಕೂಡಿರಲಿ ಬಾಳು ಇಡಿಗಾಳಿನಂತೆ' ಎಂಬ ಹಿರಿದಾದ ಚಿಂತನೆಯನ್ನು ನೀಡಿದರು. ಆ ಚಿಂತನೆಯ ಮೂಲ ಪ್ರಾಚೀನ ಉಪನಿಷತ್ತಿನಲ್ಲಿದ್ದು ಅದರ ಸರಿಜೋಡಿಕೆಯನ್ನು ಇಂದಿನ ಚಿಂತನೆಗೆ ತಂದು ಪುರುಷ ಸ್ತ್ರೀ ಸಮಾನತೆಯ ಸಂಬಂಧದ ಆಧುನಿಕ ವೈಜ್ಞಾನಿಕ ಚಿಂತನೆಗೆ ಅನುವು ಮಾಡಿಕೊಟ್ಟರು. ಅವರ ಕಾಲಮಾನದ ಪುರುಷಕೇಂದ್ರಿತ ಪ್ರಧಾನವಾಹಿನಿಯನ್ನು ತಮ್ಮ ಸ್ಪಷ್ಟ ಆಲೋಚನಾ ಸರಣಿಯಿಂದ ಶಿಥಿಲಗೊಳಿಸಿ ಸ್ತ್ರೀ ಪುರುಷ ಸಮಾನ ಸಂಸ್ಕೃತಿಯನ್ನು ಪುನರುಜ್ಜೀವನಗೊಳಿಸುವಲ್ಲಿ ಕಾರ್ಯಶೀಲರಾಗಿದ್ದು ಅವರ ಕಾವ್ಯ ವಿಶೇಷವಾಗಿದೆ.

ಸ್ತ್ರೀಯು ತನ್ನ ಕೌಟುಂಬಿಕ ಚೌಕಟ್ಟಿನಲ್ಲಿದ್ದು ಸಮಾಜ ಮುಖಿಯಾಗಿ ತನ್ನ ವ್ಯಕ್ತಿತ್ವವನ್ನು ವಿಕಾಸಗೊಳಿಸಿಕೊಂಡಾಗ ಪಿತೃಪ್ರಧಾನ ವ್ಯವಸ್ಥೆ ತಾನೇ ಕುಸಿಯುತ್ತದೆ ಎಂಬುದನ್ನು 'ಹೊಸ ಸಂಸಾರ' ನಾಟಕದಲ್ಲಿ ಮಂದಾಕಿನಿಯ ಪಾತ್ರದ ಮುಖಾಂತರ ಬೇಂದ್ರೆಯವರು ಚಿತ್ರಿಸಿದರು. ಸ್ತ್ರೀಯಾತ್ಮಕತೆಯ ಶೋಧ ಎಂಬುದು ಅವಳ ಬೌದ್ಧಿಕ ಚಿಂತನೆಯಲ್ಲಿ ಪುರುಷನಿಗೆ ಸರಿಸಮನಾಗಿ ವಿಕಾಸ ಹೊಂದಿದ ಸ್ತ್ರೀ ಚೇತನದ ಅರಿವು. ಆ ಬಗೆಯ ಸ್ತ್ರೀಯ ಬೌದ್ಧಿಕ ಔನ್ನತ್ಯವನ್ನು ಶೋಧಿಸಿ ಅಭಿವ್ಯಕ್ತಿಸುವ ಕಲೆ - ಆ ನೆಲೆಯನ್ನು ತಲುಪಿದ ವ್ಯಕ್ತಿಗಳಿಗೆ ಮಾತ್ರ ಸಾಧ್ಯ. ಅದನ್ನು ಬೇಂದ್ರೆಯವರು 'ನಿರಾಭರಣ ಸುಂದರಿ'ಯಲ್ಲಿ ಸಮರ್ಥವಾಗಿ ಅಭಿವ್ಯಕ್ತಿಸಿದರು. ಆ ಕಥೆಯಲ್ಲಿ ಬೌದ್ಧಿಕ ಮತ್ತು ಆಧ್ಯಾತ್ಮಿಕ ಪರಿಣತಿಯ 'ಹತ್ತೊಂಬತ್ತನೇ ತೀರ್ಥಂಕರಳಾದ ಮಲ್ಲಿ'ಯಾಗಿ ದರ್ಶಿಸಿ, ಸ್ತ್ರೀ ಪುರುಷನಿಗೆ ಎಲ್ಲ ರೀತಿಯಲ್ಲಿಯೂ ಸಮ ಎಂದು ಹೇಳಿದರು.

ಬೇಂದ್ರೆಯವರ ಸೃಜನಶೀಲಗುಣ ಅವರ ನಾರೀಭಾವದ ಫಲವಾಗಿದೆ. ಹೆಣ್ಣು ಫಲವತಿಯಾಗಿ ಮಗುವನ್ನು ಪಡೆಯುವ ಅನುಭವ ಅವಳಲ್ಲಿ ಅಲೌಕಿಕ ಶಕ್ತಿಯಾಗಿ ಅರಳುತ್ತದೆ. ತಾಯಿತನ ಹೆಣ್ಣಿನಲ್ಲಿ ಉಂಟುಮಾಡುವ ಇಂದ್ರಿಯಾತೀತವಾದ ಅನುಭವವನ್ನು ಇಂದ್ರಿಯಾನುಭವವನ್ನಾಗಿಸಿ 'ಅಲೌಕಿಕ' ಕವನದಲ್ಲಿ ಬಣ್ಣಿಸಿರುವ ಬೇಂದ್ರೆಯವರ ರೂಪಕಶಕ್ತಿ ಕಾವ್ಯಸೃಷ್ಟಿಯ ಅಚ್ಚರಿಯಾಗಿದೆ. 'ಅಲೌಕಿಕ'ದ ಗೂಢದಂತೆ ಸ್ತ್ರೀಯ ಅಲೌಕಿಕತ್ವವು ಗೂಢವಾಗಿ ಅವಳಿಗೆ ಮಾತ್ರ ಲಭಿಸುವಂತಹದಾಗಿದ್ದು, ಪುರುಷನಿಗೆ ಅದು ಅಲಭ್ಯವಾಗಿ ಜೀವೋತ್ಪತ್ತಿಯಲ್ಲಿ ಅಲೌಕಿಕತ್ವದ ಅರಿವಿನಲ್ಲಿ ಸ್ತ್ರೀ ಪುರುಷನಿಗಿಂತ ಉನ್ನತ ಸ್ತರದಲ್ಲಿರುವುದು ಬೇಂದ್ರೆ ಕಾವ್ಯ ದರ್ಶಿಸಿದ ಚಿಂತನೆಯಾಗಿದೆ. ಬೇಂದ್ರೆಯವರು ಈ ಲೋಕದ ಬದುಕಿನಲ್ಲಿ ಪೂರ್ಣ ಬದಲಾಗಬಲ್ಲ ಚೇತನ ಸ್ತ್ರೀ ಎಂದು 'ಹಳೆಯ ಗೆಣೆಯರು' ನಾಟಕದಲ್ಲಿ ಪ್ರತಿಪಾದಿಸಿ ಸ್ತ್ರೀಯಾತ್ಮಕತೆಯ ವಿಕಸನವನ್ನು ವಿಶ್ಲೇಷಿಸಿದ್ದಾರೆ.

☆ ☆

ಬೇಂದ್ರೆಯವರ ಕಾವ್ಯ ಹಲವಾರು ಭಾವಗಳ ವಿಭಿನ್ನ ಚಿತ್ರಣಗಳಿಂದ ವಿಕಾಸಗೊಳ್ಳುತ್ತ ಸಾಗಿ ಆತ್ಮಶೋಧನೆಗೆ ತೊಡಗಿದ ಆತ್ಮಶೋಧಕ ಭಾವಕಾವ್ಯವಾಗಿದೆ. ಅವರು ಆ ಆತ್ಮಶೋಧಕ್ಕೆ ತಾಯಿಯನ್ನೆ ಕೇಂದ್ರವಾಗಿಟ್ಟುಕೊಂಡು. '೧. ದೇಹ ಕೊಟ್ಟ ತಾಯಿ; ೨. ಮಾತು ಕಲಿಸಿದ ತಾಯಿ; ೩. ಸಂಸ್ಕಾರ ಸಂಪನ್ನಮಾಡಿದ ತಾಯಿ; ೪.ಭೂಮಂಡಲದ ಮಾನವತೆಯಲ್ಲಿ ನೆಲೆಸಿದ ತಾಯಿ; ೫. ವಿಶ್ವೋದರದಲ್ಲಿ ಧರಿಸಿದ ತಾಯಿ. ಈ ಐದು ಐದೆಯರು ದತ್ತನ ತಾಯಂದಿರು. ಇದು ಪಂಚಕೋಶಗರ್ಭ.'[1] ಎಂದು ಕಲ್ಪಿಸಿದ ರೀತಿಯಲ್ಲಿ ಮಾತೆಯ ವಿಶ್ವಚೇತನದ ಅರಿವಿನ ಬೆಳವಣಿಗೆಗೆ ಹಂತಹಂತವಾಗಿ ಸಾಗಿರುವುದು ಕಂಡುಬಂದಿದೆ. ಅವರು ತನಗೆ ತಾಯಿಯೇ ಸ್ಫೂರ್ತಿಯ ಸೆಲೆ; ತಾಯಿಯೇ ಶ್ರೇಷ್ಠ ಎಂದು ತಮ್ಮ ಕಾವ್ಯದಲ್ಲಿ ಹೇಳುತ್ತ ಜೀವಕೊಟ್ಟ ತಾಯಿಯು ಮಗುವಿಗೆ ಮಾತುಕಲಿಸಿ ಅವನಿಗೆ ಎರಡನೇ ಹುಟ್ಟನ್ನು ನೀಡುತ್ತಾಳೆ. ಮಗುವಿಗೆ

ಮಾತು ಬರುವುದು ದ್ವಿಜತ್ವ ಎಂಬ ವಿಶ್ವಚಿಂತನೆಯನ್ನು ತಾಯಿಯ ಅರಿವಿನ ಮೂಲಕ ನೀಡಿದ್ದಾರೆ. ಇದು ಸಾಂಪ್ರದಾಯಿಕ ವೈದಿಕ ನಿಲುವನ್ನು ಮೀರಿದ ಚಿಂತನೆಯಾಗಿದೆ.

ಬೇಂದ್ರೆಯವರು ಸಾಮಾಜಿಕ ಬದುಕಿನ ಬಂಧ ಸಂಬಂಧದ ಶೋಧಕ್ಕೆ ತೊಡಗುತ್ತ ಅಲ್ಲಿಯ ಕರುಳಿನ ತೊಡಕನ್ನು ಬಿಡಿಸುತ್ತ - ಅದು ಬಿಡಿಸಿಕೊಂಡು ತನ್ನ ಅಂತರಾಳವನ್ನು ದರ್ಶಿಸಿದಾಗ - ಆನಂದಮಯವಾಗಿ ಅದನ್ನೇ ತನ್ನ ಒಡವೆಯಂತೆ ಧರಿಸಿ ಕಾವ್ಯದ ಉತ್‌ಯೋಗವನ್ನು ಸಾಧಿಸಿದ್ದಾರೆ. ಅದು ಅವರ ಜೀವನದ ಮತ್ತು ಕಾವ್ಯದ ಕರುಳಿನ, ಹಳಹಳಿಕೆಯ ಹದುಳದ ಬಾಂಧವ್ಯವಾಗಿದೆ. ಅದೇ ಅವರ ಜೀವನ ಮತ್ತು ಕಾವ್ಯದ ಸಿದ್ಧಾಂತವಾಗಿದೆ.

'ಕರುಳಿನ ತೊಡಕನು ಕುಸುರಾಗಿ ಬಿಡಿಸಿಟ್ಟು
ತೊಡವಾಗಿ ತಿರುಗೊಮ್ಮೆ ನಾ ಧರಿಸಲೆ.'

ಎಂದು ಪತ್ನಿಯನ್ನು ಗೆಳತಿಯಾಗಿ ಭಾವಿಸುತ್ತ ಸಖೀಗೀತದಲ್ಲಿ ಕೇಳಿರುವ ನುಡಿಯಲ್ಲಿ ಕಾವ್ಯಸಮಾಧಾನ ನೀಡುವ ಚಿಂತನೆಯಿದೆ. ಅದು ತಾಯಿಮಕ್ಕಳ ಸಂಬಂಧದಂತೆ ಕರುಳಿನ ತೊಡಕು. ಆ ಸಮಾಧಾನದ ನೆಲೆ ಸ್ತ್ರೀಶಕ್ತಿಯಾದ ತಾಯಿಯಲ್ಲಿದೆ. ಆ ಶಕ್ತಿಯ ರೂಪವೆ ಪತ್ನಿಯಾಗಿ, ಸಹೋದರಿಯಾಗಿ, ಮಗಳಾಗಿ ಕರುಳ ಬಾಂಧವ್ಯವನ್ನು ಬೆಳೆಸುತ್ತ ಸಾಗಿದೆ. ಅದು ನುಡಿಗೆ ಸಿಗದ, ಮನಸ್ಸಿನ ಅಂತರಾಳದ ನಲ್ಮೆ, ಜೀವದ ಲವಲವಿಕೆ, ಅದು ಮಾತೃಭಾವ. ಅದು 'ಮುಟ್ಟದ ಮಾಟದ | ಹುಟ್ಟದ ಹುಟ್ಟಿಗೆ | ಜೇನಿನ ಥಳಿ ಮಳಿ | ಸನಿಹ ಸನಿ|' ಎಂಬುವಂತಹದು. ಅದನ್ನು ತೊಡವಾಗಿ ಧರಿಸುವ 'ಹಿಗ್ಗ ಬೀರಿ ಹಿಗ್ಗಲಿತ್ತು ತನ್ನ ತಾನೆ ಪ್ರೀತಾ' ಎಂಬ ಕರುಳಿನ ಪ್ರೀತಿ. ಅದೇ ಕಾವ್ಯೋದ್ಯೋಗ ಎಂಬುದು ಅವರ ಸಿದ್ಧಾಂತ.

ಬೇಂದ್ರೆಯವರಿಗೆ ಈ ಜಗತ್ತು ಜೀವಂತ ಚೇತನ. ನಮ್ಮ ಸೃಷ್ಟಿಯ, ಅರಿವಿನ ಮೂಲಸೆಲೆಯಾದ ಭೂಮಿ material ಆದರೂ life personality (ಉಸಿರಿದ್ದೊಡಲು) ಎಂಬುದು ಅವರ ಭೂಮಿತತ್ತ್ವ. ವಸ್ತು ಎಂದು ನೋಡುವ ಮಾತು ಬೇರೆ. ವ್ಯಕ್ತಿ ಜೀವಂತಿಕೆ ಎಂಬುದು ಬೇರೆ. ಭೂಮಿಯನ್ನು ವ್ಯಕ್ತಿ ಎಂದು ಹೇಳಿ ಎಲ್ಲರಿಗೂ ಎಚ್ಚರಿಸುತ್ತ ಇಡೀ ಮಾನವ ಕುಲದ ಆಶಯ ಭೂಮಿಯ ಉಳಿವಿನಲ್ಲಿದೆ ಎಂದು ತಮ್ಮ ಕಾವ್ಯದಲ್ಲಿ ಪ್ರತಿಪಾದಿಸಿದ್ದಾರೆ. 'ಒಡವ್ಯಲ್ಲೋ ಮಗನೆ ಉಸಿರಿದ್ದೊಡಲಂತಾಳೋ' ಎಂದು ಭೂಮಿಯ ನೋವನ್ನು ಕಾವ್ಯವಾಗಿಸಿ ಹಾಡಿರುವಲ್ಲಿ ಮನುಜ ಕುಲದ ಉಳಿವಿನ ಚಿಂತೆಯಿದೆ. ಭೂಮಿಯ ಮಗನಾದ ಮಾನವ ಅವಳನ್ನು ತಾಯಿಯೆಂದು ತಿಳಿದು ನಡೆಯದೆ - ತಾನು ಪೃಥ್ವಿಯ ಒಡೆಯ, ದೊರೆಯೆಂದು 'ಪುಂಡಾಗಿ ಪುಂಡರು ಅಂಡಲೆಯಲು ನಿನ್ನ' ಅಂತಹವರಿಗೆ 'ನೆತ್ತರು ಒರೆಹಚ್ಚಿ ನೋಡಿರುವೆ' -ಎಂದು ತಾಯಿಗ್ಗಂಡ ಪುರುಷನ ಹೀನವರ್ತನೆಯನ್ನು ಭೂಮಿತಾಯಿಯ ಕಾವ್ಯದಲ್ಲಿ ಕಠೋರ ಸತ್ಯವಾಗಿ ನುಡಿದಿದ್ದಾರೆ. 'ನಿನ್ನ ತೇಜದ ಮುಂದೆ ರಾಜ ತೇಜವು ಕೂಸು!' ಎಂದು ನುಡಿದು ಮಾನವನ ಅಲ್ಪತೆಯನ್ನೂ ಭೂಮಿಯ ಪ್ರಕೃತಿಯ ವಿಶ್ವದ ಭೂಮವನ್ನೂ ದರ್ಶಿಸಿದ್ದಾರೆ.

☆ ☆

ಬೇಂದ್ರೆಯವರು ಅಖಂಡ ಬದುಕನ್ನು ಹಿಡಿಯುವ ಪ್ರಯತ್ನವನ್ನು ಮಾಡಿದ್ದರಿಂದ ಅವರ ಒಂದೊಂದು ಕವನದಲ್ಲಿಯೂ ಹಲವು ನೆಲೆಯ ಚಿಂತನೆಗಳು ಒಡಮೂಡಿ ಬಂದಿವೆ. ಅದು ಸಮಗ್ರವನ್ನು ಏಕದಲ್ಲಿ ಕಾಣಲಾಗದ ಕ್ಷುಲ್ಲಕ ಮನಸ್ಸುಗಳಿಗೆ ಭಿನ್ನ ಭಿನ್ನ ಭಾವವಾಗಿ ಕಂಡಿದೆ. 'ನೂರು ಮರ ನೂರು ಸ್ವರ| ಒಂದೊಂದು ಅತಿ ಮಧುರ| ಬಂಧವಿರದ ಬಂಧುರ| ಸ್ವಚ್ಛಂದ ಸುಂದರ'ದಂತೆ - ತುಂಬೆ ಹೂವಿನ ಸೊಬಗು ತಾವರೆಯ ಬೆಳಗು ಒಂದೇ ಎಂದು ಅರಿತ ಅವರು ತುಂಬಿ ಬಂದ ಭಾವದಲ್ಲಿ ಹಾಡಿ - 'ಗಾಳಿ

ಕೆನೀಲೇನ ಮಾಡಿದ್ವಾರ ತಾನ' ಎಂಬ ಚಿಟ್ಟೆಯ ಸೊಬಗಿನ ಪೂರ್ಣ ವಿಕಾಸ ಹೊಂದಿದ 'ಬೆಳಕಿಗಿಂತ ಬೆಳ್ಳಗೆ' ಇರುವ ದೇಶಕಾಲಾತೀತವಾದ ಚಿಂತನೆಯನ್ನು - ತಮ್ಮ ಕಾವ್ಯದಲ್ಲಿ ನೀಡಿದರು. ಆ ಚಿಂತನೆಯಲ್ಲಿ ವಿಷಯವೈವಿಧ್ಯದಂತೆ ಛಂದೋ ವೈವಿಧ್ಯವಿದ್ದು; ದೇಶಿ ಮತ್ತು ಶಿಷ್ಟ ಬದುಕು ಹಾಗೂ ಭಾಷೆಯ ಸವಿಯರಿತ ಅವರು ಅದನ್ನು ಸಮರ್ಥವಾಗಿ ಅಭಿವ್ಯಕ್ತಿಸಿದರು.

ಬೇಂದ್ರೆಯವರು ಸಾವಿಗಿಂತ ಬಾಳು ಮೇಲು ಎಂಬ ಜೀವನ ಸಿದ್ಧಾಂತವನ್ನು ನೀಡಿದ್ದಾರೆ. ಅವರು ತಮ್ಮ ಜೀವನದಲ್ಲಿ ದಾರುಣ ಬದುಕನ್ನು ಸಾಗಿಸುತ್ತಿದ್ದಾಗಲೂ ಜೀವನವಿಮುಖರಾಗದೆ ಅದನ್ನು ಎದುರಿಸಿ ಸಾಗಿರುವುದು ಕಂಡುಬಂದಿದೆ. ಅದೇ ಬಗೆಯ ಚಿಂತನೆ ಅವರ ಕಾವ್ಯ, ನಾಟಕ, ಕಥೆಗಳಲ್ಲಿದೆ. ಅವರ ಸಾಹಿತ್ಯ ಜೀವಪರವಾಗಿದೆ. ಅವರ 'ಏಕಾಕಿನೀ' ಕಥೆ ಜೀವಪರ ನಿಲುವಿಗೆ ಬೆಳಕಿನಂತೆ ಕನ್ನಡ ಕಥಾ ಸಾಹಿತ್ಯದಲ್ಲಿ ಬೆಳಗುತ್ತಿದೆ. ದೆವ್ವದ ಮನೆಯ ಸತ್ಯಪ್ಪ ದೆವ್ವದ ಭಾವದಿಂದ ಹೊರಬಂದು ಸತ್ಯದ ಬೆಳಕಿನಲ್ಲಿ ಜೀವನದ ಬೆಳಕಿನ ಮುಖ ಕಾಣುತ್ತಿದ್ದಾನೆ. ಇಡೀ 'ಹೊಸ ಸಂಸಾರ' ದ ಪಾತ್ರಗಳು ಜೀವನದ ಉಲ್ಲಾಸದಲ್ಲಿವೆ. ಅವರ ಕಾವ್ಯ 'ಜೀವಂಬೋದು ಮಕ್ಕಳ ನೋಟ' ಎಂಬ ಜೀವ ದೃಷ್ಟಿಯಲ್ಲಿದೆ.

☆ ☆

ಸ್ತ್ರೀಯರು ಮಾನವನನ್ನು ರೂಪಿಸುತ್ತ, ಸಂಸ್ಕೃತಿಯನ್ನು ಸೃಷ್ಟಿಸುತ್ತ, ಗರ್ಭಧಾರಣಾ ಶಕ್ತಿಯಿಂದ ಪುರುಷನಿಗಿಂತ ಮೇಲಾಗಿದ್ದಾರೆ. ಇದನ್ನು ತಿಳಿದೂ ಗಂಡಸರು ಪುರುಷಾಧಿಕ್ಯ ಮನೋಭಾವದಿಂದ ವರ್ತಿಸುವುದು ಸರಿಯಲ್ಲ. ಪತಿಪತ್ನಿಯರು 'ನಾನೀಗ ನುಡಿನುಂಗಿ ತಾನೀನ ತಾನೆ ತಾ| ತಾನಾಗಿ ತನನನ ಬಂದ್ಹಾಂಗ' ಸರಿಸಮಾನತೆಯ ಸಮರಸ ಭಾವದಲ್ಲಿ ನಡೆಯಬೇಕು. ಆಗ ಅವರ ಜೀವನ 'ಜುಮ್ ಜುಮು ರುಮುಜುಮು ಗುಂಗುಣು ದುಮುದುಮು| ನಾದದ ನದಿಯೊಂದು ನಡೆದ್ಹಾಂಗ' ನಾದಮಯವಾಗಿರುತ್ತದೆ. ಸ್ತ್ರೀಪುರುಷರು ಭಿನ್ನರೆಂಬ ಭಾವದಲ್ಲಿ, ಮೇಲು ಕೀಳೆಂಬ ಅಹಂನಲ್ಲಿ ದಹಿಸಿ ಹೋಗಬಾರದು. ಅವರಲ್ಲಿ ಪ್ರೇಮ ಪಲ್ಲವಿಸಬೇಕು. ಅದು ಕೊಳಲಿನ ದನಿಯಂತೆ ಮಧುರ ಭಾವವನ್ನುಂಟುಮಾಡಿ ಅವರಲ್ಲಿ ಮಧುವಾಗಿ ನೆಲಸಬೇಕು. ಹಾಗೆ ಪ್ರತಿ ಕುಟುಂಬದಲ್ಲಿ ಸುಮಧುರ ಭಾವ ನೆಲಸಿದಾಗ ಲೋಕಕಲ್ಯಾಣವಾಗುತ್ತದೆ ಎಂಬುದು ಬೇಂದ್ರೆಯವರ ಕಾವ್ಯಸಿದ್ಧಾಂತವಾಗಿದೆ. ಸ್ತ್ರೀ ಪುರುಷರ ಮನೋಭಾವದಲ್ಲಿ ಹೃದಯ ವಿವೇಕದ ವಿಕಾಸವಾಗಬೇಕು ಎಂಬುದು ಬೇಂದ್ರೆಕಾವ್ಯದ ಸ್ಥಾಯಿ ಚಿಂತನೆಯಾಗಿದೆ.

'ಹೃದಯ ವಿವೇಕವೇ - ಆತ್ಮಖ್ಯಾತಿ
ಬುದ್ಧಿಯ ವಿಮರ್ಶೆಯೇ - ಸುಳ್ಳು ಸಾಕ್ಷಿ
ನರಿಗೆ ಎಟುಕದ ದ್ರಾಕ್ಷಿ
ತಿಳಿದಿರಲೆ ಕಾಲ ಪಕ್ಷಿ'[2]

**ಸಂಖ್ಯಾ ಟಿಪ್ಪಣಿಗಳು**

1) ದ.ರಾ.ಬೇಂದ್ರೆ, ಸಾಹಿತ್ಯದ ವಿರಾಟ್‌ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ, 1974ಪು. 50.
2) ದ.ರಾ.ಬೇಂದ್ರೆ, ಕಾವ್ಯವೈಖರಿ, ಶ್ರೀಮಾತಾ ಪ್ರಕಾಶನ, ಧಾರವಾಡ, 1982, ಪು. 34.

# ಅನುಬಂಧ ಒಂದು

ಮೈಸೂರು

ಪತ್ರ ೧ ತಾ ೧೩-೧-೧೯೯೫

ಆದರಣೀಯ ಗುರು

ಶ್ರೀ ಕೀರ್ತಿನಾಥ ಕುರ್ತಕೋಟಿ ಅವರಿಗೆ ಅನಂತ ನಮಸ್ಕಾರಗಳು.

ನಾನು ಬೇಂದ್ರೆ ಅಭಿಮಾನಿ ಮತ್ತು ಬೇಂದ್ರೆ ಕಾವ್ಯಾಭ್ಯಾಸಿ. ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಬೇಂದ್ರೆ ಕವನ ವಾಚನ ಸ್ಪರ್ಧೆ ಏರ್ಪಡಿಸಿ ಬೇಂದ್ರೆ ಕೃತಿಗಳನ್ನು ಬಹುಮಾನವಾಗಿ ನೀಡುವುದು ನನ್ನ ಹವ್ಯಾಸ. ಬೇಂದ್ರೆ ಕಾವ್ಯ ಕುರಿತು ತಾವು ರಚಿಸಿರುವ ವಿಮರ್ಶಾ ಕೃತಿಗಳಿಂದ ಬೇಂದ್ರೆ ಕಾವ್ಯಾಭ್ಯಾಸವನ್ನು ಅರ್ಥಪೂರ್ಣವಾಗಿಸಿಕೊಂಡಿರುವೆನು. ಜಾನಪದ ಕಲೆ 'ಕಂಸಾಳೆ'ಯಲ್ಲಿ ಬೇಂದ್ರೆ ಕಾವ್ಯವನ್ನು ತಾ. ೨೬-೧-೯೫ ರಂದು ' ಧ್ವನ್ಯಾಲೋಕ', ಮೈಸೂರಿನಲ್ಲಿ ಪ್ರದರ್ಶಿಸಿರುವೆನು. ಇದು ಈ ದಿಸೆಯಲ್ಲಿ ಮೊದಲ ಪ್ರಯತ್ನವಾಗಿದೆ.

ನನ್ನ ಅಭ್ಯಾಸದ ಸ್ಪಷ್ಟತೆಗಾಗಿ ಡಾ. ವಾಮನ ಬೇಂದ್ರೆ ಅವರಿಂದ ತಮ್ಮ ವಿಳಾಸ ಪಡೆದು ಈ ಪತ್ರ ಬರೆಯುತ್ತಿರುವೆನು.

ನಾನು ಮನೋಹರ ಗ್ರಂಥಮಾಲಾ ಧಾರವಾಡದ ಪುಟಬಂಗಾರ ಸಂಪುಟ ೫, 'ಶ್ರಾವಣ ಪ್ರತಿಭೆ'ಯನ್ನು ಅಭ್ಯಾಸ ಮಾಡುವಾಗ, ಬೇಂದ್ರೆ ಅವರ 'ಅಲೌಕಿಕ' ಕವನ ಕುರಿತ ತಮ್ಮ ವಿಮರ್ಶೆಯನ್ನು ಅಭ್ಯಾಸ ಮಾಡಿದೆನು. ಈ ಕವನದ ಮೊದಲ ಚರಣದ ಕೊನೆಯ ಸಾಲು : 'ನನ್ನ ಮಾನಸದ ಮದಗವೆ', ಎಂದಿದೆ.

ಈ ಕವನ ವಿಮರ್ಶಿಸುತ್ತ, ತಾವು ಪುಟಬಂಗಾರ ೫ ರ ಪುಟ ೪೮ರಲ್ಲಿ ತಾಯಿ ಮತ್ತು ಮಗುವಿನ ಸಂಬಂಧದಲ್ಲಿಯ ರಹಸ್ಯಮಯತೆಯನ್ನು ಈ ಕವಿತೆಯಲ್ಲಿ ನಿರೂಪಿಸಿದ್ದೀರಿ. ಮಗು ತಾಯಿಯ 'ಮಾನಸದ ಮದಗಜ' ನಿಜ, ಆದರೂ ಮಗು ಅವಳಿಗೆ ಒಡೆಯಲು ಬಾರದ ಒಡಪಿನಂತೆ ಮತ್ತು ಬಿಡಿಸಲು ಬಾರದ ತೊಡಕಿನಂತೆ, ಎಂದು ವಿಮರ್ಶಿಸಿರುವಿರಿ.

"ಮಗು ತಾಯಿಯ 'ಮಾನಸದ ಮದಗಜ'ನಿಜ", ಎಂಬ ನಿಮ್ಮ ಮಾತು ಈ ಕವನದ ಭಾವನೆಗೆ ವ್ಯತಿರಿಕ್ತವಾಗಿದೆ. ಕವಿ ಬೇಂದ್ರೆ, 'ನನ್ನ ಮಾನಸದ ಮದಗವೆ' ಎಂದಿದ್ದಾರೆ. ಇದು ತಾಯಿ ತನ್ನ ಮಗುವನ್ನು ಕುರಿತು ವ್ಯಕ್ತಪಡಿಸಿದ ಬೇಂದ್ರೆ ಪ್ರತಿಭೆಯ ಅಪೂರ್ವ ರೂಪಕ.

ರೆ|| ಎಫ್. ಕಿಟೆಲ್ ಅವರ ಕನ್ನಡ ಇಂಗ್ಲಿಷ್ ಡಿಕ್ಷನರಿ, ಮುದ್ರಣ, ೧೯೭೦ ರ ಪುಟ ಸಂಖ್ಯೆ ೧೧೯೮ ರಲ್ಲಿ 'ಮದಗ' ಪದದ ಅರ್ಥ ಈ ರೀತಿ ಇದೆ : ಮದಗ Madaga = ಮದಗು A sluice, a flood gate.

ನಾನು ಕೆ.ಆರ್.ನಗರದ ನನ್ನ ಸ್ನೇಹಿತನನ್ನು 'ಮದಗ' ಪದದ ಅರ್ಥ ಕೇಳಿದಾಗ 'ಕೆರೆತುಂಬಿ ಹರಿದು ಹೊರಚೆಲ್ಲಿದ ತೂಬಿನ ನೀರು' ಎಂದು ಹೇಳಿದನು.

'ನನ್ನ ಮಾನಸದ ಮದಗವೆ' ಎಂದಾಗ ತಾಯಿ ತನ್ನ ಮಗುವನ್ನು ಕುರಿತು, ತನ್ನ ಮನ ಹಾಗೂ ಜೀವ ತುಂಬಿ ಹರಿದ ಭಾವ ವ್ಯಕ್ತವಾಗಿದೆ. ಅವಳ ಚೇತನವಾದ, ಅವಳ ರೂಹು ಆದ, ಅವಳ ಜೀವದ ಭಾಗವಾದ, ಅವಳ ಒಡಲಿಂದ ಹೊರಬಂದ - ಅವಳೇ ಆದ ಮದಗ.

ಈ ಕಾರಣ "ಮಗು ತಾಯಿಯ 'ಮಾನಸದ ಮದಗಜ' ನಿಜ, " ಎಂಬ ತಮ್ಮ ಮಾತು ಸರಿ ಅಲ್ಲವೆನಿಸುತ್ತದೆ. ಇಲ್ಲಿ ಮಗು ಮಾನಸದ ಮದಗಜ ಅಲ್ಲ. 'ಮಾನಸದ ಮದಗ' ಎಂಬುದು ನಿಜ, ಎಂಬುದು ನನ್ನ ಅಭಿಪ್ರಾಯ.

ತಮ್ಮ ವಿಮರ್ಶಾಕೃತಿಯಿಂದ ಬೇಂದ್ರೆಯನ್ನು ಅರಿಯಲು ಪ್ರಯತ್ನಿಸುತ್ತಿರುವ, ನಾನು ನೀಡಿರುವ ಈ ಅಭಿಪ್ರಾಯ ಸರಿಯೇ ಎಂಬುದನ್ನು ತಿಳಿಸಿರಿ.

(ಇದರ ಜೊತೆಗೆ ಪುಟಬಂಗಾರ -೫ರ ಪುಟ ೪೭, ೪೮ರ ಜೆರಾಕ್ಸ್ ಪ್ರತಿ ಲಗತ್ತಿಸಿರುವೆ)

ಇತಿ ತಮ್ಮ ವಿಶ್ವಾಸಿ,

**ಜಿ. ಕೃಷ್ಣಪ್ಪ.**

**ಪತ್ರ ೨** ಧಾರವಾಡ

೨೨-೨-೧೯೫೫

ಪ್ರಿಯ ಕೃಷ್ಣಪ್ಪನವರಿಗೆ

ಸಪ್ರೇಮ ವಂದನೆಗಳು. ನಿಮ್ಮ ಪತ್ರ ಕೈಗೆ ಬಂದು ಬಹಳ ದಿನಗಳಾದವು. ಆದರೆ ಉತ್ತರ ಬರೆಯಲು, ನನ್ನ ಅನಾರೋಗ್ಯದ ಮೂಲಕ ತಡವಾಗಿದೆ. ಕ್ಷಮಿಸಬೇಕು. ನಿಮ್ಮ ಪತ್ರದ ತಿರುಳು ಏನೆಂಬುದು ಗೊತ್ತಾಯಿತು. 'ಮಾನಸದ ಮದಗವೆ' ಇದ್ದದ್ದನ್ನು 'ಮಾನಸದ ಮದಗಜವೆ' ಎಂದು ತಪ್ಪಾಗಿ ಓದಿಕೊಂಡು ಅರ್ಥವಿಸಲು ಪ್ರಯತ್ನ ಪಟ್ಟಿದ್ದೇನೆ. ನೀವು ಈ ತಪ್ಪನ್ನು ಹುಡುಕಿ ಗಮನಕ್ಕೆ ತಂದುಕೊಟ್ಟದ್ದಕ್ಕಾಗಿ ನಾನು ಕೃತಜ್ಞನಾಗಿದ್ದೇನೆ. ತಪ್ಪಾಗಿರುವುದರಿಂದ ಒಪ್ಪಿಕೊಳ್ಳದೆ ವಿಧಿಯಿಲ್ಲ. ಬೇಂದ್ರೆಯವರ ಕಾವ್ಯಕ್ಕೆ ಅಪಚಾರವಾಗಬಾರದು. ಇದರ ಜೊತೆಗೆ ನಿಮ್ಮ ವಿನಯವನ್ನೂ ನಾನು ಮೆಚ್ಚಿಕೊಂಡಿದ್ದೇನೆ. ನಿಮ್ಮ ಪತ್ರದ ಮೇಲಿಂದ ನೀವು ಬೇಂದ್ರೆ ಕಾವ್ಯದ ಅಭ್ಯಾಸಿಗಳು ಎಂದು ಗೊತ್ತಾಯಿತು. ದಯವಿಟ್ಟು ಮುಂದುವರಿಸಬೇಕು. ನೀವು 'ಕಂಸಾಳೆ'ಯ ಮೂಲಕವಾಗಿ ಬೇಂದ್ರೆಕಾವ್ಯವನ್ನು ಪ್ರದರ್ಶಿಸಬೇಕೆಂದದ್ದು ತಿಳಿಯಿತು. ಪ್ರದರ್ಶನ ಆಯಿತೆ? ತಿಳಿಸಬೇಕು. ನಿಮ್ಮ ಬಗ್ಗೆಯೂ ವೈಯಕ್ತಿಕ ವಿವರಗಳನ್ನು ಬರೆಯಬೇಕು. ನಾವೆಲ್ಲ ಬೇಂದ್ರೆ ಕಾವ್ಯದ ವಿದ್ಯಾರ್ಥಿಗಳೇ.

ವಂದನೆಗಳು

ತಮ್ಮ ವಿಶ್ವಾಸದ

**ಕೀರ್ತಿನಾಥ ಕುರ್ತಕೋಟಿ**

ಅನುಬಂಧ ಎರಡು

# ದ.ರಾ.ಬೇಂದ್ರೆಯವರ ಕೃತಿಗಳು.

| ೧. ಕಾವ್ಯ | | ಪ್ರಥಮ ಮುದ್ರಣ |
|---|---|---|
| ೧ | ಕೃಷ್ಣಾಕುಮಾರಿ | ೧೯೨೨ |
| ೨ | ಗರಿ | ೧೯೩೨ |
| ೩ | ಮೂರ್ತಿ ಮತ್ತು ಕಾಮಕಸ್ತೂರಿ | ೧೯೩೪ |
| ೪ | ಸಖೀಗೀತ | ೧೯೩೭ |
| ೫ | ಉಯ್ಯಾಲೆ | ೧೯೩೮ |
| ೬ | ನಾದಲೀಲೆ | ೧೯೩೮ |
| ೭ | ಕನ್ನಡ ಮೇಘದೂತ | ೧೯೪೩ |
| ೮ | ಹಾಡು - ಪಾಡು | ೧೯೪೬ |
| ೯ | ಗಂಗಾವತರಣ | ೧೯೫೧ |
| ೧೦ | ಮುಕ್ತಕಂಠ | ೧೯೫೬ |
| ೧೧ | ಸೂರ್ಯಪಾನ | ೧೯೫೬ |
| ೧೨ | ಹೃದಯ ಸಮುದ್ರ | ೧೯೫೬ |
| ೧೩ | ಚೈತ್ಯಾಲಯ | ೧೯೫೭ |
| ೧೪ | ಜೀವಲಹರಿ | ೧೯೫೭ |
| ೧೫ | ನಮನ | ೧೯೫೮ |
| ೧೬ | ಸಂಚಯ | ೧೯೫೯ |
| ೧೭ | ಉತ್ತರಾಯಣ | ೧೯೬೦ |
| ೧೮ | ಮುಗಿಲ ಮಲ್ಲಿಗೆ | ೧೯೬೧ |
| ೧೯ | ಯಕ್ಷ-ಯಕ್ಷಿ | ೧೯೬೨ |
| ೨೦ | ನಾಕುತಂತಿ | ೧೯೬೪ |
| ೨೧ | ಮರ್ಯಾದೆ | ೧೯೬೬ |
| ೨೨ | ಶ್ರೀಮಾತಾ | ೧೯೬೮ |

ಅನುಬಂಧ ಮೂರು

# ದ.ರಾ.ಬೇಂದ್ರೆಯವರ ಜೀವನದ ಪ್ರಮುಖ ಘಟ್ಟಗಳು

೩೧-೧-೧೮೯೬ ಜನನ. ಮಾಘವದ್ಯ ಪ್ರತಿಪದೆ, ಗುರು ಪ್ರತಿಪದೆ, ಮನ್ಮಥನಾಮ ಸಂವತ್ಸರ. ಧಾರವಾಡದ ಪೋತ್ನೀಸ ಓಣಿ, ಗುಣಾರಿಯವರ ಮನೆಯಲ್ಲಿ.

೧೮೯೮ ತಮ್ಮ ಚಿದಂಬರ ಹುಟ್ಟಿದ, ತೀರಿಕೊಂಡ.

೧೯೦೨ ಕನ್ನಡ ಶಾಲೆ ಬಿನ್ ಇಯತ್ತೆ, ೧ನೆಯ ಇಯತ್ತೆ ೩ ತಿಂಗಳಲ್ಲಿ ಪಾಸು. ಶ್ರೀಧರ ಖಾನೋಳಕರ ಗೆಳೆತನ. ಶ್ರೀಗೋಂದವಲೇಕರರ ದರ್ಶನ, ತಮ್ಮ ರಾಘೂನ ಜನನ ಕಾಮನ ಕಟ್ಟೆಯ ಗೋಖಲೆಯವರ ಮನೆಯಲ್ಲಿ. ಗೋಖಲೆ ಗೋವಿಂದರಾಯರು ತೀರಿದರು.

೧೯೦೩ ೨ನೆ ಇಯತ್ತೆ ಮುಗಿಯಿತು. ತಮ್ಮ ಕೃಷ್ಣನ ಜನನ.

೧೯೦೬ ಇಂಗ್ಲೀಷ್ ೨ನೆ ಇಯತ್ತೆ, ನವಂಬರದಲ್ಲಿ ತಂದೆ ರಾಮಚಂದ್ರ ಬೇಂದ್ರೆ ತೀರಿಕೊಂಡರು.

೧೯೧೦ ರಾಘೂ ತೀರಿಕೊಂಡ.

೧೯೧೩ ಮ್ಯಾಟ್ರಿಕ್ ಪಾಸಾಯಿತು. ಅಜ್ಜಿ ಗೋದೂಬಾಯಿಯ ಮರಣ.

೧೯೧೪ ಪುಣೆಯ ಫರ್ಗ್ಯುಸನ್ ಕಾಲೇಜಿಗೆ ಸೇರಿದ್ದು.

೧೯೧೮ ಬಿ.ಎ., ಪಾಸಾಯಿತು. 'ತುತ್ತೂರಿ', 'ಕೋಗಿಲೆ ಕೋಗಿಲೆ ಎಂದು ಬಂದೆ ನೀ ಹೇಳೆ ಹೇಳೆ ಗೆಳತಿ'. ಕವನಗಳ ರಚನೆ. ನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಳನ ಪ್ರಸಂಗದಲ್ಲಿ ಕವಿತಾ ವಾಚನ. ಜೂನ್ ೪ ರಿಂದ ವಿಕ್ಟೋರಿಯಾ ಹೈಸ್ಕೂಲು, ಧಾರವಾಡದಲ್ಲಿ ಶಿಕ್ಷಕ ವೃತ್ತಿಯ ಪ್ರಾರಂಭ.

೧೯೧೯ ಲಕ್ಷ್ಮೀಬಾಯಿ (ರಂಗೂತಾಯಿ) ಇವರೊಂದಿಗೆ ವಿವಾಹ, ಹುಬ್ಬಳ್ಳಿಯಲ್ಲಿ.

೧೯೨೧ ರಾಷ್ಟ್ರೀಯ ಶಾಲೆಯಲ್ಲಿ ಶಿಕ್ಷಕ.

೧೯೨೨ 'ಕೃಷ್ಣಾಕುಮಾರಿ' ಕಥನ ಕವನದ ಪ್ರಕಟಣೆ. ಗೆಳೆಯರ ಗುಂಪಿನ ಕನಸು. ಮೊದಲ ಮಗ-ಕ್ಷೇಮೇಂದ್ರನ ಜನನ. ದಾವಣಗೇರಿ ಸಾಹಿತ್ಯ ಸಮ್ಮೇಳನಕ್ಕೆ ಹೋದದ್ದು.

೧೯೨೩ ಮೇದಲ್ಲಿ ಕ್ಷೇಮೇಂದ್ರ ತೀರಿಕೊಂಡ. 'ಜಯಕರ್ನಾಟಕ' ಪತ್ರಿಕೆಯೊಂದಿಗೆ ಸಂಬಂಧ. ವಿಜಾಪುರ ಸಾಹಿತ್ಯ ಸಮ್ಮೇಳನಕ್ಕೆ ಹೋದದ್ದು.

೧೯೨೪ ತಾಯಿ ತೀರಿದಳು. ಎರಡನೆಯ ಮಗ-ರಾಮನ ಜನನ.

೧೯೨೫ ಮತ್ತೆ ನ್ಯೂ ಇಂಗ್ಲೀಷ್ ಸ್ಕೂಲಿನಲ್ಲಿ (ಮೊದಲಿನ ವಿಕ್ಟೋರಿಯಾ ಹೈಸ್ಕೂಲೇ ಇದು) ಶಿಕ್ಷಕ.

೧೯೨೬ ನಾಡಹಬ್ಬ ಪ್ರಾರಂಭಿಸಿದ್ದು. 'ಸ್ವಧರ್ಮ' ಪತ್ರಿಕೆ ಕೈಕೊಂಡದ್ದು.

೧೯೨೭ ಮೂರನೆಯ ಮಗ - ಭಾಸ್ಕರ ಹುಟ್ಟಿದ್ದು; ತೀರಿದ್ದು.

೧೯೨೮ ನಾಲ್ಕನೆಯ ಮಗ - ಪಾಂಡುರಂಗನ ಜನನ. ಉಪನಿಷದ್ ರಹಸ್ಯ ಪ್ರಕಟಣೆ. 'ನನ್ನದು ಈ ಕನ್ನಡ ನಾಡು ' ಕೃತಿ ಗೆಳೆಯರ ಗುಂಪಿನಿಂದ ಪ್ರಕಟಣೆ.

೧೯೨೯ ಚಿಕ್ಕಪ್ಪ, ಚಿಕ್ಕಮ್ಮ- ಸಾಧನಕೇರಿಯಲ್ಲಿ ಮನೆಯನ್ನು ಕೊಡಿಸಿದ್ದು. 'ಹಕ್ಕಿ ಹಾರುತಿದೆ' ಕವನ ವಾಚನ. ಆಲೂರು ವೆಂಕಟರಾಯರು 'ಜಯಕರ್ನಾಟಕ' ಪತ್ರಿಕೆಯನ್ನು ಗೆಳೆಯರ ಗುಂಪಿಗೆ ವಹಿಸಿಕೊಟ್ಟಿದ್ದು.

೧೯೩೦ 'ಹಕ್ಕಿ ಹಾರುತಿದೆ' ಕವನ ಸಂಗ್ರಹ ಗೆಳೆಯರ ಗುಂಪಿನಿಂದ ಪ್ರಕಟಣೆ. ಮೈಸೂರು ಲೇಖಕರ ಗೋಷ್ಠಿಯ ಅಧ್ಯಕ್ಷ.

೧೯೩೧ ಕಾರವಾರ ಸಾಹಿತ್ಯ ಸಮ್ಮೇಳನಕ್ಕೆ ಹೋದದ್ದು.

೧೯೩೨ 'ಗರಿ' ಕವನ ಸಂಕಲನದ ಪ್ರಕಟಣೆ. 'ನರಬಲಿ' ಕವನ ರಚಿಸಿದ ಕಾರಣದಿಂದ ಹಿಂಡಲಗಿ ಜೇಲುವಾಸ. ಮುಗದ ಗ್ರಾಮದಲ್ಲಿ ನಜರಬಂದಿ.

೧೯೩೩ ಎಂ.ಎ., ಅಭ್ಯಾಸ ಪುಣೆಯಲ್ಲಿ.

೧೯೩೪ ಮಗಳು- ಲಲಿತಾ ಹುಟ್ಟಿದಳು; ತೀರಿದಳು. 'ಮೂರ್ತಿ ಮತ್ತು ಕಾಮಕಸ್ತೂರಿ' ಪ್ರಕಟಣೆ.

೧೯೩೫ ಎಂ.ಎ., ಪಾಸು ಆಗಿದ್ದು. ಮಗ - ವಾಮನನ(ಬಾಳ) ಜನನ. ಮುಂಬೈ ಕವಿ ಸಮ್ಮೇಳನದ ಅಧ್ಯಕ್ಷ.

೧೯೩೬ರಿಂದ ೧೯೪೪ ಸ್ಥಿರ ನೌಕರಿ ಇಲ್ಲದೆ ಅಲೆದಾಡಿದ್ದು.

೧೯೩೭ ಮಗಳು-ಪ್ರೇಮಳ ಜನನ. 'ಸಖೀಗೀತ', 'ಸಾಹಿತ್ಯ ಮತ್ತು ವಿಮರ್ಶೆ' ಪ್ರಕಟಣೆ.

೧೯೩೮ 'ನಾದಲೀಲೆ', 'ಉಯ್ಯಾಲೆ' ಪ್ರಕಟಣೆ 'ಜೀವನ' ಪತ್ರಿಕೆಯ ಸಂಪಾದಕತ್ವ.

೧೯೩೯ ಮಗಳು-ಮಂಗಲಳ ಜನನ. 'ನಿರಾಭರಣ ಸುಂದರಿ', 'ಸಾಹಿತ್ಯ ಮತ್ತು ಸಂಶೋಧನೆ' ಪ್ರಕಟಣೆ.

೧೯೪೦ ಧಾರವಾಡದಲ್ಲಿ ಸಾಹಿತ್ಯ ಸಮ್ಮೇಳನ.

೧೯೪೧ ಗದಗಿನ ವಿದ್ಯಾದಾನ ಸಮಿತಿ ಹೈಸ್ಕೂಲ್‌ಗೆ ಹೆಡ್‌ಮಾಸ್ಟರ್ ಆಗಿ ಹೋದದ್ದು.

೧೯೪೨ ಹುಬ್ಬಳ್ಳಿಯ ನ್ಯೂ ಇಂಗ್ಲಿಷ್ ಸ್ಕೂಲಿಗೆ ಶಿಕ್ಷಕ.

೧೯೪೩ ಪಾಂಡಿಚೇರಿ - ಶ್ರೀ ಮಾತಾರವಿಂದರ ದರ್ಶನ. ಪೂನಾದ ಬಿ.ಎಂ.ಸಿ.ಸಿ., ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರು 'ಕನ್ನಡ ಮೇಘದೂತ' ಪ್ರಕಟಣೆ. ಡಿಸೆಂಬರ್ ೨೭ ರಂದು ಶಿವಮೊಗ್ಗದಲ್ಲಿ ನಡೆದ ೨೭ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ.

೧೯೪೪ ಸೊಲ್ಲಾಪುರದ ಡಿ.ಎ.ವಿ., ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರು. ಮಗ-ಆನಂದ ಹುಟ್ಟಿದ್ದು; ತೀರಿಕೊಂಡದ್ದು. ಮಗ-ರಾಮ ತೀರಿಕೊಂಡದ್ದು.

೧೯೪೭ ಧಾರವಾಡದ ಸಾರ್ವಜನಿಕರಿಂದ ೫೧ನೆಯ ಹುಟ್ಟುಹಬ್ಬದ ಆಚರಣೆ - ಸನ್ಮಾನ. ೧೦ ಸಾವಿರ ನಿಧಿ ಅರ್ಪಣೆ. 'ಹಾಡು-ಪಾಡು' ಪ್ರಕಟಣೆ.

೧೯೫೧ 'ಗಂಗಾವತರಣ' ಪ್ರಕಟಣೆ.

೧೯೫೬ ಡಿ.ಎ.ವಿ., ಕಾಲೇಜು ಸೊಲ್ಲಾಪುರದ ಕನ್ನಡ ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತಿ. ಆಕಾಶವಾಣಿ, ಧಾರವಾಡ ಕೇಂದ್ರದ ಸಾಹಿತ್ಯ ಸಲಹೆಗಾರ. ಸೊಲ್ಲಾಪುರ, ಪುಣೆಯಲ್ಲಿ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನಿಂದ ಬೆಂಗಳೂರಿನಲ್ಲಿ ೬೦ನೆಯ ಹುಟ್ಟು ಹಬ್ಬದ ಆಚರಣೆ - ಸನ್ಮಾನ.

೧೯೫೯ 'ಅರಳು-ಮರಳು' ಕವನ ಸಂಗ್ರಹ ಗುಚ್ಛಕ್ಕೆ ೧೯೫೮ರ ಕೇಂದ್ರ ಸಾಹಿತ್ಯ ಅಕಾಡೆಮಿ ಬಹುಮಾನ.

೧೯೬೨ ತುಮಕೂರಿನ ಪುರಸಭೆಯವರಿಂದ ಸನ್ಮಾನ.

೧೯೬೪ ಮೈಸೂರು ದಸರಾ ಮಹೋತ್ಸವ ಸಮಿತಿಯವರಿಂದ ಸನ್ಮಾನ.

೧೯೬೫ ಮರಾಠಿ 'ಸಂವಾದ' ಗ್ರಂಥಕ್ಕೆ ಮಹಾರಾಷ್ಟ್ರದ ಕೇಳಕರ ಪ್ರಶಸ್ತಿ.

೧೯೬೬ ಮೈಸೂರು ವಿಶ್ವವಿದ್ಯಾನಿಲಯದಿಂದ ಗೌರವ ಡಾಕ್ಟರೇಟ್ ಪದವಿ. ಶಿರಹಟ್ಟಿಯಲ್ಲಿ ೭೦ನೆಯ ಹುಟ್ಟುಹಬ್ಬದ ಸನ್ಮಾನ. ಕರ್ನಾಟಕ ಸರಕಾರದಿಂದ ಆ ಜನ್ಮ ವಿಶ್ರಾಂತಿ ವೇತನ ಗೌರವ. ಹೈದರಾಬಾದಿನ ಹಿಂದಿ ಪ್ರಚಾರ ಸಭಾ ಅವರಿಂದ 'ಸಾಹಿತ್ಯ ಆಚಾರ್ಯ ಪ್ರಶಸ್ತಿ'. ಆಗಸ್ಟ್ ೧೭ರಂದು ಪತ್ನೀ ವಿಯೋಗ.

೧೯೬೮ 'ಪದ್ಮಶ್ರೀ' ಪ್ರಶಸ್ತಿ. ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಪದವಿ.

೧೯೬೯ ಫೆಲೊ, ಸಾಹಿತ್ಯ ಅಕಾಡೆಮಿ (ದೆಹಲಿ) ಗೌರವ.

೧೯೭೨ 'ಕರ್ನಾಟಕ ಕವಿಕುಲತಿಲಕ' ಪ್ರಶಸ್ತಿ - ಶ್ರೀ ಅದಮಾರು ಮಠ-ಉಡುಪಿ ಪರ್ಯಾಯ. ೭೫ನೇ ಹುಟ್ಟುಹಬ್ಬದ ಸನ್ಮಾನ - ಸೊಲ್ಲಾಪುರ ಮತ್ತು ಪುಣೆಯಲ್ಲಿ. ಕರ್ನಾಟಕ ಸರಕಾರದಿಂದ ಸಾಕ್ಷ್ಯಚಿತ್ರ ನಿರ್ಮಾಣ.

೧೯೭೪ 'ನಾಕುತಂತಿ' ಕವನ ಸಂಗ್ರಹಕ್ಕೆ ೧೯೭೩ ರ ಜ್ಞಾನಪೀಠ ಪ್ರಶಸ್ತಿ.

೧೯೭೬ ಕಾಶೀ ವಿದ್ಯಾಪೀಠ, ವಾರಣಾಸಿ - ಇವರಿಂದ ಗೌರವ ಡಾಕ್ಟರೇಟ್ ಪದವಿ.

೧೯೭೭ ಆಕಾಶವಾಣಿ ಪ್ರಸಾರದ ಸುವರ್ಣ ಮಹೋತ್ಸವದ ಸನ್ಮಾನ. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು- ವಜ್ರ ಮಹೋತ್ಸವದ ಸನ್ಮಾನ. 'ಇಳಿದು ಬಾ ತಾಯಿ' ಅಭಿನಂದನ ಗ್ರಂಥ ಪ್ರಕಟಣೆ.

೨೬-೧೦-೧೯೮೧ ಮುಂಬೈ, ಹರಿಕಿಶನ್‌ದಾಸ್ ಆಸ್ಪತ್ರೆಯಲ್ಲಿ ದುರ್ಮತಿ ಸಂವತ್ಸರ, ಆಶ್ವಯುಜ ಬಹುಳ, ದೀಪಾವಳಿ, ನರಕ ಚತುರ್ದಶಿಯ ದಿವಸ ನಿರ್ವಾಣ.

ಅನುಬಂಧ ನಾಲ್ಕು

# ದ.ರಾ.ಬೇಂದ್ರೆಯವರನ್ನು ಕುರಿತ ಅಭಿನಂದನ ಗ್ರಂಥಗಳು ವಿಮರ್ಶಾ ಕೃತಿಗಳು ಇತ್ಯಾದಿ.


೧. ಆಮೂರ ಜಿ.ಎಸ್., ಭುವನದ ಭಾಗ್ಯ, ಸ್ನೇಹ ಪ್ರಕಾಶನ, ಬೆಂಗಳೂರು, ೧೯೯೧.

೨. ಎನ್ಕೆ. ಕುಲಕರ್ಣಿ, ದ.ರಾ.ಬೇಂದ್ರೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೧.

೩. ಎನ್ಕೆ. ಕುಲಕರ್ಣಿ, ಕನ್ನಡ ಸಾಹಿತ್ಯದಲ್ಲಿ ದ.ರಾ.ಬೇಂದ್ರೆಯವರ ಸ್ಥಾನ ಮಾನ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೧.

೪. ಕರ್ನಾಟಕ ಸಂಘ, ನಮ್ಮ ಬೇಂದ್ರೆಯವರು, ಸೆಂಟ್ರಲ್ ಕಾಲೇಜು, ಬೆಂಗಳೂರು, ೧೯೫೭.

೫. ಕೀರ್ತಿನಾಥ ಕುರ್ತಕೋಟಿ, ಭೃಂಗದ ಬೆನ್ನೇರಿ, ಮನೋಹರ ಗ್ರಂಥಮಾಲಾ, ಧಾರವಾಡ, ೧೯೭೫.

೬. ಕೀರ್ತಿನಾಥ ಕುರ್ತಕೋಟಿ, ಬಾರೋ ಸಾಧನ ಕೇರಿಗೆ, ಮನೋಹರ ಗ್ರಂಥಮಾಲಾ, ಧಾರವಾಡ, ೧೯೯೩.

೭. ಕೀರ್ತಿನಾಥ ಕುರ್ತಕೋಟಿ, ದ.ರಾ.ಬೇಂದ್ರೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೨.

೮. ಕೃಷ್ಣಪ್ಪ ಜಿ., ಹಾಡುಹಕ್ಕಿ ಅಂಬಿಕಾತನಯದತ್ತ, ಶ್ರೀರಂಗ ಪ್ರಕಾಶನ, ಮೈಸೂರು, ೧೯೯೫.

೯. ಕುಲಕರ್ಣಿ. ಶೇ.ಗೋ., ಕವಿ ಅಂಬಿಕಾತನಯದತ್ತ, (ವಿವಿಧ ಕವಿಗಳ ಕವನ ಸಂಗ್ರಹ), ಸಾಧನ ಮುದ್ರಣಾಲಯ, ಧಾರವಾಡ, (ವರ್ಷ ನಮೂದಿಸಿಲ್ಲ.)

೧೦. ಕುಲಕರ್ಣಿ .ವಿ.ಬಿ., ವರಕವಿ ಅಂಬಿಕಾತನಯದತ್ತ, ಲಲಿತ ಸಾಹಿತ್ಯಮಾಲೆ, ಧಾರವಾಡ, ೧೯೯೪.

೧೧. ಕೊಟ್ಟಲಗಿ ಮತ್ತು ಗದಗಕರ, ಬೇಂದ್ರೆ ಸಾಹಿತ್ಯ ಸೌರಭ, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೫.

೧೨. ಗೋಕಾಕ್. ವಿ. ಕೃ., ಬೇಂದ್ರೆಯವರ ಕಾವ್ಯಗುಣ ಹಾಗೂ ಪ್ರಯೋಗಶೀಲತೆ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೪.

೧೩. ಗೋಪಾಲಕೃಷ್ಣ ಅಡಿಗ, ಬೇಂದ್ರೆಯವರ ಕಾವ್ಯ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೯೧.

೧೪. ಚುಳಕಿ ಗೋವಿಂದರಾಯರು (ಸಂ.), ಕವಿವರ ಬೇಂದ್ರೆ, ಲಲಿತ ಸಾಹಿತ್ಯಮಾಲೆ, ಧಾರವಾಡ, ೧೯೪೬.

೧೫. 'ಜೀವಿ'ಕುಲಕರ್ಣಿ, ನಾಕಂಡ ಬೇಂದ್ರೆ; ಜೀವನ ಮತ್ತು ಸಾಹಿತ್ಯ, ಹರ್ಷವರ್ಧನ ಪ್ರಕಾಶನ, ಮುಂಬಯಿ, ೧೯೭೭.

೧೬. ತಿರುಮಲೇಶ್ ಕೆ.ವಿ., ಬೇಂದ್ರೆಯವರ ಕಾವ್ಯಶೈಲಿ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೮೭.

೧೭. ದೇವೇಂದ್ರ ಕುಮಾರ ಹಕಾರಿ, ಬೇಂದ್ರೆ ಕಾವ್ಯದಲ್ಲಿ ಸಾಂಸ್ಕೃತಿಕ ಕಾಳಜಿಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬.

೧೮. ನಾರಾಯಣ ಕೆ.ವಿ., ಬೇಂದ್ರೆ ದೃಷ್ಟಿ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೮೪.

೧೯. ನಾಗರಾಜ್, ಡಿ.ಆರ್., ಶಕ್ತಿಶಾರದೆಯ ಮೇಳ, ಅಕ್ಷರ ಪ್ರಕಾಶನ, ಸಾಗರ, ೧೯೮೭.

೨೦. ನಾರಾಯಣ ಪ್ರಸಾದ್ ಕೆ.ಜಿ., ಬೇಂದ್ರೆ ಕಾವ್ಯದ ಛಂದಸ್ಸು, ಅರ್ಕಾವತಿ ಪ್ರಕಾಶನ, ಮೈಸೂರು, ೧೯೯೬.

೨೧. ನಾರಾಯಣಾಚಾರ್ಯ ಕೆ.ಎಸ್., ಬೇಂದ್ರೆಕಾವ್ಯದಲ್ಲಿ ಅಧ್ಯಾತ್ಮದ ನೆಲೆ ಮತ್ತು ಆರ್ಷದೃಷ್ಟಿ, ಶ್ರೀಮಾತಾ ಪ್ರಕಾಶನ, ಧಾರವಾಡ, ೧೯೯೬.

೨೨. ಬುದ್ದಣ್ಣ ಹಿಂಗಮಿರೆ (ಸಂ.), ಇಳಿದು ಬಾ ತಾಯಿ, (ಶ್ರೀ ಬೇಂದ್ರೆ ಅಭಿನಂದನ ಗ್ರಂಥ), ಸಮಾಜ ಪುಸ್ತಕಾಲಯ, ಧಾರವಾಡ, ೧೯೭೭.

೨೩. ಬಸವರಾಜ ಕಲ್ಗುಡಿ, ಬೇಂದ್ರೆಯವರ ಕಾವ್ಯದಲ್ಲಿ ಪ್ರೇಮದ ಆವಿಷ್ಕಾರ; ಸ್ವರೂಪಗಳು, ಕನ್ನಡಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೮೬.

೨೪. ಮುಗಳಿ, ರಂ. ಶ್ರೀ., ಬೇಂದ್ರೆ ಕಾವ್ಯ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೮೬.

೨೫. ಮುಗಳಿ.ರಂ. ಶ್ರೀ., ಬೇಂದ್ರೆಯವರ ಕಾವ್ಯದಲ್ಲಿ ವಿರಾಟ್‌ದರ್ಶನ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೮.

೨೬. ರುಕ್ಮಿಣಿ ಪರ್ವತಿ, ಅಂಬಿಕಾತನಯದತ್ತರ ಭಾವಗೀತೆಗಳು, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೮೨.

೨೭. ರಾಜೇಂದ್ರ ಚೆನ್ನಿ, ಬೇಂದ್ರೆ ಕಾವ್ಯ, ಸಂಪ್ರದಾಯ ಮತ್ತು ಸ್ವಂತಿಕೆ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೮೯.

೨೮. ರಾಘವೇಂದ್ರರಾವ್, ಎಚ್.ಎಸ್., ಹಾಡೆ ಹಾದಿಯ ತೋರಿತು, ಕನ್ನಡಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೯೫.

೨೯. ರಾ.ಗೌ. (ಸಂ.), ಬೇಂದ್ರೆ ಸಾಹಿತ್ಯಸಮಾಲೋಚನೆ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೬.

೩೦. ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ, ಶ್ರೀಮಾತಾ ಪ್ರಕಾಶನ, ಧಾರವಾಡ, ೧೯೯೦.

೩೧. ವಾಮನ ಬೇಂದ್ರೆ, ಬೇಂದ್ರೆ ಸಾಂಖ್ಯ ವಿಜ್ಞಾನ ಸಿದ್ಧಾಂತ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೫.

೩೨. ವಿಜಯಾದಬ್ಬೆ, ಬೇಂದ್ರೆಯವರ ಕಾವ್ಯದಲ್ಲಿ ಒಂದು ಅನುಭಾವದ ನಿಚ್ಚಣಿಕೆ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೮೯.

೩೩. ವೆಂಕಟೇಶಮೂರ್ತಿ.ಎಚ್.ಎಸ್., ಮೇಘದೂತ ಕಾಳಿದಾಸ ಮತ್ತು ಬೇಂದ್ರೆ, ಕನ್ನಡಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೮೯.

೩೪. ಶಂಕರ ಮೊಕಾಶಿ ಪುಣೇಕರ, ಸಾಹಿತ್ಯ ಮತ್ತು ಅಭಿರುಚಿ, ಮಿತ್ರ ಪ್ರಕಾಶನ, ಮೈಸೂರು, ೧೯೮೧.

೩೫. ಶಂಕರ ಮೊಕಾಶಿ ಪುಣೇಕರ, ಬೇಂದ್ರೆ ಕಾವ್ಯ ಮೀಮಾಂಸೆ, ಸಾಹಿತ್ಯ ಭಂಡಾರ, ಬೆಂಗಳೂರು, ೧೯೮೯.

೩೬. ಶ್ರೀಕಂಠಯ್ಯ ತೀ.ನಂ., ಸಮಾಲೋಕನ, ಶಾರದಾಮಂದಿರ, ರಾಮಯ್ಯರ್ ರಸ್ತೆ, ಮೈಸೂರು, ೧೯೫೮.

೩೭. ಶಿವರುದ್ರಪ್ಪ, ಜಿ.ಎಸ್., (ಸಂ.), ಕವಿ ಬೇಂದ್ರೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೯೨.

೩೮. ಶ್ರೀಧರ ಬಿ.ಹೆಚ್., ಪಸರಿಪ ಕನ್ನಡಕ್ಕೊಡೆಯನೀಗ ದರಾಂಕಿತ ಬೇಂದ್ರೆ, ಶ್ರೀಮಾತಾ ಪ್ರಕಾಶನ, ಧಾರವಾಡ, ೧೯೮೬.

೩೯. ಶ್ರೀಧರ ಬಿ.ಹೆಚ್. ಮತ್ತು ಬನ್ನಂಜೆ ಗೋವಿಂದಾಚಾರ್ಯ, ಬೇಂದ್ರೆ, ರಾಷ್ಟ್ರಕವಿ ಗೋವಿಂದಪೈ ಸಂಶೋಧನಾ ಕೇಂದ್ರ, ಎಂ.ಜಿ.ಎಂ. ಕಾಲೇಜ್, ಬೆಂಗಳೂರು, ೧೯೯೩.

೪೦. ಸೀತಾರಾಮಯ್ಯ ಎಂ.ವಿ. ಮತ್ತು ಗೋ.ಅ.ಜಾಲಿಹಾಳ (ಸಂ.), ಬೇಂದ್ರೆ ಸ್ಮೃತಿ, ಬಿ.ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೮೨.

೪೧. ಸಿಂಪಿ ಲಿಂಗಣ್ಣ, ದತ್ತಸಾಹಿತ್ಯ, ಸಾಧನ ಮುದ್ರಣಾಲಯ, ಧಾರವಾಡ, ೧೯೪೮.

೪೨. ಸಿ.ಪಿ.ಕೆ., ಬೇಂದ್ರೆ ನಾಲ್ಕು ನೋಟ, ಶಕ್ತಿ ಪ್ರಕಾಶನ, ಮೈಸೂರು ೧೯೯೫.

೪೩. ಸುಮತೀಂದ್ರ ನಾಡಿಗ, ಬೇಂದ್ರೆಯವರ ಕಾವ್ಯದ ವಿಭಿನ್ನ ನೆಲೆಗಳು, ಸುವಿದ್ಯಾ ಪ್ರಕಾಶನ, ಬೆಂಗಳೂರು, ೧೯೮೯.

೪೪. ಸುಮತೀಂದ್ರ ನಾಡಿಗ, ಬೇಂದ್ರೆಯವರ ಸಖೀಗೀತದಲ್ಲಿ ಋತುವರ್ಣನೆ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೪.

## ಇಂಗ್ಲಿಷ್‌ನಲ್ಲಿ

1) Amur G.S., Dattatreya Ramachandra Bendre, Sahitya Akademi, New Delhi, 1994.

2) Gokak V.K., Bendre : Poet and Seer, Somaiya publications, Bombay, 1970.

3) Krishnappa G., D.R. Bendre, Kuvempu Institute of Kannada Studies, University of Mysore, Mysore, 1997

4) Raghavendra Rao, K., The Pea-cock Smile, Kannada Sahitya Parishat, Bangalore, 1977

5) Raghavendra Rao K., Vamana Bendre, K.S. Sharma (Edited and Translated), Spring fire: an anthology of Bendre poetry, Ambikatanayadatta Vedike and Purogami Sahitya Prakashana, Hubli, 1986.

## ದ.ರಾ.ಬೇಂದ್ರೆಯವರನ್ನು ಕುರಿತು ಕೆಲವು ಲೇಖನಗಳು ವಿಶೇಷ ಸಂಚಿಕೆಗಳು.


೧) ಮಕರಂದ, ಸಂಪುಟ ೮, ೨ ಸಂಚಿಕೆ ೭೮, ವರಕವಿ ಶ್ರೀ ದ.ರಾ.ಬೇಂದ್ರೆಯವರ ೭೦ನೆಯ ಹುಟ್ಟು ಹಬ್ಬದ ಸಂಚಿಕೆ, ಮಾರ್ಚ್, ೧೯೬೬.

೨) ಶೂದ್ರ, ಸಂಪುಟ ೭, ಸಂಚಿಕೆ ೧, ಬೇಂದ್ರೆವಿಶೇಷಾಂಕ, ನವಂಬರ್, ೧೯೮೧.

೩) ಅಂಕಣ, ಸಂಪುಟ ೩, ಸಂಚಿಕೆ ೫, ಬೇಂದ್ರೆ ವಿಶೇಷಾಂಕ ಮೇಜುಲೈ, ೧೯೮೨.

೪) ಕನ್ನಡ ನುಡಿ, ಸಂಪುಟ ೬೦, ಸಂಚಿಕೆ ೮೧೦, ಶಂಕರ ಮೊಕಾಶಿ ಪುಣೇಕರ, ಬೇಂದ್ರೆ ಆಗಷ್ಟ್ ಅಕ್ಟೋಬರ್ , ೧೯೯೫.

೫) ಮಾನವಿಕ ಕರ್ನಾಟಕ, ಸಂಪುಟ ೨೨, ಸಂಚಿಕೆ ೧, ಜಿ.ಎನ್. ಕುಂದರಗಿ, ಬೇಂದ್ರೆಯವರ ಕಾವ್ಯದಲ್ಲಿ ತತ್ವಜ್ಞಾನ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೬.

ಅನುಬಂಧ ಐದು

# ಗ್ರಂಥ ಋಣ


1) ಅನಂತ ನಾರಾಯಣ ಎಸ್., ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ, ಗಂಗಾತರಂಗ, ಮೈಸೂರು, ೧೯೬೧.
2) ಇಂದಿರಾ ಆರ್., ಸ್ತ್ರೀವಾದ ದಿಕ್ಸೂಚಿ, ಸಮತಾ ಅಧ್ಯಯನ ಕೇಂದ್ರ, ಮೈಸೂರು, ೧೯೯೫.
3) ಕಮಲಾ ಹೆಮ್ಮಿಗೆ, ಸವದತ್ತಿ ಎಲ್ಲಮ್ಮ ಹಾಗೂ ದೇವದಾಸಿ ಪದ್ಧತಿ, ವಿಮೋಚನಾ ಪ್ರಕಾಶನ, ಅಥಣಿ, ೧೯೯೮.
4) ಕಾಪಸೆ ರೇವಣ್ಣ (ಸಂಗ್ರಹಕಾರರು), ಮಲ್ಲಿಗೆ ದಂಡೆ, ಬೆಳಗಾವಿ ರಾಮಚಂದ್ರರಾಯರು (ಸಂ.), ಜಯ ಕರ್ನಾಟಕ ಕಾರ್ಯಾಲಯ, ಧಾರವಾಡ, ೧೯೩೫.
5) ಕಾಳೇಗೌಡ ನಾಗವಾರ, ತ್ರಿಪದಿ ರಗಳೆ ಮತ್ತು ಜನಪದ ಸಾಹಿತ್ಯ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫.
6) ಕೀರ್ತಿನಾಥ ಕುರ್ತಕೋಟಿ, ಯುಗಧರ್ಮ ಹಾಗೂ ಸಾಹಿತ್ಯದರ್ಶನ, ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೮೩.
7) ಗದ್ದಗಿಮಠ ಬಿ.ಎಸ್., ಕನ್ನಡ ಜಾನಪದ ಗೀತಗಳು, ರಿಜಿಸ್ಟ್ರಾರ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೩.
8) ಗೋಕಾಕ್. ವಿ.ಕೃ., ಕವನಗಳಲ್ಲಿ ಸಂಕೀರ್ಣತೆ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೭೮.
9) ಗೋಕಾಕ್.ವಿ.ಕೃ., ನವ್ಯತೆ ಹಾಗೂ ಕಾವ್ಯ ಜೀವನ, ಸುರುಚಿ ಪ್ರಕಾಶನ, ಮೈಸೂರು, ೧೯೭೮.
10) ಚಿದಾನಂದ ಮೂರ್ತಿ, ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೬೬.
11) ಚೆನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೦.
12) ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ, ಮೈಸೂರು, ೧೯೬೮.
13) ತೇಜಸ್ವಿನಿ ನಿರಂಜನ ಮತ್ತು ಸೀಮಂತಿನಿ ನಿರಂಜನ (ಸಂ.), ಸ್ತ್ರೀವಾದಿ ಸಾಹಿತ್ಯ ವಿಮರ್ಶೆ, ಕನ್ನಡಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೯೪.

14) ನಾಯಕ. ಹಾ.ಮಾ., ಮತ್ತು ಸಿ.ಪಿ.ಕೆ., (ಸಂ.), ಕನ್ನಡ ಛಂದಸ್ಸಿನ ಚರಿತ್ರೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೦.
15) ಪುಟ್ಟಪ್ಪ ಕೆ.ವಿ., (ಪ್ರ.ಸಂ.), ಯುಗಯಾತ್ರೀ ಭಾರತೀಯ ಸಂಸ್ಕೃತಿ, ಸಂಪುಟ - ೧, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೦.
16) ಅದೇ ಸಂಪುಟ -೨, ೧೯೭೧.
17) ಪ್ರಭಾವತಿ ಎಸ್.ವಿ., ದ್ರೌಪದಿ ಒಂದು ಅಧ್ಯಯನ, ಅಪರ್ಣಾ ಪ್ರಕಾಶನ, ಬೆಂಗಳೂರು, ೧೯೯೬.
18) ಬರಗೂರು ರಾಮಚಂದ್ರಪ್ಪ, (ಪ್ರ.ಸಂ.), ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.
19) ವಿಜಯಾ ದಬ್ಬೆ, (ಸಂ.), ಲೇಖ-ಲೋಕ, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು, ೧೯೯೮.
20) ವಿಜಯಾ ದಬ್ಬೆ, ನಾರಿ : ದಾರಿ-ದಿಗಂತ, ರಚನಾ ಪ್ರಕಾಶನ, ಮೈಸೂರು, ೧೯೯೭.
21) ಶಿಶುಮಧುರ ಚೆನ್ನ, ಮಾತೃವಾಣಿ, ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ.
22) ಶಿವರುದ್ರಪ್ಪ ಜಿ.ಎಸ್., ಕನ್ನಡ ಕವಿಗಳ ಕಾವ್ಯ ಕಲ್ಪನೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೮೯.
23) ಶಿವರಾಂ ಎಂ., ಮನಮಂಥನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೯.
24) ಶ್ರೀಕಂಠಯ್ಯ ತೀ.ನಂ., ಭಾರತೀಯ ಕಾವ್ಯಮೀಮಾಂಸೆ, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೨.
25) ಶ್ರೀ ಅರವಿಂದರು ಮತ್ತು ಶ್ರೀಮಾತೆ, (ಅನು.), ಆರ್.ಜಿ. ಕುಲಕರ್ಣಿ, ಸ್ತ್ರೀಶಕ್ತಿ, ಶ್ರೀ ದ.ರಾ.ಬೇಂದ್ರೆ ಸ್ನೇಹಮಂಡಲ, ಬೆಂಗಳೂರು, ೧೯೯೮.
26) ಶ್ರೀ ಶಾಂಕರ ಬಾಷ್ಯ ಸಮೇತ ಬೃಹದಾರಣ್ಯಕೋಪನಿಷತ್ತು, ಭಾಗ-೧, ಆಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೇನರಸಿಪುರ, ೧೯೮೪.
27) ಶ್ರೀ ಶಾಂಕರ ಭಾಷ್ಯ ಸಮೇತ ಛಾಂದೋಗ್ಯೋಪನಿಷತ್ತು, ಆಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೇನರಸಿಪುರ, ೧೯೮೬.
28) ಶೈಲಜಾ ಉಡಚಣ, ವಚನಕಾರರ ದೃಷ್ಟಿಯಲ್ಲಿ ಸ್ತ್ರೀ, ಗ್ರೀನೋಬಲ್ಸ ಪ್ರಕಾಶನ, ಕಲಬುರ್ಗಿ, ೧೯೯೧.
29) ಸರೋಜಿನಿ ಶಿಂತ್ರಿ, ಮಹಿಳೆ ನಡೆದು ಬಂದ ದಾರಿ, ಕನ್ನಡ ಅಧ್ಯಯನ ಪೀಠ, ಪಠ್ಯಪುಸ್ತಕ ನಿರ್ದೇಶನಾಲಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೭.
30) ಸುನಂದಮ್ಮ ಆರ್, (ಸಂ.), ಜನಪದ ಸಾಹಿತ್ಯದ ಮಹಿಳಾ ಜಗತ್ತು, ಸಮತಾ ಅಧ್ಯಯನ ಕೇಂದ್ರ, ಮೈಸೂರು, ೧೯೭೭.
31) ಸುಮಿತ್ರಾಬಾಯಿ. ಬಿ.ಎಸ್., ಮತ್ತು ಗಾಯತ್ರಿ ಎನ್., ಸ್ತ್ರೀವಾದಿ ಪ್ರವೇಶಿಕೆ ಕರ್ನಾಟಕ ಲೇಖಕಿಯರ ಸಂಘ, ೧೯೯೫.
32) ಸೋಮನಾಥಾನಂದ, ಉಪನಿಷತ್ ಭಾವಧಾರೆ, ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು, ೧೯೮೯.

33) ಹಲಸಂಗಿ ಚೆನ್ನಮಲ್ಲಪ್ಪ, ಲಿಂಗಪ್ಪ, ರೇವಣ್ಣ (ಸಂಗ್ರಹಕಾರರು), ಗರತಿಯಹಾಡು, ಉದಯ ಮುದ್ರಣಾಲಯ, ಧಾರವಾಡ, ೧೯೫೬.

## English References

1) Akshaya Kumari Devi, A History of Sanskrit Literature, Vijaya Krishna Brothers, Book Seller and Publishers, Calcutta.

2) Bose A.C., The call of Vedas, Bharatiya Vidya Bhavan, Bombay, 1960.

3) Daftari K.L., The Social Institutions in Ancient India, Nagpur University Office, 1947.

4) Florida Scott - Maxwell, Women and Sometimes Men, Routledge and Kegalpaul, London, 1957.

5) Kewal Motwani, Manu Dharma Shastra, Ganesh & Co. (Madras) Pvt. Ltd., Madras, 1958.

6) Lewis Mumford, The Transformation of Man, George Allen & Unwin Ltd., London, 1959.

7) Pusalker A.D., Studies in Epics and Puranas of India, Bharatiya Vidya Bhavan, Bombay, 1955.

8) Padma M.B., The Position of Women in Mediaeval Karnataka, Prasaranga, University of Mysore, Mysore, 1993.

9) Rajamani M.B., Gandhian Social Thought, Prasaranga, University of Mysore, Mysore, 1997.

10) Robert Briffault, The Mothers, Ruskin House, George Allen & Unwin Ltd., London, 1959.

11) Sir Monier Monier - Williams, Brahmanism and Hinduism, John Murray, Albermarle Street, London, 1887.

12) Sharma D.S., Hinduism Through The Ages, Bharatiya Vidya Bhavan, Bombay, 1956.

13) Shakunthala Rao Shastri, Women In 'The Secred Laws', Bharatiya Vidya Bhavan, Bombay, 1960.

14) Shakunthala Rao Shastri, Women in the Vedic Age, Bharatiya Vidya Bhavan, Bombay, 1954.

15) Sri Aurobindo 'The Story of His Life, Sri Aurobindo Ashram, Pandichery, 1974.

16) Swami Madhavananda and Ramesh Chandra Majumdar (Ed.), Great Women of India, Advaita Ashrama, Almora, 1953.

ಅನುಬಂಧ ಆರು

# ದ.ರಾ.ಬೇಂದ್ರೆ ಗೀತಗಾಯನ ಕಾರ್ಯಕ್ರಮವನ್ನು ನಡೆಸಿದ ಶಾಲಾ ಕಾಲೇಜುಗಳು ಮತ್ತು ಮಹನೀಯರಕೆಲವು ವಿವರಗಳು.

೧೯೮೮ರಲ್ಲಿ ಗೋಕಾಕ್‌ನಲ್ಲಿ ಪ್ರೌಢಶಾಲೆ ಮತ್ತು ಕಾಲೇಜು ವಿದ್ಯಾರ್ಥಿಗಳಿಗೆ ಬೇಂದ್ರೆ ಕವನ ಗಾಯನ ಸ್ಪರ್ಧೆ - ನಿಂಗಣ್ಣ ಸಣ್ಣಕ್ಕಿ, ಮೊದಲ ಕಾರ್ಯಕ್ರಮ. ಬೆಳಗಾವಿಯ ಕೋಟೆಯಲ್ಲಿರುವ ಕಮಲ ಬಸದಿಯ ಹುಲ್ಲು ಹಾಸಿನ ಮೇಲೆ-ಬಿ. ಸುಭಾಷ ಚೌಗಲೆ; ಬಂಗಾರ ಪೇಟೆ ತಾ|| ದೊಡ್ಡ ಪೊನ್ನಾಂಡಹಳ್ಳಿ ಸರ್ಕಾರಿ ಪ್ರೌಢಶಾಲೆ - ಮುಖ್ಯೋಪಾಧ್ಯಾಯ ಎಂ. ಬೆಳ್ಳಾರಪ್ಪ; ಕ್ಯಾಸಂಬಳ್ಳಿ, ಕಾಮಸಮುದ್ರ, ಬೂದಿಕೋಟೆಯಲ್ಲಿ - ನಂಗಲಿ ಎಂ. ಸ್ವಸ್ತಿಕ್ ಶಿವಾನಂದಂ ಮತ್ತು ದಿ|| ಬಿ.ಎಂ. ಆಂಜನೇಯ ರೆಡ್ಡಿ; ಬಿ.ಇ.ಎಂ.ಎಲ್. ನಗರದ ಮಹಿಳಾ ಸಮಾಜ- ಸರಿತಾ ಜ್ಞಾನಾನಂದ; ಮೈಸೂರು ತಾ|| ಜಯಪುರದ ಶ್ರೀ ರಾಘವೇಂದ್ರ ವಿದ್ಯಾಪೀಠ ಪ್ರೌಢಶಾಲೆಯಲ್ಲಿ 'ದ.ರಾ. ಬೇಂದ್ರೆ ವೇದಿಕೆ' ಸ್ಥಾಪನೆ- ಎಸ್. ಸುಧೀಂದ್ರ; ಧ್ವನ್ಯಾಲೋಕ, ಮೈಸೂರು - ಸಿ.ಡಿ. ನರಸಿಂಹಯ್ಯ; ದೇವನಹಳ್ಳಿ ವಿಶ್ವನಾಥಪುರ-'ವಿಕಾಸ' ಸಾಮಾಜಿಕ ಸಂಸ್ಥೆಯ ಪ್ರಾಜೆಕ್ಟ್ ಆಫೀಸರ್ ಎ.ವಿ. ನಾಗರಾಜು; ನಾಗಮಂಗಲ 'ಕನ್ನಡಸಂಘ' ದಲ್ಲಿ ೧೯೯೪ರಿಂದ ಬೇಂದ್ರೆ ಜನ್ಮ ದಿನಾಚರಣೆ - ಕಲೀಂ ಉಲ್ಲಾ, ನಾಗೇಶ್; ಶ್ರೀ ರಾಮಕೃಷ್ಣ ವಿದ್ಯಾಶಾಲಾ, ಮೈಸೂರು - ಸ್ವಾಮಿ ಮುಕ್ತಿದಾನಂದ, ರಾಹುಲ್. ಎಸ್.ಕಿಣಿ ಬಾಲಾಜಿ; ವಿಶ್ವ ವಿದ್ಯಾಲಯ ಸಂಜೆ ಕಾಲೇಜು, ಮೈಸೂರು - ಕೆ. ಅನಂತರಾಮು, ಕೆ. ಭೈರವಮೂರ್ತಿ; ಉದಯಭಾನು ಕಲಾಸಂಘ, ಬೆಂಗಳೂರು-ಎಂ. ನರಸಿಂಹ, 'ಸಂಗಮ ಸಾಂಸ್ಕೃತಿಕ ಕೇಂದ್ರ', ರಹಮಾನ್ ಖಾನ್ ಗೆಳೆಯರ ಬಳಗ, 'ಸ್ಪಂದನ' ಸಂಸ್ಥೆ ಮತ್ತೀಕೆರೆ, ಬೆಂಗಳೂರು - ಸಮಿಉಲ್ಲಾಖಾನ್, ಶೆ. ಬೊ.ರಾಧಾಕೃಷ್ಣ, ರವಿ; 'ಕನ್ನಡ ಸಹೃದಯ ಬಳಗ' ಸಿ.ಎಫ್.ಟಿ.ಆರ್.ಐ. -ರಂಗಧಾಮಯ್ಯ; 'ಸಹೃದಯ ಬಳಗ' ದೇವನಹಳ್ಳಿ ತಾ|| ಕಾರಹಳ್ಳಿ, ಜಿ. ಮುನೇಗೌಡ; ಚಿಕ್ಕಮಗಳೂರು ಗಡಿಕಲ್, ಹಿರೇಕೊಡಿಗೆಯ ಲಾಲ್ ಬಹದ್ದೂರ್ ಶಾಸ್ತ್ರೀ ಪ್ರೌಢಶಾಲೆ-ಸೌಕೂರು ಸುಬ್ರಹ್ಮಣ್ಯ ಅಡಿಗ; 'ಜ್ಞಾನದರ್ಶಿನಿ ಮಹಿಳಾ ಸಮಾಜ' ಮೈಸೂರು- ಟಿ.ವಿ. ಅನ್ನಪೂರ್ಣಮ್ಮ; ಚಿಲ್ಡ್ರನ್ಸ್ ಲಿಟರರಿ ಕ್ಲಬ್, ಮೈಸೂರು - ಆರ್. ಪೂರ್ಣಿಮಾ; 'ಒಲವೆ ನಮ್ಮ ಬದುಕು' ನೃತ್ಯ ರೂಪಕ -ಮೈಸೂರಿನ ಅಪರ್ಣಾ ಸಿಂಧೂರ್; "ಕುಣಿಯೋಣು ಬಾರಾ ಬೇಂದ್ರೆಯೊಡನೆ" ರೂಪಕ (ರಚನೆ: ಜಿ. ಕೃಷ್ಣಪ್ಪ) ಮೈಮ್ ರಮೇಶ್ (ನಿರ್ದೇಶನ) ಪ್ರಶಾಂತ್ ಹಿರೇಮಠ್ (ಸಂಗೀತ ನಿರ್ದೇಶನ), ಸಂತೋಷ್ ಕುಮಾರ್ ಕುಸನೂರು ಶ್ರೀನಿವಾಸ ಭಟ್ (ಚೀನಿ) ಮತ್ತು ಪಿ.ವಿ.ದೇವರಾಯ ಮಲ್ಯ; ಶ್ರೀಮತಿ ಕೆ.ಎಸ್. ನಾಗರತ್ನಮ್ಮ ಬಾಲಿಕಾ ಪ್ರೌಢಶಾಲೆ-ಸ.ರಾ. ಶಿವಲಿಂಗಯ್ಯ ಮತ್ತು ಗುಂಡ್ಲುಪೇಟೆ ಪುರಸಭಾಧ್ಯಕ್ಷರಾಗಿದ್ದಾಗ ಒಂದು ಬಡಾವಣೆಗೆ ದ.ರಾ. ಬೇಂದ್ರೆ ನಗರವೆಂದು ನಾಮಕರಣ ಮಾಡಿದ ಪುಟ್ಟತಾಯಮ್ಮ;

ಸುದರ್ಶನ 'ಭಾರತೀಯ'; ಭಾರತೀ ಕಾಲೇಜು, ಭಾರತೀನಗರ, ಮಂಡ್ಯ - ಸಿ.ಪಿ. ನಾಗರಾಜು, ಮ.ರಾಮಕೃಷ್ಣ; ತುಮಕೂರು ಜಿಲ್ಲೆ ಮಧುಗಿರಿ ತಾ|| ಕೊಡಿಗೇನಹಳ್ಳಿ ಕಾಂಪೋಜಿಟ್ ಜೂನಿಯರ್ ಕಾಲೇಜ್-ಕೆ. ನಾಗರಾಜು; ಮೈಸೂರಿನ ರೊಟೇರಿಯನ್ ಎಚ್.ಎಸ್. ಮೂರ್ತಿ; ಮೈಸೂರಿನ ಚಾಮುಂಡಿಬೆಟ್ಟದ ಟಿ.ಎಸ್. ಸುಬ್ಬಣ್ಣ ಸಾರ್ವಜನಿಕ ಪ್ರೌಢಶಾಲೆ-ಮುಖ್ಯೋಪಾಧ್ಯಾಯರು; ಮೈಸೂರಿನ ವಿದ್ಯಾವರ್ಧಕ ಪ್ರಥಮ ದರ್ಜೆ ಕಾಲೇಜು-ಶಿವರಾಮು ಕಾಡನಕುಪ್ಪೆ; ಕೆ.ಜಿ. ಎಫ್. ನ ಸುಭಾಷಿಣಿ ಮಹಿಳಾ ಕಾಲೇಜು- ಪ್ರಿನ್ಸಿಪಾಲರು; ಮಂಡ್ಯದ ಪ್ರಥಮ ದರ್ಜೆ ಮಹಿಳಾ ಕಾಲೇಜು-ಎ. ಜಾನಕಿ; ಹಾಸನ ಜಿಲ್ಲೆ ಬೇಲೂರಿನ ಪ್ರಥಮ ದರ್ಜೆ ಕಾಲೇಜು-ರಂಗಸ್ವಾಮಿ; ಕುಂದಗೋಳ ತಾ|| ಇಂಗಳಗಿಯ ಸರ್ಕಾರಿ ಪ್ರೌಢಶಾಲೆ-ಬಿ.ಬಿ. ಕೊಟಬಾಗಿ; ಧಾರವಾಡದ ಕೆ.ಇ. ಬೋರ್ಡ್ ಪ್ರೌಢಶಾಲೆ-ಕೃಷ್ಣಜೋಶಿ; ಚಾಮರಾಜನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು- ಮಲೆಯೂರು ಗುರುಸ್ವಾಮಿ; ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಪಿರಿಯಾಪಟ್ಟಣ-ಕೆ.ಎಸ್. ನರಸಿಂಗರಾವ್; ಹುಬ್ಬಳ್ಳಿಯ ಕೆ.ಎಲ್.ಇ., ಪಾಲಿಟೆಕ್ನಿಕ್ -ಜಿ.ಎಸ್. ಮಹಾಜನ ಶೆಟ್ಟರು; ಧಾರವಾಡ ತಾ|| ಮುಗದ ಗ್ರಾಮ - ಬೇಂದ್ರೆಯವರು 'ನರಬಲಿ' ಕವನ ರಚಿಸಿದ ಕಾರಣ ೧೯೩೨ರಲ್ಲಿ ಈ ಗ್ರಾಮದಲ್ಲಿ ನಜರ್‌ಬಂದಿಯಾಗಿದ್ದರು. ಹನುಮಂತಪ್ಪ ಮಾವಳೇರ ಪ್ರೌಢಶಾಲೆ - ಆರ್.ಎಸ್. ಮನ್ನಾರಿ; ಬಾಲಕೀಯರ ಪದವಿಪೂರ್ವ ಕಾಲೇಜು, ನಂಜನಗೂಡು- ಜಯಂತಿ; ಚಂದ್ರಪ್ಪ ಗೌರಶೆಟ್ಟಿ ಪದವಿ ಪೂರ್ವ ಕಾಲೇಜು, ಬೀದರ - ವೀರೇಂದ್ರ ಸಿಂಪಿ; ಬೀದರದ 'ಕುವೆಂಪು ಕನ್ನಡ ಸಂಘ'ದಿಂದ ಲಕ್ಷ್ಮೀಬಾಯಿ ಕಮಠಾಣಾ ಪದವಿಪೂರ್ವ ಕಾಲೇಜಿನಲ್ಲಿ ಬೇಂದ್ರೆ ಜನ್ಮದಿನಾಚರಣೆ - ಪಂಚಾಕ್ಷರಿ ಪುಣ್ಯಶೆಟ್ಟಿ.

**೨೦೦೨ ರಿಂದ ೨೦೧೨**

ಸಿದ್ಧರಾಮಪ್ಪ ಮಾಸಿಮಡೆ ಅಧ್ಯಕ್ಷರು ಜಿಲ್ಲಾ ಕ.ಸಾ.ಪ ಬೀದರ ಅವರು ದ.ರಾ. ಬೇಂದ್ರೆ ಕಾವ್ಯ ಗಾಯನ ಸ್ಪರ್ಧೆಯನ್ನು ಬೀದರದಾದ್ಯಂತ ಶಾಲಾಕಾಲೇಜುಗಳಲ್ಲಿ ನಡೆಸಿದ್ದು : **ಬೀದರ** – ಅಕ್ಕಮಹಾದೇವಿ ಪ್ರೌಢಶಾಲೆ, ಸಿದ್ಧಾರ್ಥ ವಿದ್ಯಾ ಸಂಸ್ಥೆ, ಶ್ರೀ ಶರಣ ಬಸವೇಶ್ವರ ಅಭ್ಯಾಸಾರ್ಥ ಪ್ರೌಢಶಾಲೆ, ಬಿ.ವಿ.ಬಿ. ಕಾಲೇಜು, ವಿದ್ಯಾರಣ್ಯ ಪ್ರೌಢಶಾಲೆ, ಬಸವತತ್ವ ಶಿಕ್ಷಣ ಸಂಸ್ಥೆ, ಸರ್ಕಾರಿ ಪ.ಪೂ. ಕಾಲೇಜು (ಕನ್ಯಾ), ಸರ್ಕಾರಿ ಪ.ಪೂ. ಕಾಲೇಜು (ಬಾಲಕರು), ಬಸವ ಮುಕ್ತಿ ಮಂದಿರ ಪ್ರೈಮರಿ ಶಾಲೆ, ಸೇಂಟ್ ಜೋಸೆಫ್ ಪ್ರೌಢಶಾಲೆ, ರಾಷ್ಟ್ರೀಯ ಸಂತೋಷ ಶಿಕ್ಷಣ ಸಂಸ್ಥೆ ಚಿಕ್ಕಮ್ಮಣ್ಣಿ ಡಿ ದೇವರಾಜ ಅರಸು ಪ್ರೌಢಶಾಲೆ, ರೇಣುಕಾ ಪ.ಪೂ. ಮಹಾವಿದ್ಯಾಲಯ, ಶ್ರೀ ಸಾಯಿ ಆದರ್ಶ ಪ್ರೌಢ ಶಾಲೆ, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಶಾಮರಾಜಪುರ ಅಗ್ರಹಾರ, ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ ಸೊಲಪುರ, ದತ್ತಗಿರಿ ಮಹಾರಾಜ್ ಪ್ರೌಢಶಾಲೆ, ಶ್ರೀ ವಿದ್ಯಾನಿಕೇತನ ಚಾರಿಟಬಲ್ ಟ್ರಸ್ಟ್ ಪ್ರೌಢ ಶಾಲೆ, ಶ್ರೀಮತಿ ಇಂದಿರಾಬಾಯಿ ಜಿ. ಶಟಕಾರ ಪ್ರೌಢಶಾಲೆ ಮತ್ತು ಶ್ರೀ ಸಿದ್ಧಾರೂಢ ಆಂಗ್ಲ ಮಾಧ್ಯಮ ಶಾಲೆ, ಕ.ರಾ.ಶಿ. ಸಂಸ್ಥೆಯ ಎಂ.ಎಸ್. ಮುದ್ದಣ್ಣ ಡಿ.ಎಡ್ ಕಾಲೇಜು, ಸರ್ಕಾರಿ ಪ್ರೌಢಶಾಲೆ ಸಂಗೊಳಗಿ, ಸೇಂಟ್ ಜೋಸೆಫ್ ಸಂಯುಕ್ತ ಪ.ಪೂ. ವಿದ್ಯಾಲಯ. ಜಗಜ್ಯೋತಿ ಶಿಕ್ಷಣ ಸಂಸ್ಥೆ ರವೀಂದ್ರ ಪ್ರೌಢಶಾಲೆ, ಅನ್ನಪೂರ್ಣ ಪ್ರೌಢಶಾಲೆ, ಸರ್ಕಾರಿ ಪ್ರೌಢಶಾಲೆ – ಅಮಲಾಪುರ. **ಹುಮ್ನಾಬಾದ್** – ಬಸವ ತೀರ್ಥ ವಿದ್ಯಾಪೀಠ ಪ್ರೌಢಶಾಲೆ, ರಾಜ್ಯ ಶಿಕ್ಷಣ ಸಂಶೋಧನಾ ಇಲಾಖೆ, ಕ್ಷೇತ್ರ ಸಂಪನ್ಮೂಲ ಕೇಂದ್ರ, **ಔರಾದ್** – ಸರ್ಕಾರಿ ಪ್ರೌಢಶಾಲೆ ಹೆಡಗಾಪುರ, ಲತಾಮಂಗೇಶ್ಕರ್ ಪ್ರೌಢಶಾಲೆ ಕಮಲನಗರ, ಗುರಪ್ಪ ಟೊಣ್ಣೆ ಹಿರಿಯ ಪ್ರಾಥಮಿಕ ಶಾಲೆ ಕಮಲನಗರ, ಡಾ॥ ಚನ್ನಬಸವ ಪಟ್ಟದ್ದೇವರು ಪ್ರೌಢಶಾಲೆ ಕಮಲನಗರ, ಬಸವಗುರು ಪ್ರೌಢಶಾಲೆ ಔರಾದ್, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಗುಡಪಳ್ಳಿ, **ಭಾಲ್ಕಿ** – ಶಿವಾಜಿ

ಹಿರಿಯ ಪ್ರಾಥಮಿಕ ಶಾಲೆ ಹಾಗೂ ಪ್ರಾಥಮಿಕ ಶಾಲೆ ಭಾಲ್ಕಿ, ಶ್ರೀ ಚನ್ನಬಸವೇಶ್ವರ ವಿದ್ಯಾಸಂಸ್ಥೆಯ ಗುರುಕುಲ ವಸತಿ ಶಾಲೆ ಕರಡ್ಯಾಳ, ಶ್ರೀ ಚನ್ನಬಸವೇಶ್ವರಿ ವಿದ್ಯಾ ಸಂಸ್ಥೆಯ ಡಿ.ಎಸ್. ಕಾಲೇಜು ಕರಡ್ಯಾಳ, ಸರ್ಕಾರಿ ಪ್ರೌಢಶಾಲೆ ಡೋಣಗಾಪುರ. **ಬಸವಕಲ್ಯಾಣ** : ಶ್ರೀ ಬಸವೇಶ್ವರ ಪ್ರೌಢಶಾಲೆ.

**ಬೆಂಗಳೂರು** : ಚಾಮರಾಜ ಪೇಟೆ – ಶ್ರ.ದೇ. ಪಾರ್ಶ್ವನಾಥ್, ಟಿ. ತಿಮ್ಮೇಶ್, ರಾ.ನಂ. ಚಂದ್ರಶೇಖರ, ಎಚ್. ಸುಧಾಮಣಿ, ಶ್ರೀಧರ ಪರಮೇಶ್ವರ ಹೆಗ್ಗಡೆ, ಕೆಂಪೇಗೌಡನಗರ – ಎಂ. ನರಸಿಂಹ, ಮತ್ತಿಕೆರೆ – ಸಮಿಉಲ್ಲಾಖಾನ್, ಬಸವೇಶ್ವರನಗರ – ಎಸ್. ದೀಕ್ಷಿತ್, ರಾಜಾಜಿನಗರ – ಕೆ.ಎಸ್. ರಾಜು, ಸಿ.ವಿ. ಮುರಳೀಧರ, ದಯಾನಂದ ಕಟ್ಟೆ, ಬನಶಂಕರಿ – ನಾ. ಸಾಯಿರಾಮ್ ಪ್ರಸಾದ್, ಶೇಷಾದ್ರಿಪುರ – ಜಗದೀಶ ಮುಳಬಾಗಿಲು, ಇಂದಿರಾನಗರ – ನಂ. ನಂಜಪ್ಪ, ಎಂ.ಬಿ. ನಂಜಪ್ಪ, ವಿಜಯನಗರ – ಪಿನಾಕ ಪಾಣಿ, ಕೊಡಗೇಹಳ್ಳಿ, ಸಹಕಾರನಗರ – ತುಳಜಾರಾಮ್‌ಭೂತೆ, ರವಿ ಉಪಾಧ್ಯಾಯ, ರಾಜಮಹಲ್ ಗುಟ್ಟಹಳ್ಳಿ – ನಾರಾಯಣರಾವ್ ಮಾನೆ, ಕೋರಮಂಗಲ – ಮ. ಚಂದ್ರಶೇಖರ. ದೇವರ ಚಿಕ್ಕನಹಳ್ಳಿ – ವಿ.ಎಸ್. ರವಿಚಂದ್ರ, ಜಾಲಹಳ್ಳಿ – ಎನ್. ಮಾದೇಶ್, ಯು. ಶಶಿಕಲಾ, ಬಿ.ಇ.ಎಲ್. – ನಾ. ಶ್ರೀಧರ್, ಎಂ. ಇ. ಅಹಮದ್ ಖಾನ್, ಪ್ರಜಾವಾಣಿ ಎಂ.ಜಿ. ರಸ್ತೆ – ಕೆ.ಎನ್. ಶಾಂತಕುಮಾರ್, ಪದ್ಮರಾಜ ದಂಡಾವತಿ, ಮಲ್ಲೇಶ್ವರ, ರಾಮಮೋಹನಪುರ – ಕೆ.ಬಿ. ಲೋಕೇಶ್ವರಪ್ಪ, ಪುಟ್ಟಸ್ವಾಮಿ, ಆರ್.ಕೆ. ಶ್ರೀಧರ ಮೂರ್ತಿ, ಕೆನರ ಬ್ಯಾಂಕ್ ಪೀಣ್ಯ – ಎಸ್.ಎಂ. ನಿರಂಜನರಾಜ್, ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ ಸೇಂಟ್ ಮಾರ್ಕ್ಸ್ ರೋಡ್ – ಕೆ.ಎನ್. ಮಹಾಬಲ, ಜರಗನಹಳ್ಳಿ – ಜರಗನಹಳ್ಳಿ ಶಿವಶಂಕರ್, ದೊಮ್ಮಲೂರು – ಎಸ್. ರಾಜೇಂದ್ರಪ್ಪ, ವಿ.ಎಸ್. ರಾಜಣ್ಣ, ಮಠದ ಹಳ್ಳಿ – ಸಿಸಿರಾ, ನಾಗನಾಥಪುರ – ನರಸಿಂಹಶೆಟ್ಟಿ, ಎನ್.ಆರ್. ಕಾಲೋನಿ – ಸುಂಕಂ ಗೋವರ್ಧನ್, ನಾಗರಬಾವಿ – ಎಂ. ಪ್ರಸನ್ನಕುಮಾರ್, ಪದ್ಮನಾಭನಗರ – ಕೆ. ವೆಂಕಟರಾಮಯ್ಯ, ವೆಂಕಟಸುಬ್ಬರಾವ್ ಬಿ.ಎಸ್., ಸರ್ಕಾರಿಕಲಾ ಕಾಲೇಜು, ಸ್ನಾತಕೋತ್ತರ ಕೇಂದ್ರ – ಕೆ. ಕೃಷ್ಣಪ್ಪ. ಥಣಿಸಂದ್ರ – ಟಿ.ಆರ್. ರವಿಕುಮಾರ್.

ನೆಲಮಗಲದ ಯಂಟಗಾನಹಳ್ಳಿ – ಬಿ.ವಿ. ನರಸಿಂಹರಾಜು, ತ್ಯಾಮಗೊಂಡ್ಲು – ಜೆ. ಗಂಗಾಧರ, ಶ್ಯಾಮಸುಂದರ ಕೋಚಿ, ಮಾಗಡಿ – ಡಿ.ಆರ್. ಚಂದ್ರ ಮಾಗಡಿ, ಸುನೀಲ್. ವಿಜಯಪುರ – ರು. ಬಸಪ್ಪ.

**ಕೋಲಾರ** – ರುದ್ರೇಶ್ ಬಿ. ಅದರಂಗಿ. **ದಾವಣಗೆರೆ** : ಎಸ್. ನಾಗರಾಜು, ಹರಿಹರ – ಎಸ್. ಎಚ್. ಹೂಗಾರ್. **ತುಮಕೂರು** : ಮೆಳೆಕೋಟೆ – ಎಂ. ಆಂಜನೇಯ. ಹೆಬ್ಬೂರು – ಹೆಚ್.ವಿ. ಪಾಂಡುರಂಗ ಶೆಟ್ಟಿ, ಸಿದ್ಧ ಗಂಗಾಮಠ ಅಂಧ ಮಕ್ಕಳ ಪಾಠಶಾಲೆ, ಸನಿವಾಸ ಉನ್ನತ ಪ್ರೌಢಶಾಲೆ – ಪಂಡಿತ ಎಚ್. ಹನುಮಂತರಾಯ, ಡಿ.ಕೆ. ಶ್ಯಾಮಸುಂದರ ರಾವ್, ಎ.ಬಿ. ಬಾಣದ, ಕೊರಟಗೆರೆ ತಾ॥ ಇರಕಸಂದ್ರ ಕಾಲೋನಿ, ದುಡ್ಡನಹಳ್ಳಿ – ಆರ್. ಮುದ್ದುರಂಗಯ್ಯ. **ಮಂಡ್ಯ** : ಕೃಷ್ಣರಾಜಪೇಟೆ ಹೇಮಗಿರಿ – ಜಯಪ್ರಕಾಶಗೌಡ, ನಾಗಮಂಗಲ – ನಾ. ಸು. ನಾಗೇಶ್, ಕಿಕ್ಕೇರಿ – ತಹಸೀಲ್ದಾರ್ ಎಚ್. ಎಲ್ ನಾಗರಾಜ್, ಹರಿಹರಪುರ – ಎಂ.ಎನ್. ಮಂಜುನಾಥ್, ರಶ್ಮಿ, ಮೈಲಾರ ಪಟ್ಟಣ – ಮಹಮ್ಮದ್ ಕಲೀಂಉಲ್ಲ.

**ಮೈಸೂರು** : ನೀ. ಗಿರಿಗೌಡ, ರಂಗಧಾಮಯ್ಯ, ಡಿ.ಎನ್. ಲೋಕಪ್ಪ **ಧಾರವಾಡ** : ಶಾಲಿನಿರಘುನಾಥ್, ಎಂ.ಎಂ. ಕಲಬುರ್ಗಿ, ನಿರ್ಮಲಾಮಠಪತಿ, **ಹಾಸನ** : ಹಳೆಬೀಡು, ಪುಷ್ಪಗಿರಿ,

ಹಾಸನನಗರ, ಸಕಲೇಶಪುರ, ಡೈಯಟ್ ಹಾಸನ, ಬೇಲೂರು ತಾ॥ ಅರೇಹಳ್ಳಿ, ಬೇಲೂರು – ತಂಗಿ ಜಿ. ವರಲಕ್ಷ್ಮಿ, ವಿ. ಲಕ್ಷ್ಮಣ್ **ಹೊಸಪೇಟೆ** : ಆನಂದ ಪಾಟೀಲ. **ಚಿತ್ರದುರ್ಗ** : ಬೆಳೆಗೆರೆ ನಾರಾಯಣಪುರ – ಬೆಳಗೆರೆ ಕೃಷ್ಣಶಾಸ್ತ್ರಿ, ಶ್ರೀ ಪಾದಪೂಜಾರ್, **ಶಿವಮೊಗ್ಗ** : ಕೋಣಂದೂರು, ಮೇಗರವಳ್ಳಿ, ಆಗುಂಬೆ – ಎಸ್. ಕುಮಾರಸ್ವಾಮಿ. ಭದ್ರಾವತಿ – 'ಭೂಮಿಕಾ' ಕೃಷ್ಣ ಎಸ್. ಭಟ್ **ಗುಲ್ಬರ್ಗ** : ಗೋಗಿ, ದರ್ಶನಾಪುರ, ಶಹಾಪುರ, ಚಾಮನಾಳ, ಯಾದಗಿರಿ – ಡಿ.ಎನ್. ಅಕ್ಕಿ. **ದಾವಣಗೆರೆ** : ಸಾಸ್ವೆಹಳ್ಳಿ, ಹೊನ್ನಾಳಿ, ಹಿರೇಕಲ್ಮಠ, – ಯು.ಎನ್. ಸಂಗನಾಳಮಠ, ಕೆ.ಪಿ. ದೇವೇಂದ್ರಯ್ಯ, ಪಿ.ಎಂ. ಸಿದ್ಧಯ್ಯ, ಎಂ.ಎಸ್. ರೇವಣಪ್ಪ. **ದಕ್ಷಿಣ ಕನ್ನಡ** : ಮೂಡುಬಿದರೆ – ಎಂ. ಮೋಹನ ಆಳ್ವ, ಉಜಿರೆ : ಬಿ.ಪಿ. ಸಂಪತ್ ಕುಮಾರ್, ಕೆ.ವಿ. ನಾಗರಾಜಪ್ಪ. **ಉತ್ತರ ಕನ್ನಡ** : ಹೊನ್ನಾವರ – ಕೃಷ್ಣ ಎಸ್. ಭಟ್.

ಅನುಬಂಧ ಏಳು

# ವಸ್ತು ಸೂಚಿ

## ಲೇಖಕರ ಕೃತಿಗಳು

೧. ಹಾಡುಹಕ್ಕಿ ಅಂಬಿಕಾತನಯದತ್ತ (೧೯೯೫)
ಮೂರನೆ ಆವೃತ್ತಿ ೨೦೧೨

೨. ಡಿ.ಆರ್. ಬೇಂದ್ರೆ (೧೯೯೭)
ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಆಂಗ್ಲಕೃತಿ

೩. ನಾಕುತಂತಿ – ಒಂದು ಟಿಪ್ಪಣಿ (೨೦೦೦)
ಎರಡನೆ ಆವೃತ್ತಿ ೨೦೧೦

೪. ರಸ್ತೆ ನಿಯಮಗಳು (೨೦೦೦)
ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಕೃತಿ
ಮೂರನೆ ಆವೃತ್ತಿ ೨೦೧೧

೫. ಹೂತSದ ಹುಣಸಿ (೨೦೦೦)
(ದ.ರಾ. ಬೇಂದ್ರೆ ಕಾವ್ಯ ವಿಮರ್ಶೆ)
ಎರಡನೆ ಆವೃತ್ತಿ ೨೦೧೧

೬. ಬೇಂದ್ರಯವರ ಸಾಹಿತ್ಯದಲ್ಲಿ ಸ್ತ್ರೀ – ಒಂದು ಅಧ್ಯಯನ (೨೦೦೧)
(ಪಿಎಚ್.ಡಿ., ಮಹಾಪ್ರಬಂಧ)
ಎರಡನೆ ಆವೃತ್ತಿ ೨೦೧೨

೭. ಬರೆಹದಲ್ಲಿ ಬೇಂದ್ರೆಯವರ ಬದುಕು (೨೦೦೮)
ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ಧಾರವಾಡ ಪ್ರಕಟಿಸಿರುವ ಕೃತಿ

೮. ಅಂತರಂಗದತ್ತ ನಯನ (೨೦೧೦)

೯. ಮಹಾಕವಿ ಲಕ್ಷ್ಮೀಶನ ವಚನ ಜೈಮಿನಿ ಭಾರತ ೨೦೧೨

# ಅಭಿಪ್ರಾಯಗಳು

೧. ಹಾಡುಹಕ್ಕಿ ಅಂಬಿಕಾತನಯದತ್ತ

ಮೋಟಾರು ವಾಹನಗಳ ಪರಿವೀಕ್ಷಕರಾದ ಶ್ರೀ ಜಿ.ಕೃಷ್ಣಪ್ಪನವರು ಬೇಂದ್ರೆ ಕಾವ್ಯ ವೈಭವಕ್ಕೆ ಮನಸೋತು ಅದರ ಅಧ್ಯಯನ, ಚಿಂತನ, ಮನನ, ಪ್ರಸರಣಗಳಿಗೆ ತಮ್ಮನ್ನು ಸಮರ್ಪಿಸಿಕೊಂಡದ್ದು ಕನ್ನಡ ಸಾಹಿತ್ಯದ ಭಾಗ್ಯವೇ ಸರಿ. "ಆದದ್ದೆಲ್ಲ ಒಳಿತೇ ಆಯಿತು; ಬೇಂದ್ರೆಯ ಕಾವ್ಯವ ಸೇವಿಸುವುದಕೆ ಸಾಧನ ಸಂಪತ್ತಾಯಿತು." 'ಹಾಡುಹಕ್ಕಿ ಅಂಬಿಕಾತನಯದತ್ತ'ದ ಮೂಲಕ ಅವರು ಬೇಂದ್ರೆ ಕಾವ್ಯಾಧ್ಯಯನದ ಕ್ಷೇತ್ರದಲ್ಲಿ ದೊಡ್ಡ ಹೆಜ್ಜೆಯಿಟ್ಟಿದ್ದಾರೆ. ಕೃಷ್ಣಪ್ಪನವರಂತಹ ಸಹೃದಯರ ಸಂತತಿ ಸಾವಿರವಾಗಬೇಕು; ಅವರು ಹಿಡಿಸುವ ಬೇಂದ್ರೆ ಕೃತಿಗಳ ಗುಂಗನ್ನು ಎಲ್ಲರೂ ಹಿಡಿಸಿಕೊಳ್ಳುವಂತಾಗಬೇಕು.

*ಡಾ. ಕೆ.ಅನಂತರಾಮು*

'ಹಾಡುಹಕ್ಕಿ ಅಂಬಿಕಾತನಯದತ್ತ' ಕೃತಿಯಲ್ಲಿ ಕವಿಯ ಜನನದಿಂದ ಮರಣದವರೆಗಿನ ಪ್ರಮುಖ ಘಟ್ಟಗಳಾದ ಹುಟ್ಟು, ವಿದ್ಯಾಭ್ಯಾಸ, ಸಾಂಸಾರಿಕ ಜೀವನ, ಸಂತಾನ, ಜೀವನ ವೃತ್ತಿ, ಸಾಹಿತ್ಯ ಸಾಧನೆ ಹಾಗೂ ಸಿದ್ಧಿಗಳ ದರ್ಶನವನ್ನು ಅತ್ಯಂತ ಸೂತ್ರ ಬದ್ಧವಾಗಿ ಸ್ಫಟಿಕ ಸದೃಶವಾಗಿ, ಸಂಶಯಗಳಿಗೆ ಎಡೆಗೊಡದಂತೆ ನಿರೂಪಿಸಿದ್ದಾರೆ. ಬೇಂದ್ರೆಯವರ ಕವನಗಳ ಅವತರಣಿಕೆಗಳಿಂದ ಅವು ಸಂಸ್ಮರಣೀಯ, ಚಿಂತನೀಯ ಎಂಬುದು ವಾಚಕರ ಗಮನಕ್ಕೆ ಬರುವಂತೆ ಮಾಡಿದ್ದಾರೆ. ಒಟ್ಟಿನಲ್ಲಿ ಕೃಷ್ಣಪ್ಪನವರ ಈ ಗದ್ಯ ಬರವಣಿಗೆ ಒಂದು ಗದ್ಯಭಾವಗೀತದಂತೆ ಮತ್ತು ಸರಸ ಸಣ್ಣ ಕಥೆಯಂತೆ ಅತ್ಯಂತ ಹೃದ್ಯವಾಗಿದೆ.

*ಡಾ. ವಾಮನ ಬೇಂದ್ರೆ*

೨. ಡಿ.ಆರ್. ಬೇಂದ್ರೆ (ಆಂಗ್ಲಕೃತಿ)

Krishnappa has divided the book into five petite chapters dealing with Bendre's life and career, his poetry, his plays and short stories, literary criticism and translation, the tribute paid to him by his worthy contemporaries and lastly a chronology of the important events of his life is given together with an exhaustive list of his complete works. We must wish Krishnappa all the success in his mission so that we may be the benificiaries of his labour and passion.

***Prof. C.Naganna in 'literary criterion'***

G. Krishnappa has this rare quality so missing in 'new' readers. I commend his works both Kannada and English. His English book illustrates the

peculiar Bendre quality with a few chastely renditioned, delicately translated passages. I wish him well in his effort.

***Dr. Shankar Mokashipunekar in 'Deccan Herald'***

**೩. ನಾಕುತಂತಿ - ಒಂದು ಟಿಪ್ಪಣಿ**

ಡಾ. ಜಿ.ಕೃಷ್ಣಪ್ಪನವರ 'ನಾಕುತಂತಿ' ಪ್ರಬಂಧ ಎಷ್ಟು ಬೇಕೋ ಅಷ್ಟನ್ನು ಮಾತ್ರ ಹೇಳುತ್ತದೆ. ಅನಗತ್ಯ ಹಿಂಜುವಿಕೆ, ಪುನರಾವರ್ತನೆ ಇಲ್ಲಿಲ್ಲ. ಇದೊಂದು ಕೆನೆಯಂತಹ ಬರವಣಿಗೆ,ಈ ಪುಟ್ಟ ಲೇಖನದ ಹಿಂದೆ ಸಾಕಷ್ಟು ಅಧ್ಯಯನ, ಚರ್ಚೆ, ಚಿಂತನೆ, ತಾಳ್ಮೆಗಳಿವೆ.

*ಡಾ. ಎಸ್.ಪಿ. ಪದ್ಮಪ್ರಸಾದ್*

ನಾಕುತಂತಿಯನ್ನು ನೀವು ಆಳವಾಗಿ ಅಭ್ಯಸಿಸಿ ಬರೆದಿದ್ದೀರಿ. ಅಭಿನಂದನೆಗಳು. ನಾನೂ ಆ ಕೃತಿಯ ಬಗ್ಗೆ ಬರೆದಿದ್ದೇನೆ, ಆದರೆ ನಿಮ್ಮಷ್ಟು ಆಳಕ್ಕಿಳಿಯದೆ.

*ಪ್ರೊ. ಸಿ.ಪಿ.ಕೃಷ್ಣಕುಮಾರ್*

**೪. ರಸ್ತೆ ನಿಯಮಗಳು**

ನೀವು ಕನ್ನಡ ಸಾಹಿತ್ಯ ಸೇವೆ ಮಾಡುತ್ತಿರುವುದು ಅವಿಸ್ಮರಣೀಯವಾದ ವಿಚಾರ. ಆದರೆ ಅದರ ಜೊತೆಗೆ ನಿಮ್ಮ ವೃತ್ತಿಕ್ಷೇತ್ರಕ್ಕೂ ಸಂಬಂಧಿಸಿದಂತೆ ನೀವು ಹೊರ ತಂದಿರುವ 'ರಸ್ತೆ ನಿಯಮಗಳು' ಒಂದು ಅಮೂಲ್ಯಕೃತಿ. ವಾಹನ ಚಾಲಕರಂತೂ ನಿಮ್ಮ ಈ ಕೃತಿಯಿಂದ ಅಪರಿಮಿತವಾದ ಲಾಭ ಪಡೆಯಬಹುದು.

*ಡಾ|| ಕೆ.ಅನಂತರಾಮು*

**೫. ಹೂತSದ ಹುಣಸಿ (ದ.ರಾ.ಬೇಂದ್ರೆ ಕಾವ್ಯ ವಿಮರ್ಶೆ)**

★ 'ಹೂತSದ ಹುಣಸಿ'ಯಂಥ ಕೃತಿಗಳಿಂದಾಗಿ ವಿಮರ್ಶೆಯ ವೃಕ್ಷ ಟಿಸಿಲೊಡೆಯುತ್ತದೆ. ಚಿಗುರುತ್ತದೆ.

**ಮುರಳೀಧರ ಉಪಾಧ್ಯಾಯ ಹಿರಿಯಡ್ಕ**

★ ಆತ್ಮೀಯರೇ......... ನಿಮ್ಮ ಪರಿಶುದ್ಧ ಕಾವ್ಯಪ್ರೇಮ, ಬೇಂದ್ರೆ ಅಭಿಮಾನ ಹಾಗೂ ಸಹೃದಯ ಪ್ರೀತಿ ನನ್ನಿಂದ ಈ ನಾಲ್ಕು ಸಾಲಿನ ನುಡಿನಮನವನ್ನು ಒಡನೆ ಹೊರಹೊಮ್ಮಿಸಿತು.

*ಅಂಬಿಕಾತನಯದತ್ತರ ವಾಣಿ ಕೃಷ್ಣಪ್ಪ,*
*ಅಂಬುರುಹ ಮಿತ್ರನಿಗೆ ಭ್ರಮರದೊಲ್, ಮಿಡಿಯುವರು*
*ತಂಬೂರಿ ನಾದವನು ಗಾನಗಾರುಡಿಗನಿಗೆ*
*ತುಂಬು ಮನದಿಂದಿವರು ನವಬೇಂದ್ರೆ ಅತ್ರಿಸೂನು.*

***

*ಅಂಬಿಕಾತನಯದತ್ತಾರ್ತಗ್ರಹ ಕೃಷ್ಣಪ್ಪ*
*ಅಂಬುರುಹ ಮಿತ್ರನಂ ನೇರ ವೀಕ್ಷಿಸಲಾರೆ*
*ಬಿಂಬವಂ ದರ್ಶಿಸುತ ಮೂಲವನ್ನೂಹಿಸೋ*
*ಡಿಂಬವಂಕುರಿಸುವುದು ನಿನ್ನೊಳಗೆ ಅತ್ರಿಸೂನು.*

*ಜಿ.ಟಿ. ನಾರಾಯಣರಾವ್*

★ ಜಿ. ಕೃಷ್ಣಪ್ಪನವರ ವಿಮರ್ಶೆಯಲ್ಲಿ ಬೌದ್ಧಿಕ ಕಸರತ್ತಿಗಿಂತಲೂ ಸೂಕ್ಷ್ಮ ಸಂವೇದಿಯಾದ ಪರಿಪಕ್ವ ಭಾವಕೋಶದ ಸಾಹಸಯಾತ್ರೆಯಿದೆ. ಅಂತೆಯೆ ಅವರು ಬೇಂದ್ರೆಯವರ ೧೫ ಕವನಗಳ ಪ್ರತಿಸಾಲಿನ ಶಬ್ದ ಜಾಲಾಡಿಸಿ ನೋಡಿದ್ದಾರಲ್ಲದೆ ಅವುಗಳ ಶಬ್ದಶಃ ಅರ್ಥದೊಂದಿಗೆ ಸೂಚ್ಯಾರ್ಥ, ಧ್ವನ್ಯಾರ್ಥಗಳನ್ನು ಒದಗಿಸಿದ್ದಾರೆ. ಅದರಂತೆ ಇಡಿಯಾಗಿ ಆಯಾ ಕವನದ ಒಟ್ಟಾರ್ಥವನ್ನು ತೀರಾಸಾಮಾನ್ಯ ವಾಚಕರಿಗೂ ತಿಳಿಯುವಂತೆ, ಕ್ಲಿಷ್ಟ ವಿಮರ್ಶೆಯ ಪರಿಭಾಷೆಯಿಂದ ಮುಕ್ತವಾದ ಭಾಷೆಯಲ್ಲಿ ವಿವರಿಸಿದ್ದಾರೆ. ಓದುಗನ ಕೈಹಿಡಿದು ಒಂದೊಂದು ಪದದ ಅರ್ಥ ಹೇಳುತ್ತ ಚರಣದ ಒಟ್ಟಾರ್ಥವನ್ನು ಕ್ರೋಢೀಕರಿಸುತ್ತ, ಅಲ್ಲಲ್ಲಿ ನಿಂತು ಆಯಾ ಕವನದ ಭಾವ ಸ್ವಾರಸ್ಯವನ್ನು ವಿವರಿಸುತ್ತ, ವಿಶ್ಲೇಷಿಸುತ್ತ, ಕವನದ ಕೇಂದ್ರ ಆಶಯವನ್ನು ವಿಶದೀಕರಿಸುತ್ತ ಹೋಗುವ ಕೃಷ್ಣಪ್ಪನವರ ವಿಮರ್ಶಾ ಪದ್ಧತಿ ಎಂಥ ಸಾಮಾನ್ಯ ಓದುಗನ ಅಷ್ಟೇ ಏಕೆ ಪಂಡಿತನ ಮೆಚ್ಚುಗೆಯನ್ನು ಗಳಿಸುವಲ್ಲಿ ಸಾರ್ಥಕತೆಯನ್ನು ಪಡೆದಿದೆ.

**ವೀರೇಂದ್ರ ಸಿಂಪಿ**

**೬. ಬರೆಹದಲ್ಲಿ ಬೇಂದ್ರೆಯವರ ಬದುಕು**

ಬೇಂದ್ರೆಯವರ ಆತ್ಮಕಥನಕ್ಕೆ ಎರಡು ಮುಖಗಳಿವೆ. 'ಸಖೀಗೀತ'ದಲ್ಲಿ ವಯಸ್ಕ ಬೇಂದ್ರೆ ಕಾಣಿಸಿದರೆ, 'ಮತ್ತೆ ಬಂತು ಶ್ರಾವಣ' ಸಂಕಲನದ ಬಾಲ್ಯಕಾಂಡದಲ್ಲಿ ವರಕವಿಯ ಬಾಲ್ಯ ಅನಾವರಣಗೊಂಡಿದೆ. ಕೃಷ್ಣಪ್ಪನವರು ಆರಿಸಿಕೊಂಡಿರುವುದು ಬಾಲ್ಯಕಾಂಡದ ಮೂಲಕ ಬೇಂದ್ರೆಯವರ ವ್ಯಕ್ತಿತ್ವವನ್ನು ರೂಪಿಸಿದ ಸಂಗತಿಗಳನ್ನು ನಿರೂಪಿಸುವಲ್ಲಿ. ಈ ಹುಡುಕಾಟಕ್ಕೆ ಸಾಕಷ್ಟು ಬೀಜಗಳು ಬಾಲ್ಯಕಾಂಡದಲ್ಲಿಯೇ ಇವೆಯಾದರೂ, ಬಾಲ್ಯಕಾಂಡದ ಸಂಗತಿಗಳಿಗೆ ಪೂರಕವಾಗಿ ಬೇಂದ್ರೆಯವರ ಇತರ ಕೃತಿಗಳಲ್ಲೂ ಲೇಖಕರು ಹುಡುಕಾಟ ನಡೆಸಿದ್ದಾರೆ. ಈ ತಡಕಾಟ ಬೇಂದ್ರೆಯವರ ಒಟ್ಟಾರೆ ಕಾವ್ಯದ ತಡಕಾಟವಾಗಿ ಖುಷಿಕೊಡುತ್ತದೆ.

**ರಘುನಾಥ ಚ.ಹ**

ಬೇಂದ್ರೆ ಅವರ ಕಾವ್ಯ – ಬದುಕಿನ ಬಗೆಗೆ ತಿಳಿದುಕೊಳ್ಳುವ ಕುತೂಹಲಕ್ಕಾದರೂ ಪುಸ್ತಕ ಸಂಗ್ರಹ ಯೋಗ್ಯ

**ನಾಗರಾಜ ಮತ್ತಿಗಾರ**

**೭. ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ – ಒಂದು ಅಧ್ಯಯನ**

★ ಸಂಶೋಧಕ ಮಾರ್ಗದರ್ಶಕರ ಅಪವಿತ್ರ ಸಂಬಂಧದಿಂದ ಮೌಲಿಕತೆಯನ್ನು ಕಳೆದುಕೊಂಡು ಕುಲಗೆಟ್ಟಿರುವ ಸಂಶೋಧನಾ ಕ್ಷೇತ್ರಕ್ಕೆ ಗಂಭೀರತೆ, ಪ್ರಾಮಾಣಿಕತೆ, ಪರಿಶ್ರಮದ ಮೂಲಕ ಜಿ. ಕೃಷ್ಣಪ್ಪ ಅವರು ಮಾಡಿರುವ ಸಂಶೋಧನೆ ಗೌರವ ತಂದು ಕೊಟ್ಟಿದೆ. ಬೇಂದ್ರೆಯವರ ಕುರಿತಹಾಗೆ ನಡೆದಿರುವ ಸಂಶೋಧನೆಗಿಂತಲೂ ಭಿನ್ನವಾದ ನೆಲೆಯಲ್ಲಿ ವಿಷಯ ಆಯ್ಕೆ ಮಾಡಿಕೊಂಡು ಡಾ॥ ಜಿ. ಕೃಷ್ಣಪ್ಪ ಅವರು ಬೇಂದ್ರೆಯವರ ಕಾವ್ಯದಾಳಕ್ಕೆ ಇಳಿದಿರುವರು. 'ಅಂಬಿಕಾತನಯದತ್ತ' ಎಂದು ಕರೆದು ಕೊಂಡಿದ್ದರಲ್ಲಿಯೇ ಬೇಂದ್ರೆಯವರ ಸಾಂಸ್ಕೃತಿಕ ಔನ್ನತ್ಯ ಎದ್ದು ಕಾಣುತ್ತದೆ. ಪಿತೃಸತ್ತೆಯನ್ನು ನಿರಾಕರಿಸುವ ಮೂಲಕವೇ ಕವಿ ಮಾತೃ ಮೌಲ್ಯವನ್ನು ಮಾನವೀಯ ನೆಲೆಯಲ್ಲಿ ವಿವಿಧ ಮಾದರಿಗಳನ್ನು ಕಾವ್ಯ ಮುಖೇನ

ಕಟ್ಟಿಕೊಡುವುದು ಶೋಧಗೊಳ್ಳಬೇಕಾಗಿತ್ತು, ಇಂತಹ ಪ್ರಯತ್ನ ಪ್ರಸ್ತುತ ಪ್ರಬಂಧದಲ್ಲಿ ನಡೆದಿದೆ.

***ಮಲ್ಲಿಕಾ ಘಂಟಿ***

★ ಒಂದು ರೀತಿಯ ಬೇಂದ್ರೆಯವರ ಚಿತ್ತವೃತ್ತಿಯಲ್ಲಿ, ಚಿಂತನೆಯ ಮೂಸೆಯಲ್ಲಿ ಅಡಗಿಕುಳಿತ ಸ್ತ್ರೀ ಸಂವೇದನೆಯ ಗುಣ ಧರ್ಮವನ್ನು, ಮರ್ಮವನ್ನು ವೈಚಾರಿಕವಾಗಿ ಭೇದಿಸಿದ ಶ್ರೇಯಸ್ಸು ಡಾ॥ ಕೃಷ್ಣಪ್ಪನವರಿಗೆ ಸಲ್ಲುತ್ತದೆ. ತೂಕಬದ್ಧವಾದ ಹೇಳಿಕೆ, ಸೈದ್ಧಾಂತಿಕವಾದ ನಿರ್ಣಯಗಳಿಂದ ಬೇಂದ್ರೆ ಸಾಹಿತ್ಯಕ್ಕೆ ಹಾಗೂ ಅವರ ಸ್ತ್ರೀಪರ ಧೋರಣೆಗಳಿಗೆ ಹೆಚ್ಚುಗಾರಿಕೆ ನೀಡಿದ್ದಾರೆ.

***ಡಾ॥ ಕೆ. ರವೀಂದ್ರನಾಥ***

★ 'ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ – ಒಂದು ಅಧ್ಯಯನ 'ಕೃತಿ ಕಾವ್ಯಾಭ್ಯಾಸಿ ಡಾ॥ ಜಿ. ಕೃಷ್ಣಪ್ಪ ಅವರ ಖಚಿತ ವಿಶ್ಲೇಷಣೆ ಅಧ್ಯಯನ ವಿಸ್ತಾರ, ವಿಶಿಷ್ಟ ಬಗೆಯ ಒಳನೋಟದಿಂದಾಗಿ ಬೇಂದ್ರೆ ಕಾವ್ಯಾಸಕ್ತರ ಕುತೂಹಲ ಹೆಚ್ಚಿಸಿದೆ ಹಾಗೂ ಕವಿಯೊಬ್ಬನ ಕಾವ್ಯವನ್ನು ಒಂದು ವಿಶಿಷ್ಟ ನೆಲೆಯಲ್ಲಿ ಹೇಗೆ ಅಧ್ಯಯನಕ್ಕೊಳಪಡಿಸಬಹುದು ಎಂಬುದಕ್ಕೆ ಒಂದು ಉತ್ತಮ ಮಾದರಿಯಾಗಿದೆ.

***ಚಂದ್ರಶೇಖರ ವಸ್ತ್ರದ.***

★ **ಪ್ರೀತಿಯ ಶ್ರೀ ಕೃಷ್ಣಪ್ಪನವರೇ,**

ಶ್ರೀ ಬೇಂದ್ರೆಯವರ ಸಾಹಿತ್ಯ ಸಂಪದವನ್ನು 'ಶಕ್ತಿ' ಕೋನದಿಂದ ನಿಟ್ಟಿಸಿ ಬರೆದ "ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ – ಒಂದು ಅಧ್ಯಯನ" ಎಂಬ ನಿಮ್ಮ ಮಹಾ ಪ್ರಬಂಧವನ್ನು ಓದಿ – ನನಗೆ ಪೂಜ್ಯರಾಗಿದ್ದ ಆ ಬೇಂದ್ರೆಯವರು ಪ್ರಾಣ ಪ್ರಿಯರೇ ಆದರು.

ಗತಿಸಿ ಎಷ್ಟೋವರ್ಷಗಳಾಗಿದ್ದರೂ ಅವರ ಜೀವಂತ ಸ್ಪರ್ಶವಾದಂತೆಯೇ ನನಗೊಂದು ಭ್ರಮೆ ಆವರಿಸಿತು ನಿಮ್ಮ ಅಸದೃಶ ವಿಮರ್ಶನ ವೈಖರಿಯಿಂದ.

ಇಂಥದೊಂದು ಮಾಯವನ್ನು ಸತ್ಯದ ರಂಗದ ಮೇಲೆ ಆಡಿ ಮಾತಾಡಿ ನನ್ನ ಮೈಮನದ ಮೇಲೆ ಬರಿಸಿದ ನಿಮ್ಮ ವಿಮರ್ಶಾಭಿಜ್ಞತೆ ಕನ್ನಡ ತಾಯ ತಾಯ್ತನವನ್ನು ಸಾರುತ್ತಿದೆ.

**ಎಲ್. ಬಸವರಾಜು**

★ **ಶ್ರೀಮಾನ್ ಕೃಷ್ಣಪ್ಪನವರೇ,**

ನಿಮ್ಮ 'ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ–ಒಂದು ಅಧ್ಯಯನ' ಪುಸ್ತಕ ಓದಿದೆ. ಪಾಂಡಿತ್ಯ ಪೂರ್ವಕವಾಗಿದೆ. ಎಷ್ಟು ಓದಿದ್ದೀರಿ ! ತುಂಬಾ ಗೌರವ ಬಂತು ನಿಮ್ಮ ಶ್ರದ್ಧೆಯಲ್ಲಿ. ವಿದ್ಯಾರ್ಥಿಗಳಿಗೆ ವಿದ್ವಾಂಸರಿಗೆ ನೀವು ಮಾದರಿಯಾಗಲೆಂದು ಹಾರೈಸುತ್ತೇನೆ.

***ಪ್ರೊ॥ ಸಿ.ಡಿ. ನರಸಿಂಹಯ್ಯ***
ಧ್ವನ್ಯಾಲೋಕ, ಮೈಸೂರು



ಪ್ರೀತಿಯ ಶ್ರೀ ಕೃಷ್ಣಪ್ಪನವರೇ,

ಶ್ರೀ ಬೇಂದ್ರೆಯವರ ಸಾಹಿತ್ಯ ಸಂಪದವನ್ನು 'ಶಕ್ತಿ' ಕೋನದಿಂದ ನಿಟ್ಟಿಸಿ ಬರೆದ "ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ - ಒಂದು ಅಧ್ಯಯನ" ಎಂಬ ನಿಮ್ಮ ಮಹಾ ಪ್ರಬಂಧವನ್ನು ಓದಿ - ನನಗೆ ಪೂಜ್ಯರಾಗಿದ್ದ ಆ ಬೇಂದ್ರೆಯವರು ಪ್ರಾಣ ಪ್ರಿಯರೇ ಆದರು.

ಗತಿಸಿ ಎಷ್ಟೋವರ್ಷಗಳಾಗಿದ್ದರೂ ಅವರ ಜೀವಂತ ಸ್ಪರ್ಶವಾದಂತೆಯೇ ನನಗೊಂದು ಭ್ರಮೆ ಆವರಿಸಿತು ನಿಮ್ಮ ಅಸದೃಶ ವಿಮರ್ಶನ ವೈಖರಿಯಿಂದ.

ಇಂಥದೊಂದು ಮಾಯವನ್ನು ಸತ್ಯದ ರಂಗದ ಮೇಲೆ ಆಡಿ ಮಾತಾಡಿ ನನ್ನ ಮೈಮನದ ಮೇಲೆ ಬರಿಸಿದ ನಿಮ್ಮ ವಿಮರ್ಶಾಭಿಜ್ಞತೆ ಕನ್ನಡ ತಾಯ ತಾಯ್ತನವನ್ನು ಸಾರುತ್ತಿದೆ.

ಎಲ್. ಬಸವರಾಜು



ಕಾಮಧೇನು
ಪುಸ್ತಕ ಭವನ
5/1, ನಾಗಪ್ಪ ರಸ್ತೆ, ಶೇಷಾದ್ರಿಪುರ, ಬೆಂಗಳೂರು-20

₹ 35